ಶಿವಗಣಪ್ರಸಾದಿ ಮಹಾದೇವಯ್ಯ ರಚಿಸಿದ

## ಪ್ರಭುದೇವರ

# ಶೂನ್ಯಸಂಪಾದನೆ

ಸಂಪುಟ ೧

ನೀವು ಹಿಡಿದಿರುವ ಈ ಗ್ರಂಥ ಒಂದೇ ಒಂದು ಶೂನ್ಯಸಂಪಾದನೆಯೆಂದು ಭಾವಿಸುವಿರಾ ? ನಿಜ : ಇದರ ಬಂಧದಲ್ಲಿರುವುದು ಮೊದಲನೇ ಶೂನ್ಯ ಸಂಪಾದನೆಯೊಂದರ ತವರಾಜ. ಆದರೂ ಅನು ಬಂಧದಲ್ಲಿ ಮಿಕ್ಕ ಮೂರೂ ಶೂನ್ಯ ಸಂಪಾದನೆಗಳ ನವನೀತ ಸೇರಿದೆ. ಹೀಗಾಗಿ ಈಗ ನಿಮ್ಮ ಕೈಯ ಲ್ಲಿರುವುದು ಸಾರತಃ ನಾಲ್ಕು ಶೂನ್ಯಸಂಪಾದನೆ ; ಭಾರ ಕಡಿಮೆಯಷ್ಟೆ !



ಡಾ. ಎಲ್. ಬಸವರಾಜು

ದೀಪ್ತಿಯಿಂದ ಸುತ್ತುಮುತ್ತಣ ಪದಾರ್ಥ ಪ್ರಪಂಚವೇ ಅಲ್ಲದೆ ದೀಪವೂ ದೃಗ್ಗೋಚರ ವಾಗುವಂತೆ, ಪ್ರಭುದೇವನ ಮಾತಿನ ಬೆಳಕಿನಲ್ಲಿ ಅವನ ಸ್ವರೂಪವೇ ಅಲ್ಲದೆ ಅವನ ಸಮಕಾಲೀನ ಸಂತರ ಸಂಸ್ಥೆಯ ನಿಜರೂಪವೂ ನಿಚ್ಚಳವಾಗಿ ಕಾಣುವುದು.

ಮೇಲಾಗಿ, ಪ್ರತ್ಯೇಕವಾಗಿದ್ದಿದ್ದರೆ ಪ್ರಹೇಳಿಕೆಗಳಾಗುತ್ತಿದ್ದ ಆ ಅಲ್ಲಮಪ್ರಭುವಿನ ಎಷ್ಟೋ ಹೇಳಿಕೆಗಳು ಬಸವಣ್ಣ ಮುಂತಾದ ಅವನ ಸಮಾನಧರ್ಮದ ಶಿವಶರಣರ ವಚನಗಳೊಡನೆ ನಿರಿಗೆಗೊಂಡಿರುವುದರಿಂದ ಅವು ಪಾರದರ್ಶಕಗಳಾಗಿ ಅವನ ಭಾವಶರೀರ ನಮ್ಮ ಕಣ್ಣಿನ ಕೊಳಾಯಿತು—ಕೋರೈಸಿ ಕಣ್ಮರೆಯಾಗುತ್ತಿದ್ದ ರವಿರಶ್ಮಿ ಪಟ್ಟಕದ ಪಟ್ಟಿಗೊಳಗಾಗಿ ಬಣ್ಣಬಣ್ಣವಾಗಿ ಮೈಮುರಿದು ಕಣ್ಣಿಗೆ ತಣ್ಣಗೆ ಕಾಣುವಂತೆ.

ಹಲವಾರು ಶಿವಶರಣರ ವಚನಮುಕ್ತಾಫಲಗಳನ್ನು ಎತ್ತಿತಂದು ಒತ್ತಟ್ಟಿಗೆ ರಾಶಿಮಾಡಿದವರಲ್ಲಿ ನಮಗೆ ತಿಳಿದಮಟ್ಟಿಗೆ ಶಿವಗಣ ಪ್ರಸಾದಿ ಮಹಾದೇವಯ್ಯನು ಮೊದಲಿಗನಾಗಿರುವನಲ್ಲದೆ, ಅವನ್ನು ಹವಣಾಗಿ ಪವಣಿಸಿ ಶಿವಸಹೃದಯ ಪ್ರಪಂಚಕ್ಕೆ ಏಕಾವಳಿಯ ಹಾರವಾಗಿ ಸಮರ್ಪಿಸಿದವರಲ್ಲಿ ಅದ್ವಿತೀಯನೂ ಆಗಿರುವನು.

ಶ್ರೀ ಜಗದ್ಗುರು ಮುರಘರಾಜೇಂದ್ರ ವಿದ್ಯಾಪೀಠ ಗ್ರಂಥಮಾಲೆಯ ನವಮ ಪುಷ್ಪ

ಶಿವಗಣಪ್ರಸಾದಿ ಮಹಾದೇವಯ್ಯನ

# ಪ್ರಭುದೇವರ ಶೂನ್ಯಸಂಪಾದನೆ

## ಸಂಪುಟ ೧

ಸಂಪಾದಕ
ಡಾ. ಎಲ್. ಬಸವರಾಜು, ಎಂ.ಎ., ಡಿ.ಲಿಟ್.
ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು




ಪ್ರಕಾಶಕರು
ಶ್ರೀ ಬೃಹನ್ಮಠ ಸಂಸ್ಥಾನ
ಚಿತ್ರದುರ್ಗ

# ಮುನ್ನುಡಿ

ಡಾ. ಎಲ್. ಬಸವರಾಜು ಅವರು ಸಂಪಾದಿಸಿ ಶ್ರೀಜಗದ್ಗುರು ಮುರಘ ರಾಜೇಂದ್ರ ವಿದ್ಯಾಪೀಠ ಗ್ರಂಥಮಾಲೆಯಲ್ಲಿ ನವಮ ಪುಷ್ಪವಾಗಿ ಪ್ರಕಟನೆಗಿತ್ತಿರುವ ಶಿವಗಣಪ್ರಸಾದಿ ಮಹಾದೇವಯ್ಯನ ಈ ಪ್ರಭುದೇವರ ಶೂನ್ಯಸಂಪಾದನೆಯನ್ನು ಕುರಿತು ಮುನ್ನುಡಿಯಾಗಿ ಕೆಲವು ಮಾತುಗಳನ್ನು ಆಡುವುದು ನಮಗೊಂದು ಪ್ರಿಯವಾದ ವಿಷಯ, ತೃಪ್ತಿಯ ಕಾರ್ಯ. ಶೂನ್ಯಸಂಪಾದನೆಗಳು ಸಂಖ್ಯೆಯಲ್ಲಿ ನಾಲ್ಕು ಎಂಬುದು ಜನಜನಿತ. ಆದರೆ ಅವಕ್ಕೆಲ್ಲ ಶಿವಗಣಪ್ರಸಾದಿಯ ಈ ಶೂನ್ಯಸಂಪಾದನೆಯೇ ಬಹು ಪಾಲು ಮೂಲದ್ರವ್ಯ. ಕುಬೇರನ ಖಜಾನೆಗೆ ಮೂವರು ನಾಲ್ಕಾರು ರೂಪಾಯಿಗಳನ್ನು ಜಮಾ ಮಾಡಿ ಇಡೀ ಖಜಾನೆಯೇ ನಮ್ಮದು ಎಂದಂತಾಗಿದೆ—ಶೂನ್ಯಸಂಪಾದನೆಯು ಹಲಗೆಯ ದೇವನದು, ಗುಮ್ಮಳಾಪುರದ ಸಿದ್ಧಲಿಂಗನದು, ಗೂಳೂರು ಸಿದ್ಧವೀರನದು ಎಂದುಕೊಳ್ಳುವುದು. ಆ ಖಜಾನೆಯ ನಿಜವಾದ ಒಡೆಯ ಶಿವಗಣಪ್ರಸಾದಿ ಮಹಾ ದೇವಯ್ಯ.

ಕ್ರಿ. ಶ. 1930ರಲ್ಲಿ ಡಾ. ಪಿ. ಜಿ. ಹಳಕಟ್ಟಿಯವರು ಕೊನೆಯದೆನ್ನಲಾದ "[ಗೂಳೂರು ಸಿದ್ಧವೀರನ] ಶೂನ್ಯಸಂಪಾದನೆ"ಯನ್ನು ಪ್ರಕಟಿಸಿದಂದಿನಿಂದ ಅದಕ್ಕೆ ಸಂದಾಯವಾದ ಯಶಸ್ಸಿನ ಸಿಂಹಪಾಲನ್ನು ಶಿವಗಣಪ್ರಸಾದಿಗೆ ತಪ್ಪಿಸಿ, ಸಿದ್ಧವೀರನಿಗೇ ಒಪ್ಪಿಸಿದ್ದಾಯಿತು. ಈ ಲೋಕದಲ್ಲಿ ಹೀಗೂ ಒಂದೊಂದು ಸಲ ಆಗುವುದುಂಟು !

ಶೂನ್ಯ ಸಂಪಾದನೆಯಂತಹ ಅತ್ಯಂತ ಜನಪ್ರಿಯವಾದ ಕೃತಿಯನ್ನು—"ಹಿಂದಿರ ಲಿಲ್ಲ, ಮುಂದಾಗಲಿಲ್ಲ" ವೆಂಬಂತೆ, ಅನುಭಾವ ಪ್ರತಿಭೆಯಿಂದ ರೂಪಿಸಿದ ಮತ್ತು ನಿರೂಪಿಸಿದ ಮಹಾಶಿವಶರಣನಾದ ಮಹಾದೇವಯ್ಯನ ಕೀರ್ತಿಚಂದ್ರನು ಈಗ ಗ್ರಹಣ ದಿಂದ ಬಿಡುಗಡೆ ಹೊಂದಿ, ಹಿಂದಿನ ತನ್ನೆಲ್ಲ ಶುಭ್ರ ಜ್ಯೋತ್ಸ್ನೆಯಿಂದ ತೊಳಗಿ ಬೆಳಗು ತ್ತಿರುವನೆನಿಸುತ್ತಿದೆ ಈ ಗ್ರಂಥದ ಪ್ರಕಟಣೆಯಿಂದ.

ಶಿವಗಣಪ್ರಸಾದಿಗೂ ನಮಗೂ ಚಾರಿತ್ರಕವಾಗಿ ಏನೇ ಭಿನ್ನಾಭಿಪ್ರಾಯವಿರಲಿ, ತತ್ವದೃಷ್ಟಿಯಿಂದ ಪ್ರಶ್ನಾತೀತವಾದ "ಮೇರುಕೃತಿ"ಯೊಂದನ್ನು ಅವನು ತನ್ನ ಸಂಕಲ್ಪ ಮಾತ್ರದಿಂದ ಸೃಷ್ಟಿಸಿ ನಿಲ್ಲಿಸಿದ್ದಾನೆಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ವೇದ-ಆಗಮ-ಉಪನಿಷತ್ತು-ಪುರಾಣಗಳ ಪ್ರಸ್ಥಾನಗಳಲ್ಲಿ ಉದ್ಭವಿಸಿ, ಶರಣರ ಅನುಭಾವಾಮೃತದಿಂದ ಸಮರಸವಾಗಿ, ತುಂಬಿ ಹರಿಯುತ್ತಿರುವ ವಿಶ್ವಧರ್ಮದ ಒಂದು ಪುಣ್ಯ ತೀರ್ಥ ಈ ಮೊದಲನೇ ಶೂನ್ಯಸಂಪಾದನೆ—ಎಂದರೆ ಅದು ಎಂದಿಗೂ ಅತಿಶಯೋಕ್ತಿ ಎನಿಸಲಾರ ದೆಂಬುದೇ ನಮ್ಮ ದೃಢವಾದ ಅಭಿಮತ. ವೀರಶೈವಧರ್ಮಜೀವನದಿಗಂತೂ ಇದೇ ಶ್ರೀಗಿರಿ ಮತ್ತು ಸಹ್ಯಾದ್ರಿಗಳ ಸಾನುಪ್ರದೇಶ.

ಕ್ರಿಮಿಕೀಟಗಳ ತುತ್ತಾಗಿ ಓಲೆಯ ಗರಿಗಳಲ್ಲಿ ಕಣ್ಮರೆಯಾಗಿದ್ದ, ಕೈಮೀರಿ ಹೋಗಿದ್ದ ಈ ಅಮೂಲ್ಯ ಗ್ರಂಥವನ್ನು ಕನ್ನಡಿಗರಿಗೆ ಕೈತುತ್ತಾಗಿ ಕೊಟ್ಟಿರುವ ಡಾ. ಎಲ್. ಬಸವರಾಜು ಅವರು ಮಹಾಪೀಠದ ಅಭಿಮಾನಶಾಲಿಗಳಾದ ಸುಪ್ರಸಿದ್ಧ ಸಾಹಿತಿಗಳು. ಅವರ ಈ ಕೃತಿಯನ್ನು ಜನ ಪುರಸ್ಕರಿಸಲೆಂದು ಹಾರೈಸುತ್ತೇವೆ.

ಚಿತ್ರದುರ್ಗ

**ಶ್ರೀ ಬೃಹನ್ಮಠ ಮಹಾ ಸಂಸ್ಥಾನ**



ಮಹಾಕರ್ತೃಗಳ ಶಿವಯೋಗ ಸಮಾಧಿ

ಈ ಗ್ರಂಥವು

ಚಿನ್ಮೂಲಾದ್ರಿ ಬೃಹನ್ಮಠದ

ಮಹಾಕರ್ತೃಗಳಾದ

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು

ಶ್ರೀ ಮುರಘರಾಜೇಂದ್ರ ಮಹಾಸ್ವಾಮಿಗಳ

ಪೂಜ್ಯಪಾದಂಗಳಲ್ಲಿ

**ಸಮರ್ಪಿತ**



ಶ್ರೀಮನ್ನಿರಂಜನ ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮುರಘರಾಜೇಂದ್ರ
ಮಹಾಸ್ವಾಮಿಗಳು

# ವಿಷಯಾನುಕ್ರಮಣಿಕೆ

**ಪೀಠಿಕೆ :** ಪುಟ

| | |
|---|---|
| ಕಥಾವಸ್ತು | 1 |
| ಶೂನ್ಯಸಂಪಾದನೆಯ ಮೂಲ ಮತ್ತು ಸ್ವರೂಪ | 38 |
| ಪ್ರಥಮ ಶೂನ್ಯಸಂಪಾದನೆಯ ಕಾಲವಿಚಾರ | 41 |
| ಕೃತಿ-ಕೃತಿಪತಿ-ಕೃತಿಕರ್ತ | 49 |
| ಆಮೇಲೆ ಬಂದ ಶೂನ್ಯಸಂಪಾದನೆಗಳು | 55 |
| ಗ್ರಂಥಸಂಪಾದನೆ | 58 |
| ಗ್ರಂಥವಿನ್ಯಾಸ | 61 |
| ವಚನಗಳಕ್ರಮಾಂಕ ಪಟ್ಟಿ | 63 |

**ಗ್ರಂಥ :**

| [ಗೂಳೂರು ಸಿದ್ಧವೀರನ ಶೂನ್ಯ ಸಂಪಾದನೆಯ ವಿಷಯಾನು ಕ್ರಮವನ್ನು ಅನುಸರಿಸಿ] | [ಪ್ರಸ್ತುತ ಗ್ರಂಥದ ಪರಿಚ್ಛೇದಗಳು] | |
|---|---|---|
| 1. ಪ್ರಥಮೋಪದೇಶ | (1) | 1 |
| 2. ಮುಕ್ತಾಯಕ್ಕಗಳ ಸಂಪಾದನೆ | (2) | 20 |
| 3. ಸಿದ್ಧರಾಮಯ್ಯಗಳ ಸಂಪಾದನೆ | (3) | 30 |
| 4. ಬಸವೇಶ ಚೆನ್ನಬಸವೇಶಂಗನುಗ್ರಹ ಮಾಡಿದ ಸಂಪಾದನೆ | (4-6) | 56 |
| 5. ಪ್ರಭು ಕಲ್ಯಾಣಕ್ಕೆ ಬಂದ ಸಂಪಾದನೆ | (7) | 74 |
| 6. ಮರುಳು ಶಂಕರ ದೇವರ ಸಂಪಾದನೆ | (8) | 96 |
| 11. ಪ್ರಭುದೇವರ ಪೂಜಾಸ್ತುತಿ (ಪೂರ್ವಭಾಗ) | (9) | 102 |
| 7. ಬಸವೇಶ್ವರನ ಸಂಪಾದನೆ | (10) | 107 |
| 8. ಚೆನ್ನ ಬಸವೇಶ್ವರನ ಸಂಪಾದನೆ | (11) | 116 |
| 9. ಮಡಿವಾಳಯ್ಯಗಳ ಸಂಪಾದನೆ | (12) | 137 |
| 10. ಸಿದ್ಧರಾಮೇಶ್ವರ ದೀಕ್ಷಾ ಪ್ರಸಂಗ | (13) | 151 |
| 11. ಪ್ರಭುದೇವರ ಪೂಜಾಸ್ತುತಿ (ಉತ್ತರ ಭಾಗ) | | 154 |
| 16. ಮಹಾದೇವಿಯಕ್ಕಗಳ ಸಂಪಾದನೆ | (14) | 159 |
| 17. ಪ್ರಭು ದೇಶಾಂತರ ಹೋಗಿ ಬಂದ ಸಂಪಾದನೆ | (15-18) | 178 |
| 18. ಪ್ರಭುದೇವರು ಶೂನ್ಯಸಿಂಹಾಸನವನ್ನು ಏರಿದಸಂಪಾದನೆ | | 192 |
| 19. ಪ್ರಭುದೇವರ ಆರೋಗಣೆ | (19-20) | 203 |
| 20. ಶರಣರ ಅವಸಾನ ಪರಾಮರಿಕೆ | (21) | 233 |
| 21. ಗೋರಕ್ಷ ಪ್ರಸಂಗ ಮತ್ತು ಎಲ್ಲಾ ಗಣಂಗಳ ಐಕ್ಯ | (22) | 246 |

**ಅನುಬಂಧಗಳು :**


| | | |
|---|---|---|
| | | ಪುಟ |
| 1. | ನುಲಿಯ ಚಂದಯ್ಯಗಳ ಸಂಪಾದನೆ–ಹಲೆಗೆಯಾರ್ಯ | 261 |
| 2. | ಆಯ್ದಕ್ಕಿ ಮಾರಯ್ಯಗಳ ಸಂಪಾದನೆ–ಗುಮ್ಮಳಾಪುರದ ಸಿದ್ಧಲಿಂಗ | 273 |
| 3. | ಗೋರಕ್ಷ ಸಂಪಾದನೆ–ಗುಮ್ಮಳಾಪುರದ ಸಿದ್ಧಲಿಂಗ | 283 |
| 4. | ಮೋಳಿಗೆ ಮಾರಯ್ಯಗಳ ಸಂಪಾದನೆ–ಗೂಳೂರು ಸಿದ್ಧವೀರ | 287 |
| 5. | ಘಟ್ಟಿವಾಳ ಮುದ್ದಣ್ಣಗಳ ಸಂಪಾದನೆ–ಗೂಳೂರು ಸಿದ್ಧವೀರ | 299 |
| 6. | ವಚನಗಳ ಅಕಾರಾದಿ (ಅಧಿಕ ಸಂಪಾದನೆಗಳದೂ ಸೇರಿ) | 311 |
| 7. | ಅರ್ಥಕೋಶ ಮತ್ತು ಗಮನಾರ್ಹ ಪದಗಳು | 328 |

# ಪೀಠಿಕೆ

## ಕಥಾವಸ್ತು

### 1

ಪ್ರಭುದೇವನು ಅಷ್ಟಾಂಗಯೋಗೀಶ್ವರ, ದೇಹೇಂದ್ರಿಯ ಮನಪ್ರಾಣಾಹಂಕಾರಾದಿ ಗುಣಧರ್ಮಕರ್ಮನಿರ್ಲೇಪನ, ಗುರು-ಲಿಂಗ-ಜಂಗಮ-ಪ್ರಸಾದ-ಪಾದೋದಕಾದಿ ಪಂಚಾಚಾರ ಪ್ರತಿಷ್ಠಾಪನಾಚಾರ್ಯ, ಷಟ್ಸ್ಥಲಚಕ್ರವರ್ತಿ, ಬಸವ-ಚೆನ್ನಬಸವ ಪ್ರಾಣನಾಯಕ, ವೀರಶಿವಾಚಾರ ಪ್ರಥಮನಾಯಕ, ಮರ್ತ್ಯಲೋಕಪಾವನಕಾರಣಾವತಾರ, ಅನಿಮಿಷನ ಶಿಷ್ಯ, ಗುಹೇಶ್ವರನಾಮಾಮೃತಸ್ವೀಕಾರಸಂತುಷ್ಟ ಮತ್ತು ಸಕಲ ಜಗದಾಚಾರ್ಯ.

ಇವನು ಬಸವ-ಚೆನ್ನಬಸವ ಮುಂತಾದ ಅಸಂಖ್ಯಾತ ಗಣಂಗಳೊಡನೆ ಮಾಡಿದ ಮಹಾನುಭಾವಪ್ರಸಂಗವನ್ನು—ಮುಕ್ತಕಗಳಾದ ಶಿವಾದ್ವೈತವಚನಗಳಿಂದ ಉತ್ತರ-ಪ್ರತ್ಯುತ್ತರಸಂಬಂಧವಾಗಿ—ಸೇರಿಸಿ ಈ 'ಪ್ರಭುದೇವರ ಶೂನ್ಯಸಂಪಾದನೆ'ಯನ್ನು ಶಿವಗಣಪ್ರಸಾದಿ ಮಹಾದೇವಗಳು ಸಮರ್ಪಿಸಿದರು.

ಕೈಲಾಸದ ರುದ್ರಗಣದಲ್ಲಿ ಅತ್ಯಂತ ಶ್ರೇಷ್ಠನಾದ "ನಿರ್ಮಾಯ"ನು ಶಿವನ ಕೃಪೆಯಿಂದ ಮಹಾಶಯನಾಗಿದ್ದನು. ಪಾರ್ವತಿಯು ಅವನ ಪ್ರತಾಪಶಕ್ತಿಯನ್ನು ಪರಮೇಶ್ವರನ ಕೈಯಿಂದ ಕೇಳಿ, ಆ ಮಹಾಗಣೇಶ್ವರನ ಪ್ರತಿಷ್ಠೆಗೆ ಕಾರಣವಾದ ನಿರ್ಮಾಯ ತೇಜಸ್ಸನ್ನು ಕಳೆದು ಅವನನ್ನು ಮಾಯಾಸಕ್ತನನ್ನಾಗಿ ಮಾಡುವೆನೆಂದು ನಿಶ್ಚೈಸುವಳು.

ಒಂದು ದಿನ ತನ್ನ ಪರಿವಾರದಲ್ಲಿ ಅತ್ಯಂತ ರೂಪಸಿಯಾದ ರುದ್ರಕನ್ನಿಕೆಯೊಬ್ಬಳನ್ನು "ಕಾಮಲತೆ" ಎಂದು ಕೂಗಿ ಹತ್ತಿರ ಕರೆದು ತನಗಿಂತಲೂ ಅಧಿಕವಾದ ರೂಪಲಾವಣ್ಯವನ್ನು ಆಕೆಗೆ ಅನುಗ್ರಹಿಸಿ, "ಆ ನಿರ್ಮಾಯನು ಬರುವ ದಾರಿಯಲ್ಲಿ ನಿಂತಿದ್ದು ಅವನ ಮನಸ್ಸನ್ನು ಸೂರೆಗೊಂಡು, ನಿನ್ನ ಕೂಟಕ್ಕಾಗಿ ಅವನು ಪರಿತಪಿಸುವಂತೆ ಮಾಡು ಹೋಗು" ಎಂದು ಕಳಿಸಿಕೊಟ್ಟಳು.

ಈ ಪ್ರಲೋಭನದ ಸಂಚಿಗೆ ಸಿಕ್ಕು ಅಲ್ಲಮನು ಸೋತನಾದರೂ ಎಚ್ಚತ್ತು, ಮಾಯಾವರಣ ತನಗೆಲ್ಲಿಂದ ಮುಸುಕಿತೆಂದು ಅನುತಾಪದಿಂದ ಬೆಂದು—ಎಂದಿನಂತೆ ಶಿವನ ಸಭೆಗೆ ಬಂದನು. ಅವನ ಅಂತಸ್ಥವನ್ನು ಶಿವನು ತಿಳಿದು, "ನೀನು ಮಾಯೆಗೆ ಮನಸೋತಕಾರಣ ಮರ್ತ್ಯಲೋಕದಲ್ಲಿ ಹುಟ್ಟಿ, ಆ ರುದ್ರಕನ್ನಿಕೆಯಲ್ಲಿ ಸುರತಸುಖವನ್ನು ಸುಖಿಸುತ್ತಿರು ಹೋಗು" ಎಂದನು. ನಿರ್ಮಾಯಗಣೇಶ್ವರನು ದೈನ್ಯದಿಂದ "ಸ್ವಾಮಿ, ನಿನ್ನ ಸನ್ನಿಧಿಯಲ್ಲಿದ್ದು ಮಹಿಮಾನ್ವಿತನಾದ ನಾನು ಮರ್ತ್ಯಲೋಕಕ್ಕೆ ಹೋಗುವುದೇ? ಹೋದ ಮೇಲೆ ನಿನ್ನ ನೆನಪಾಗುವುದೇ? ಎಂದು ತಲೆತಗ್ಗಿಸಿ ಕಂಬನಿಗರೆದನು. ಆಗ ಪರಶಿವನು

"ಮರ್ತ್ಯಲೋಕವೆಂಬುದು ನನ್ನ ಕಮ್ಮಟ. ಅಲ್ಲಿದ್ದರೇನು ? ಇಲ್ಲಿದ್ದರೇನು ? ಎಲ್ಲೆಡೆಗೂ ಒಡೆಯ ನಾನೇ. ಅಂಜದಿರು. ಮುಸುಕಿದ ಮಾಯೆಯನ್ನು ನಿವಾರಿಸುವೆನು. ನಾನೇ ನಿನಗೆ ಪ್ರಾಣಲಿಂಗವಾಗಿ ಬಂದು, ನಿನ್ನ ಸರ್ವಾಂಗದಲ್ಲಿ ನೆಲೆಗೊಂಡು, ನಿನ್ನನ್ನು ನಿಜಲಿಂಗೈಕ್ಯನನ್ನಾಗಿಮಾಡಿ ನಿರ್ವಾಣಸಮಾಧಿಯಲ್ಲಿ ನಿಲಿಸುವೆನು. ನಿನ್ನಿಂದ ಮರ್ತ್ಯಲೋಕದಲ್ಲಿ ಶಿವಾಚಾರದ ಜೀರ್ಣೋದ್ಧಾರವಾಗಲಿ, ಮಾನವಲೋಕದ ಮಹಾಗಣಂಗಳಿಗೆ ಜ್ಞಾನಾನಂದವಾಗಲಿ, ನೀನು ಹೋಗಿ ಬಾ"ರೆಂದು ಅಭಯವನ್ನು ಕೊಡಲು, ನಿರ್ಮಾಯಗಣೇಶ್ವರನು ಮಾನವಾಕಾರ ಚೈತನ್ಯಕಳೆಯನ್ನು ಧರಿಸಿ, ಭೂಲೋಕಕ್ಕೆ ಅವತರಿಸಿ, ಬನವಾಸಿ ಗ್ರಾಮದಲ್ಲಿರುವ ನಾಗವಾಸಾಧಿಪತಿಯಾದ ಶಿವಭಕ್ತನೊಬ್ಬನ ಸತಿ ಸುಜ್ಞಾನದೇವಿಯ ಹೊಟ್ಟೆಯಲ್ಲಿ ಹುಟ್ಟಿದನು, ಪುಣ್ಯಪಾಪಗಳಿಗೆ ಒಳಗಲ್ಲವೆಂಬಂತೆ ಅವನಿಗೆ "ಅಲ್ಲಮ"ನೆಂಬ ನಾಮಕರಣವಾಯಿತು. ಅವನು ದಿನದಿನಕ್ಕೆ ಬೆಳೆದು ರೂಪವಂತನಾದ. ವಾದ್ಯವಿದ್ಯಾಭ್ಯಾಸದಲ್ಲಿ ಪಾರಂಗತನಾದ.

ಇತ್ತ, ಅದೇ ಬನವಾಸಿಯ ಒಬ್ಬ ಶಿವಭಕ್ತೆಯ ಹೊಟ್ಟೆಯಲ್ಲಿ ರುದ್ರಕನ್ನಿಕೆಯು ಕಾಮಲತೆಯೆಂಬ ಹೆಸರಿಂದ ಹುಟ್ಟಿ, ಬೆಳೆದು, ನೃತ್ಯವಿದ್ಯಾನಿಷ್ಣಾತೆಯಾಗಿ, ಅಲ್ಲಮನಿಗೆ ಪ್ರೇಮದ ಮಡದಿಯಾದಳು. ಇಬ್ಬರೂ ಸುರತೋನ್ಮತ್ತಸುಖದಲ್ಲಿ ಪರವಶರಾಗಿ ಹಲಕೆಲವು ಸಂವತ್ಸರಗಳನ್ನು ಕಳೆದು, ಆ ಪುರದ ಗುಹೇಶ್ವರನೆಂಬ ಮೂಲಸ್ಥಾನ (=ಕ್ಷೇತ್ರ, ದೇವಸ್ಥಾನ)ದ ಪರಿಚರ್ಯದಲ್ಲಿ ಇದ್ದಾಗ, ಆ ರುದ್ರಕನ್ನಿಕೆಯು ವಿಶಾಪವನ್ನು ಹೊಂದಿದಳು. ಅಲ್ಲಮನು ಆಕೆಯನ್ನು ಅಗಲಿದ ಚಿಂತೆಯಲ್ಲಿ ಮುಳುಗಿ, ಪುಷ್ಪವಾಟಿಕೆಯಲ್ಲಿ ಕುಳಿತು ವೈಮರೆತಿರಲು, ಅವನಿಗೂ ಶಿವನ ಕರುಣೋದಯವಾಗುವ ಕಾಲ ಸಮೀಪಿಸಿತು. "ಕಾಮತತ್ವದ ಅಳಿವು ಶಿವತತ್ವದ ಉಳಿವು" ಎಂಬುದು ಸತ್ಯವಾದಂತೆ ಕರ್ಮಕ್ಷಯವಾಗಿ, ಸುಜ್ಞಾನಾಂಕುರವನ್ನು ಒಳಗೊಂಡ ಅಲ್ಲಮಪ್ರಭುದೇವನು ಪಿಂಡಸ್ಥಲದೊಳಕ್ಕೆ ಪದಾರ್ಪಣಮಾಡಿ, ಮೂಲಜ್ಞಾನದಿಂದ ತನ್ನ ಪೂರ್ವಾಪರಸಂಬಂಧವನ್ನು ವಿವೇಕಿಸಿ ತಿಳಿದು, ತನ್ನಿಂದನ್ಯವಾದ ಸಂಸಾರಭ್ರಾಂತಿಯನ್ನು ನೀಗಿ, ನಾನು ಶಿವನು, ನನಗಿಲ್ಲದ ಜೀವಭಾವಭ್ರಾಂತಿ ತಾನೇತರಿಂದ ಸಂಭವಿಸಿತೆಂಪು ಆಲೋಚಿಸಿ, ಮಾಯಾಸಂಬಂಧದಿಂದ ಸಂಭವಿಸಿತೆಂದು ಮನಗಂಡು, ಮಾಯಾವಿಡಂಬನೆಮಾಡಿ "ನಿರ್ಮಾಯ"ನಾಗಿ, ಅಂತರಂಗಶುದ್ಧಾತ್ಮನಾಗಿ, ಏಕಾಗ್ರಚಿತ್ತದಲ್ಲಿ ಶಿವಭಾವವೆಡೆಗೊಂಡು ಶಿವಜ್ಞಾನಪ್ರಕಾಶದಲ್ಲಿದ್ದನು.

ನವಮಾಸ ತುಂಬಿದ ಗರ್ಭಿಣಿಯಂತೆ ಶಿವತತ್ವವಿದ್ಯೆ ಒಳಗೊಳಗೇ ಬೆಳೆದು ಅಲ್ಲಮನು ಸಂಪೂರ್ಣವಾದನು. ಗುರುವಿನ ಸಂಪರ್ಕಕ್ಕೆ ಮುನ್ನವೇ ಶಿಷ್ಯನು ಗುರುವಾದನೆಂಬ ಶಿವಾದ್ವೈತವಾಕ್ಯ ಸತ್ಯವಾದಂತೆ ಅವನ ಅಂತರಂಗದಲ್ಲಿ ಗುರುಭಾವ ತಲೆದೋರಿತು.

ಅಲ್ಲಮನೊಂದು ದಿನ ಏಕಾಂತಸ್ಥಳವೊಂದರಲ್ಲಿ ಶಿವಚಿಂತಾತುರಸಮಾಧಿಯಲ್ಲಿ ಕುಳಿತಿದ್ದಾಗ—ಅಂಜನ ಎಚ್ಚಿಕೊಂಡವನಿಗೆ ನಿಧಿನಿಧಾನ ಕಾಣುವಂತೆ—ಅವನ ಶಿವಜ್ಞಾನಾಂಜನಚಕ್ಷುಷ್ಟಿಗೆ ಅನಾದಿಸಂಸಿದ್ಧವಾದ ಅನಿಮಿಷದೇವರ ಸಮಾಧಿ ಗೋಚರ

ವಾಯಿತು. ಪರಮಹರ್ಷಿತನಾಗಿ, ಆ ಸಮಾಧಿಯನ್ನು ಮುಸುಕಿ ಮರೆಮಾಡಿದ್ದ ಮಣ್ಣನ್ನು ಅಗೆದು ಅಗಲಿಸಿ ನೋಡಿದಾಗ, ಅದು ಒಂದು ಶಿವಾಲಯದಂತೆ ಕಾಣಿಸಿತು. ಹಿಂದೆ ತನಗೂ ಕಾಮಲತೆಗೂ ಸಂಭವಿಸಿದ ನೋಟ-ಕೂಟ ನೆನಪಾಯಿತು. ಜೀವ ತತ್ತರಿಸಿತು.

ಅಲ್ಲಮನು ಅನಿಮಿಷದೇವರ ಆ ಸಮಾಧಿಯನ್ನು ಒಳಹೊಕ್ಕು ನೋಡಿದ. ಕೈಯಲ್ಲಿ ಅಮೃತಲಿಂಗವನ್ನು ಹಿಡಿದು ಪರಂಜ್ಯೋತಿಯ ಬೆಳಗಿನಲ್ಲಿ ಪರವಶನಾಗಿದ್ದ ಅನಿಮಿಷ ದೇವರನ್ನು ಕಂಡು ಧನ್ಯಭಾವದಿಂದ ಉಬ್ಬಿ—ಆತನೇ ಗುರು ತಾನೇ ಶಿಷ್ಯನೆಂದೂ, ಆತನನ್ನು ಆಶ್ರಯಿಸಿ ಪರವಸ್ತುವನ್ನು ಅರಿಯುವೆನೆಂದೂ, ನಿಶ್ಚೈಸಿದ. ಆದರೆ, ಅನಿಮಿಷನು ನಿರ್ವಿಕಲ್ಪಸಮಾಧಿಯಲ್ಲಿ ನಿಶ್ಶಬ್ದನಿಮಗ್ನನಾಗಿದ್ದುದನ್ನೂ, ಅವನಿಗೆ ತಾನೆಂಬುದಾಗಲಿ ಪರವೆಂಬುದಾಗಲಿ ತೋರದಿರುವುದನ್ನೂ ಅಲ್ಲಮನು ಮನಗಂಡು, ಗುರುವಿಗೂ ತನಗೂ ಎಡೆದೆರಹಿಲ್ಲದುದನ್ನು ಅನುಭಾವಮುಖದಿಂದರಿತು, ತನಗೆ ತಾನೇ ಗುರೂಪದೇಶವನ್ನು ಪಡೆಯಬೇಕೆಂದು ನಿರ್ಣಯಿಸಿ, ತನ್ನ ಅಂತರಂಗದ ಬೋಧಾಮೂರ್ತಿ ಯನ್ನೇ ಆ ಶ್ರೀಗುರುವೆಂದು ನಿಶ್ಚಯಿಸಿದ. ಅನಿಮಿಷನ ಪಾದಕ್ಕೆ ಶರಣೆಂದು ಅವನ ಕರಸ್ಥಲದ ಲಿಂಗವನ್ನು ತಾನೇ ಅನುಗ್ರಹಿಸಿಕೊಂಡನು. ಒಡನೆಯೇ ಆ ಅನಿಮಿಷ ಗುರು ದೇವನು ಲಿಂಗೈಕ್ಯನಾದ—ಅವನ ದೇಹ ನೆಲದಮೇಲೆ ಚೆಲ್ಲಾಡಿತು.

ಅದನ್ನು ಕಂಡು ಪ್ರಭುದೇವನು ಗುರುದ್ರೋಹವಾಯಿತೆಂದು ಅನುತಾಪಿಸುತ್ತಿರುವಲ್ಲಿ, ಆ ಗುರುವಿನ ಚೈತನ್ಯ ಅವನ ಅಂಗೈಯ ಲಿಂಗದಲ್ಲಿ ಅಡಗಿ, ಆ ಲಿಂಗ ತನ್ನ ಕರಸ್ಥಲಕ್ಕೆ ಬಂದುದನ್ನು ಸ್ಮರಿಸಿಕೊಂಡು, "ಆ ಶ್ರೀಗುರು ನನ್ನ ಅಂಗೈಯೊಳಗೇ ಅಲ್ಲ, ಅಂತರಂಗ ದಲ್ಲೂ ನೆಲೆಗೊಂಡಿರುವುದರಿಂದ ಆತನು ಮೃತನಲ್ಲ ಅಮೃತ"ನೆಂದು ಪ್ರಭುದೇವನು ತನ್ನನ್ನು ತಾನೇ ಸಂತೈಸಿಕೊಂಡನು. ಅಂತರಂಗದ ಆ ಶ್ರೀಗುರುಮೂರ್ತಿಯನ್ನು ಮನೋಪುಷ್ಪದಿಂದ ಪೂಜಿಸಿದನು (ಪುಟ 12).

ಆ ಅನಿಮಿಷಗುರುವಿನಿಂದ ತನಗೆ ಪ್ರಾಪ್ತವಾದ ಲಿಂಗವನ್ನು ಅನಿಮಿಷದೃಷ್ಟಿಯಿಂದ ನೋಡಿದ ಅಲ್ಲಮ. ಆ ಇಷ್ಟಲಿಂಗದಲ್ಲಿ—ಅವನ ವಿಶ್ವಾಸ ಬಲಿತು ಆ ಲಿಂಗ ಆಯತಲಿಂಗ ವಾಯಿತು, ಭಾವವು ಮನೋವೇದ್ಯವಾಗಿ ಆ ಲಿಂಗ ಸ್ವಾಯತಲಿಂಗವಾಯಿತು, ಆ ಮನೋವೇದ್ಯವಾದ ಸುಖವು ಭಿನ್ನವಾಗಿ ತೋರದೆ ಪರಿಣಾಮಪೂರಿತವಾಗಿ ಆ ಲಿಂಗ ಸನ್ನಿಹಿತಲಿಂಗವಾಯಿತು. ಹೀಗೆ ಇಷ್ಟ-ದೃಷ್ಟಿ-ತೃಪ್ತಿಲಿಂಗಗಳ ಮೇಲೆ ಆಯತ-ಸ್ವಾಯತ-ಸನ್ನಿಹಿತವೆಂಬುದಾದ ಪ್ರಭುದೇವನ ಪಂಚಭೌತಗಳಳಿದು ಅವೆಲ್ಲ ಲಿಂಗತತ್ವಗಳಾಗಿ ಜೀವಭಾವವಳಿದು ಪರಮಾತ್ಮ ತಾನೆನಿಸುವಲ್ಲಿ ಏರಿದ ಮೆಟ್ಟಲುಗಳೇ ಷಟ್‌ಸ್ಥಲಗಳು. ಇದನ್ನೇ "ಷಡಂಗಯೋಗ" ಎನ್ನಲೂಬಹುದು.

ವಿಶ್ವಾಸ-ನಿಷ್ಠೆ-ಸಾವಧಾನ-ಸ್ವಾನುಭಾವ-ಜ್ಞಾನ-ಸಮರಸ ಈ ಷಡಂಗವೂ ಕ್ರಮ ವಾಗಿ ಭಕ್ತ-ಮಾಹೇಶ್ವರ-ಪ್ರಸಾದಿ-ಪ್ರಾಣಲಿಂಗಿ-ಶರಣ-ಐಕ್ಯ ಎಂಬ ಷಟ್‌ಸ್ಥಲವಲ್ಲಿ ಅಳವಟ್ಟು ಸರ್ವಾಚಾರಸಂಪತ್ತು ಸಿದ್ಧಿಸಿತು ಅಲ್ಲಮನಿಗೆ.

ಅರಿವು ಆಚಾರದಲ್ಲಿ ಸಮ್ಮೇದಿಸಿ, ತನನ್ನು ಆಶ್ರಯಿಸಿದ ಮಹಾನುಭಾವಿಗಳಿಗೆ

'ನಿಶ್ಶಬ್ದ'ವನ್ನು ವಚನಾನುಭಾವವಾಗಿ ನಿರೂಪಿಸಲಿಚ್ಛಿಸಿ, ನಿಂತಲ್ಲಿ ನೆಳಲಿಲ್ಲದೆ, ಸುಳಿದಲ್ಲಿ ಹೆಜ್ಜೆಯಿಲ್ಲದೆ "ದಿಗಂಬರ" ಜಂಗಮವಾಗಿ, ಕೈಯಲ್ಲಿ ವೀಣಾದಂಡವನ್ನು ಹಿಡಿದು ವಚನಗಳನ್ನು ಹಾಡುತ್ತ ಲೋಕಕಾರುಣ್ಯ ಯಾತ್ರೆಯನ್ನು ಕೈಕೊಂಡನು.

ಯಾತ್ರೆಯನ್ನು ಕೈಗೊಂಡು ಅಲ್ಲಮಪ್ರಭುರಾಯನು ಮರ್ತ್ಯರನ್ನು ಪಾವನಮಾಡಿ ವೀರಶಿವಾಚಾರದ ಘನತೆಯನ್ನು ಜನತೆಯಲ್ಲಿ ಪ್ರಚಾರಮಾಡಿ, ಶಿವಾದ್ವೈತತತ್ವರಹಸ್ಯವನ್ನು ಜಿಜ್ಞಾಸುಗಳಲ್ಲಿ ಪ್ರತಿಪಾದಿಸುತ್ತ ಹಲವಾರು ದೇಶಗಳಲ್ಲಿ ಹಾದುಹೋದನು.

## 2

ಹೋಗುತ್ತಿರುವಲ್ಲಿ—ಅಜಗಣ್ಣನೆಂಬ ಶರಣನು ಲಿಂಗೈಕ್ಯವಾಗಲು, ಆತನ ಸಹೋದರಿ ಮುಕ್ತಾಯಕ್ಕನು ಅಣ್ಣನನ್ನು ಅಗಲಿ ವಿಯೋಗವೇದನೆಯಿಂದ ಪ್ರಲಾಪಿಸುತ್ತಿದ್ದಳು. ಬರುತ್ತ, ದಾರಿಯಲ್ಲಿ ಅಳುತ್ತಿರುವ ಅವಳನ್ನು ಯಾರೆಂದು ವಿಚಾರಿಸುವನು—ಪ್ರಭುದೇವ. ಅಜಗಣ್ಣನ ಬೆನ್ನಬಳಿಯವಳೆಂದು ಆಕೆ ಉತ್ತರ ಕೊಡಲು, ಪ್ರಭುದೇವನು ಪರಮಹರ್ಷದಿಂದ ತನ್ನ ಪರಿಚಯವನ್ನು ಹೇಳಿಕೊಂಡನು. ಮುಕ್ತಾಯಿಯ ಮುಖದಲ್ಲಿ ಕೃತಾರ್ಥಭಾವ ಗೆರೆಯೊಡೆಯಿತು. ಅಲ್ಲಮನು ಆಕೆಗೆ, "ತನ್ನಲ್ಲಿ ತಾನು ಸನ್ನಿಹಿತನಾದವನಿಗೆ ದುಃಖಿಸುವುದು ಭ್ರಾಂತಿಯೆಂದೂ, ಒಡಲೇ ಇಲ್ಲದಾತನಿಗೆ ಸಾವೆಲ್ಲಿಯದೆಂ"ದೂ ಹೇಳಿ ಸಂತೈಸುವನು.ಆಕೆ ಸಮಾಧಾನಗೊಳ್ಳಲಾರದೆ, ಶಿವಸ್ವರೂಪಿಯೆಂಬಷ್ಟು ಮಹಾಮಹಿಮನನ್ನು ಅಗಲಿ ಜೀವಿಸುವುದೆಂತೆಂದು ಹಲುಬುವಳು. ಆ ಘಟ್ಟದಲ್ಲಿ ಅಲ್ಲಮ ಮತ್ತು ಮುಕ್ತಾಯಿಯ ನಡುವೆ ಮಾತಿಗೆ ಮಾತು ಬೆಳೆದು ತತ್ತ್ವವಿಚಾರ ಹೊಳೆಯಿತು :

ಅವಿರಳಘನವಸ್ತುಸ್ವರೂಪಿಯಾದ ಅಜಗಣ್ಣನನ್ನು ಒಮ್ಮೆ ಕೂಡಿದೆ ಒಮ್ಮೆ ಅಗಲಿದೆನೆಂಬುದು ವ್ಯರ್ಥಪ್ರಲಾಪ. ನಿನ್ನೊಳಗೆ ನೀನಾರೆಂದು ತಿಳಿದು ನೋಡಿದರೆ, ನಿನ್ನಲ್ಲಿ ಅವನು ಅವಿರಳವಾಗಿರುವುದನ್ನು ಕಾಣುವೆ ಎಂದು ಎಚ್ಚರಿಸುವನು.

ಆ ಪರಾಪರವಸ್ತುವಿನ ಅರಿವಾಗಲು ಗುರುನಿರ್ದೇಶನಬೇಕು. ಅಂತಹ ಗುರುಸ್ವರೂಪಿಯಾದ ತನ್ನ ಅಣ್ಣನಿಲ್ಲವಾದನಲ್ಲಾ ಎಂದೇ ನಾನು ಪರಿತಪಿಸುತ್ತಿರುವುದೆನ್ನುವಳು ಮುಕ್ತಾಯಿ.

ಪ್ರಾಪ್ತಿಯಿದ್ದಷ್ಟು ಕಾಲ ನೀನು ಆ ಗುರುವಿನ ಸೇವೆಮಾಡಿ ಅವನ ನಿರ್ದೇಶನ ಪಡೆದದ್ದಾಯಿತು. ಇನ್ನು ನಿನ್ನಿಂದ ನೀನೇ ತಿಳಿಯಬೇಕಲ್ಲದೆ ಭಿನ್ನವಾಗಿ ಅನ್ವೇಷಿಸಲಾಗದೆಂದು ಪ್ರಭುದೇವನು ಸೂಚಿಸುವನು.

ಅದಕ್ಕೆ ಮುಕ್ತಾಯಿ, "ಗುರುವಚನದಿಂದಲ್ಲದೆ ತನ್ನನ್ನು ತಾನು ಅರಿಯಲಾಗದು" ಎಂದು ಗುರುಪ್ರಾಶಸ್ತ್ಯವನ್ನು ಮತ್ತೆ ಒತ್ತಿ ಹೇಳುವಳು.

ಅಲ್ಲಮಪ್ರಭು ಅಷ್ಟಕ್ಕೇ ಸುಮ್ಮನಾಗದೆ, ನೀನು ಅನಾದಿಯಲ್ಲಿ ಪರಶಿವನಾಗಿದ್ದಾಗ ನಿನಗಾರೂ ಗುರುವಿರಲಿಲ್ಲ. ಈಗ ಕರ್ಮದ ಉಪಾಧಿಯಿಂದ ಆ ಪರಶಿವತತ್ವವೇ ಗುರು-ಶಿಷ್ಯನೆಂದು ಎರಡಾಗಿ ತೋರುತ್ತಿದೆ. ಈಗಲಾದರೂ ನಿನ್ನಿಂದ ನೀನೇ ಪರಶಿವನೆಂದರಿ

ತಲ್ಲದೆ ಅನ್ಯರ ಕೈಯಿಂದ ನಿನ್ನಲ್ಲಿ ಅದನ್ನು ಆಗುಮಾಡಲು ಆಗುವುದಿಲ್ಲ—ಎಂದು ತನ್ನ ಮೊದಲಿನ ಹೇಳಿಕೆಯನ್ನೇ ವಿವರಿಸಿ ದೃಢೀಕರಿಸುವನು. ಆಗಲೂ ಮುಕ್ತಾಯಿಯು— ನನ್ನನ್ನು, ನನಗೆ ನಾನೇ, ಅರಿಯುವಲ್ಲಿ, ನನ್ನ ಅರಿವೇ ನನಗೆ ಗುರುವಾದಂತಾಯಿತು. ಹೇಗೂ ಗುರುತತ್ವವಿಲ್ಲದೆ ಶಿವೋಹಂ ಸಾಧ್ಯವಾಗದೆಂದು ತನ್ನ ಮೊದಲಿನ ವಾದವನ್ನೇ ವಿವಾದವಾಗಿ ಮುಂದೂಡುವಳು.

ಆಗ ಅಲ್ಲಮನು — ತಾನು ಶಿವನಾಗುವೆನೆನ್ನುವವರೆಗೆ ಗುರುವಿನ ಅವಶ್ಯಕತೆಯಿದೆಯೇ ಹೊರತು, ತಾನು ತಾನೇ ಆದ ಬಳಿಕ ಗುರುವೇಕೆ ? ತಾನು ಬೇರೆ ಶಿವ ಬೇರೆನ್ನುವ ದ್ವಂದ್ವ ವಿರುವಲ್ಲಿ, ಆ ದ್ವಂದ್ವದ ಪರಿಹಾರಕ್ಕಾಗಿ ಗುರುವಿನ ನೆರವು ಬೇಕೆಹೊರತು, ಶಿವನೇ ತಾನೆಂದು, ತಾನು ತಾನೇ ಆಗುವಲ್ಲಿ, ಆತ್ಮಜ್ಞಾನವಲ್ಲದೆ ಅನ್ಯವಾವುದೂ ಸಹಾಯಕ್ಕೆ ಬಾರದೆಂದು ಸ್ಪಷ್ಟಪಡಿಸುವನು (26).

ಮುಕ್ತಾಯಕ್ಕನಿಗೆ ಅಲ್ಲಮನ ಈ ತತ್ವ ಗ್ರಹಿಕೆಗೆ ಒಳಗಾಯಿತಾದರೂ, ಅವನ ಆ ನಿಲವು ಬರಿಯ ಮಾತಿನ ಚದುರತನವೇನೋ ಎಂದು ಅವಳಿಗೆ ಸಂಶಯ ಮೂಡುವುದು. ಪರೀಕ್ಷಿಸಿ ನೋಡಲೆಂದು ಆಕೆ ಅಲ್ಲಮನನ್ನು ಕುರಿತು, "ನನ್ನ ನಾನರಿತು ಪರಬ್ರಹ್ಮವಾದೆ ನೆನ್ನುವೆ. ಆದರೆ ನಿನಗೇಕೆ ಮಾತಿನ ಗೊಂದಲ ಹಿಂಗದು ?" ಎಂದು ಮೂದಲಿಸುವಳು. ಅಲ್ಲಮನಾದರೋ—ಮಾತು ಗೊಂದಲವಲ್ಲ, ಜ್ಯೋತಿರ್ಲಿಂಗ ಎಂಬ ತತ್ವಜ್ಞಾನಿ ಯಾದುದರಿಂದ, ಮಾತಿನ ಮಹತ್ವನನ್ನು ಆಕೆಗೆ ಮನಗಾಣಿಸಲಿಚ್ಛಿಸಿ, "ಮಾತು ಜ್ಯೋತಿರ್ಲಿಂಗ, ಅದರ ಸ್ವರವೇ ಪರತತ್ವ, ತಾಲು ಮತ್ತು ಓಷ್ಠಗಳೇ ಅದರ ಬೀಡು-ಆಡುಂಬೊಲ, ನಾದಬಿಂದುಕಲಾತೀತವೇ ಅದರ ಲೀಲಾವಿಲಾಸ. ಮಾತಿನ ಈ ಮಹಿಮೆ ಯನ್ನು ಶರಣರು ಬಲ್ಲವರಾದುದರಿಂದಲೇ ಅವರು ಮಾತನಾಡಿಯೂ ಮಾತಿನ ಸೂತಕ ವಿಲ್ಲದವರು" ಎನ್ನುವನು. ಮುಕ್ತಾಯಿಗೆ ಮತ್ತೆಯೂ ಸಂಶಯ: "ಮಾತೆಂಬುದು ಬುದ್ಧಿಯ ಶಬ್ದರೂಪವೇ ಹೊರತು, ಅದು ಸಿದ್ಧಿಯ ಕುರುಹಲ್ಲ. ನಡೆದು ನಡೆದು ಗುರಿ ಮುಟ್ಟಿದೆವೆಂಬವರು ನುಡಿಯಲ್ಲೇ ನಿರತರಾದರೆ ಅವರು ನಡೆದವರೆಂಬುದೇ ಹುಸಿಯೆನ್ನಿ ಸುವುದು. ನೀನು ವಾದಮಾಡಬಲ್ಲೆಯೇ ಹೊರತು, ಸಹಜಾನುಭಾವ ನಿನಗಿಲ್ಲ" ಎಂದು ಅಲ್ಲಮನನ್ನು ಧಿಕ್ಕರಿಸುವಳು. ಅರಿತು ಆಡಿದರೆ ಒಣತತ್ವವಾಗುವುದು, ಮರೆತು ಆಡಿದರೆ ಹುಸೀ ಮಾಯೆಯಾಗುವುದು — ಆದರೆ ಅರಿತು-ಮರೆತ ಶಿವಯೋಗಿಯ ಮಾತು ಜ್ಯೋತಿರ್ಲಿಂಗವಲ್ಲದೆ ಬೇರೆಯಾಗದೆಂದು ಹೇಳಿ, ಆಕೆಯ ಕಳವಳವನ್ನು ಕಳೆಯಲೆಂದೇ ತಾನು ಮಾತನಾಡಿದುದಾಗಿಯೂ, ಆದುದರಿಂದ ತನ್ನಲ್ಲಿ ಕಳಂಕವೇನೂ ಇಲ್ಲವೆಂದೂ ಅಲ್ಲಮನು ಮನದೆರೆದು ಮಾತನಾಡುವನು. ನಿರವಯಸಮಾಧಿಯ ರಹಸ್ಯವನ್ನು ಆಕೆಗೆ ಬೋಧಿಸುವನು. ಆಕೆಗೆ ಬೆಳಗಾಯಿತು: ಅದರಂತೆಯೇ ಆಚರಿಸಿ ನಿಜವನ್ನು ಸಾಧಿಸು ವಳು.

3

ಅಲ್ಲಿಂದ ಪ್ರಭುದೇವನು ಶ್ರೀ ಸಿದ್ಧರಾಮನ ದರ್ಶನವಾಗಬೇಕೆಂದು ಸೊನ್ನಲಿಗೆ ಪುರಕ್ಕೆ ಬಂದನು. ಅಲ್ಲಿ ಶಿವಾಲಯಗಳನ್ನು ಕಟ್ಟುತ್ತಿದ್ದವರನ್ನು ಕಂಡು, ವಿಡಂಬಿಸುತ್ತ ಮುಂದೆ ಹೋಗಿ, ಕೆರೆಯನ್ನು ಕಟ್ಟುತ್ತಿದ್ದ ಗುಡ್ಡರನ್ನು ತಮ್ಮ ಬಳಿ ಕರೆದು, 'ಒಡ್ಡ ರಾಮ ನಿದಾನೆಯೇ' ಎಂದು ಕೇಳಿದನು. ಆ ಗುಡ್ಡರು ತಮ್ಮ ಗುರುವಿನ ನಿಂದೆಯನ್ನು ಸಹಿಸ ಲಾರದೆ, ಕಲ್ಲು-ಗುಂಡು-ಬಡಿಗೆಗಳಿಂದ ಪ್ರಭುದೇವನನ್ನು ಹೊಡೆದರು: ಆದರೆ ಘಾಯ ಗಳಾದದ್ದು ಹೊಡೆದವರ ಮೈಮೇಲೇ. ಗುಡ್ಡರೆಲ್ಲರೂ ನೊಂದು ಗೋಳಿಡುತ್ತ ಓಡಿ ಬಂದು ಸಿದ್ಧರಾಮನಿಗೆ ಮೊರೆಯಿಟ್ಟರು. ಸಿದ್ಧರಾಮನಾದರೋ—ಇಷ್ಟರಿಂದಲೇ—ಬಂದವನು ಪ್ರಭುದೇವನೆಂಬುದನ್ನು ಗ್ರಹಿಸಲಾರದೆ, ಅಥವಾ ವಿಚಾರಿಸಿಯೂ ತಿಳಿಯದೆ, ಆ ಗುಡ್ಡರ ನೋವೇ ತನ್ನ ನೋವೆಂದು ಆಗ್ರಹಗೊಂಡು, ಪ್ರಭುದೇವನನ್ನು ಸುಟ್ಟುರು ಹುವೆನೆಂದು, ತನ್ನ ಹಣೆಗಣ್ಣನ್ನು ತೆರೆದು, ಹೊರಹೊಮ್ಮಿದ ಅಗ್ನಿಜ್ವಾಲೆಗೆ ಆಜ್ಞೆ ಮಾಡಿದನು. ಆ ಜ್ವಾಲೆ ಬುವಿಬಾನನ್ನು ವ್ಯಾಪಿಸಿ ಪ್ರಭುದೇವನ ಕಡೆ ಧಾವಿಸಿತು.

ಅದನ್ನು ಪ್ರಭುದೇವನು ಸಿದ್ಧರಾಮನ ಹಣೆಗಣ್ಣಿನ ಉರಿಯೆಂದು ಗುರುತಿಸಿ, ಅವನ ಗರ್ವವನ್ನು ಮುರಿಯಲೆಂದು ನಿಶ್ಚಯಿಸಿ, ಆ ಅಗ್ನಿಜ್ವಾಲೆಯನ್ನು ತನ್ನ ಪಾದಗಳಿಂದ ತುಳಿದು ಆರಿಸಿದ. ಬದಲಾಗಿ ತನ್ನ ಅಂಗಾಲ ಅಗ್ನಿನೇತ್ರವನ್ನು ತೆರೆದ. ಸಿದ್ಧರಾಮನಿಗಾ ದರೋ ತನ್ನ ಕಡೆಗೇ ನಾಲಗೆ ಸವರುತ್ತ ಬರುತ್ತಿದ್ದ ಬೆಂಕಿಯ ಉರವಣೆಯನ್ನು ಕಂಡು, ಅದು ಪ್ರಭುದೇವನ ಅಂಗಾಲ ಇಂಗಳವೆಂದು ತಿಳಿಯಲು ತಡವಾಗಲಿಲ್ಲ; ಒಡನೆಯೇ ಅಲ್ಲಮನು ಸಾಕ್ಷಾತ್ ಶಿವನೆಂಬ ಪ್ರಜ್ಞೆಯೂ ಮೂಡಿತು ಅವನಿಗೆ.

ಪ್ರಭುದೇವನನ್ನು ಕಡೆಗಣಿಸಿದುದಕ್ಕಾಗಿ ಸಿದ್ಧರಾಮನು ಪಶ್ಚಾತ್ತಾಪಪಟ್ಟು, ಗುಡ್ಡ ರನ್ನು ಕೂಡಿಕೊಂಡು, ಪ್ರಭುದೇವರಿದ್ದೆಡೆಯನ್ನು ಹುಡುಕಿಕೊಂಡು ಬಂದನು. ಅವನ ಶ್ರೀ ಮೂರ್ತಿಯನ್ನು ಕಂಡು, ಹರ್ಷಾಶ್ರುಗಳನ್ನು ಸುರಿಸಿ, ಅವನ ಶ್ರೀಪಾದಕ್ಕೆ ನಮಸ್ಕರಿಸಿ ಕ್ಷಮೆ ಕೇಳಿದ. ತನ್ನ ಮಠಕ್ಕೆ ಬರಬೇಕೆಂದು ಪ್ರಾರ್ಥಿಸಿದ. ಆದರೆ ಪ್ರಭುದೇವನು ಅಷ್ಟು ಸುಲಭವಾಗಿ ಒಪ್ಪಲಿಲ್ಲ. ಆಗ ಕಿಂಕುರ್ವಾಣದಿಂದ ಸಿದ್ಧರಾಮನು ಪ್ರಭುದೇವನ ಪಾದ ಗಳ ಮೇಲೆ ದಿಂಡುಗೆಡೆದು ಅಳುತ್ತಿರಲು, ಪ್ರಭುದೇವನು ಅವನನ್ನು ನೇವರಿಸಿ ಮೇಲೆತ್ತಿ ಕಣ್ಣನೀರನ್ನು ಒರಸಿ ಸಂತೈಸಿದ.

ಇಬ್ಬರೂ ಏಕಾಂತಸಮಾಧಿಸ್ಥಳದಲ್ಲಿ ಕೂಡಿ, ಯೋಗದ ವಿಚಾರವಾಗಿ ಅನುಭಾವ ನಡೆಸುವರು. ಆ ಶಿವಾದ್ವೈತಪ್ರಸಂಗವಾದ ಮೇಲೆ ಪ್ರಭುದೇವನು ಸಿದ್ಧರಾಮನಿಗೆ "ಸರ್ವಶೂನ್ಯಸಮಾಧಿ"ಯ ನಿಲವನ್ನೂ, ನಿರ್ವಾಣದ ನಿಲುಕಡೆಯನ್ನೂ ಉಪದೇಶಿ ಸುವನು. ಆಗ ಸಿದ್ಧರಾಮನು ಪ್ರಭುದೇವನ ಕರಸ್ಥಲದ ಲಿಂಗವನ್ನು ಕುರಿತು ಕುತೂಹಲ ದಿಂದ ಪ್ರಶ್ನಿಸುವನು. ಪ್ರಭುದೇವನು ತನ್ನ ಕರಸ್ಥಲದ ಲಿಂಗದ ಪರಂಪರೆಯನ್ನು ತಿಳಿಸು ವನು (233) ಸಿದ್ಧರಾಮನಾದರೋ "ಇಷ್ಟಲಿಂಗವನ್ನು ಹಿಡಿದು ನಿಜಲಿಂಗೈಕ್ಯವನ್ನು ಕಾಣುವ ಪರಿ ಹೇಗೆ" ಎಂದು ಮತ್ತೆ ಪ್ರಶ್ನಿಸುವನು. ಸಾಕಾರವನ್ನು ಹಿಡಿದು ನಿರಾಕಾರ

ವನ್ನು ಸಾಧಿಸುವುದು ಹೇಗಾದೀತೆಂಬುದೇ ಸಿದ್ಧರಾಮನ ವಿನಯಶೀಲ ಪೂರ್ವಪಕ್ಷ. ಮೇಲಾಗಿ ಅವನು—ಇಷ್ಟಲಿಂಗವಲ್ಲಿ ಅಡಗಿರುವ ಸ್ಥಲನಿರ್ದೇಶವೆಷ್ಟು—ಮುಂತಾದ ಗಹನತರ ವಿಚಾರಗಳನ್ನು ಕುರಿತು ಪ್ರಭುದೇವನನ್ನು ಪ್ರಶ್ನಿಸುವನು. ಆಗ ಪ್ರಭುದೇವನು —ಆ ಸೂಕ್ಷ್ಮತತ್ತ್ವಗಳನ್ನೆಲ್ಲ ಬಸವಣ್ಣನ ಮೂಲಕ ತಿಳಿಸಿಕೊಡುವೆನೆಂದು ಸಿದ್ಧರಾಮನನ್ನು ಕಲ್ಯಾಣಕ್ಕೆ ಆಹ್ವಾನಿಸುವನು. ಬಸವಣ್ಣನ ಸಂದರ್ಶನವನ್ನು ಪಡೆಯುವ ಸಂದರ್ಭವೊಂದು ಪ್ರಾಪ್ತವಾಯಿತಲ್ಲಾ ಎಂದು ಸಿದ್ಧರಾಮನೂ ಪ್ರಭುದೇವನೊಡನೆ ಕಲ್ಯಾಣಕ್ಕೆ ಹೊರಟನು.

## 4

ಇತ್ತ, ಅನಾದಿಯಲ್ಲಿ ಬಸವ [ವೃಷಭ]ನು ಅನಿಮಿಷನಿಗೆ ತನ್ನ ಪ್ರಾಣಲಿಂಗವನ್ನು ಕೊಟ್ಟು ಬರಿಗೈಯಲ್ಲಿ ಕೈಲಾಸಕ್ಕೆ ಹೋದ ದೆಸೆಯಿಂದ, ಶಿವನ ಅಪ್ಪಣೆಯಂತೆ ಆ ಪ್ರಾಣಲಿಂಗವನ್ನು ಮತ್ತೆ ಅರಸಿತರಲೆಂದು ಏಳುನೂರು ಎಪ್ಪತ್ತು ಅಮರಗಣಸಹಿತವಾಗಿ ಮರ್ತ್ಯಲೋಕಕ್ಕೆ ಅವತರಿಸಬೇಕಾಯಿತು. ಅವತರಿಸಿ ಇಂಗಳೇಶ್ವರ ಬಾಗವಾಡಿಯ ಮಂಡಗೆಯ ಮಾದಿರಾಜನ ಸತಿ ಮಾದಲಾಂಬಿಕೆಯ ಹೊಟ್ಟೆಯಲ್ಲಿ ಹುಟ್ಟಿದನು. ವಿದ್ಯಾಭ್ಯಾಸದ ವೇಳೆಯಲ್ಲಿ ಬಸವಣ್ಣನು-ಮಾಯಾಪಾಶವನ್ನು ಹರಿಯುವಂತೆ, ತಾಯಿತಂದೆ ಮೊದಲಾದ ಪೂರ್ವಸಂಬಂಧವನ್ನೆಲ್ಲ ದೂರೀಕರಿಸಿ, ತನಗಿಂತ ಕಿರಿ[ಹಿರಿ ?]ಯಳಾದ ನಾಗಾಂಬಿಕೆಯ ಸಹಿತ ಕಪ್ಪಡಿ ಸಂಗಯ್ಯ ದೇವರ ಬಳಿ (ಕಪ್ಪಡಿ ಸಂಗಮಕ್ಕೆ) ಬಂದು ಅವನ (ಕಪ್ಪಡಿ ಸಂಗಮೇಶ್ವರನ) ಹಸ್ತದಿಂದ ಶೈವೋಪದೇಶವನ್ನು ಪಡೆದು, ಕೈಲಾಸದಿಂದ ಬಂದ ಶಿವನಿರೂಪದಂತೆ ಕಲ್ಯಾಣಕ್ಕೆ ಹೋಗಿ, ಅಲ್ಲಿ ಶಿವನಟ್ಟಿದ ರಾಯಸನಿರೂಪವನ್ನು ಓದಿ, ಅರವತ್ತು ಕೋಟಿ ವಸ್ತು [ದ್ರವ್ಯ]ವನ್ನು ತೆಗೆಸಿ, ಬಿಜ್ಜಳನಿಗೆ ನಂಬಿಕೆ ಹುಟ್ಟಿಸಿ, ಅವನ ಶಿರಪ್ರಧಾನನಾಗಿ ಶಿವಕಾಯಕದಲ್ಲಿದ್ದನು (ಪು. 56). ಆ ಕಾಲದಲ್ಲೇ ಅವನು ಅನಂತ ಕೊಂಡೆಯಗಳನ್ನು ಪರಿಹರಿಸಿದ. ಸತ್ತವರಿಗೆ ಪ್ರಾಣದಾನಮಾಡಿದ. ಇತರ ಹಲವಾರು ಪವಾಡಗಳನ್ನು ಮೆರೆದು, ಶಿವಭಕ್ತಿಯನ್ನು ಪ್ರಚಾರಮಾಡಿ, ಗುರು-ಲಿಂಗ-ಜಂಗಮದಾಸೋಹನಿರತನಾಗಿದ್ದನು. ಹೀಗಿದ್ದ ಬಸವಣ್ಣನಿಗಿದ್ದ ಒಂದೇ ಒಂದು ಪ್ರಬಲವಾದ ಚಿಂತೆಯೆಂದರೆ—ಅನಿಮಿಷನ ಮೂಲಕ ಪ್ರಭುದೇವನಿಗೆ ಸೇರಿದ ತನ್ನ ಪ್ರಾಣಲಿಂಗವನ್ನು ಮರಳಿ ಪಡೆಯುವುದು ಹೇಗೆ ಎಂಬುದು. ಬಸವಣ್ಣನು ತದೇಕ ಚಿಂತೆಯಲ್ಲಿದ್ದಾಗ, ಶಿವನು ತಾನೇ ಬಸವಣ್ಣನಿಗೆ ಪ್ರಾಣಲಿಂಗ ಸಂಬಂಧನಿರ್ಣಯವನ್ನು ತೋರಿಸುವೆನೆಂದು, ಪ್ರಸಾದ ಮುಖದಿಂದ ನಾಗಾಂಬಿಕೆಯ ಗರ್ಭದಲ್ಲಿ ಚೆನ್ನಬಸವಣ್ಣನೆಂಬ ಹೆಸರಿನಿಂದ ಹುಟ್ಟಿದ. ಪ್ರಬುದ್ಧನಾಗಿ ಬಸವಣ್ಣನ ಕೈಯಲ್ಲಿ ವಿವೇಕಭಾಗೆ (?) ಯಿಂದ ಉಪದೇಶವನ್ನು ಪಡೆಯಬೇಕೆಂದು ಬಸವಣ್ಣನನ್ನು ಪ್ರಾರ್ಥಿಸಿದ. ಸರ್ವರೂ ಸಾಕ್ಷಾತ್ ಸಂಗಮನಾಥನ ಸ್ವರೂಪಿಗಳೆಂಬುದೇ ತನ್ನ ನಿಲುವಾದುದರಿಂದ, ತಾನು ಯಾರಿಗೂ ಉಪದೇಶ ಮಾಡುವವನಲ್ಲವೆನ್ನುವನು ಬಸವಣ್ಣ (ಪುಟ 57). ತತ್ಪಶಃ ಗುರುವಾಗಿ—

ಅಂತರಂಗಕ್ಕೆ ಜ್ಞಾನೋಪದೇಶವನ್ನು ಮಾಡಿದ ಬಳಿಕ—ಕ್ರೀಯಿಂದ ಮಾಡೆಸೆಂದರೆ ಆದೀತೇ ಎಂದು, ಚೆನ್ನಬಸವಣ್ಣನು—ಒಂದು ಶಿವಲಿಂಗವನ್ನು ತಂದು ಬಸವಣ್ಣನ ಕೈಗೆ ಕೊಟ್ಟು—ಲಿಂಗವು ಸಲಕ್ಷಣವಾಗಿದೆಯೇ ಎಂದು ಕೇಳುವನು. ಆಗ ಬಸವಣ್ಣನು—ಲಿಂಗದಲ್ಲಿ ಲಕ್ಷಣವನ್ನು ಅರಸಬಾರದು ಕೋ ಎಂದು ಆ ಲಿಂಗವನ್ನು ಚೆನ್ನಬಸವಣ್ಣನ ಕೈಯಲ್ಲಿಡುವನು. ಹೀಗೆ ಬಸವನು ಗುರುವಾಗಿ, ಚೆನ್ನಬಸವಣ್ಣನಿಗೆ ಲಿಂಗ ಕೊಟ್ಟಂತಾಯಿತು, ಉಪದೇಶ ಮಾಡಿದಂತಾಯಿತು.

ಇದಾದಮೇಲೆ ಬಸವಣ್ಣನು ಚೆನ್ನಬಸವಣ್ಣನ್ನು ಕುರಿತು ತನಗೆ ಪ್ರಾಣಲಿಂಗ ಎಂದು ಸಾಧ್ಯವಾಗುವ್ರದೆಂದೂ, ಆ ಪ್ರಾಣಲಿಂಗದಲ್ಲಿ ತನ್ಮಯವಾಗುವ ರೀತಿ ರಹಸ್ಯವನ್ನು ತನಗೆ ತಿಳಿಸಿಕೊಡಬೇಕೆಂದೂ ಕೇಳಿಕೊಳ್ಳುವನು (264). ತನ್ನ ಪರಮಗುರುವಾದ ಬಸವಣ್ಣನಿಗೆ ಬೋಧಿಸುವುದಾದರೂ ಹೇಗೆಂದು ಚೆನ್ನಬಸವಣ್ಣನು ಹಿಂತೆಗೆದರೂ—ಅವನು ಅದನ್ನು ಒಂದು ಚಮತ್ಕಾರದ ರೀತಿಯಲ್ಲಿ ಮಾಡಿ ಮುಗಿಸುವನು: "ಆಚಾರವಂಗದ ಮೇಲೆ ನೆಲೆಗೊಂಡು, ಇಷ್ಟಲಿಂಗದಲ್ಲಿ ದೃಷ್ಟಿ ನಟ್ಟು ಭಾವಸಂಪನ್ನನಾಗಿಪ್ಪ ನಿಮ್ಮ ಘನವ ನಾನೆತ್ತ ಬಲ್ಲೆನಯ್ಯ? ಅನುಭಾವ ಅಂತರಂಗದಲ್ಲಿ ನೆಲೆಗೊಂಡು ಪ್ರಾಣ ಲಿಂಗದೊಳು ನಿಕ್ಷೇಪಿತವಾಗಿ ನಿಜಚೈತನ್ಯವಾಗಿಪ್ಪ ನಿಮ್ಮ ಘನವ ನಾನೆತ್ತ ಬಲ್ಲೆನಯ್ಯ? ಜ್ಞಾನ ಸಮಾಧಿಯೊಳು ಬಯಕೆಯಡಗಿ ಪರಿಣಾಮಲಿಂಗದಲ್ಲಿ ಮನಸ್ಸು ಲಯವಾಗಿ ನಿಜಲಿಂಗಸ್ಥಲದಲ್ಲಿ ತೃಪ್ತರಾಗಿಪ್ಪಿರಿ ನೀವು. ನಿಮ್ಮ ಘನವ ನಾನೆತ್ತ ಬಲ್ಲೆನಯ್ಯ?"—ಎಂದು ಮುಂತಾಗಿ ಸ್ತೋತ್ರ ಮುಖಾಂತರವಾಗಿಯೇ ಬಸವಣ್ಣನಿಗೆ ಪ್ರಾಣಲಿಂಗಸಂಬಂಧವನ್ನು ಹೇಳದ ಹಾಗೆ ಹೇಳಿ ತೋರಿದನು ಚೆನ್ನಬಸವಣ್ಣನು (265).

ಹೀಗೆ ಪ್ರಾಣಲಿಂಗೋಪದೇಶವಾದ ಮೇಲೆ, ಬಸವಣ್ಣನು ತಾನು ಜಂಗಮಮುಖದಲ್ಲಿ ಲಿಂಗವನ್ನು ಎಂದು ಕಂಡು ಬೆರಸುವುದೆಂದು ಚೆನ್ನಬಸವಣ್ಣನನ್ನು ಕೇಳಿಕೊಂಡನು. ಆಗ ಚೆನ್ನಬಸವನು ಅಲ್ಲಮಪ್ರಭುದೇವರ ಮುಖಾಂತರ ಅದು ಈಡೇರುವುದೆಂದು ಹೇಳಿ, ಅವನಿಗೆ ಆ ಪ್ರಭುದೇವರನ್ನು ಅಚಿರದಲ್ಲಿಯೇ ತೋರಿಸುವುದಾಗಿ ಭರವಸೆ ಕೊಟ್ಟನು (269 ಗ).

ಆ ಆಶ್ವಾಸನೆಯಂತೆ ಪ್ರಭುದೇವನನ್ನು ಎಂದಿಗೆ ಕಂಡೇನೋ ಎಂದು ಬಸವಣ್ಣನು ತವಕಿಸುತ್ತಿದ್ದನು (270).

## 5

ಪ್ರಭುದೇವನು ಸಿದ್ಧರಾಮನನ್ನು ಒಡಗೊಂಡು ಬಂದು ಕಲ್ಯಾಣಪುರವನ್ನು ಕಂಡು—ಬಸವಣ್ಣನು ಮೂರ್ತಿಗೊಂಡಿರುವ ನೆಲೆಯಿದೆಂದು ಪೂಜ್ಯಬುದ್ಧಿಯಿಂದ ಆ ಪುರಕ್ಕೆ ವಂದನೆ ಮಾಡಿ, ಆ ಪುರದ ದ್ವಾರವಟ್ಟದ ಮುಂದೆ ಶಾಸನದಲ್ಲಿ ಕಲ್ಯಾಣಮಹಾತ್ಮೆಯನ್ನು ಚೆನ್ನಬಸವಣ್ಣನು ವಿವರವಾಗಿ ವಚನರೂಪವಾಗಿ ಬರೆದಿರಲು ಅದನ್ನು ಓದಿ, ಅಲ್ಲಮಸಿದ್ಧರಾಮರು ಈರ್ವರೂ ಬಸವಣ್ಣನ ಮಹಾತ್ಮೆಯನ್ನು ಕೊಂಡಾಡಿದರು

## 6

ಕೊಂಡಾಡುತ್ತ ಆಡುತ್ತ ಪ್ರಭುದೇವ-ಸಿದ್ಧರಾಮರು ಬಸವಣ್ಣನ ಮನೆಯ ಬಳಿ ಬಂದು, ಅದನ್ನು ಅವಿಮುಕ್ತಿಕ್ಷೇತ್ರವೆಂದು ಮೆಚ್ಚಿ, ಅಲ್ಲಿ ತಿಂಥಿಣಿಗೊಂಡಿದ್ದ ಶಿವಶರಣರ ಸಂಭ್ರಮವನ್ನು ಕಂಡು, ಬಸವಣ್ಣನ ದಾಸೋಹದ ಘನತೆಯನ್ನು ಕೈವಾರಿಸಿ, "ಆದಿಯ ಲಿಂಗವನ್ನು ಮೇದಿನಿಗೆ ತಂದು, ಮರ್ತ್ಯಲೋಕದಲ್ಲಿ ಮಹಾಮನೆಯ ಕಟ್ಟಿದ" ನೆಂದು ಅವನನ್ನು ಕೊಂಡಾಡಿ ಭಕ್ತಿಪರವಶರಾಗುವರು.

## 7

ಹೀಗೆ ಪ್ರಭುದೇವ—ಸಿದ್ಧರಾಮರು ಬಸವಣ್ಣನ ಮನೆಯ ಬಾಗಿಲಲ್ಲಿ ಮಮತೆಯಿಂದ ನಮಿಸಿ ನಿಂತಾಗ, ಬಸವಣ್ಣನು ಒಳಗೆ ಲಿಂಗಾರ್ಚನೆಯನ್ನು ಮಾಡುತ್ತ ತನ್ನ ಶಿವಲಿಂಗ ದೊಳಗೆ ಪ್ರಭುದೇವರ ನಿಜಮೂರ್ತಿಯನ್ನು ಕಂಡು, ಕರೆದುತನ್ನಿ ಎಂದು, ಪರಿಚಾರಕ ರನ್ನು ಕಳಿಸುವನು. ಆದರೆ ಪ್ರಭುದೇವನು-ಕರೆಯಲು ಬಂದವರು ಪರಿಚಾರಕರೆಂಬುದನ್ನು ಕಂಡು, ಬರುವುದಿಲ್ಲವೆಂದು ಹೇಳಿ ಕಳಿಸುವನು (283). ಜಂಗಮವೇ ಪ್ರಾಣವೆಂದು ಕೊಂಡವನು, ಆ ಜಂಗಮ ಬಂದು ತನ್ನ ಮನೆಯ ಮುಂದೆಯೇ ನಿಂತಾಗಲೂ, ತಾನೇ ಬಂದು ಸ್ವಾಗತಿಸದೆ, ಪರಿಚಾರಕರನ್ನು ಅಟ್ಟಿ ಕರೆಸುತ್ತಿರುವನಲ್ಲಾ—ಇದು ಭಕ್ತನ ಸದಾಚಾರವಲ್ಲ, ಜಂಗಮನಾದವನು ಇಂಥವರ ಮನೆಯನ್ನು ಪ್ರವೇಶಿಸಬಾರದೆಂಬುದೇ ಪ್ರಭುದೇವನ ಆಗ್ರಹ (283). ಒಡೆಯರಾದವರು—ಭಕ್ತನ ಮನೆಯೇ ತಮ್ಮ ಮನೆ ಯೆಂದು ಇಲ್ಲಿಯವರೆಗೆ ಬಂದವರು, ಒಳಕ್ಕೆ ಅದೇ ಮಮತೆಯಿಂದ ಬರದೆ ಹಿಂತುಳಿಯು ತ್ತಿರುವುದು ತರವಲ್ಲನೆಂಬುದೇ ಬಸವಣ್ಣನ ಅತ್ಯಾಗ್ರಹ.

ಭಕ್ತಜಂಗಮರ ಸಂಬಂಧ ದೇಹ-ಪ್ರಾಣಗಳ ಸಂಬಂಧವಿದ್ದಂತೆ, ಅವು ದೂರದೂರ ವಿರಲಾಗದು; ಪ್ರಭುದೇವನನ್ನು ಕರೆದು ತನ್ನಿ. ಬಾರದಿದ್ದರೆ ಅವನ ಶಿರವನ್ನು ಅರಿದು ತನ್ನಿ ಎಂದು ಮತ್ತೆ ಪರಿಚಾರಕರನ್ನು ಅಟ್ಟುವನು.(284).

ಊಹಿಸಿದಂತೆಯೇ ಪ್ರಭುದೇವನು ಮತ್ತೆಯೂ ಬರಲು ನಿರಾಕರಿಸುವನು. ಹಾಗಾದರೆ ಬರದಿರುವುದೇ ನಿನ್ನ ಉದ್ದೇಶವೇನು—ಎಂದು ಮೂದಲಿಸಿ, ಪರಿಚಾರಕರು—ಖಡ್ಗವನ್ನು ಪ್ರಭುದೇವನ ಕೊರಳ ಮೇಲೆ ಬೀಸಿದರು. ನಿರ್ದೇಹಿಯಾದ ಅಲ್ಲಮನಿಗೆ ಎಲ್ಲಿಯ ಖಡ್ಗಾಘಾತ? ಬಯಲಿನಲ್ಲಿ ಕತ್ತಿ ಬೀಸಿದಂತಾಯಿತು. ಆತನು ತಮಗೆ ಅಸಾಧ್ಯನೆಂದು ಪರಿಚಾರಕರು ಮರಳಿ ಬಂದು, ನಡೆದುದನ್ನೆಲ್ಲಾ ಬಸವಣ್ಣನಿಗೆ ಶ್ರುತಪಡಿಸಿದರು. ಆಗ ಬಸವಣ್ಣನು, "ಲೋಹಶಸ್ತ್ರಕ್ಕೆ ಅಸಾಧ್ಯನಾದ ಆ ಮಹಾತ್ಮನನ್ನು ಭಾವಶಸ್ತ್ರದಿಂದ ಗೆಲಿದು ತನ್ನಿ" ಎಂದು ತರುಮಿದನು.

ಪ್ರಭುದೇವನು ಭಾವಾತೀತನೂ ಅಹುದೆಂಬುದನ್ನು ಅವರೇನು ಅರಿತಾರು? ನೋಡಿ ಹಾಕಿ ಅವನನ್ನು ಬಂದಿವಿಡಿಯಲೆಂದು—"ಭಾವ ಶಸ್ತ್ರದಿಂದ ಮುಟ್ಟಿಸಲು," ಅಲ್ಲಮನು ಅವರ ವ್ಯರ್ಥಪ್ರಯಾಸವನ್ನು ಕಂಡು, ಉಪೇಕ್ಷೆಯಿಂದ ಗಹಗಹಿಸಿ ನಕ್ಕು, "ಶರಣರ

ಅಂತರ್ಯವನ್ನು ಅರಿಯದೆ ಬಸವಣ್ಣನು ಮರುಳಾದ. ಅವನ ಭಕ್ತಿ ತಲೆಕೆಳಗಾಯಿತು" ಎಂದು ಸೋಪಹಾಸವಾಗಿ ಖಂಡನೆ ಮಾಡಿದನು.

ಪರಿಚಾರಕರು ಪೆಚ್ಚಾಗಿ, ಮರಳಿ ಬಸವಣ್ಣನ ಬಳಿ ಬಂದು ನಡೆದುದನ್ನು ತಿಳಿಸಲು, ಹಡಪದ ಅಪ್ಪಣ್ಣನು ಅಭ್ಯಾಗತರಿದ್ದಲ್ಲಿಗೆ ಹೋಗಿ—(ಬಸವಣ್ಣನೇ ತಮ್ಮನ್ನು ಒಳಕ್ಕೆ ಕರೆದುಕೊಂಡು ಹೋಗಬೇಕೆಂಬಂತೆ ಹಠಮಾಡಿ) ಬಾಗಿಲಲ್ಲಿ ನಿಂತವರು ಪ್ರಭುದೇವ—ಸಿದ್ಧರಾಮರೆಂಬುದನ್ನು ಅರಿತು, ಶಿವಪೂಜೆಯಲ್ಲಿದ್ದ ಬಸವಣ್ಣನಲ್ಲಿಗೆ ಮರಳಿ, ಅವರ ಮಹಿಮೆಯನ್ನು ಕೊಂಡಾಡುವನು. ಬಸವಣ್ಣನಾದರೋ ಲಿಂಗಾರ್ಚನೆಯ ಪರಮಸುಖದಲ್ಲಿ ಪರವಶನಾಗಿದ್ದುದರಿಂದ, ಆಗಲೂ ಏಳಲೊಲ್ಲದೆ, "ನನ್ನ ಕಾಯವೇ ಭಕ್ತ, ನನ್ನ ಪ್ರಾಣವೇ ಜಂಗಮ. ನಾನೇ ಎದ್ದು ಹೋಗಿ ಕರೆದು ತರಬೇಕೆಂಬ ಬಹಿರುಪಾಧಿ ನನಗಿಲ್ಲ; ಹೋಗಿ ಕರೆದು ತಾ" ಎಂದು ಹಡಪದ ಅಪ್ಪಣ್ಣನನ್ನು ಕಳಿಸುವನು (289). ಅವನ ಸ್ವಾಗತಕ್ಕೂ ಪ್ರಭುದೇವನು ಮನ್ನಣೆ ಕೊಡಲಿಲ್ಲ. ಬಸವಣ್ಣನು ಹಡಪದ ಅಪ್ಪಣ್ಣನನ್ನು ಮತ್ತೆಯೂ ಕಳಿಸುವನು. ಪ್ರಭುದೇವನು ಆ ಅಟ್ಟಾಟಿಕೆಗೆ ಆಗಲೂ ಸಗ್ಗಲಿಲ್ಲ.

ಬಸವಣ್ಣನಿಗೆ ಒಳಗೊಳಗೇ ಅಳುಕು ಅಂಕುರಿಸತೊಡಗಿತು. ಅದೇ ವೇಳೆಗೆ ಚೆನ್ನಬಸವನೂ—ಬಂದವರು ಅಲ್ಲಮಸಿದ್ಧರಾಮರೆಂಬುದನ್ನು ಅವಧಾರಣೆಯಿಂದ ಬಸವಣ್ಣನ ಅವಗಾಹನೆಗೆ ತರುವನು. ಅಂಥವರು ಬಾಗಿಲಲ್ಲಿ ಬಂದು ನಿಂತಿರುವಲ್ಲಿ ಅಟ್ಟಾಟಿಕೆಯಲ್ಲಿ ಮೈಮರೆತಿರುವುದು ಉಚಿತವಲ್ಲೆಂದು ಖಂಡಿಸಿ ನುಡಿಯುವನು (300)

ಜ್ಞಾನಿಯಾದ ಚೆನ್ನಬಸವಣ್ಣನೂ ಈ ಮಾತನಾಡುತ್ತಲೇ ಬಸವಣ್ಣನು ಬೆಚ್ಚಿದನು. ಚಿಕ್ಕದಣ್ಣಾಯಕನ ಕಾಲಿಗೆ ಬಿದ್ದು—ಹೇಗಾದರೂ ಪ್ರಭುದೇವನ ಮುನಿಸನ್ನು ತೊಲಗಿಸಿ ಅವನನ್ನು ತನ್ನ ಪರವಾಗಿ ಪ್ರಸನ್ನನಾಗುವಂತೆ ಮಾಡಿಕೊಡೆಂದು ಕೇಳಿಕೊಳ್ಳುವನು (301-302). ಮೇಲಾಗಿ ಅವನಿಂದ ತನಗೆ ತಿಳಿವು ಮೂಡಿತೆಂದು ಕೊಂಡಾಡಿ, ತನ್ನನ್ನು ತಾನೇ ಹಳಿದುಕೊಳ್ಳುವನು. ಆಗ ಸೊಡ್ಡಳಬಾಚರಸನು ಬಂದು ಬಸವಣ್ಣನನ್ನು ಸಂತೈಸಿದನು. ಬಸವಣ್ಣನಾದರೋ ಥಟ್ಟನೆ ಶಿವಪೂಜೆಯಿಂದೆದ್ದು, ಲಿಂಗವನ್ನು ಅಂಗೈಯಲ್ಲಿ ಅಳವಡಿಸಿಕೊಂಡು, ಚೆನ್ನಬಸವ—ಅಪ್ಪಣ್ಣ—ಬಾಚರಸರನ್ನು ಒಡಗೊಂಡು, ತಲೆಬಾಗಿಲ ಕಡೆ ಹೊರಟನು. ಇಷ್ಟೆಲ್ಲ ಹಗರಣವಾದ ಮೇಲೆ, ಬಸವಣ್ಣನು ತಮ್ಮನ್ನು ಕರೆಯಲು ಬರುತ್ತಿರುವುದನ್ನು ಕಂಡ ಪ್ರಭುದೇವನು—ಸಿದ್ಧರಾಮನೊಡನೆ, "ಬಸವಣ್ಣನಿಗೇ ಈ ಮರವೆ ಮುಸುಕಿದರೆ, ಇನ್ನು ಸಾಮಾನ್ಯರ ಪಾಡೇನು?" ಎನ್ನುತ್ತಿರುವಷ್ಟರಲ್ಲಿಯೇ ಬಸವಣ್ಣನು ಅವರಿದ್ದಲ್ಲಿಗೆ ಬಂದು ಕ್ಷಮೆಕೇಳುತ್ತ ಪ್ರಭುದೇವನ ಕಾಲಿಗೆ ಬೀಳುವನು.

ಆದರೆ ಪ್ರಭುದೇವನು ನಿರಾಕಾರವಾಗಿ ನಿಂತು ಬಸವಣ್ಣನ ನಮಸ್ಕಾರಾದಿ ಕ್ರಿಯೆಗಳಿಗೆ ಅಗಮ್ಯನಾಗಿ ನಿಲ್ಲುವನು. ಏನು ಮಾಡಿದರೂ ಪ್ರಭುದೇವನ ಪಾದ ಕೈಗೆ ನಿಲುಕದಾಗಲು, ಬಸವಣ್ಣನು ತನ್ನ ಅಹಂಕಾರದಿಂದ ತಾನೇ ಕೆಟ್ಟುದಾಗಿ ಪರಿತಪಿಸಿದ. ಅಲ್ಲಮಪ್ರಭುದೇವನು ಮೂದಲಿಸಲು, ಬಸವಣ್ಣನು ಮತ್ತಷ್ಟು ದೈನ್ಯದಿಂದ, ಮತ್ತೊಂದು ಸಲ ತಪ್ಪುಮಾಡುವುದಿಲ್ಲವೆಂದು ಕಿನ್ನರಬೊಮ್ಮಣ್ಣನನ್ನು ಸಾಕ್ಷಿಕೊಡುವನು (335).

ತನು ಬಸವಣ್ಣನಾದರೆ, ಮನ ಪ್ರಭುದೇವನೆನ್ನುತ್ತ ಆ ಬೊಮ್ಮಣ್ಣನು—ಬಸವಣ್ಣನ ಪರ ವಹಿಸಿ ಪ್ರಭುದೇವನನ್ನು ಒಳಗೆ ಬರಬೇಕೆಂದು ಬಿನ್ನಹ ಮಾಡಿಕೊಳ್ಳುವನು. (335). ಪ್ರಭುದೇವನಾದರೋ ಬಸವಣ್ಣನನ್ನು ಕುರಿತು ಆದರ್ಶಭಕ್ತನಾದ ಆತನಂತಹವನೇ ತಪ್ಪಿದುದನ್ನು ಕಂಡು ಸೈರಿಸದೆ ಸದಾಕಾಂಕ್ಷೆಯಿಂದಲೇ ಆಕ್ಷೇಪಿಸಿದುದಾಗಿಯೂ, ವಾಸ್ತವವಾಗಿ ಆತನೇ ತನಗೆ ಪರಮಗುರುವೆಂದೂ ಜನ್ಮಾಂತರ ವೃತಾಂತವನ್ನು ಪ್ರಸ್ತಾಪಿಸುವನು (363). ಮಡಿವಾಳಮಾಚಯ್ಯನು ಮಾತು ಕೂಡಿಸಿ, “ಬಸವಣ್ಣನು ಗುರುರೂಪಾಗಿ, ಚೆನ್ನಬಸವಣ್ಣನು ಲಿಂಗರೂಪಾಗಿ, ಪ್ರಭುದೇವನು ಜಂಗಮರೂಪಾಗಿ ಅವತರಿಸಿ ಬಂದು, ಭಕ್ತಿ, ಜ್ಞಾನ ಮತ್ತು ಮಹಾಘನಚೈತನ್ಯದ ಬೆಳವಿಗೆಗೆ ಕಾರಣರಾದರೆಂದು ಪ್ರಶಂಸಿಸಿ, ಪ್ರಭುದೇವರು ಭಿನ್ನಭಾವವಿಲ್ಲದೆ ಬಸವಣ್ಣನ ಮನೆಯೊಳಕ್ಕೆ ಬಿಜಯಮಾಡಬೇಕೆಂಮ ಪ್ರಾರ್ಥಿಸುವನು (368). ಆಗ ಪ್ರಭುದೇವನು ಪ್ರಸನ್ನನಾಗಿ ಬಸವಣ್ಣನನ್ನು ಮನಸಾರೆ ಹೊಗಳಿ, ನಮುಸ್ಕರಿಸುವನು.

## 8

ಪ್ರಭುದೇವನು ಬಸವಣ್ಣನ ಮನೆಯನ್ನು ಹೊಗುವ ಮುನ್ನ, ಆ ಮನೆಯ ಮುಂದಣ ಪ್ರಸಾದದ ಗುಂಡಿಯನ್ನೇ ದಿಟ್ಟಿಸಿ, “ಒಂದತಿಶಯುವನ್ನು ಕಂಡೆ” ಎಂದು ಇದ್ದಕಿದ್ದಂತೆ ಉದ್ಗಾರವೆತ್ತಿ, ಬಸವಣ್ಣ ಮುಂತಾದವರ ಕುತೂಹಲವನ್ನು ಕೆದಕುವನು. ಪ್ರಭುದೇವನಿಗಿಂತ ಅತಿಶಯವೇನೂ ಇಲ್ಲವೆಂದಿದ್ದ ಬಸವಣ್ಣ ಮುಂತಾದವರಿಗೆ—ಪ್ರಭುದೇವನೇ ಕಂಡ ಅತಿಶಯವೇನಿದ್ದೀತೆಂದು ಉತ್ಕಂಠಿತರಾದರು (382). ಅಲ್ಲಿ ಪ್ರಸಾದದ ಕುಣಿಯೊಳಗೆ ಹನ್ನೆರಡು ವರ್ಷಗಳ ಪರ್ಯಂತರ ಸ್ವರೂಪವನ್ನು ಮರೆಸಿಕೊಂಡು “ಶಿವಗಣಪ್ರಸಾದಿ”ಯಾಗಿದ್ದ ಮರುಳುಶಂಕರದೇವನೆಂಬ ಮಹನೀಯನನ್ನು ಪ್ರಭುದೇವನು ಗುರುತಿಸಿ, “ಪಾಪಿಯ ಕಣ್ಣಿಗೆ ಪರುಷ ಕಲ್ಲಾಗಿ ಕಾಣುವಂತೆ” ಮರುಳುಶಂಕರ ದೇವನು ಕಲ್ಯಾಣದ ಜನಕ್ಕೆ ಯಃಕಶ್ಚಿತ್ ವ್ಯಕ್ತಿಯಾಗಿ ತೋರಿದನೆನ್ನುತ್ತ ಅವನ ಮಹಾತ್ಮೆಯನ್ನು ವಿವರಿಸಿದನು.

ಕೇಳಿ—ಬಸವಣ್ಣನಿಗೆ ಭರಿಸಲಾರದ ವೇದನೆ: ತನ್ನ ಮನೆಯ ಬಾಗಿಲಲ್ಲೇ ಇಂತಹ ಮಹಂತನಿದ್ದರೂ, ಅವನ ಅಸ್ತಿತ್ವವನ್ನೇ ಅರಿಯದಾದೇನಲ್ಲಾ ಅದುವರೆಗೂ ಎಂದು. “ಮುಳಿದು ಮತಿಗೆಟ್ಟು ಮರುಳಾದೆನು. ಎನ್ನ ತಪ್ಪಿಂಗೆ ಕಡೆಯಿಲ್ಲ. ತ್ರಾಹಿ ತ್ರಾಹಿ ಕಾಯುಯ್ಯ” ಎಂದು ಬಸವಣ್ಣನು ಮರುಳುಶಂಕರದೇವರ ಪಾದಗಳಲ್ಲಿ ತನ್ನ ತಲೆಯನ್ನು ಸೂಡುವನು (389). ಚೆನ್ನಬಸವಣ್ಣನೂ ಆ ಮಹಂತನನ್ನು ಕಂಡು ಕೊಂಡಾಡುವಲ್ಲಿ ಬಸವಣ್ಣನೊಡನೆ ಸೇರಿಕೊಳ್ಳುವನು.

ಆಗ, ಗುಪ್ತಭಕ್ತಿಯೇ ನೇಮವಾಗಿದ್ದ ಮರುಳು ಶಂಕರದೇವನು ತನ್ನ ಗುಪ್ತಭಾವ ಪ್ರಕಟವಾಯಿತೆಂದೂ, ಆದುದರಿಂದ ತನ್ನ ಅವಸಾನಕಾಲ ಸಮನಿಸಿತೆಂದೂ ಪರಶಿವ ನೊಳಗೆ ನಿರವಯವಾದನು. ಅವನ ಪ್ರಾಣವಷ್ಟೇ ಅಲ್ಲ ದೇಹವೂ ನಿರವಯನಾಗಿ ಅದೃಶ್ಯ

ವಾದುದನ್ನು ಕಂಡು ಬಸವಣ್ಣನು ಚಕಿತನಾಗಿ, "ಕರ್ಮದಿಂದಾದ ಕಾಯವ ಸವೆಸಿ ನಿರವಯವಪ್ಪ ಪರಿಯೆಂತು" ಎಂದು ಪ್ರಭುದೇವನನ್ನು ಪ್ರಾರ್ಥಿಸುವನು. ಅದಕ್ಕೆ ಪ್ರಭುದೇವನ ಉತ್ತರ: "ನವಮಾಸ ತುಂಬಿದ ಮೂರುತಿ ತಾನಲ್ಲ; ಅವಿರಳ ಲಿಂಗದ ಕಳೆಯ ಬೆಳಗು ತಾ ಶರಣ" ಎಂದು. ಚೆನ್ನಬಸವಣ್ಣನೂ—"ಶರಣರು ಕಾಯವೆಂಬ ಕಂಥೆಯ ಕಳೆಯದೆ ಬಯಲಾದರೆ ನಿಜವೆಂದು ಪರಿಣಾಮಿಸಬೇಕಲ್ಲದೆ, ಅಂತಿಂತೆನಲುಂಟೇ" ಎಂದು, ಮರುಳುಶಂಕರನಂತಹವರ ಘನತೆ ಅದ್ಭುತಕ್ಕೆ ಅದ್ಭುತವೆಂದೂ, ಅದು ಪ್ರಶ್ನಾತೀತವೆಂದೂ ಸೂಚಿಸುವನು (401).

9

ಮರುಳುಶಂಕರದೇವರ ಆ ನಿರ್ವಯಲಸಮಾಧಿಯನ್ನು ಕಂಡು ಪ್ರಭುದೇವ-ಬಸವಣ್ಣ ಮುಂತಾದ ಶರಣರು ಭಕ್ತಿವಿಸ್ಮಯದಿಂದ ಕೊಂಡಾಡಿದರು. ಪ್ರಭುದೇವನು ಬಸವಣ್ಣನ ಕೈಹಿಡಿದುಕೊಂಡು, ಸೊಡ್ಡಳ ಬಾಚರಸರ ಹೆಗಲ ಮೇಲೆ ಹಸ್ತವನ್ನು ಮಡಗಿ, ಚೆನ್ನಬಸವನೊಡನೆ ನಸುನಗೆಯಿಂದ ಪ್ರಸಂಗಿಸುತ್ತ, ಬಸವಣ್ಣನ ಏಕಾಂತದ ಮಠ (ಗೃಹ) ಕ್ಕೆ ಬಿಜಯ ಮಾಡಿದನು. ಬಸವಣ್ಣ—ಚೆನ್ನಬಸವಣ್ಣ—ಮಡಿವಾಳ ಮಾಚಿತಂದೆ—ಸೊಡ್ಡಳ ಬಾಚರಸ—ಹಡಪದಪ್ಪಣ್ಣ ಮುಂತಾದ ಶರಣರು ಪ್ರಭುದೇವನ ಪಾದ ಪೂಜೆಯನ್ನು ಮಾಡಿದರು. ತದನಂತರ ಎಲ್ಲರೂ ಪ್ರಭುದೇವನ ಸುತ್ತಲೂ ಗೋಷ್ಠಿಯಾಗಿ ಸೇರಿದರು.

10

ಆ ಸಮಯದಲ್ಲಿ ಬಸವಣ್ಣನು ಪರಮಾನಂದದ ಉನ್ಮಾದವೇರಿ ಕುಣಿದಾಡಿ, ಪ್ರಭುದೇವರ ಕೃಪೆಯಿಂದ ತನಗೆ ಘನತೆ ಪ್ರಾಪ್ತವಾಯಿತೆನ್ನುತ್ತ ಕೃತಕೃತ್ಯಭಾವದಿಂದ ಪರವಶನಾದನು. (422) ಆ ಪರವಶತೆಯಲ್ಲಿ, ಪ್ರಭುದೇವನಿಗಿಂತ ಪರತರವಸ್ತುವಿಲ್ಲೆಂದು ಕೊಂಡಾಡುವನು. ಆಗ ಪ್ರಭುದೇವನು ಬಸವಣ್ಣನ ವಿನಯವನ್ನೂ, ಅದರಲ್ಲೇ ಅಡಗಿದ ಸಮರಸಭಾವವನ್ನೂ ಕಂಡು, ಮಾರುಹೋಗಿ, ಆದಿಯ ಲಿಂಗವನ್ನು ತೋರಿದ ಅನಿಮಿಷನನ್ನೇ ಕಂಡಂತಾಯಿತೆಂದೂ, ಚತುರ್ಯುಗಗಳಲ್ಲಿ ಕ್ರಮವಾಗಿ ಸ್ಕಂದ-ನೀಲಲೋಹಿತ-ವೃಷಭ ಮತ್ತು ಅನಿಮಿಷನೆನಿಸಿದವನೇ ಈ ಬಸವಣ್ಣನೆಂದೂ ಸ್ತೋತ್ರ ಮಾಡಿದನು. ಮತ್ತು ತನಗೆ ಗುರು-ಲಿಂಗ-ಜಂಗಮ-ಪ್ರಸಾದ ಸ್ವಾಯತವಾದುದು ಬಸವಣ್ಣನಿಂದಲೇ ಎಂದು ಸ್ತೋತ್ರಮಾಡುವನು. ಆ ಹೇಳಿಕೆಯನ್ನು ಬಸವಣ್ಣನು ಸಹಜವಾಗಿಯೇ ಒಪ್ಪುವುದಿಲ್ಲ. ಪ್ರಭುದೇವನು ತನ್ನ ಜನ್ಮಾಂತರ ಪ್ರಸಂಗವನ್ನು ನೆನೆದಂತೆಯೂ, ಬಸವಣ್ಣನಿಂದಲೇ ತಾನು ಪ್ರಾಣವೇ ಲಿಂಗವೆಂಬುದನ್ನು ಅರಿತುದಾಗಿಯೂ ವಿವರಿಸಿ ನುಡಿಯುವನು. ಆಗ ಬಸವಣ್ಣನು, "ಶಕ್ತಿಗೆ ಶಿವನಂತೆ, ಭಕ್ತನಾದ ನನಗೆ ಜಂಗಮನಾದ ನೀನೇ ಆಧಾರ. ನನ್ನ ಆದಿಪಿಂಡಕ್ಕೆ ನೀನೇ ಆಧಾರವಾಗಿ, ನೀನು ತೋರಿದ ಬೆಳಕಿನಿಂದ ನನ್ನ ಹೃದಯ

ಕಮಲದಲ್ಲಿ ನಿನ್ನನ್ನು ಕಂಡೆನು. ಆ ಕಂಡ ಅರಿವೆ ಜಂಗಮ, ಜಂಗಮವಿಲ್ಲದೆ ಲಿಂಗವೆಲ್ಲಿ, ಗುರುವೆಲ್ಲಿ, ಪ್ರಸಾದವೆಲ್ಲಿ? "ಕಾಯವೇ ಭಕ್ತ, ಪ್ರಾಣವೇ ಜಂಗಮ" ಎಂಬುದನ್ನು ಅವಗಾಹನೆಗೆ ತಂದುಕೊಡುವ ಚೈತನ್ಯವೇ ನೀನು. ಆದುದರಿಂದ ನಿನ್ನ ಘನತೆಯನ್ನು ಕಿರಿದು ಮಾಡಿ, ನನ್ನನ್ನೇಕೆ ಗೌರವದ ಶಿಖರಕ್ಕೇರಿಸುವಿರಿ?" ಎನ್ನುತ್ತ ಹೊಗಳಿಕೆಗೆ ಉದ್ವೇಜಿತನಾಗುವನು.

ಆಗ ಪ್ರಭುದೇವನು ಭಕ್ತನೇ ಜಂಗಮಕ್ಕೆ ಆಧಾರವೆಂದು ಒತ್ತಿ ಹೇಳಿ, ಪರಬ್ರಹ್ಮವು ಸಾಕಾರವಾದಾಗ ಧರ್ಮಕಾಯವನ್ನು ಧರಿಸಿ ಅದಕ್ಕೆ ಆಧಾರವಾದವನೇ ಬಸವಣ್ಣನೆಂದೂ, ಅವನಿಂದಲೇ ಶಿವನು ಜಗದ ಕರ್ತನೆನಿಸಿಕೊಂಡನೆಂದೂ, ಜಂಗಮವನ್ನು ಲಿಂಗವೆಂದು ಬಸವಣ್ಣನು ಭಾವಿಸಿದುದರಿಂದಲೇ, ಜಂಗಮಕ್ಕೆ ಆ ಪ್ರಾಶಸ್ತ್ಯ ಬಂದಿತೆಂದೂ, ಲಿಂಗವಾಗಲಿ—ಜಂಗಮವಾಗಲಿ ಕೀರ್ತಿವೆತ್ತುದು ಅವನಿಂದಲೇ ಎಂದು ಪ್ರಭುದೇವನು ಬಸವಣ್ಣನನ್ನು ಮರಳಿ ಮರಳಿ ಕೊಂಡಾಡಿದನು.

ಅದಕ್ಕೆ ಉತ್ತರವಾಗಿ ಬಸವಣ್ಣನು—ಬಿಜ್ಜಳನ ಸಂಬಂಧವಾಗಿ ತಾನು ಕೈಗೊಂಡ ಎಲ್ಲ ಶೈವ ಪ್ರತಿಪಾದನೆಮತ್ತು ಪ್ರಚಾರಗಳಿಗೆ ಸೂತ್ರಧಾರಿಯಾಗಿದ್ದವನು ಪ್ರಭುದೇವನೇ ಎಂದು ಕೃತಜ್ಞತೆಯನ್ನು ವ್ಯಕ್ತಪಡಿಸುವನು.

## 11

ಬಸವಣ್ಣ-ಪ್ರಭುದೇವರು ಹೀಗೆ ಮಹಾನುಭಾವಗೋಷ್ಠಿಯಲ್ಲಿದ್ದಾಗ, ಚೆನ್ನಬಸವಣ್ಣನು ಅವರಿಬ್ಬರನ್ನೂ ಪರೀಕ್ಷಿಸಲೆಂದು, ಅವರಿಬ್ಬರೂ ಅಹಂಕಾರದಿಂದ ಮರುಳಾದರೆಂದು ಚುಚ್ಚಿ ನುಡಿಯುವನು. (456). ಆಗ ಪ್ರಭುದೇವನು, ತನಗೂ ಬಸವಣ್ಣನಿಗೂ ಬಿಚ್ಚಿ ಬೇರೆ ಮಾಡಲಾಗದ ಅವಿನಾಸಂಬಂಧವಿದೆಯೆಂದೂ, ತಾವಿಬ್ಬರೂ ಸಮಾನವೆಂಬ ಭಾವ ತನಗೆ ನೆಲೆನಿಂದುದೆಂದೂ ನಿರೂಪಿಸುವನು. ಚೆನ್ನಬಸವಣ್ಣನು ಭಕ್ತ-ಜಂಗಮರ ಸಮರಸ-ಸಮ್ಮೇಳವನ್ನು ಮನವರಿಕೆ ಮಾಡಿಕೊಂಡು, ಬಸವಣ್ಣ ಮತ್ತು ಪ್ರಭುದೇವರನ್ನು ಎಂದಿಗಿಂತಲೂ ಹೆಚ್ಚು ಪುರಸ್ಕರಿಸುವನು (458). ಮುಂದೆ ಬಸವಣ್ಣ-ಚೆನ್ನಬಸವಣ್ಣ-ಪ್ರಭುದೇವರು ಪರ್ಯಾಯದಿಂದ ಪರಸ್ಪರ ಕೊಂಡಾಡುವರು: ಹರನ ಆಗ್ರಹನಿಗ್ರಹದ ಅಪ್ಪಣೆಯಂತೆ ಏಳುನೂರೆಪ್ಪತ್ತು ಅಮರಗಣಸಹಿತವಾಗಿ ಬಸವಣ್ಣನು ಮರ್ತ್ಯಲೋಕಕ್ಕೆ ಅವತರಿಸಿ, ಕಲ್ಯಾಣದಲ್ಲಿ ಮಹಾಮಠವನ್ನು ಕಟ್ಟಿ, ಶಿವಸಮಯಕ್ಕೆ ಆಧಾರವಾದನು; ಬಿಜ್ಜಳಮಹಾರಾಯನ ಸಿಂಹಾಸನದ ಮೇಲೆ ಪರಮನಟ್ಟಿದ ಓಲೆ ಬಿದ್ದಾಗ, ಅದನ್ನೆತ್ತಿ ಓದಿ ಅರವತ್ತು ಕೋಟಿ ವಸ್ತುವನ್ನು ತೆಗೆಸಿ ಮಹಾಸಂಪತ್ತನ್ನು ತನಗೆ ಒದಗಿಸಿದ ಪವಾಡಕ್ಕೆ ಮೆಚ್ಚಿ, ಆ ಬಿಜ್ಜಳನು ಬಸವಣ್ಣನನ್ನು ಶಿರಪ್ರಧಾನನನ್ನಾಗಿ ನಿಯೋಜಿಸಿಕೊಂಡನು. ಪರವಾದಿ ಬಿಜ್ಜಳನು ಬಸವಣ್ಣನ ಭಕ್ತಿಗೆ ಒರೆಗಲ್ಲಾಗಿ ಚರ್ಚೆಮಾಡಿದಾಗ—ಆ ಬಸವಣ್ಣನು ಮುವ್ವತ್ತಾರು ಕೊಂಡೆಯವನ್ನು ಪರಿಹರಿಸಿ ಶಿವಾಚಾರದ ಧ್ವಜವನ್ನು ಎತ್ತಿಸಿದನೆಂದು ಚೆನ್ನಬಸವನು ಪ್ರಶಂಸಿಸಿ (467) ಮುಂದುವರಿದು, ಪ್ರಭುದೇವ

ನನ್ನು ಕುರಿತು, "ನಿನಗೆ ಆದಿ-ಅನಾದಿಗೆ ಅತೀತವಾದ ಲಿಂಗವು ಹೇಗೆ ಸಾಧ್ಯವಾಯಿತು" ಎಂದು ಪ್ರಶ್ನಿಸುವನು. ಅದು ಬಸವಣ್ಣನಿಂದ ಸಾಧ್ಯವಾಯಿತೆಂದು ಹೇಳಿದ ಪ್ರಭುದೇವ (476) ನು ಬಸವಣ್ಣನ ನಿಲವನ್ನು ನನಗೆ ತಿಳಿಸಿಕೊಡೆಂದು ಚೆನ್ನಬಸವನನ್ನೇ ಕೋರುವನು (484 ಗ).

ಆಗ ಚೆನ್ನಬಸವನು ತನ್ನ ಸುಜ್ಞಾನದೃಷ್ಟಿಯಿಂದ ಬಸವಣ್ಣನ ಅವತಾರಗಳನ್ನು ಕುರಿತು ಹೇಳುವನು: ಕೃತಯುಗದಲ್ಲಿ ಪ್ರಮಥ, ಉಗ್ರ, ನಿಶ್ಶಂಕ, ಶಂಕರ ಎಂಬ; ತ್ರೇತಾಯುಗದಲ್ಲಿ ಕಾಲಾಗ್ನಿರುದ್ರ, ವಿಚಿತ್ರ, ಮಾತಾಪಿತ, ತಾಳಸಮೇಳ, ಜನನ-ಮರಣವರ್ಜಿತ, ಆದಿಗಣನಾಥ, ನಂದಿಮಹಾಕಾಳ, ವಂದ್ಯ, ಕಾಲಲೋಚನ, ನೀಲಲೋಹಿತ, ಸ್ಕಂದ, ನೀಲಕಂಠ ಎಂಬ; ದ್ವಾಪರದಲ್ಲಿ ವೃಷಭ, ನಂದಿಕೇಶ್ವರ ಎಂಬ ಗಣೇಶ್ವರನಾಗಿ ಶಿವನಲೀಲೆಗಳಿಗೆ ಸಹಾಯಕನಾಗಿದ್ದು, ಕಲಿಯುಗದಲ್ಲಿ ಸಂಗನಬಸವಣ್ಣನಾಗಿ (485) ಮರ್ತ್ಯಕ್ಕೆ ಅವತರಿಸಿ, ಪ್ರಾಣಲಿಂಗ-ಜಂಗಮಲಿಂಗ-ಮಹಾಪ್ರಸಾದ ಮತ್ತು ಮಹಾಪಾದೋದಕ ಈ ಚತುರ್ವಿಧದ ಮಹಿಮೆಯನ್ನು ಈ ಜಗತ್ತಿಗೆ ಪ್ರಕಟಪಡಿಸಿದನು (486).

ಹೀಗೆ ಚೆನ್ನಬಸವನು ಬಸವಣ್ಣನ ಪೂರ್ವಾಪರವೃತ್ತಾಂತವನ್ನೆಲ್ಲ ವಿವರಿಸಲು, ಪ್ರಭುದೇವನು ಆತನ ಅರಿವನ್ನು ಕೊಂಡಾಡಿ (487) "ಬಸವಣ್ಣನೇ ಆದಿ ಶರಣ, ಅವನ ಮಹಿಮೆಯನ್ನರಿದ ನಿನ್ನ ಮಹಾಜ್ಞಾನಕ್ಕೆ ಪ್ರತಿಯಿಲ್ಲವೆಂದು ನಿರೂಪಿಸುವನು.

ಹೀಗೆ ಪ್ರಭುದೇವನು—ಬಸವಣ್ಣನನ್ನು "ಆದಿ ಶರಣ" (ಅಂದರೆ ಅನಾದಿಯಾದುದು ಲಿಂಗ, ಅಲ್ಲಿಂದೀಚಿನದು ಬಸವತತ್ವ) ಎಂದುದಕ್ಕೆ ಚೆನ್ನಬಸವಣ್ಣನು ಅಕ್ಷೇಪವನ್ನು ಎತ್ತಿ—"ಆದಿ ಬಸವಣ್ಣನು, ಅನಾದಿ ಲಿಂಗವೆಂಬ ಮಾತು ಹುಸಿ ಹುಸಿ: ಈ ನುಡಿಯ ಕೇಳಲಾಗದು. ಆದಿ ಲಿಂಗ, ಅನಾದಿ ಬಸವಣ್ಣನು. ಲಿಂಗವು ಬಸವಣ್ಣನ ಹೊಟ್ಟೆಯಲ್ಲಿ ಹುಟ್ಟಿತು. ಲಿಂಗ—ಜಂಗಮ—ಪ್ರಸಾದಗಳಿಗೆ ಬಸವಣ್ಣನೇ ಕಾರಣಕರ್ತ—" ಎಂದು ಬಸವಾಧಿಕ್ಯವನ್ನು ಒತ್ತಿ ಹೇಳಿದನು (488).

ಇದನ್ನು ಪ್ರಭುದೇವನು ಅನುಮೋದಿಸಿ—ಆದಿ ಪರಮೇಶ್ವರನೇ ದೇಹಧರಿಸಿ ಬಂದರೂ ಅವನಲ್ಲಿ ಚೆನ್ನಬಸವನ ಜ್ಞಾನವನ್ನು ಕಾಣುವುದು ದುರ್ಲಭವೆಂದು ಮೆಚ್ಚಿ ಹೊಗಳುವನು (489). ಶರೀರವಿಡಿದೂ ದಿವ್ಯಜ್ಞಾನಿಯಾದವನು ಚೆನ್ನಬಸವನೊಬ್ಬನೇ ಎಂಬುದೇ ಪ್ರಭುದೇವದ ಅಭಿಮತ (490 ಗ).

ಮೇಲಾಗಿ ಚೆನ್ನಬಸವಣ್ಣನಿಂದ ಆಚಾರಭಿಕ್ಷವನ್ನು ಕೇಳುವನು ಪ್ರಭುದೇವ (491). ಆಗ ಚೆನ್ನಬಸವನು ಆಚಾರವೆಂಬುದು ಬಸವಣ್ಣನಿಗುಂಟಲ್ಲದೆ ತನ್ನಗಿಲ್ಲವೆನಲು, ಪ್ರಭುದೇವನು—ಬಸವಣ್ಣನ ಆಚಾರದ ಸ್ವರೂಪವನ್ನು ಕುರಿತು ವಿವರವನ್ನು ತಿಳಿಸಿಕೊಡು ಎಂದು ಕೋರುವನು (494). ಚೆನ್ನಬಸವಣ್ಣನು ಅದನ್ನು ವಿವರಿಸಿ ಹೇಳುವನು (496). ಪ್ರಭುದೇವನಾದರೋ—ಬಸವಣ್ಣನು ಮಾಡುವ ದಾಸೋಹವನ್ನು ಮತ್ತಷ್ಟು ಚರ್ಚಿಸಿ ತಿಳಿಯುವ ಅಭಿಪ್ರಾಯದಿಂದ ಬಸವಣ್ಣನ ಆಚರಣೆ ತನ್ನ ಅವಗಾಹನೆಗೆ ಬರಲಿಲ್ಲವೆನ್ನು

ವನು (498). ಆಗ ಚೆನ್ನಬಸವಣ್ಣನು ಪ್ರಭುದೇವನಿಗೆ ಬಸವಣ್ಣನ ಆಚರಣೆಯ ಸ್ವರೂಪವನ್ನು ನಾನಾ ರೀತಿಯಲ್ಲಿ ಪ್ರತಿಪಾದಿಸಿದನು (499-506). ಕೇಳಿ ದಿವ್ಯ ಜ್ಞಾನಿಯೂ ಅತ್ಯುತ್ತಮ ಪ್ರತಿಪಾದಕನೂ ಆದ ಚೆನ್ನಬಸವಣ್ಣನನ್ನು ಪ್ರಭುದೇವನು "ಸರ್ವಸಂಸಾರ ವಿರಹಿತ" ಎಂದು ಕೊಂಡಾಡಿದನು (510).

ಆಗ ಚೆನ್ನಬಸವಣ್ಣನು ಪ್ರಭುದೇವನಂತಹ ಮಹನೀಯನ ಸಂಗದಿಂದ ತಾನು ಕೃತಾರ್ಥನಾದಂತೆ ತಿಳಿಸಿ, ತನಗೂ ಪ್ರಭುದೇವನಿಗೂ ಒಂದೇ ಸಂಪ್ರದಾಯದಲ್ಲಿ "ನಿಜಪದ" ಸಾಧ್ಯವಾಯಿತೆಂದೂ ಭಿನ್ನವಿಸಿಕೊಂಡನು. ಆಗ ಪ್ರಭುದೇವನು—ತನಗೂ ಚೆನ್ನಬಸವನಿಗೂ ಒಂದೇ ಸಂಪ್ರದಾಯದಲ್ಲಿ ನಿಜವು ಅಳವಟ್ಟುದು ಹೇಗೆಂದು ಬೆಸಗೊಳ್ಳುವನು (512ಗ). ಅದಕ್ಕೆ ಚೆನ್ನಬಸವಣ್ಣನ ಉತ್ತರ: "ಗುರು ಒಂದು, ಲಿಂಗ ಒಂದು, ಉಪದೇಶ ಒಂದು. ಬಸವಣ್ಣನ ಗರುಡಿಯಲ್ಲಿ ಇಬ್ಬರಿಗೂ ಅಭ್ಯಾಸ ಒಂದೆ" ಎಂದು (513).

ತಾನೂ ಚೆನ್ನಬಸವಣ್ಣನೂ ಬಸವಣ್ಣನ ಶಿಷ್ಯರೆಂಬುದನ್ನು ಪ್ರಭುದೇವನು ಆಲಿಸಿ ಅದರ ಪೂರ್ವಾಪರವನ್ನು ಕೇಳಲಿಚ್ಛಿಸುವನು (514). ಆಗ ಚೆನ್ನಬಸವಣ್ಣನು ತಿಳಿಸಿದ ವಿವರ: ಸಂಸಾರವಿರಹದಲ್ಲಿ ನವೆದಿದ್ದಾಗ, ಲಿಂಗವನ್ನು ಒಳಗೊಂಡ ಶಿವಾಲಯದ ಮೇಲೆ ಬೆಳೆದ ಹುತ್ತವೊಂದರಲ್ಲಿ ಹಾವೊಂದು ತಲೆ ಎತ್ತಿನೋಡಿತು. ಅದರ ಹೆಡೆಯ ಮಾಣಿಕ್ಯ ಥಳಥಳಿಸಿತು. ಶಿವನ ತಲೆಸುತ್ತಿದ ಫಣೀಂದ್ರನಲ್ಲದೆ ಅದು ಬೇರೆಯಲ್ಲವೆಂದು ಪ್ರಭುದೇವನು ಶಿಖರದಿಂದ ಮೊದಲುಗೊಂಡು ಅಗೆಸಿ, ಪಡಿಸೂತ್ರವನ್ನು ಕಂಡು, ಕದವನ್ನು ತೆರೆಯಲು, ಪ್ರಭುದೇವನಿಗೆ ಅನಿಮಿಷನೂ, ಅವನ ಕೈಯ ಲಿಂಗವೂ ಕಾಣಿಸಿತು. ಕೈಯಲಿದ್ದ ಲಿಂಗ ವನ್ನು ತೆಗೆದುಕೊಂಡು ಹೊರಹೊರಟ ಪ್ರಭುದೇವನಿಗೆ ನಿರ್ವಯಲನ್ನು ಹೊಂದಿದ ಅನಿಮಿಷನ ಬೆರಗು ಹೊಡೆಯಿತು. ಆಗ ಅಲ್ಲಮನಿಗೆ "ಅಲ್ಲಮಪ್ರಭು" ಎಂಬ ಪ್ರಖ್ಯಾತಿಯಾಯಿತು. ಪ್ರಭುದೇವನಿಗೆ ಗುರುವಾದ ಆ ಅನಿಮಿಷನಿಗೂ ಗುರುವಾದವನು ಈ ಬಸವಣ್ಣನೇ. ಆದುದರಿಂದ ಪ್ರಭುದೇವನು ಬಸವಣ್ಣನ ಸಂಪ್ರದಾಯದ ಶಿಷ್ಯ. ಆ ಬಸವಣ್ಣನ ಅನುಗ್ರಹದಿಂದಲೇ ಚೆನ್ನಬಸವಣ್ಣನು ಚೆನ್ನಸಂಗಮನಾಥನೆಂಬ ಲಿಂಗ ವನ್ನು ಪರಿಗ್ರಹಿಸಿದುದರಿಂದ ಅವನೂ ಬಸವಣ್ಣನ ಸಂಪ್ರದಾಯದ ಶಿಷ್ಯ. ಆದುದ ರಿಂದಲೇ ಪ್ರಭುದೇವ-ಚೆನ್ನಬಸವಣ್ಣರಿಬ್ಬರೂ ಒಂದೇ ಕುಳಸ್ಥಳದವರು (516).

ಈ ವೃತಾಂತವನ್ನೆಲ್ಲ ಬಲ್ಲ ಚೆನ್ನಬಸವಣ್ಣನನ್ನು ಕಿರಿಯನಾದರೂ ಮಹಾಜ್ಞಾನಿ ಯೆಂದು ಪ್ರಭುದೇವನು ಹೊಗಳುವನು (517). ಚೆನ್ನಬಸವಣ್ಣನಾದರೋ ತನ್ನ ಜ್ಞಾನಕ್ಕೆ ಪ್ರಭುದೇವನೇ ಮೂಲವೆಂದು ವಿನಯಶೀಲ ಉತ್ತರವನ್ನು ನೀಡುವನು (518).

ಆದರೆ ಪ್ರಭುದೇವನು ಆ ಮಾತನ್ನು ಒಪ್ಪದೆ "ಅರಿವೆಂಬುದು ತನ್ನಿಂದ ತಾನೇ ಅರಿಯುವಂಥದು. ತನ್ನಿಂದ ತಾನರಿತಲ್ಲದೆ ನಿಜವು ಸಾಧ್ಯವಾಗದು" ಎನ್ನುವನು (519), ಜೊತೆಗೆ "ಗುರುವಿಡಿದ ಅರಿವು ಅರಿವಲ್ಲ. ಗುರುವಿಡಿದು ಲಿಂಗ ಉಂಟೆಂಬುದು ಕಲ್ಪಿತ" ಎನ್ನುವನು. ಇದರಿಂದ ಗುರುವಿನ ಸಂಬಂಧವಾಗಿ ಲಘುವಾದ ಅರ್ಥ ಬರುವಂತೆ

ಭಾಸವಾದುದರಿಂದ ಚೆನ್ನಬಸವಣ್ಣನು ಪ್ರಭುದೇವರನ್ನು ಕುರಿತು—"ಗುರುವಿಲ್ಲದೆ ಲಿಂಗ ನಿನಗೆಲ್ಲಿಂದ ಬಂದಿತು. ಗುರುವನ್ನು ಕೊಂದು ಲಿಂಗವನ್ನು ಕೊಂಡವ ನೀನು-ವ್ರತಗೇಡಿ" ಎಂದು ಝುಂಕಿಸುವನು. ತನ್ನ ಮೇಲೆ ಮಾಡಿದ ಆ ಆರೋಪಣೆಯನ್ನು ಪ್ರಭುದೇವನು ಒಪ್ಪದೆ—"ನನ್ನ ಗುರುವಿನ ಪ್ರಾಣ ಅವನ ಲಿಂಗದಲ್ಲಿ ಲೀನವಾದ ಬಳಿಕ, ಆ ಲಿಂಗವು ನನ್ನ ಕೈಸೇರಿತು. ಹೀಗಾಗಿ ನನ್ನ ಗುರು ನನ್ನ ಕರಸ್ಥಲದ ಲಿಂಗದಲ್ಲಿದ್ದಾನೆ. ಅಷ್ಟೇ ಅಲ್ಲ ಅವನು ನನ್ನ ಮನಸ್ಥಲದ ಅರಿವಿನಲ್ಲಿದ್ದಾನೆ. ಮೇಲಾಗಿ ನನ್ನ ಗುರುವಾದ ಅನಿಮಿಷನಿಗೆ ಪರಮಗುರುವಾದ ಬಸವಣ್ಣನು ನನ್ನ ಕಣ್ಣ ಮುಂದಿದಾನೆ. ನಾನು ಗುರುದ್ರೋಹಿ ಹೇಗಾದೇನು ?" ಎಂದು ಪ್ರಶ್ನಿಸುವನು (521) ಆಗ ಚೆನ್ನಬಸವನು "ನಿನಗಿನ್ನೂ ಕರಸ್ಥಲ—ಮನಸ್ಥಲವೆಂಬ ದ್ವಂದ್ವಭಾವ ಬಯಲಾಗಿಲ್ಲ. ಲಿಂಗ ನಿನಗೆಂತು ಸಾಧ್ಯ ವಾಯಿತು ?" ಎಂದು ಮರುಪ್ರಶ್ನೆ ಹಾಕುವನು ಪ್ರಭುದೇವನಿಗೆ.

ಆಗ ಪ್ರಭುದೇವನು ಕರಸ್ಥಲದ ಲಿಂಗ ಮನಸ್ಥಲದಲ್ಲಿ, ಆ ಮನಸ್ಥಲದ ಲಿಂಗ ಮಹಾಸ್ಥಲದಲ್ಲಿ ವೇದ್ಯವಾಗಿ, ಆ ಮಹಾಸ್ಥಲವೇ ತನ್ನ ಸರ್ವಾಂಗದಲ್ಲಿ ವೇದ್ಯವಾದ ಬಳಿಕ ತನಗೆ ಭಿನ್ನಭಾವವಿಲ್ಲವೆಂದೂ, ಪ್ರಾಣಲಿಂಗವನ್ನು ಬೆರಸಿ ಬಂದಾದ ಬಳಿಕ ಎರಡೆಂಬುದಿಲ್ಲವೆಂದೂ, ಅಂಗವು ಲಿಂಗಾಂಗವಾಗಿ, ಲಿಂಗವು ಪ್ರಾಣಲಿಂಗವಾಯಿತೆಂದೂ ಹೇಳಿ—ತನ್ನ ಪ್ರಾಣಲಿಂಗಸಂಬಂಧದ ರಹಸ್ಯವನ್ನು ತಿಳಿಸುವನು (523-529).

ಚೆನ್ನಬಸವಣ್ಣನು ಪ್ರಭುದೇವನ ನಿಲುವನ್ನು ಒಪ್ಪಿ, ಆತನ ಸಂಗದಿಂದ ತಾನು ಲಿಂಗೈಕ್ಯನಾದೆನೆಂದರೆ, ಪ್ರಭುದೇವನು ಚೆನ್ನಬಸವಣ್ಣನಂತಹ ಲಿಂಗಸಂಗಿಗಳ ಸಂಗದಿಂದ ತಾನೇ ಲಿಂಗೈಕ್ಯನಾದುದಾಗಿ ನಿರೂಪಿಸುವನು (533)

ಕೊನೆಯದಾಗಿ ಚೆನ್ನಬಸವನು ಬಸವಣ್ಣನ ಮತ್ತು ಪ್ರಭುದೇವನ ಮಹಾಸಂಗದ ಮಹಿಮೆಯನ್ನು ಕೊಂಡಾಡಿ, "ಮಹಾಘನಕ್ಕೆ ಘನವಾಹನವಾಗಿ ಅಗಮ್ಯಸ್ಥಲದಲ್ಲಿ ನಿಂದು ಭರಿತನಾಗಿರಬಲ್ಲವರಾರಯ್ಯ ನೀನಲ್ಲದೆ" ಎಂದು ಬಸವಣ್ಣನನ್ನು ಕೃತಜ್ಞತೆಯಿಂದ ಸ್ಮರಿಸಿ, ಒಕ್ಕು ಮಿಕ್ಕ ಶೇಷಪ್ರಸಾದದ ಕಾರುಣ್ಯದ ಶಿಶುವಾಗಿ ತಾನು ತಾಯ ಹೊಟ್ಟೆ ಯಲ್ಲಿದ್ದಾಗಲೇ ತನಗೆ ವಿಭೂತಿಯ ಪಟ್ಟವನ್ನು ಕಟ್ಟಿ, ಹಸ್ತಮಸ್ತಕ ಸಂಯೋಗಮಾಡಿ, ತನ್ನನ್ನು ಉಳಿಸಿದವನು ಬಸವಣ್ಣನೇ ಎಂದು ಸ್ತೋತ್ರ ಮಾಡುವನು (534 ಗ-538)

ಪ್ರತಿಯಾಗಿ ಬಸವಣ್ಣನೂ, ಚೆನ್ನಬಸವನನ್ನು ಕುರಿತು—ಶಿವಾಚಾರವನ್ನರಿಯದೆ ಜಗತ್ತು ಹಾಳಾಗುತ್ತಿದೆಯೆಂದು ಪರಮಪುರುಷಾರ್ಥಕಾರಣವಾಗಿ ಆತನು ಮರ್ತ್ಯದಲ್ಲಿ ಅವತರಿಸಿ ಬಂದು, ಗುರು-ಲಿಂಗ-ಜಂಗಮ-ಪಾದೋದಕ-ಪ್ರಸಾದವೆಂಬ ಪಂಚಾಚಾರ ವನ್ನು ಸ್ಥಳಗೊಳಿಸಿ, ಪ್ರಾಣವೇ ಲಿಂಗ, ಲಿಂಗವೇ ಪ್ರಾಣವೆಂಬ ರಹಸ್ಯವನ್ನೂ, ಲಿಂಗೈಕ್ಯ ವೆಂಬುದನ್ನೂ ತಿಳಿಸಿದುದರಿಂದ ಆ ಚೆನ್ನಬಸವಣ್ಣನೇ ತನಗೆ ಪರಮಗುರುವೆಂದು ಅಭಿವಂದನೆ ಮಾಡುವನು (539).

## 12

ಚೆನ್ನಬಸವಣ್ಣನು ನಿತ್ಯಪ್ರಸಾದಿಯೆಂದೂ, ಅವನು ಪ್ರಸಾದದ ಹಾದಿಯನ್ನು ಎಲ್ಲರಿಗೂ ತೋರಿದ ಮಹನೀಯನೆಂದೂ ಪ್ರಭುದೇವನು ಸ್ತುತಿಸುವನು (540). ಪ್ರಭುದೇವನು ತನ್ನಲ್ಲಿ ಗುರುತಿಸಿದ ಜ್ಞಾನವೂ ಪ್ರಸಾದಿತ್ವವೂ ಕ್ರಮವಾಗಿ ಮಡಿವಾಳ ಮಾಚಿದೇವನಿಂದಲೂ ಸಂಗನ ಬಸವಣ್ಣನಿಂದಲೂ ತನಗೆ ಅಳವಟ್ಟವೆಂದು ಚೆನ್ನ ಬಸವಣ್ಣನು ಬಿನ್ನಹಮಾಡುವನು. ಮಡಿವಾಳ ಮಾಚಯ್ಯನು ಆ ಪ್ರಶಂಸೆಯನ್ನು ಒಪ್ಪದೆ ಚೆನ್ನಬಸವಣ್ಣನ ಪ್ರಸಾದದಿಂದ ತಾನೇ ಉದ್ಧಾರವಾದಂತೆ ಅರಿಕೆ ಮಾಡಿ ಕೊಳ್ಳುವನು (542).

ಆಗ ಪ್ರಭುದೇವನು ಮಡಿವಾಳ ಮಾಚಿ ದೇವನನ್ನು ಒರೆದು ನೋಡುವ ಉದ್ದೇಶ ದಿಂದ—"ಹಣೆಯಲ್ಲಿ ಕಣ್ಣು, ಮನದಲ್ಲಿ ವಿರಸ-ನುಡಿವುದು ಮಾತ್ರ ಭಕ್ತಿರಸ ಎಂದು ಕೆಣಕಲು, ಅವನಿಗೆ ಮಡಿವಾಳನು "ನನ್ನ ಆದಿ ನಿನಗೆ ಗೊತ್ತು : ನಾನು ಘನಗಂಭೀರ ದಲ್ಲಿ ಹುಟ್ಟಿದವನು. ನನ್ನ ಅನಾದಿಯೂ ನಿನಗೆ ಗೊತ್ತು ; ನನಗೆ ಕಾಯವಿಲ್ಲ. ಬಸವಣ್ಣ ನಿಂದಾಗಿ ನಾನು ಮರ್ತ್ಯಕ್ಕೆ ಬಂದವನು. ನನಗೆಲ್ಲಿಯದು ಒಡಲಿನ ಉಪಾಧಿ ?" ಎಂದು ಹೇಳುತ್ತ ಬಸವಣ್ಣ—ಚೆನ್ನಬಸವಣ್ಣ—ಪ್ರಭುದೇವರೇ ಕ್ರಮವಾಗಿ ತನ್ನ ದೇಹ—ಪ್ರಾಣ ಮತ್ತು ಮಹಾಜ್ಞಾನರೂಪದವರು ಎನ್ನುವನು (544).

ಆಗ ಪ್ರಭುದೇವನು ಮಡಿವಾಳ ಮಾಚಿದೇವನನ್ನು ಕುರಿತು "ನಿನ್ನ ದೀಕ್ಷೆ, ಶಿಕ್ಷೆ, ಸ್ವಾನುಭಾವದ ಪರಿಯೇನು? ನಿನ್ನನ್ನು ನಿಜಪದದಲ್ಲಿ ನಿಲಿಸಿದಿವರಾರು ಎಂದು ಪ್ರಶ್ನಿಸಿದ. ಅದಕ್ಕೆ ಅವನು "ನನ್ನಲ್ಲಿ ಏನಾದರೂ ಘನವಿರುವುದಾದರೆ ಅದು ಬಸವಣ್ಣನ ಪ್ರಸಾದ ದಿಂದ ಲಭ್ಯವಾದುದು. ನೀನೂ ಸಿದ್ಧಿಯನ್ನು ಪಡೆದುದು ಬಸವಣ್ಣನಿಂದಲೇ. ಆದುದ ರಿಂದ ನಾನು ಬಸವಣ್ಣನಿಗೆ ನಮಸ್ಕರಿಸಿ ಕೃತಾರ್ಥ" ಎಂದು ಉತ್ತರಿಸಿದ (546).

ಅಷ್ಟರಿಂದಲೇ ತೃಪ್ತಿಯಾಗದೆ, ಮಡಿವಾಳನು ಮತ್ತೆಯೂ ಬಸವಣ್ಣನನ್ನು ಸುತ್ತಿಸುವನು : "ಮರ್ತ್ಯಲೋಕವನ್ನು ಪಾವನ ಮಾಡುವ ಶಿವನಿವನು (549). ಮರವೆ ಬಂದೀತೆಂದು ಅರಿವನ್ನು ಬೆಲೆಮಾಡಿ, ಆ ಅರಿವನ್ನು ಕೊಟ್ಟು ಗುರುವಿನ ಕೈಯ ಲಿಂಗವನ್ನು ಕೊಂಡನು" ಎಂದು. ಮಡಿವಾಳನು ತನ್ನ ಅರಿವನ್ನು ಅನಾಯತದಲ್ಲಿ ನಿಲಿಸಿ ನಿಜಸ್ವಾಯತ ಮಾಡಿದಾತನೂ ಬಸವಣ್ಣನೇ ಎಂದೂ ಸ್ತೋತ್ರಮಾಡುವನು (550).

ಪ್ರಭುದೇವನು ಮೇಲಿಂದ ಮೇಲೆ ಮಡಿವಾಳನನ್ನು ಪರೀಕ್ಷಿಸಲೆಂದು ಪ್ರಶ್ನೆ ಮಾಡು ತ್ತಿದ್ದಾಗ—ಮಡಿವಾಳನು, "ಬಸವಣ್ಣನೇ ನನ್ನ ಅಂತಸ್ಥಿತಿಗತಿಯನ್ನು ಬಲ್ಲನಾಗಿ, ಆತನಿಂದಲೇ ನನ್ನ ಪರಿಯನ್ನು ವಿಚಾರಿಸಿ ತಿಳಿ" ಎಂದು ಬಿನ್ನೈಸುವನು. ಅದೇ ಪ್ರಕಾರ ಮಡಿವಾಳ ಮಾಚಯ್ಯನ ಮಹಿಮೆಯನ್ನು ತಿಳಿಸೆಂದು ಪ್ರಭುದೇವನು ಬಸವಣ್ಣನನ್ನು ಕೇಳಿಕೊಳ್ಳಲು, ಬಸವಣ್ಣನು—ಶಿವಭಕ್ತರ ಮಹಿಮೆಯನ್ನು ನಿನಗಿಂತಲೂ ಚೆನ್ನಾಗಿ ಅರಿತವನಲ್ಲ ನಾನು—ಎಂದು ವಿನಯವಾಡುವನು (561), ಕೇಳಿ ಪ್ರಭುದೇವನು

ಬಸವಣ್ಣನ ನಿರಹಂಕಾರದ ಪರಿ ಆಶ್ಚರ್ಯಕರವಾದುದೆನ್ನಲು, ಮಡಿವಾಳನು ಬಸವಣ್ಣನ ಮಹಾತ್ಮೆಯನ್ನು ಪ್ರಸ್ತಾಪಿಸಿದ :

ಪ್ರಥಮಕಾಲದಲ್ಲಿ ಸಂಗನ ಬಸವಣ್ಣನು ಗಣಸಹಿತವಾಗಿ ಬಂದು ಮರ್ತ್ಯಲೋಕಕ್ಕೆ ಮಹೆವನ್ನು ತಂದನು (563). ದಾಸೋಹವನ್ನೂ, ಭಕ್ತಿಯ ಕುಳಸ್ಥಳವನ್ನೂ ಅರಿತವನು ಬಸವಣ್ಣನಲ್ಲದೆ ಮತ್ತಾರೂ ಇಲ್ಲ (564-565). ಜಂಗಮವೇ ಲಿಂಗವೆಂಬ ನೂತನತತ್ವವನ್ನು ಪ್ರತಿಪಾದಿಸಿ ಆಚರಿಸಿದವನೂ ಬಸವಣ್ಣನೇ (567). ಅವನ ನಡೆನುಡಿ ಮುಂತಾದುವು ಪರುಷಪ್ರಾಯ (568).

ಬಸವನ ಈ ಮಹಾತ್ಮೆಯ ಶ್ರವಣದಿಂದ ಸಂತುಷ್ಟನಾದ ಪ್ರಭುದೇವನು ಬಸವಣ್ಣನೊಡನೆ ಮಡಿವಾಳ ಮಾಚಿತಂದೆಯನ್ನು ಕುರಿತು ಕೊಂಡಾಡುವನು (569). ಪ್ರತಿಯಾಗಿ ಮಡಿವಾಳನು ಬಸವಣ್ಣನ ದಾಸೋಹದ ಕಟ್ಟಳೆಯನ್ನೂ, ಆತನ ಆಚಾರವನ್ನೂ, ಶಿವಭಕ್ತಿವ್ರತವನ್ನೂ ವಿವರಿಸಿ ಹೇಳುತ್ತ—ಬಸವಣ್ಣನು ಶೈವಾಗಮಾಚಾರ್ಯನಾದ ಮಂಡಗೆಯ ಮಾದಿರಾಜನ ಸತಿ ಮಾದಾಂಬಿಕೆಯ ಗರ್ಭದಿಂದ ಅವತರಿಸಿ, ಮರ್ತ್ಯಕ್ಕೆ ಪ್ರತಿಕೈಲಾಸವೆಂಬ ಕಲ್ಯಾಣವನ್ನು ಕಟ್ಟಿದನೆಂದೂ, ತನ್ನ ಭಕ್ತಿ ಪರೀಕ್ಷೆಗೆಂದು ತಾನೇ ಬಿಜ್ಜಳನನ್ನು ಒರೆಗಲ್ಲಾಗಿ ಮಾಡಿಕೊಂಡನೆಂದೂ, ಒರೆದು ನೋಡುವ ಕೊಂಡೆಯ ಮಂಚಣ್ಣನನ್ನೂ ಅವನೇ ಸೃಷ್ಟಿಸಿದನೆಂದೂ ಹೇಳಿ, ಏಳುನೂರೆಪ್ಪತ್ತು ಅಮರಗಣಗಳಿಗೆ ಪ್ರಥಮದಂಡನಾಯಕನಾಗಿ ಮಹನೀಯನಾದವನು ಬಸವಣ್ಣನೇ ಎಂದು ಕೊಂಡಾಡುವನು (570).

ಹೀಗೆ ಬಸವಣ್ಣನನ್ನು ಕೊಂಡಾಡಿದ ಮಡಿವಾಳನನ್ನು ಪ್ರಭುದೇವನೂ ಬಸವಣ್ಣನೂ ಸ್ತುತಿಸುವರು (571-577). "ಕಲಿದೇವರ ದೇವನು ಕಾಯಗೊಂಡಿಪ್ಪುದನು ಕಂಡೆ" ನೆಂದು ಮಡಿವಾಳನು, ಬಸವಣ್ಣನನ್ನು ವರ್ಣಿಸಿದರೆ (577), ಆ ಬಸವಣ್ಣನು "ಕೂಡಲ ಸಂಗಮ ದೇವಯ್ಯ, ನಿಮ್ಮ ಮಹಾಮನೆಯಲ್ಲಿ ಮಡಿವಾಳನೂ ನಾನೂ ಕೂಡಿ ಸುಖದಲ್ಲಿ ಇದ್ದೆವಯ್ಯ" ಎಂದು ಪರಸ್ಪರ ಸಮರಸವನ್ನು ವ್ಯಕ್ತಪಡಿಸುವನು (580).

ಮಡಿವಾಳನು ಕಲ್ಯಾಣದ ಮಹಿಮೆಯನ್ನು ಬಣ್ಣಿಸಿ "ಆಧ್ಯಾತ್ಮಿಕ ಕಲ್ಯಾಣ"ದಲ್ಲಿ ತಾನೂ ಬಸವಣ್ಣನೂ ಹದುಳಿದ್ದುದಾಗಿ ಅನುಮೋದಿಸುವನು (581).

ಬಸವಾದಿಪ್ರಮಥರೊಡನೆ ನಡೆದ ಮಹಾನುಭಾವಗೋಷ್ಠಿಯನ್ನು ಮೆಚ್ಚಿದ ಪ್ರಭುದೇವನು—"ಮಡಿವಾಳನ ಘನತೆಯನ್ನು ಒರೆದು ನೋಡಲೆಂದು ಹೋದರೆ, ಬಸವಣ್ಣನ ಪೂರ್ವಾಪರ ನನಗೆ ತಿಳಿಯಿತು. ಆ ಬಸವಣ್ಣನ ಪೂರ್ವಾಪರದ ಪ್ರಸಂಗದಿಂದ ನನ್ನ ಪೂರ್ವಾಪರವೇ ನನಗೆ ತಿಳಿಯ ಬಂದಿತು. ಜ್ಞಾನಿಗಳ ಸಂಗ ಸಫಲವಾಯಿತು. ಮಡಿವಾಳನಿಗೆ ನಾನು ಋಣಿ" ಎಂದು ಬಸವಣ್ಣನೊಡನೆ ಹೇಳಿಕೊಂಡನು (582). ಅದಕ್ಕೆ ಬಸವಣ್ಣನು—"ನನಗೆ ಮಡಿವಾಳನ ಮಹಿಮೆಯನ್ನು ಮನವರಿಕೆ ಮಾಡಿಕೊಟ್ಟವನು ಚೆನ್ನಬಸವ"ನೆನ್ನಲು, ಆ ಚೆನ್ನಬಸವನು "ಮಡಿವಾಳನಂತಹ ಮಹನೀಯನ ನಿಲವು ನನಗೇನು ಗೊತ್ತು" ಎಂದು ತನ್ನ ನಿರಹಂಭಾವವನ್ನೇ ಮೆರೆಯು

ವನು. ಅದನ್ನು ಕೇಳಿದ ಮಡಿವಾಳನು—ಚೆನ್ನಬಸವಣ್ಣನ ನಿರಹಂಕಾರವನ್ನು ಮೆಚ್ಚಿ "ಮಹಾಜ್ಞಾನಕ್ಕೆ ನಿರಹಂಕಾರವೇ ಶೃಂಗಾರವೆಂದೂ, ಬಸವಣ್ಣನಿಗೆ ಚೆನ್ನಬಸವಣ್ಣನೇ ಶೃಂಗಾರವೆಂದೂ, ಅವರಿಬ್ಬರೂ ತಮ್ಮಿಬ್ಬರಿಗೂ ಶೃಂಗಾರವೆಂದು ಪ್ರಭುದೇವರನ್ನು ಸೇರಿಸಿಕೊಂಡು ಮಾತನಾಡುವನು (585).

ಮಹನೀಯನಾದ ಆ ಚೆನ್ನಬಸವಣ್ಣನ ಕೃಪೆಯು ತನಗಾಗುವಂತೆ ಕರುಣಿಸಬೇಕೆಂದು ಮಡಿವಾಳನು ಪ್ರಭುದೇವನನ್ನು ಬೇಡಿಕೊಳ್ಳುವನು. ಮೇಲಾಗಿ ಮಡಿವಾಳನು—ತಾನು, ಪ್ರಭುದೇವನು ಬರುವನೆಂಬ ನಿರೀಕ್ಷೆಯಲ್ಲಿ ಎಂಟು ಸಾವಿರ ವರ್ಷಗಳ ಕಾಲ ಒಗೆದೊಗೆದು ಸಿದ್ಧಪಡಿಸಿದ್ದ ಮಡಿಯೊಂದನ್ನು ಬಸವಣ್ಣನಿಗೆ ಕೊಟ್ಟು, ಅದನ್ನು ಪ್ರಭುದೇವನ ಶಿವಲಿಂಗಕ್ಕೆ ಅರ್ಪಿಸೆಂದು ಪ್ರಾರ್ಥಿಸಿದನೆಂದೂ, ಅದಕ್ಕೆ ಪ್ರತಿಫಲವಾಗಿ ಚೆನ್ನಬಸವಣ್ಣನ ಕೈಯಲ್ಲಿ ತನಗೆ ನಿರಾಳವನ್ನು ಕೊಡಿಸಬೇಕೆಂದೂ ಪ್ರಭುದೇವನನ್ನು ಕೇಳಿಕೊಳ್ಳುವನು (587). ಆಗ ಚೆನ್ನಬಸವಣ್ಣನು "ನಿನ್ನ ನಿರಾಳಪ್ರಸಾದದಿಂದ ನಿರವಯದ ಹಾದಿಯನ್ನು ಕಂಡೆ. ನಿನಗಿಂತ ನಾನು ಘನವಲ್ಲ" ಎಂದು ಮಡಿವಾಳನಿಗೆ ನಮಸ್ಕರಿಸುವನು (588).

## 13

ಪ್ರಭುದೇವ-ಬಸವಣ್ಣ-ಚೆನ್ನಬಸವಣ್ಣ-ಮಡಿವಾಳರು ಮಹಾನುಭಾವಗೋಷ್ಠಿಯನ್ನು ಹೀಗೆ ಮಾಡುತ್ತಿರುವಲ್ಲಿ ಸಿದ್ಧರಾಮಯ್ಯನು ಮಧ್ಯೆ ಸೇರಿಕೊಂಡು, "ಮಡಿವಾಳನ ಪಾದದಲ್ಲಿದ್ದು ಮನಮುಗ್ನವಾದೆ"ನೆಂದು ಸ್ತುತಿಸುವನು (589). ಆಗ ಚೆನ್ನಬಸವನು ಸಿದ್ಧರಾಮನ ಅಂತಸ್ಥಿತಿಯನ್ನು ಒರೆಮನೋಡಲೆಂದು—"ಅಂಗದಲ್ಲಿ ಲಿಂಗವಿಲ್ಲದನ್ನಕ್ಕರ, ಪ್ರಾಣದಲ್ಲಿ ಲಿಂಗಪರಿಣಾಮವೆಂತಪ್ಪುದಯ್ಯ" ಎಂದು ಪ್ರಶ್ನಿಸಿ, ಮತ್ತೆ, "ಮಡಿವಾಳನ ನಿಲವು ಸಿದ್ಧರಾಮನಿಗೆಂತು ಸಾಧ್ಯವಾಯಿತು" ಎಂದು ಕುತೂಹಲ ತಾಳುವನು (590).

ಆಗ ಸಿದ್ಧರಾಮನು "ನನ್ನ ಕಾಯವೇ ಬಸವಣ್ಣನು, ನನ್ನ ಪ್ರಾಣಲಿಂಗವೇ ಪ್ರಭುದೇವನು. ನನಗೆ ಒಳಹೊರಗೆಂಬುದಿಲ್ಲ" ಎನ್ನುವನು (591). ಆದರೆ, ಸಿದ್ಧರಾಮನಿಗೆ ಪ್ರಾಣಲಿಂಗ ಸಂಬಂಧವಾಗಿದೆಯೆಂಬುದನ್ನು ಚೆನ್ನಬಸವನು ಒಪ್ಪುವುದಿಲ್ಲ (592). ಆದರೇನು? ಸಿದ್ಧರಾಮನು ಅದನ್ನು ನುಡಿದು ತೋರುವುದು ಸಾಧ್ಯವಿಲ್ಲವೆನ್ನುವನು (593). ಆ ಸಂದರ್ಭದಲ್ಲಿ ಪ್ರಭುದೇವನು ಸಿದ್ಧರಾಮನಿಗೆ ಬೆಂಬಲವಾಗಿ ಬಂದು—ಆಕಾಶವನ್ನು ಹತ್ತುವವನಿಗೆ ನಿಚ್ಚಣಿಗೆ ಏಕೆಂದು ನಿದರ್ಶನ ಕೊಟ್ಟು, ಸಿದ್ಧರಾಮನಿಗೆ ಇಷ್ಟಲಿಂಗದ ಅವಶ್ಯಕತೆ ಇಲ್ಲವೆನ್ನುವನು (594).

ಅಷ್ಟರಿಂದಲೇ ಚೆನ್ನಬಸವಣ್ಣನು ಪ್ರಭುದೇವನ ಅಭಿಪ್ರಾಯವನ್ನು ಒಪ್ಪಿ, ಸಿದ್ಧರಾಮನ ಶ್ರೀಪಾದಕ್ಕೆ ನಮಸ್ಕಾರ ಮಾಡಿ, ಆ ಪಾದಸ್ಪರ್ಶದಿಂದ ತಾನು ಶುದ್ಧನಾದಂತೆ ಭಾವಿಸುವನು (595). ಅಂಗಕ್ಕೆ ಲಿಂಗವೇ ಹೊರತು ಲಿಂಗಕ್ಕೆ ಲಿಂಗವೆಲ್ಲಿಯದೆನ್ನುತ್ತ

ಚೆನ್ನಬಸವಣ್ಣನು ಸಿದ್ಧರಾಮನ ಪ್ರಾಣಲಿಂಗಸಂಬಂಧವನ್ನು ಸಮ್ಮತಿಸುವನು (595ಗ).

ಆ ಸಂದರ್ಭದಲ್ಲಿ ಸಿದ್ಧರಾಮನು ಪ್ರಭುದೇವನ ಪ್ರಾಣಲಿಂಗದ ಸ್ಥಿತಿಗತಿಯನ್ನು ಒರೆದುನೋಡಲಿಚ್ಛಿಸಿ—"ನಿಮ್ಮ ಕಾಯದ ಕರಸ್ಥಳವ ಸಾರಿರ್ದ ಲಿಂಗವು ಪ್ರಾಣದೊಳು ವೇದ್ಯವಾದ ಪರಿಯ ಹೇಳಾ" ಎಂದು ಪ್ರಾರ್ಥಿಸಿದನು (596). ಆಗ ಪ್ರಭುದೇವನು, "ಅಂಗ ಲಿಂಗ, ಪ್ರಾಣ ಲಿಂಗ, ಮನ ಲಿಂಗವಾಯಿತ್ತು ನೋಡ! ಸರ್ವಾಂಗಲಿಂಗವಾಗಿ ಸರ್ವೇಂದ್ರಿಯ ಗಮನಗೆಟ್ಟಿತ್ತು. ಮಹಾಘನವಿಂಬುಗೊಂಡಿತ್ತಾಗಿ ನಿಷ್ಪತ್ತಿ ಕಳೆ ಗೊಂಡಿತ್ತು. ಗೊಗೇಶ್ವರಲಿಂಗದಲ್ಲಿ ಪ್ರಾಣಲಿಂಗ ಸಯವಾಯಿತ್ತು" ಎಂದು ವಿವರ ಹೇಳಿದನು (597).

ಪರಮಹರ್ಷಿತನಾದ ಸಿದ್ಧರಾಮನು ಪ್ರಭುದೇವನನ್ನು ಸ್ತುತಿಸುವನು—ಅದರಲ್ಲಿ ಚೆನ್ನಬಸವನೂ ಜೊತೆಗೂಡುವನು. ಆ ಚೆನ್ನಬಸವನನ್ನು ಬಸವಣ್ಣ-ಪ್ರಭುದೇವರು ಸ್ತೋತ್ರ ಮಾಡುವರು (597–603). ಚೆನ್ನಬಸವಣ್ಣ-ಮಡಿವಾಳಮಾಚಯ್ಯಗಳು ಬಸವಣ್ಣನನ್ನು ಸ್ತೋತ್ರ ಮಾಡುವರು (604–606). ಮುಂದೆ ಬಸವ-ಚೆನ್ನಬಸವ-ಪ್ರಭುದೇವ-ಮಡಿವಾಳರು ಪರಸ್ಪರವಾಗಿ ಮಿಶ್ರಸ್ತೋತ್ರಗಳನ್ನು ಮಾಡುವರು (607–611).

ಸಿದ್ಧರಾಮನು ಪ್ರಭುದೇವನನ್ನೂ (612) ಚೆನ್ನಬಸವಣ್ಣನನ್ನೂ (613) ಬಸವಣ್ಣನನ್ನೂ (614) ಮಡಿವಾಳನನ್ನೂ (615) ಸ್ತುತಿಸುವನು.

ಮಡಿವಾಳನು ಶರಣರೆಲ್ಲರ ಪರವಾಗಿ ಸಿದ್ಧರಾಮನನ್ನು ಸ್ತೋತ್ರಮಾಡುವನು (616).

## 14

ಹೀಗೆ ಬಸವಣ್ಣ-ಚೆನ್ನಬಸವಣ್ಣ-ಪ್ರಭುದೇವ-ಮಡಿವಾಳ-ಸಿದ್ಧರಾಮರು ಮಹಾನು ಭಾವಗೋಷ್ಠಿಯನ್ನು ಮಾಡುತ್ತಿದ್ದಾಗ, ಅಲ್ಲಿ ಶ್ರೋತೃಗಳಾಗಿದ್ದವರು ಬಾಚರಸ, ಅಪ್ಪಣ್ಣ, ಪಡಿಹಾರಿ ಉತ್ತಣ್ಣ, ಅಕ್ಕ ನಾಗಾಯಿ, ಮೋಳಿಗೆ ಮಾರಯ್ಯ, ಕಕ್ಕಯ್ಯ, ಕಿನ್ನರ ಬೊಮ್ಮಣ್ಣ, ಕನ್ನದ ಮಾರಣ್ಣ, ಮಿಂಡ ಮಲ್ಲಿನಾಥ, ಕೋಲ ಶಾಂತಯ್ಯ, ಓಲಗದ ಕೇಶಿರಾಜ, ಖಂಡಣೆಯ ಕೇಶಿರಾಜ ಮುಂತಾದವರು.

ಇತ್ತ, ಪರಮೇಶ್ವರನ ನಿರೂಪದಿಂದ ಒಬ್ಬ ರುದ್ರಕನ್ನಿಕೆ ಮರ್ತ್ಯಕ್ಕೆ ಅವತರಿಸಿ ಉಡುತಡಿಯ ಮಹಾದೇವಿಯಕ್ಕನೆಂದು ಹೆಸರುವಾಸಿಯಾದಳು. ಅವಳು ಭವಿಸಂಗ ವನ್ನು ತೊರೆದು ಲಿಂಗದಲ್ಲಿ ಅವಿರಳಸಂಗಿಯಾದಳು. ಹದಿನಾರರ ಹರೆಯವಾಯಿತು. ಹರೆಯದೊಡನೆ ದಿವ್ಯರೂಪಲಾವಣ್ಯವೂ ಕೂಡಿ ಬಂದಿತು. ಆ ಅಮಲಿನಲ್ಲಿಯೂ ಆಕೆ ಶಿವನಲ್ಲಿ ಪರವಶಳಾಗಿ, ಸರ್ವಸಂಗಪರಿತ್ಯಾಗ ಮಾಡಿ, ದಿಗಂಬರದ ಉಡುಗೆಯನ್ನು ಉಟ್ಟು, ಕೇಶವೆಂಬ ಬಟ್ಟೆಯನ್ನು ಮುಸುಕುಹಾಕಿ, ಕರಸ್ಥಲದ ಇಷ್ಟಲಿಂಗದಲ್ಲಿ ದೃಷ್ಟಿ ನೆಟ್ಟು—ಲೌಕಿಕ ಲಜ್ಜಾಭಿಮಾನಗಳನ್ನು ತೊರೆದು, ಚೆನ್ನಮಲ್ಲಿಕಾರ್ಜುನನ ವಿಕಳಾ ವಸ್ಥೆಯಲ್ಲಿ ತನ್ನನ್ನೇ ಮರೆದು, ತನ್ನಿಂದಿತರವಾದುದನ್ನು ದೂರೀಕರಿಸಿ, ದೇಶಾಂತರ

ಹೊರಟಳು. ಸಂಚರಿಸುತ್ತಿರುವಾಗ, ಆಕೆಯನ್ನು ಕಿನ್ನರ ಬೊಮ್ಮಣ್ಣನು ಕಂಡು, ಪರೀಕ್ಷಿಸಿ ನೋಡಿದ. ಮಹಾದೇವಿಯಕ್ಕನು ತನ್ನ ಅಂತರಂಗದ ಜ್ಞಾನಾಗ್ನಿಯಲ್ಲಿ ಕಾಮನನ್ನು ಸುಟ್ಟು ಭಸ್ಮಮಾಡಿ—ಆ ಕಿನ್ನರ ಬೊಮ್ಮಿತಂದೆಯನ್ನು ಕಳಿಸಿಕೊಟ್ಟಳು.

ಆಕೆ ಮುಂದೆ ಕಲ್ಯಾಣದ ಕಡೆ ಪ್ರಯಾಣಮಾಡಿ, ಆ ಪುರವನ್ನು ಕಂಡು, "ಬಸವ ನಿರುವ ಕಲ್ಯಾಣ" ಎಲ್ಲರಿಗೂ ಸಾಧ್ಯವಿಲ್ಲವೆಂದು ಹೇಳಿ, ತಾನು ಚೆನ್ನಮಲ್ಲಿಕಾರ್ಜುನ ನಿಗೆ ಒಲಿದು ಉಭಯುಲಜ್ಜೆಯಳಿದವಳಾದುದರಿಂದಲೇ ತನಗೆ ಕಲ್ಯಾಣದ ದರ್ಶನ ವಾದಂತೆ ಭಕ್ತಿಭಾವದಿಂದ ಪುಲಕಿತಳಾಗುವಳು (617).

ಕಲ್ಯಾಣವನ್ನು ಒಳಹೊಗುತ್ತಿರುವಂತೆಯೇ ಅಕ್ಕನು ಬಸವಣ್ಣನ ಮಹಾತ್ಮೆಯನ್ನು ಕೊಂಡಾಡುತ್ತ ಹೊರಟಳು. ಆಕೆಗೆ ಅಣ್ಣನಿದ್ದ ಕಲ್ಯಾಣ ಅವಿಮುಕ್ತಿಕ್ಷೇತ್ರವೆನಿಸಿತು (618). ಮುಂದುವರಿದು ಬಸವಣ್ಣನ ಮನೆಯನ್ನು ಹೊಗುವಳು. ಹೊಕ್ಕೊಡನೆಯೇ ಪ್ರಭುದೇವರೇ ಮುಂತಾದ ಅಸಂಖ್ಯಾತ ಶಿವಶರಣರಿಂದ ಸುತ್ತುವರಿದು ಮಹಾನುಭಾವ ಗೋಷ್ಠಿಯಲ್ಲಿ ಪ್ರಸಂಗಿಸುತ್ತಿದ್ದ ಬಸವಣ್ಣನ ಶ್ರೀಮೂರ್ತಿಯನ್ನು ಕಂಡು ಆಕೆಯ ಕಣ್ತಣಿಯಿತು. ಮುಸುಕಿದ್ದ ಕತ್ತಲೆ ಹರಿಯಿತು. ಆತನ ಚರಣಕ್ಕೆರಗಿ ತನ್ನ ಹಣೆಯ ಪುರಾಕೃತಲಿಖಿತ ತೊಡೆಯಿತೆಂದು ಉಬ್ಬಿದಳು. ತಾನು ಅರಸಿ ತೊಳಲಿದ, ಹರಸಿ ಬಳಲಿದ, ಬಯಸಿ ಹೊಕ್ಕ ಶ್ರಮವೆಲ್ಲ ಸಾರ್ಥಕವಾಯಿತೆನಿಸಿತು. ಘೋರ ತಪಸ್ಸಿಗೂ ಸಾಧ್ಯವಿಲ್ಲದ ಸಿದ್ಧಿ ಕೈಸಾರಿದಂತಾಯಿತು, ಅಕ್ಕನಿಗೆ ಬಸವಣ್ಣನ ಸಾನ್ನಿಧ್ಯಪ್ರಭಾವ ದಿಂದ (619-620).

ತನಗೆ ದಂಡಪ್ರಣಾಮ ಮಾಡಿ ಕೈಮುಗಿದು ನಿಂತ ಅಕ್ಕನನ್ನು ಬಸವಣ್ಣನು ಪ್ರಭುದೇವ ನಿಗೆ ತೋರಿಸಿ—"ನನ್ನ ಹೆತ್ತತಾಯಿ ಮಹಾದೇವಿಯ ನಿಲವನ್ನು ನೋಡು" ಎನ್ನುವನು (620). ಮತ್ತೆ ಮಾತನ್ನು ಮುಂದುವರಿಸಿ—"ರೂಪಿಲ್ಲದವರಿಗೆ ಒಲಿದವರಿಗೆ ತನುವಿನ ಹಂಗುಂಟೆ? ಮನವಿಲ್ಲದವರಿಗೆ ಮೆಚ್ಚಿದವರಿಗೆ ಅಭಿಮಾನದ ಹಂಗುಂಟೆ"—ಎಂದು ಅಕ್ಕನ ಅಂಗ-ಅಂತರಂಗದ ಹದವನ್ನು ಪರಿಚಯ ಮಾಡಿಕೊಡುವನು (621).

ಇದರಿಂದ ಉಲ್ಲಾಸಗೊಂಡ ಪ್ರಭುದೇವನು ಸನ್ಮಾನಿತನಾದಂತೆ ಭಾವಿಸಿ—ಅಕ್ಕನ ಕಡೆ ಅನುಭಾವಕುತೂಹಲದಿಂದ ಕಟಾಕ್ಷಿಸಿ—"ಉದಮದದ ಯೌವನವನೊಳಕೊಂಡ ಸತಿ ನೀನು ಇತ್ತಲೇಕೆ ಬಂದೆಯವ್ವ? ಶರಣರ ಸಹವಾಸವನ್ನು ನೀನು ಬಯಸುವು ದಾದರೆ—ಮೊದಲು ನಿನ್ನ ಪತಿ ಯಾರೆಂದು ಹೇಳು" ಎಂದು ನುಡಿಸುವನು (622).

ಅದಕ್ಕೆ, "ರೂಪಿಲ್ಲದ ಚೆಲುವಂಗೆ ನಾನೊಲಿದೆ. ಚೆನ್ನಮಲ್ಲಿಕಾರ್ಜುನ ಗಂಡನೆನಗೆ. ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ" ಎಂಬುದೇ ಅಕ್ಕನ ಉತ್ತರ (624). ಅಕ್ಕನ ಈ ಉತ್ತರವನ್ನು ಆಕ್ಷೇಪಿಸಿ—"ರೂಪು ನಿರೂಪವನ್ನು ಒಡಗೂಡುವ ಪರಿಯೆಂತು? ದೇಹ-ಇಂದ್ರಿಯ ಎಂಬ ಮಾತಿರುವವರೆಗೆ ದೇವರನ್ನು ಮುಟ್ಟಬರುವು ದಿಲ್ಲ" ಎನ್ನುವನು (625). ಹಾವಿನ ಹಲ್ಲನ್ನು ಕಳೆದು ಹಾವನ್ನು ಆಡಿಸುವುದಾದರೆ ಹಾವಿನ ಸಂಗವೇ ಲೇಸು; ಹಾಗೆಯೇ—ದೇಹವಿಕಾರವನ್ನು ತ್ಯಜಿಸಿ, ದೇಹವನ್ನು

ಧರಿಸಿರುವುದಾದರೆ ಕೊರತೆಯೇನು? ದೇವರೊಲಿದವರನ್ನು ದೇಹಧಾರಿಗಳೆನ್ನಬೇಡ" ಎಂದು ಅಕ್ಕನು ಮಾರ್ನೊಳಗುವಳು (626).

ಪ್ರಭುದೇವನು ಮತ್ತೆ ಪರೀಕ್ಷಿಸುವ ಉದ್ದೇಶದಿಂದ ಜಟಿಲವಾದ ಪ್ರಶ್ನೆಗಳ ಸುರಿಮಳೆ ಗರೆಯಲು, ಅವಕ್ಕೆಲ್ಲ ಅಕ್ಕನು ಸಮಂಜಸವಾಗಿ ಉತ್ತರ ಕೊಟ್ಟು "ಚೆನ್ನಮಲ್ಲಿಕಾರ್ಜುನ ನನ್ನು ಬೆರಸಿದ ಬಳಿಕ ನಾನು ಏನೆಂದೂ ಅರಿಯೆನಯ್ಯ" ಎಂದು ಬಿನ್ನೈಸುವಳು (662A-631).

ಇತ್ತ ಅಕ್ಕನ ಅಂಗ-ಲಿಂಗಸಮರಸವನ್ನು ಮೆಚ್ಚಿದ ಬಸವಣ್ಣನು ಅವಳನ್ನು ಕುರಿತು —"ಅಂಗದಲ್ಲಿ ಅಭವಸಂಬಂಧವ ಮಾಡುವೆನೆಂದರೆ, ಕಾಮವೆಂಬ ಬಯಕೆಯಲ್ಲಿ ಅಳಲಿಸಿ ಬಳಲಿಸುವನು ಶಿವನು. ಅವನನ್ನು ತಪ್ಪದೆ ಬೆರಸುವುದಾದರೆ ಭಕ್ತರಾದವರು ಕಡುಗಲಿಗಳಾಗಿರಬೇಕು" ಎಂದು ನಿರ್ಭೀತಿ-ನಿಷ್ಠೆಯನ್ನು ಬೋಧಿಸುವನು (632).

"ಕೇವಲ ಕಾಮನನ್ನಲ್ಲ, ಕಾಮಾರಿಯನ್ನೂ ಗೆದ್ದಿರುವೆನು ನಿನ್ನ ಬೆಂಬಲದಿಂದ. ಹೆಸರಿನಲ್ಲಿ ಹೆಣ್ಣುರೂಪಾದರೇನು, ಭಾವಿಸಲು ನಾನು ಗಂಡುರೂಪು" ಎನ್ನುತ್ತ, ಅಂಗ ವಿಕಾರವನ್ನು ಗೆಲಿದು ಲಿಂಗವನ್ನು ತನ್ನೊಳಗೆ ದೃಢವಿಡಿದು ಸರ್ವಾಂಗದಲ್ಲಿ ಐಕ್ಯಮಾಡಿ ಕೊಂಡು ನಿಜಗಲಿಯಾಗಿರುವುದಾಗಿ ಸ್ಪಷ್ಟಪಡಿಸುವಳು ಮಹಾದೇವಿ (634-636).

ಬಸವಣ್ಣನು ಆ ಕಿರಿಯ ಹರೆಯದ, ಹಿರಭಾವದ ಬಾಲಕಿಯನ್ನು ಕಂಡು-ಕೇಳಿ-ಮಾರುಹೋಗಿ, "ಹೆಂಗೂಸಿನಂಗವ ನೋಡಿರೇ ಪುರಾತನರು, ಬಾಲತನದಂಗವ ನೋಡಿರೇ ಪುರಾತನರು, ಬ್ರಹ್ಮವನಾಚರಿಸಿ ತನ್ನ ಮರೆದಿಪ್ಪುದ ನೋಡಿರೇ ಲಿಂಗ ವಂತರು" ಎಂದು ಅಕ್ಕನನ್ನು ಶಿವಶರಣರೆಲ್ಲರಿಗೆ ತೋರಿ ಕೊಂಡಾಡುವನು (637).

ಅಕ್ಕನಾದರೋ ನಿರಹಂಭಾವದಿಂದ "ನಿಮ್ಮ ಕರುಣದ ಶಿಶು" ತಾನೆಂದು ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರಿಗೆ ನಮಸ್ಕರಿಸುವಳು. ಆಗ ಪ್ರಭುದೇವನು, "ಅಂತರಂಗದ ಪ್ರಭೆ ಬಹಿರಂಗವೆಲ್ಲಾ ತಾನೆಯಾಗಿ, ಗೊಗೇಶ್ವರ ಲಿಂಗದಲ್ಲಿ ಸಂದಿಲ್ಲದಿಪ್ಪ ಮಹಾದೇವಿ ಯಕ್ಕನ ಶ್ರೀಪಾದಕ್ಕೆ ನಮೋ ನಮೋ" ಎನ್ನುವನು (639); ಚೆನ್ನಬಸವನು, "ಅಜಕೋಟಿ ವರ್ಷದವರೆಲ್ಲರೂ ಹಿರಿಯರೇ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ? ಶಿವನಲ್ಲಿ ಬೆರಸಿ ಬೇರಿಲ್ಲದಿರುವ ಹಿರಿಯತನ ನಮ್ಮ ಮಹಾದೇವಿಯಕ್ಕನಿ ಗಾಯಿತು" ಎನ್ನುವನು (641); ಸಿದ್ಧರಾಮನು, "ಅಱಿವಿಂಗೆ ಹಿರಿದು ಕಿಱಿದುಂಟೇ" ಎಂದು ಕೊಂಡಾಡುವನು (642).

ಆ ವೇಳೆಯಲ್ಲಿ ಅಕ್ಕಮಹಾದೇವಿಯು ತನ್ನ ಐಕ್ಯಸ್ಥಲವಾವುದೆಂದು ಪ್ರಭುದೇವನನ್ನು ಕೇಳಲು, ಆತನು—"ತ್ರಿಕೂಟಗಿರಿಯೊಳಗೊಂದು ಕಾಣಬಾರದ ಕದಳಿಯುಂಟು. ಆ ಕದಳಿಯನ್ನು ದಾಟಿ, ಒಳಹೊಕ್ಕು ನೋಡಲು ತೊಳಗಿ ಬೆಳಗುವ ಜ್ಯೋತಿಯುಂಟು. ನಡೆಯಲ್ಲಿಗೆ ತಾಯೆ" ಎಂದು ಅಪ್ಪಣೆ ಕೊಡುವನು (644).

ಅಕ್ಕನು ಹರ್ಷಗೊಂಡು ಶಿವಶರಣರಿಗೆ ಹೋಗಿಬರುವೆನೆಂದು ಹೇಳಿ, "ಬಸವಣ್ಣ ಮೊದಲಾದ ಶರಣರಿಗೆ ಶರಣಾರ್ಥಿ. ಪ್ರಭುವಿಂದ ಕೃತಕೃತ್ಯಳಾದೆ ನಾನು. ಮರೆಯ

ಲಾಗದು ನಿಮ್ಮ ಶಿಶುವೆಂದು. ನನ್ನನ್ನು 'ಚೆನ್ನಮಲ್ಲಿಕಾರ್ಜುನನನ್ನು ಬೆರಸು' ಎಂದು ಹರಸುತ್ತಿರಿ" ಎಂದು ಕಲ್ಯಾಣದಿಂದ ಶ್ರೀಶೈಲದ ಕಡೆ ಹೊರಟಳು (645).

## 15

ಕಲ್ಯಾಣದಲ್ಲಿ ಒಂದು ದಿನ ಪ್ರಭುದೇವನು ಎಲ್ಲರ ಸ್ತುತಿಗಳನ್ನೂ ಸಂತೈಸಿ ನಿಲಿಸಿ, ಮತ್ತೊಮ್ಮೆ ಬರುವೆನೆಂದು ಹೇಳಿ, ಎಲ್ಲರ ಕೈಯಲ್ಲಿ ಕಳಿಸಿಕೊಳ್ಳುವಾಗ—"ನಚ್ಚುಮೆಚ್ಚಿನ ಸುಖದ ಪರಿಣಾಮ ಸನ್ನಿಹಿತವಾದ ಬಳಿಕ, ಇನ್ನು ಅನುಭಾವವೆಂಬುದಿಲ್ಲ. ನೀವೆಲ್ಲಾ ಶಿವನ ಅಪ್ಪಣೆಯಂತೆ ಭೂಲೋಕಕ್ಕೆ ಬಂದು, ಅವನ ಅಭಿಪ್ರಾಯಾನುಸಾರವಾಗಿ ಕಾರ್ಯನಿರತರಾಗಿರುವಾಗ ಶಿವನೊಳಗೆ ಬೆರಸುವ ಕಾಲಕ್ಕಾಗಿ ಕಾತರಿಸಬೇಡಿ. ಆ ಕಾಲ ಬಂದಾಗ ನಾನೇ ಮತ್ತೆ ಇಲ್ಲಿಗೆ ಬಂದು ತಿಳಿಸುವೆನು. ಬಸವಣ್ಣನಿಗೆ ಬೆಂಬಲವಾಗಿ ನಿತ್ಯರಾಗಿ ಬಾಳಿ" ಎಂದು ಹೇಳುವನು (647).

ಸಿದ್ಧರಾಮನಿಗೆ ಕಾಯಸಮಾಧಿಗಿಂತ ಜ್ಞಾನಸಮಾಧಿಯೇ ಉತ್ತಮವೆಂದೂ, ಅದೇ 'ನಿಜಸಮಾಧಿ'ಯೆಂದೂ ಬೋಧಿಸಿ, ಅವನನ್ನು ಸೊನ್ನಲಿಗೆಗೆ ಕಳಿಸಿ ಪ್ರಭುದೇವನು ಕಲ್ಯಾಣದಿಂದ ಹೊರಹೊರಟನು (649).

ಆ ಮಹನೀಯನನ್ನು ಅಗಲಿರಲಾರದೆ ಬಸವಣ್ಣ (650-653) ಚೆನ್ನಬಸವಣ್ಣ (654) ನವರು ವಿಯೋಗಾವಸ್ಥೆಯಿಂದ ಹಲುಬುವರು. ಆಗ ಮಡಿವಾಳ ಮಾಚಯ್ಯನು —"ಅಗಲಲಿಲ್ಲದ ಘನವನಗಲಿದೆನೆಂಬ ಮಾತು ಶಿವಶರಣರ ಮನಕ್ಕೆ ಬಹುದೇ" ಎಂದು ಕೇಳಿ, ಅಲ್ಲಮಪ್ರಭುದೇವನು ಲಿಂಗರೂಪಿಯಾಗಿ ಅವರ ಅಂಗೈಯಲ್ಲೇ ಸನ್ನಿಹಿತ ನಾಗಿರುವನೆಂದು ಸಂತೈಸುವನು (655).

## 16

ಕಲ್ಯಾಣದಿಂದ ಹೊರಟ ಪ್ರಭುದೇವನು ನಿರ್ಗಮನಗಮನವಿಡಿದು ನಾನಾದೇಶ-ಗಿರಿ-ಗಹ್ವರಾಂತರಗಳಲ್ಲಿ ಸುಳಿದಾಡುತ್ತ ಬಂದು ಪೊನ್ನಾಂಬಲನಾಥನನ್ನು ಸಂದರ್ಶಿಸಿ, ಅಲ್ಲಿದ್ದ ಶಿವಾದ್ವೈತವೇದ್ಯರನ್ನೂ, ಸದ್ಭಕ್ತಿಯುಕ್ತರನ್ನೂ, ಸದಾಚಾರಸನ್ಮಾರ್ಗಿಗಳನ್ನೂ ಅನು ಗ್ರಹಿಸಿ; ಅವರೊಡನೆ ಸಮ್ಯೋಷ್ಠಿಸಂಬಂಧವನ್ನು ಬೆಳೆಸಿ ಅವರನ್ನೆಲ್ಲಾ ಜೀವನ್ಮುಕ್ತ ರನ್ನಾಗಿ ಮಾಡಿದನು.

ಆಮೇಲೆ, ಪೂರ್ವಸಮುದ್ರದ ತೀರವಿಡಿದು ನಡೆದು ರಾಮೇಶ್ವರಕ್ಕೆ ಬಂದು, ಅಲ್ಲಿನ ರಾಮನಾಥನೊಡನೆ ಸುಖಸಂಕಥಾ ಪ್ರಸಂಗವನ್ನು ಮಾಡಿ, ಆತನಿಂದ ಪೂಜೆಯನ್ನು ಕೈಕೊಂಡನು. ಅಲ್ಲಿಂದ ದಕ್ಷಿಣಸಮುದ್ರವನ್ನು ನೋಡಿಕೊಂಡು, ಪಶ್ಚಿಮಸಮುದ್ರ ದಲ್ಲಿದ್ದ, ಮಹಾಬಲೇಶ್ವರ ಕ್ಷೇತ್ರವನ್ನು ಹೊಕ್ಕು ಸ್ವಲೀಲೆಯಿಂದ ಸಂಚರಿಸಿ, ಉತ್ತರಾಭಿ ಮುಖವಾಗಿ ಹೊರಟು ದಾರಿಯಲ್ಲಿ ಸೌರಾಷ್ಟ್ರ ಸೋಮನಾಥನನ್ನು ಸಂದರ್ಶಿಸಿದನು. ತನಗೆ ಮರೆಹೊಕ್ಕ ಸರ್ವರ ಭವಬಂಧನವನ್ನು ಕಳಚಿ, ಅಲ್ಲಿಂದ ಬಿಜಯಮಾಡಿ, ನಾನಾ

ಪುಣ್ಯಕ್ಷೇತ್ರಗಳನ್ನು ನಿರೀಕ್ಷಿಸುತ್ತ, ಆ ಕ್ಷೇತ್ರಗಳಿಗೆ ಅನೇಕ ವರಗಳನ್ನಿತ್ತು, ಅರವತ್ತೆಂಟು ತೀರ್ಥಗಳನ್ನು ಮೆಟ್ಟನೋಡಿ, ಆ ಮಹಾತೀರ್ಥಗಳ ಕೈಯಲ್ಲಿ ಪೂಜೆಗೊಂಡು ಅವಕ್ಕೆ ಮಹಿಮಾಪ್ರದಾನಮಾಡಿದನು. ನಾನಾದೇಶಗಳಲ್ಲಿ ಸಂಚರಿಸಿ ಕೇತಾರಕ್ಕೆ ಬಂದನು. ಅಲ್ಲಿನ ಹಿಮಕ್ಕೆ ಹಿಂತೆಗೆಯದೆ ಮುಂದೆ ನಡೆದು, ಸಪಾದಲಕ್ಷ ಪರ್ವತಗಳಲ್ಲಿ ತಿರುಗಾಡುತ್ತ, ಗುಹೆಗಳಲ್ಲಿ ವಿಶ್ರಮಿಸುತ್ತ ಹೊರಟು, ಮಹಾಗುಹೆಯೊಂದನ್ನು ಕಂಡು ಅದರೊಳಗೆ ಪದ್ಮಾಸನಾಸೀನನಾಗಿ—"ಏಕಾಗ್ರಚಿತ್ತಮನಪವನ ಜ್ಞಾನಧ್ಯಾನ ಸಮ್ಮತ ಸಮರಸಭಾವ"ದಿಂದ ನಿರ್ಭಾವಪದವಿಯಲ್ಲಿ ನಿಂತು, ನಿಶ್ಶೂನ್ಯವನ್ನು ದರ್ಶಿಸಿ ನಿಜ ಸಮಾಧಿಯಲ್ಲಿ ಮೂರ್ತಿಗೊಂಡಿದ್ದನು.

ಅಲ್ಲಿ "ಇಹಲೋಕ-ಪರಲೋಕ ತಾನಿದ್ದಲ್ಲಿ, ಗಗನಮೇರುಮಂದಿರ ತಾನಿದ್ದಲ್ಲಿ. ಅಂತರ ಮಹದಂತರ ತಾನಿದ್ದಲ್ಲಿ" ಎಂಬಂತೆ ಸರ್ವತಂತ್ರಸ್ವತಂತ್ರನಾಗಿ ತಾನೇ ತಾನಾಗಿದ್ದನು—ಶಿವಯೋಗಸಮಾಧಿಯಲ್ಲಿ ಪ್ರಭುದೇವನು (658-669).

## 17

ಪರಮಶಿವಯೋಗದಲ್ಲಿ ನಿರವಯವಾಗಿದ್ದಾಗ ಪ್ರಭುದೇವನು ತನ್ನ ಲೀಲೆಯ ಅವಸಾನಕಾಲವನ್ನು ತಿಳಿದೆದ್ದು, ತನ್ನ ವಾಗ್ದಾನದಂತೆ ಮತ್ತೆ ಕಲ್ಯಾಣದ ಕಡೆ ಹೊರಟನು.

ಆ ವೇಳೆಗೆ ಇತ್ತ ಬಸವಣ್ಣನು ಕಲ್ಯಾಣದಲ್ಲಿ ಪ್ರಭುದೇವನಿಗಾಗಿ "ಶೂನ್ಯಸಿಂಹಾಸನ"ವನ್ನು ರಚಿಸಿ ಅವನ ಆಗಮನಕ್ಕಾಗಿ ಹಾರೈಸುತ್ತಿದ್ದನು. ಹಡಪದಪ್ಪಣನ ಒಂದು ವಚನದ ಪ್ರಕಾರ ಆ "ಶೂನ್ಯಸಿಂಹಾಸನ"ದ ಸ್ವರೂಪ ಈ ಮುಂದಿನಂತಿದೆ:

ಅಷ್ಟಕಮಲದ ಹೊಗಲ್ಲನ್ನು ಹಿಡಿದು ಶೂನ್ಯಸಿಂಹಾಸನಕ್ಕೆ ಧವಳಾಲಯವೆತ್ತಿದೆ. ಚಂದ್ರಕಾಂತದ ಶಿಲೆಯಲ್ಲಿ ಪಶ್ಚಿಮದ್ವಾರ ತೆಗೆದಿದೆ. ಅದಕ್ಕೆ ಏಕೋಭಾವವೆಂಬುದೊಂದೇ ಕಂಭ. ಅದರಲ್ಲಿ ಅನೇಕ ಚಿತ್ರಪ್ರಭೆ. ಆ ಪ್ರಭೆಯೊಳಗೆ ಬ್ರಹ್ಮರಂಧ್ರವೆಂಬ ಮಸ್ತಕದ ಮೇಲೆ ಪಂಚಮೌಕ್ತಿಕದ ಮಾಲೆಯನ್ನು ಇಳಿಯಬಿಟ್ಟಿದೆ. ಮೂಲೆಮೂಲೆಗಳ ನಡುವೆ ನವರತ್ನದ ಗೊಂಡೆಯಗಳು ಕಟ್ಟಿವೆ. ಕಾಳಿಕೆಯ ಕಪ್ಪಡವೇ ಅದಕ್ಕೆ ಮೇಲುಹೊದಿಕೆ; ಉಲುಹಿನ ಅರಳೆಲೆಯ ಬಳಸುದೋರಣ. ದಶವಾಯುವನ್ನೆಲ್ಲಾ ಒಂದುಮಾಡಿ, ಲಿಂಗ-ಸುಖವಾಯುವನ್ನು ಸಂತೈಸಿ ಬೀಸಣಿಗೆ ಮಾಡಿದೆ. ಅಲ್ಲಿ ಲಂಬಿಸಿದ ಮಂದಾನಿಲವೇ ದಿಂಬು (=ಮಲಗು), ಹರ್ಷವೇ ವಸಂತನ ಚೌಕದ ಆಸನವಟ್ಟಿಗೆ, ನವನಾಳದಲ್ಲಿ ಮೊರೆಯುವ ಶಬ್ದವೇ ಶುಕ-ಪಿಕ-ಭ್ರಮರಗಳ ಆಮೋದ, ಪರಮಶಾಂತಿಯೇ ಶೀತಲ ಸ್ಪರ್ಶದ ಮಾಂದಳಿರ ಹಾಸು, ಉತ್ತರದ್ವಾರವೆಂಬ ನುಸುಳುಗಂಡಿ, ಪೂರ್ವಯೋಗಗಳೆಂಬ ಸೋಪಾನಪಂಕ್ತಿ, ಪಶ್ಚಿಮನಾಳವೆಂಬುದು ನಿಜದ್ವಾರ, ಸಪ್ತವ್ಯಸನ-ಪಂಚೇಂದ್ರಿಯಗಳ ಪೌಳಿ, ಆಶೆಯಾಮಿಷವನ್ನು ಕೆಡಿಸಿದ ಊರ್ಧ್ವಚಕ್ರವೇ ಮೇಲುಪ್ಪರಿಗೆ. ಅಲ್ಲಿ ಚಂದ್ರಸೂರ್ಯರೆಂಬ ದೀಪ ಹಚ್ಚಿ, ಸೋಹಮೆಂಬ ಶಿಖರಿಯ ಮೇಲೆ ಮಹಾಜ್ಞಾನ

ಪ್ರಕಾಶವೆಂಬ ಹೊನ್ನಕಳಶವಿಟ್ಟಿದೆ. ಅದೇ ನಿಶ್ಶೂನ್ಯನಿರಾಳವೆಂಬ "ಶೂನ್ಯಸಿಂಹಾಸನ" (670).

ಹಡಪದಪ್ಪಣ್ಣನ ಇನ್ನೊಂದು ವಚನದ ಆಧಾರದಿಂದ ಮೂಡುವ ಶೂನ್ಯಸಿಂಹಾಸನದ ಮತ್ತೊಂದು ಚಿತ್ರ :

ಅಂಗದ ಪ್ರಕೃತಿಯನ್ನು ಲಿಂಗದಲ್ಲಿಯೂ, ಮನದ ವಿಕೃತಿಯನ್ನು ಅಱುವಿನಲ್ಲಿಯೂ, ಜೀವಭ್ರಾಂತಿಯನ್ನು ನಿಶ್ಚಿತಪದದಲ್ಲಿಯೂ ಅಳಿದು; ನಿಶ್ಶೂನ್ಯನಿರಾಮಯವಾದ ನಿವಾಸಕ್ಕೆ ಸದಾಚಾರವೆಂಬ ಕೆಸರುಗಲ್ಲನ್ನು ಇಕ್ಕಿ, ಸರ್ವಾಚಾರಸಂಪತ್ತೆಂಬ ಹೂಗಲ್ಲನ್ನು ಮುಚ್ಚಿ, ಅಂತಃಕರಣಚತುಷ್ಟಯವೆಂಬ ನಾಲ್ಕು ಕಂಭಗಳನ್ನು ನಿಲಿಸಿ, ಜ್ಞಾತೃವೆಂಬ ಭಿತ್ತಿಯ ಮೇಲೆ, ಜ್ಞಾನವೆಂಬ ಶಿಖರಿಯನ್ನು ಅನುಗೊಳಿಸಿ, ಅದರ ಮೇಲೆ ಜ್ಞೇಯ ವೆಂಬ ಹೊನ್ನಕಳಶವನ್ನು ಶೃಂಗಾರ ಮಾಡಿ, ಬ್ರಹ್ಮರಂಧ್ರದ ಊರ್ಧ್ವಧ್ವಾರವೆಂಬ ನಿಜದ್ವಾರವನ್ನು ರಚಿಸಿ ನಿರ್ವಯಲಲ್ಲಿ ನೆಲೆಗೊಳಿಸಿ "ಶೂನ್ಯಸಿಂಹಾಸನ"ವನ್ನು ರಚಿಸಿ ಪ್ರಭುದೇವರ ಬರವಿಗಾಗಿ ಬಸವಣ್ಣ ಕಾದಿದ್ದನು (671).

ವೃಷಭೇಶ್ವರ (ಬಸವಣ್ಣ)ನು ಕೂಡಲಸಂಗಸ್ವರೂಪಿಯಾದ ಪ್ರಭುದೇವ ಬಂದಾನೆಂದು ಕಲ್ಯಾಣದ ಹಾದಿ-ಬೀದಿಗಳಲ್ಲೆಲ್ಲಾ ತಳಿರು ತೋರಣ ಕಟ್ಟಿ ಉತ್ಕಂಠಿತನಾಗಿದ್ದ (672).

ಈ ರೀತಿ ಪ್ರಭುದೇವನಿಗಾಗಿ ಬಸವಣ್ಣನು ಕಾದು ಕುಳಿತು ಹನ್ನೆರಡು ವರ್ಷಗಳು ಕಳೆದವು. ಎಷ್ಟೋಸಲ ಹತಾಶನಾಗಿ—ತನ್ನಲ್ಲಿ ದಿಟವಿಲ್ಲದುದರಿಂದಲೇ ಆತನ ಆಗಮನ-ಭಾಗ್ಯ ತನಗೆ ದೊರೆಯಲಿಲ್ಲವೆಂದು ಕೊರಗಿದ (6ˉ3-679). ಅಂತಹ ನಿರಾಶೆಯ ದಿನಗಳಲ್ಲಿ ಮಡಿವಾಳನು ಭರವಸೆಯ ಮಾತುಗಳನ್ನಾಡಿ ಬಸವಣ್ಣನನ್ನು ಸಂತೈಸುತ್ತಿದ್ದನು.

ಒಂದು ದಿನ ಬಸವಣ್ಣನಿಗೆ ಕನಸಿನಲ್ಲಿ ಪ್ರಭುದೇವನು ಕಲ್ಯಾಣಕ್ಕೆ ಬಂದಂತಾಯಿತು (682). ಮೋಳಿಗೆಯ ಮಾರಯ್ಯನೂ ಶುಭಸೂಚನೆಗಳನ್ನು ಕಂಡು, "ಪ್ರಭುದೇವನ ತಲೆ ತಾಗಿ ಶೂನ್ಯಸಿಂಹಾಸನದ ಫಲ-ಹಾರಗಳೆಲ್ಲಾ ಅಲ್ಲಾಡಿದಂತೆಯೂ, ಮುಕ್ತಿವನಿತೆಯರು ಮುತ್ತಿನಾರತಿಗಳನ್ನು ಹಿಡಿದು ಪ್ರಭುದೇವನಿಗೆ ನಿವಾಳಿಸಿದಂತೆಯೂ ತನ್ನ ಕಣ್ಣಿಗೆ ಗೋಚರವಾಯಿತೆನ್ನುತ್ತ, ಆ ತನ್ನ ಮಾತು ಸುಳ್ಳಾದರೆ ಅವನು ಬಸವಣ್ಣನಾದಂತೆ ಆಗುವೆನೆಂದು ಶಪಥ ಮಾಡಿದ (683). ಸೊಡ್ಡಳ ಬಾಚರಸನೂ ತನಗೆ ಸೂಚನೆಗಳು ಕಂಡಂತೆ ಹೇಳುವನು (684).

ಒಂದು ದಿನ ಹಡಪದಪ್ಪಣನು—ಪ್ರಭುದೇವನು ಬಿಜಯ ಮಾಡುತ್ತಿದ್ದುದನ್ನು ಕಣ್ಣಾರೆ ಕಂಡ (687). ಚೆನ್ನಬಸವಣ್ಣನೂ, "ನಡೆದರೆ ಗತಿಯಿಲ್ಲ, ನಿಂದರೆ ಹಜ್ಜೆಯಿಲ್ಲ, ಸುಳುಹಿನೊಳಗೊಂದು ಅತಿಶಯದ ಸುಳುಹು" ಎಂದು ಪ್ರಭುದೇವರ ಆಗಮನವನ್ನು ಗುರುತಿಸಿದ (689).

ಬರುತ್ತಿರುವ ಆ ಅದ್ಭುತವನ್ನು ಬಸವಣ್ಣನೂ ಕೌತುಕದಿಂದ ನೋಡಿದ : ತಲೆಯೆಲ್ಲ

ಕೆದರಿದೆ, ಕೇಶ ಬಿಚ್ಚಿದೆ. ತೊನೆದಾಡುವ ನಡೆ, ಹಣೆಯ ಮೇಲೆ ಬುಗುಟು. ಅಂಗೈಯ ಲಿಂಗದ ಮೇಲೆ ದೃಷ್ಟಿ ನಟ್ಟು, ಬಾಹ್ಯಪ್ರಜ್ಞೆ ತಪ್ಪಿದೆ. ಇದಿರಾದುದೇನನ್ನೂ ಅರಿಯದೆ ಹಾದು ಹುಬ್ಬೆಡೆದಿದೆ, ತೆರೆದ ಕಣ್ಣು ತೆರೆದಂತೆಯೇ! ಕಿವಿ ಹರಿದು ಜೋತು ಬಿದ್ದಿದೆ. ಮೈಮೇಲೆಲ್ಲ ರಕ್ತ ಧಾರೆಧಾರೆ, ಅದರ ಮೇಲೆಲ್ಲ ಧೂಳು, ಬೆನ್ನ ಮೇಲೆ ಬಾಸುಳು, ಎಡಬಲದ ಪಕ್ಕೆಗಳು ಒತ್ತಿಕೊಂಡಿವೆ. ಈ ವಿಕಟರೂಪವನ್ನು ಕಂಡು ಬಸವಣ್ಣನು ಬೆರಗಾಗಿ, "ಅತ್ಯಂತ ಮಲಿನ ಕೂಡಲ ಸಂಗಮದೇವರ ಸುಳುಹು ವಿಪರೀತ! ನೋಡಲು ಬಹು ಭಯಂಕರ" ಎಂದು ಚೆನ್ನಬಸವಣ್ಣನಿಗೆ ತೋರಿ ಚಕಿತನಾಗುವನು (691).

ಅದಕ್ಕೆ ಚೆನ್ನಬಸವನು "ಆತನಂತುವ ನೀನೆ ಬಲ್ಲೆ. ನಿನ್ನಂತುವನಾತನೆ ಬಲ್ಲ. ನಿಮ್ಮಿಬ್ಬರ ಮಹಿಮೆಯ ನಾನೇನು ಬಲ್ಲೆ" ಎಂದು ವಿಸ್ಮಯ ಮೂಕನಾಗುವನು (692).

ಚೆನ್ನಬಸವಣ್ಣನು ತುಸುಹೊತ್ತು ಧ್ಯಾನ ನಿಮೀಲಿತಾಕ್ಷನಾಗಿ ಎಚ್ಚತ್ತು—ಬಸವಣ್ಣ ಮತ್ತು ಪ್ರಭುದೇವನ ಪೂರ್ವಾಪರವನ್ನು ಅರುಹುವನು:

ಬಸವಣ್ಣನು ಕೃತಯುಗದಲ್ಲಿ ದೇವಾಂಗನೆಂಬ ಗಣೇಶ್ವರನಾಗಿದ್ದಾಗ—ಪ್ರಭುದೇವನು ಸ್ಥೂಲಕಾಯನೆಂಬ ಜಂಗಮವಾಗಿದ್ದನು. ತ್ರೇತಾಯುಗದಲ್ಲಿ ಅವನು ಘಂಟಾಕರ್ಣನೆಂಬ ಗಣೇಶ್ವರನಾಗಿದ್ದಾಗ—ಇವನು ಶೂನ್ಯಕಾಯನೆಂಬ ಜಂಗಮವಾಗಿದ್ದನು. ದ್ವಾಪರಯುಗ ದಲ್ಲಿ ಅವನು ವೃಷಭನೆಂಬ ಗಣೇಶ್ವರನಾಗಿದ್ದಾಗ—ಇವನು ಅನಿಮಿಷನೆಂಬ ಜಂಗಮ ವಾಗಿದ್ದನು. ಕಲಿಯುಗದಲ್ಲಿ ಅವನೇ ಬಸವನೆಂಬ ಗಣೇಶ್ವರನಾಗಿಯೂ, ಇವನೇ ಪ್ರಭುದೇವನೆಂಬ ಜಂಗಮವಾಗಿಯೂ ಅವತರಿಸಿರುವರು. ಬಸವನು ಭಕ್ತ, ಪ್ರಭು ದೇವನು ಜಂಗಮ—ಎಂಬುದು ಕೇವಲ ಲೀಲಾಮಾತ್ರವಲ್ಲದೆ ವಾಸ್ತವಿಕವಾಗಿ ತಾರತಮ್ಯವಿಲ್ಲ. ತದ್ವಿರುದ್ಧವಾಗಿ ಭಾವಿಸುವವರು ನರಕಕ್ಕೆ ಹೋಗುವರು" (695).

ಚೆನ್ನಬಸವಣ್ಣನ ಮೇಲಣ ಮಾತುಗಳನ್ನು ಕೇಳಿ, ಬಸವಣ್ಣನು ಪ್ರಭುದೇವನ ಆ ಜಂಗಮಸ್ಥಲವನ್ನು ಕುರಿತು ಅದು ಅಸದೃಶವೆನ್ನುತ್ತ—ಹಸಿವು ತೃಷೆಯಿಲ್ಲದ ಆ ಮಹನೀಯನು ಉಣ್ಣುವಂತಾದರೆ ತಣಿಯುವಂತೆ ಉಣಲಿಕ್ಕುವೆನೆಂದು ತವಕಗೊಳ್ಳು ವನು (696).

ತಮ್ಮೆಲ್ಲರನ್ನು ಪರೀಕ್ಷಿಸಲೆಂಬಂತೆ ವಿಪರೀತ ರೂಪಿನಲ್ಲಿ ಬಂದಿರುವಾತನು ಪ್ರಭುದೇವ ನಲ್ಲದೆ ಬೇರಾರೂ ಅಲ್ಲವೆಂದು ಚೆನ್ನಬಸವಣ್ಣನು ಮತ್ತೆ ಮತ್ತೆ ಒತ್ತಿಹೇಳಿದನು. ಬಸವಣ್ಣನಾದರೋ ಅವನನ್ನು ಪರೀಕ್ಷಿಸಿದ ಹೊರತು ಸನ್ಮಾನಿಸುವವನಲ್ಲ. ಬಂದಾತನು ಪ್ರಭುದೇವನೆಂದು ಖಚಿತವಾಗಬೇಕಾದರೆ—ಅವನು ತನಗೆ ತಾನಾಗಿಯೇ ಬಡಗವಾಗಿಲ ಪೌಳಿಯನು ಪ್ರವೇಶಿಸಿ, ಪಶ್ಚಿಮದ್ವಾರದ ಧವಳಾರವನ್ನು ಪಶ್ಚಿಮದಿಂದಲೇ ಹೊಕ್ಕು, ತ್ರಿವಿಧಗತಿಯ ಶೂನ್ಯಸಿಂಹಾಸನದ ಮೇಲೆ ಸುಖಾಸೀನನಾಗಬೇಕು. ಆಗಲೇ ಬಂದಾತನು ಪ್ರಭುದೇವನೆಂದು ತನ್ನ ಮನಸ್ಸು ನಂಬುವುದೆಂದೂ, ಈ ಪರೀಕ್ಷಾವಿಧಾನಕ್ಕೆ ಚೆನ್ನ ಬಸವಣ್ಣನು ಒಪ್ಪದೆ ಕೋಪಗೊಂಡರೂ ತನ್ನ ದೃಢನಿರ್ಧಾರವನ್ನು ಬದಲಿಸುವುದಿಲ್ಲ ವೆಂದೂ ಬಸವಣ್ಣನು ಚೆನ್ನಬಸವಣ್ಣನೊಡನೆ ಪರಿಚ್ಛೇದಿಸುವನು (698).

ಆಗ ಚೆನ್ನಬಸವನು ನಿರುತ್ತರನಾಗಿ "ನಿಮ್ಮಡಿಗಳಿಗೆ ಉತ್ತರವ ಕೊಡಲಾರೆ" ಎಂದು ಬಸವಣ್ಣನು ಹೂಡಿದ ಪರೀಕ್ಷೋಪಾಯವನ್ನೇ ಒಪ್ಪುವನು (699).

ಆ ವೇಳೆಗೆ ಪ್ರಭುದೇವನು ಮತ್ತಷ್ಟು ಸಮೀಪವಾಗುವನು. ಆತನು ಬರುತ್ತಿರುವ ವಿಚಿತ್ರರೀತಿಯನ್ನು ಸೊಡ್ಡಳ ಬಾಚರಸನೂ, ಮಡಿವಾಳನೂ ವಿವರಿಸುತ್ತಿರುವಂತೆಯೇ (702–703)—ಪ್ರಭುದೇವನು, ಬಸವಣ್ಣನು ನಿರೀಕ್ಷಿಸಿದಂತೆಯೇ ಬಲಕ್ಕೆ ತಿರುಗಿ, ಪೌಳಿಯನ್ನು ಉತ್ತರದ ಬಾಗಿಲಲ್ಲಿ ತಲೆವಾಗಿ ಹೊಕ್ಕು, ಧವಳಾರದ ಪಶ್ಚಿಮ ದ್ವಾರದಿಂದ ತ್ರಿವಿಧಗತಿಯ ಶೂನ್ಯಸಿಂಹಾಸದ ಮೇಲೆ ಕುಳಿತನು (704).

ತಳವಿಲ್ಲದ ಆ ಗದ್ದುಗೆ (ಶೂನ್ಯಸಿಂಹಾಸನ) ಯ ಮೇಲೆ ಒಡಲಿಲ್ಲದ ಪ್ರಭುದೇವನು ಕುಳಿತುದನ್ನು ಬಸವಣ್ಣನು ಕಂಡು ಆತನ ಪಾದಗಳಿಗೆ ನಮಸ್ಕರಿಸಿದನು (705). ಹಡಪದಪ್ಪಣ್ಣ—ಸೊಡ್ಡಳಬಾಚರಸರು ಬೆಡಗಿನಿಂದ ವರ್ಣನೆ ಮಾಡಿದರು. ಬಸವಣ್ಣನು ಪ್ರಭುದೇವನ ಪಾದಪೂಜೆಮಾಡಿದನು. ಹನ್ನೆರಡು ವರ್ಷದಿಂದ ನಿಬಿಡವಾಗಿ ಆವರಿಸಿದ್ದ ಚಿಂತೆ ಮಾಯವಾಯಿತು—ಬಸವಣ್ಣನಿಗೆ, ಪ್ರಭುದೇವನ ತೇಜಃಪುಂಜ ಮುಖ ಚಂದ್ರಮನನ್ನು ಕಂಡು.

## 18

ಬಸವಣ್ಣನು ಪರಮಾನಂದಯುಕ್ತವಾದ ಸದ್‌ಭಕ್ತಿಯಿಂದ ಪ್ರಭುದೇವನನ್ನು ಪೂಜಿಸಿ ಆಡಿ ಹಾಡಿ ಓಲಾಡುತ್ತಿರಲು, ಇತ್ತ, ಬಂದು ಕುಳಿತಿದ್ದ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರೆಲ್ಲರೂ ತಮಗೆ ಅವಮಾನವಾಯಿತೆಂದು ಕ್ರೋಧದಿಂದ ಬಸವಣ್ಣನನ್ನೂ ಪ್ರಭುದೇವನನ್ನೂ ದೂರಿ, ಬಹಿಷ್ಕರಿಸಿ ಎದ್ದು ಹೋದರು. ಸ್ಥಳೀಯ ಜಂಗಮರನ್ನು ಬಿಟ್ಟು, ಪರದೇಶಿಯೊಬ್ಬನನ್ನು ಪ್ರಭುವೆಂದು ಶೂನ್ಯಸಿಂಹಾಸನದ ಮೇಲೆ ಕುಳ್ಳಿರಿಸಿಕೊಂಡು, ಅವನೇ ತನ್ನ ಪ್ರಾಣಲಿಂಗವೆಂದು, ತಮ್ಮ ಕಡೆ ತಿರುಗಿಯೂ ನೋಡಲೊಲ್ಲನೆಂಬುದೇ ಆ ಜಂಗಮರ ಆಪಾದನೆಯಾಗಿತ್ತು ಬಸವಣ್ಣನ ಮೇಲೆ.

ಆ ಜಂಗಮರ ಕಣ್ಣಿನಲ್ಲಿ ಪ್ರಭುದೇವನೊಬ್ಬ "ಅನಾಚಾರಿ" (715). ಆ ಉದರಂಭರಣನಿರತ ದುರಹಂಕಾರಿ ಜಂಗಮರನ್ನು ಕಂಡು, ಪ್ರಭುದೇವನು—"ಅಂಗ ಜಂಗುಳಿಗಳೆಲ್ಲಾ ಅಶನಕ್ಕೆ ನೆರೆದರು. ಲಿಂಗದ ಹವಣನಿವರೆತ್ತ ಬಲ್ಲರು" ಎಂದೂ, ಚೆನ್ನಬಸವಣ್ಣನು—"ಅತಿಮಥನವೆಂಬ ಶೂನ್ಯಸಿಂಹಾಸನವನ್ನು ಏರಿಕೊಂಡು, ತಾವೇ ಹಿರಿಯರು, ತಾವೇ ದೇವರೆಂಬ ಇವರೆಂತಹ ಜಂಗಮರು" ಎಂದೂ ಜಿಗುಪ್ಸೆಯಿಂದ ತೆಗಳಿದರು (717-718). ಕೇಸರಿಯನ್ನು ಕಂಡು ಓಡಿದ ಮದಕರಿಗಳಿಗೆ ಹೋಲಿಸಿ ಜರಿದನು ಆ ಜಂಗಮರನ್ನು ಸೊಡ್ಡಳ ಬಾಚರಸನು (720).

ಆದರೆ ಬಸವಣ್ಣನಿಗೆ ಆ ಜಂಗಮರ ನಿರ್ಗಮನದಿಂದ ಬಹು ವ್ಯಥೆಯಾಯಿತು, ಭಯವಾಯಿತು. "ಗುರು ಮುನಿದರೆ ಒಂದು ದಿನ ತಾಳುವೆ, ಲಿಂಗ ಮುನಿದರೆ ಅರೆದಿನ

ತಾಳುವೆ, ಜಂಗಮ ಮುನಿದರೆ ಕ್ಷಣಮಾತ್ರ ತಾಳಿದರೆ ಎನ್ನ ಪ್ರಾಣವ ಹೋಕು ನೋಡಾ" ಎಂದು ಪರಿತಪಿಸಲು ತೊಡಗುವನು (722), ಆಗ ಪ್ರಭುದೇವನು ಬಸವಣ್ಣನನ್ನು ಸಂತೈಸುತ್ತ "ಹೋದವರಾರು, ಇದ್ದವರಾರು ? ಎಲೆ ಮರುಳೆ, ಒಂದು ಮುಖದಲ್ಲಿಪ್ಪ ದೇವನೊಬ್ಬನೆ, ಹಲವು ಮುಖದಲ್ಲಿಪ್ಪ ದೇವನೊಬ್ಬನೆ. ನಾವು ಹಲವಲ್ಲದೆ, ಕಾರ್ಯ ಒಂದೆ ನೋಡಾ" ಎನ್ನುವನು (724).

ಈ ಅದ್ವೈತ ಬಸವಣ್ಣನಿಗೆ ಹಿಡಿಸಲಿಲ್ಲ. "ಶಿವಶರಣರ ಮನ ನೊಂದಲ್ಲಿ ಸೈರಿಸುವೆನೆಂತು" ಎಂದು ಮಮ್ಮಲ ಮರುಗುವನು (726). ಆಗ ಪ್ರಭುದೇವನು, "ನನ್ನ ನಿಲವಿನ ವ್ಯಾಪಕತೆಯನ್ನು ಅರಿಯದೆ, ಹಿಂದನೆಣಿಸಿ ಹಲನನ್ನು ಹಂಬಲಿಸಿ ಪ್ರಯೋಜನವೇನು ? ನನಗೊಬ್ಬನಿಗೆ ನೀನು ತೃಪ್ತಿಪಡಿಸಿದರೆ—ನಿನ್ನ ಈ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಕ್ಕೆಲ್ಲ ತೃಪ್ತಿಯಾಗುವುದು". ಎಂದು ಪರಿಹಾರಮಾರ್ಗವನ್ನು ಸೂಚಿಸುವನು (727).

ಆಗ ಬಸವಣ್ಣನು ಸಮಾಧಾನಗೊಂಡು, "ಚರಿಸಿ ಬರುವ ಅನಂತ ಸುಳುಹಿನೊಳಗೆ ನೀನೊಬ್ಬನೇ. ನಿನ್ನೊಳಗೆ ಅನಂತ ಸುಳುಹು ಅಡಗಿದೆ. ಮಾಡಿಮದನ್ನೆಲ್ಲ ನಿನಗೇ ನೀಡಿ ನಿನ್ನನ್ನು ತೃಪ್ತಿಪಡಿಸುವೆನು" ಎಂದು ಪ್ರಭುದೇವರಿಗೆ ಆರೋಗಣೆ ಮಾಡಿಸಲು ಉದ್ಯೋಗಿಸುವನು (728).

ಪ್ರಭುದೇವನು—ತನಗೆ ಬೇಕಾದುದು ಮತ್ತು ತನ್ನನ್ನು ತೃಪ್ತಿ ಪಡಿಸುವುದು ಷಡ್ರಸ ರಚಿತ ಭೋಜನವಲ್ಲ ಎನ್ನುತ್ತ, "ನಾನು ಅಶನಾತುರನಾಗಿ ವಿಷಯವನ್ನು ಬಯಸಿ ಬಂದವನಲ್ಲ" ವೆಂದು ನಿರೂಪಿಸಿ—ತನ್ನ ತೃಪ್ತಿಯ ರಹಸ್ಯವನ್ನು ಧ್ವನಿಸುವನು (732) "ನಾನು ಮಾಡಿದೆ ನೀವು ಕೈಕೊಳ್ಳಿ" ಎಂದರೆ ಅದೇ ಅಜ್ಞಾನವೆಂದೂ ಹೇಳಿ, "ಕಾಯವೆಂಬ ಕಲ್ಪಿತವಳಿದು ಮಾಡಿದಲ್ಲದೆ ಲಿಂಗಪರಿಣಾಮವಾಗದು" ಎಂದೂ ಪ್ರಕಟಿಸಿ ವಾಚ್ಯವಾಗಿಯೂ ಹೇಳುವನು (733-734).

ಕಾಯವೆಂಬ ಕಲ್ಪಿತವಳಿದು ಮಾಡಬೇಕೆಂಬ ಪ್ರಭುದೇವನ ಮಾತನ್ನು ಬಸವಣ್ಣನು ಅನ್ಯಥಾಗ್ರಹಿಸಿ—"ಮಱಹಿಂದಲಾದ ಕುಱುಹಿನ ಕಾಯವ ಧರಿಸಿಕೊಂಡು ಬಂದರೆ—ಅದು ಎನಗೆ ಕುಂದಲ್ಲ ನೋಡು ದೇವ" ಎನ್ನುತ್ತ, ತಾನು ದೇಹಧಾರಿಯಾಗಿರುವುದರಲ್ಲಿ ತನಗೆ ಅವಮಾನವೇನೂ ಇಲ್ಲವೆನ್ನುವನು. ಅಂದೇ ಅಲ್ಲ, ಹಿಂದೆಯೂ ಆರು ಜನ್ಮಗಳಲ್ಲಿ ತಾನು ದೇಹ ಧರಿಸಿ ಬಂದಂತೆಯೂ, ಬಂದು ಆ ಜನ್ಮಾಂತರಗಳನ್ನು ಜಂಗಮ ಭಕ್ತಿಯಿಂದಲೇ ತುಂಬಿಕೊಂಡತೆಯೂ ನಿವೇದಿಸಿಕೊಂಡು, ಆರೋಗಣೆಯನ್ನು ಮಾಡುವಂತೆ ಒತ್ತಾಯಪಡಿಸುವನು (735).

ಈ ಮಧ್ಯೆ ಪ್ರಭುದೇವನು ಬಸವಣ್ಣನ ಆರು ಜನ್ಮಗಳ ವಿವರವನ್ನು ತಿಳಿಯಲು ಬಯಸಿದಾಗ, ಬಸವಣ್ಣನು ಶಿಲಾದ, ಸ್ಕಂದ, ನೀಲಲೋಹಿತ, ಮನೋಹರ, ಕಾಲಲೋಚನ, ವೃಷಭ ಎಂಬ ಹಿಂದಿನ ತನ್ನ ಆರು ಜನ್ಮಗಳಲ್ಲೂ ಶಿವಸ್ವರೂಪಿಯಾದ ಪ್ರಭುದೇವನಿಗೆ ತಾನು ಸೇವೆ ಸಲ್ಲಿಸುತ್ತ ಅವನ ಅನುಗ್ರಹಕ್ಕೆ ಪಾತ್ರನಾಗುತ್ತ

ಬಂದಿರುವುದಾಗಿಯೂ (737) ಆದುದರಿಂದಲೇ ತಾನು ನೀಡಲಿರುವುದನ್ನು ಒಲ್ಲೆನೆನ್ನದೆ ಸ್ವೀಕರಿಸಿ ಏಳನೆಯದಾದ ಈ ಜನ್ಮದಲ್ಲಿಯೂ ತನಗೆ ಕೃಪೆಮಾಡಬೇಕೆಂದು ಬೇಡಿಕೊಳ್ಳುವನು (739).

ಪ್ರಭುದೇವನು ಒಪ್ಪಿದ, "ಗೊಗೇಶ್ವರ ಹಸಿದನು ಪದಾರ್ಥವ ನೀಡೈ" ಎಂದು ಅವಸರ ಮಾಡಿದ (740–746). ಬಸವಣ್ಣನು ಸಂಭ್ರಮದಿಂದ ಅರ್ಪಿಸುವ ಪರಿಯೇ ತೋಚದೆಂದೂ, ಇದ್ದ ಪರಿಯಲ್ಲಿ ನೀಡಿದರೆ, ಬಂದ ಪರಿಯಲ್ಲಿ ಕೈಕೊಳ್ಳಬೇಕೆಂದೂ ಪ್ರಾರ್ಥಿಸಿಕೊಂಡು, ಪ್ರಭುದೇವನ ಶಿವಲಿಂಗಾರ್ಚನೆಗೆ ಅಣಿಮಾಡುವನು (749).

## 19

ಶಿವಪೂಜೆಯಾದ ಮೇಲೆ ಪ್ರಭುದೇವನು ಊಟಕ್ಕೆ ಕುಳಿತನು. ಲಕ್ಷಾಂತರ ಜಂಗಮರಿಗೆಂದು ಮಾಡಿದ ಅಡಿಗೆಯನ್ನೆಲ್ಲಾ ನೀಡಿದರೂ ಪ್ರಭುದೇವನಿಗೆ ತೃಪ್ತಿಯಾಗಲಿಲ್ಲ. ಮೇಲಿಂದ ಮೇಲೆ ನೀಡಿದ್ದಾಯಿತು. ಉಣ್ಣಲು ತೊಡಗಿದ ಪ್ರಭುದೇವನ ಹತ್ತಿರಕ್ಕೆ ತರುವುದೇ ತಡ—ಮೊರ ಹೆಡಿಗೆ ಮುಂತಾದುವುಗಳಲ್ಲಿ ತುಂಬಿ ಬಂದ ಆಹಾರ ಪದಾರ್ಥಗಳೆಲ್ಲಾ ಆತನ ಬಾಯಲ್ಲಿ ಬಟ್ಟ ಬಯಲಾದವು. ಬೆಂದುದು, ಬೇಯುತ್ತಿದುದು ಬೇಯಲಿದ್ದುದು—ಎಲ್ಲವೂ ಇಲ್ಲವಾಯಿತು. ಬಸವಣ್ಣನು, "ಒಡವೆ ಸವೆದರೆ ಒಡಲನೇ ಸಲಿಸುವೆನು" ಎಂಬ ರಭಸದಲ್ಲಿರುವನು (766). ಧಾನ್ಯಾಗಾರದ ಅಧಿಕಾರಿಯಾದ ಸೊಡ್ಡಳ ಬಾಚರಸನನ್ನು ಕರೆಸಿ ಧ್ಯಾನ್ಯ-ಸಂಭಾರಾದಿಗಳ ಸರಬರಾಜಿಗೆ ತ್ವರೆಮಾಡಿರೆನ್ನುವನು (767).

ಲಕ್ಷಾಂತರ ಖಂಡುಗ ದವಸಧಾನ್ಯಗಳು ಪಾಕಗೊಂಡವು. ಎಲ್ಲವೂ ತೋರದ ಮುನ್ನವೇ ಅರ್ಪಿತವಾದವು. ಬಯಲೇ ಬಾಯ್ದೆಗೆದಂತೆ ಅಲ್ಲಮಪ್ರಭುದೇವನು ವಿಶ್ವರೂಪಿಯಾಗಿ ಉಣ್ಣುತ್ತಿದ್ದನು (769). ಕೈಯಲ್ಲಿ ಮುಟ್ಟಿದ ಪದಾರ್ಥ ಕೈಯಲ್ಲೇ ಐಕ್ಯವಾಯಿತು. ಕಣ್ಣಲ್ಲಿ ನೋಡಿದ ಪದಾರ್ಥ ಕಣ್ಣೊಳಗೇ ಐಕ್ಯವಾಯಿತು. ನೀಡುವ ಪರಿಚಾರಕರು ಬಳಲಿದರಲ್ಲದೆ—ಊಟಮಾಡುತ್ತಿದ್ದ ಪ್ರಭುದೇವನು ಅದೆತ್ತಲೆಂದರಿಯ.

ಇದನ್ನು ಕಂಡ ಬಸವಣ್ಣನು ತಾನು ನೀಡುವೆನೆಂಬ ಅಹಂಕಾರದಿಂದ ನೀಡಿದುದರಿಂದ ಹೀಗಾಯಿತೆಂದು ವ್ಯಥೆಪಟ್ಟು, ಪ್ರಭುದೇವನನ್ನು ತೃಪ್ತಿ ಪಡಿಸುವ ಪರಿ ಏನಿದ್ದೀತೆಂದು ಮಡಿವಾಳ ಮಾಚಯ್ಯನ ಸಲಹೆಯನ್ನು ಕೇಳಿದನು (771). "ಜಗದಗಲಕ್ಕೆ ಮಿಗೆಯಗಲವಾದ ದೇವನಿಗೆ ಈ ಭೌತಪದಾರ್ಥಗಳಿಂದ ತೃಪ್ತಿಯಾದೀತೆ? ನಿನ್ನ ಭಕ್ತಿ ಕಡೆ ಮುಟ್ಟಿದಾಯಿತಲ್ಲಾ ?! ಚೆನ್ನಬಸವಣ್ಣನನ್ನು ಕೇಳಿನೋಡು—ಅವನು ಪ್ರಭುದೇವನನ್ನು ತೃಪ್ತಿಪಡಿಸುವ ರಹಸ್ಯವನ್ನು ಬಲ್ಲನು" ಎನ್ನುವನು ಮಡಿವಾಳ ಮಾಚಯ್ಯ (772).

ಬಸವಣ್ಣನಿಗೆ ಉಭಯ ಸಂಕಟ : ಅತ್ತ ಸುಲಭದಲ್ಲಿ ತೃಪ್ತರಾಗುವ ಜಂಗಮರೂ ಮುನಿದುಹೋದರು. ಇತ್ತ ಅಲ್ಲಮನು ಎಷ್ಟು ನೀಡಿದರೂ ಸಂತೃಪ್ತನಾಗದೆ ನೀಡುವ

ಕೈಗೆ ನಿಲುಕದೆ ಅತೀತವಾಗಿದ್ದಾನೆ. ಬಸವಣ್ಣನು ಕಂಗೆಟ್ಟು ಚೆನ್ನಬಸವಣ್ಣನನ್ನು ಕೇಳಿಕೊಳ್ಳುವನು—ಅಲ್ಲಮಪ್ರಭುದೇವನ ಹಸಿವನ್ನು ಹಿಂಗಿಸುವ ಪಾಂಗು ಯಾವುದೆಂದು (774).

ಈರೇಳು ಭುವನಗಳನ್ನು ಒಳಗೊಂಡ ಮಹಾಘನಕ್ಕೆ ಭೂಮಿಯ ಮೇಲಣ ಬೆಳಸಿನಿಂದ ತೃಪ್ತಿ ಪಡಿಸುವುದು ಮರುಳುತನವಲ್ಲದೆ ಮತ್ತೇನು ? "ನನ್ನನ್ನೂ ಕೂಡಿಕೊಂಡು ಬಸವಣ್ಣನು ತನ್ನನ್ನು ಪ್ರಭುದೇವನಿಗೆ ಆತ್ಮಾರ್ಪಣೆ ಮಾಡಿಕೊಳ್ಳುವುದೊಂದೇ ಉಳಿದಿರುವ ಮಾರ್ಗ"ವೆಂಬ ಅರ್ಥದಲ್ಲಿ—"ಚೆನ್ನ ಸಂಗಮದೇವರ ತೃಪ್ತಿಯನೊಲಿವರೆ ನೀನು ಬೋನ, ನಾನು ಪದಾರ್ಥ" ಎನ್ನುವನು ಚೆನ್ನಬಸವಣ್ಣ (775).

ಬಸವಣ್ಣನಿಗೆ ಜ್ಞಾನೋದಯವಾಯಿತು. "ಎನ್ನನೆಡೆಗೊಂಡ ಅಹಂಕಾರ ನಿರ್ವಯಲಾಯಿತ್ತು, ಚೆನ್ನಬಸವಣ್ಣ, ಇಂದಿನಲ್ಲಿ. ಕೂಡಲಸಂಗಮದೇವರ ತೃಪ್ತಿಯ ತೆಱನ ನೀನು ತೋಱಿದೆಯಾಗಿ ನಾನು ಬದುಕಿದೆನು" ಎಂದು, ಆತ್ಮಾರ್ಪಣಭಾವ ಬಳ್ಳಿವರಿದ (776) "ಆದಿಯ ಲಿಂಗವನ್ನು ತಂದ ಅಲ್ಲಯ್ಯನಿಗೆ" ತನ್ನನ್ನೇ ನೀಡುವ ನಿಶ್ಚಯದಲ್ಲಿ ನಿಲ್ಲುವನು ಬಸವಣ್ಣ (779).

ದೇಹವೆಂಬ ಘಟದಲ್ಲಿ ಕರಣಾದಿಗಳೇ ಸಯದಾನ, ಚೈತನ್ಯವೇ, ನೀರು ಸಮತೆಯೆ ಮುಚ್ಚಳಿಕೆ, ಧೃತಿಯೇ ಸೌದೆ, ಮತಿಯೇ ಬೆಂಕಿ, ಬರ್ಹಿಜ್ಞಾನವೇ ಸೌಟು : ತಿರುವಿ ಪಾಕಕ್ಕೆ ತಂದು, ಭಾವದಲ್ಲಿ ತುಂಬಿಕೊಂಡು, ಪರಿಣಾಮದೋಗರವನ್ನು ಬಸವಣ್ಣನು ಪ್ರಭುದೇವನಿಗೆ ನೀಡಿದನು (783).

ಆಗ ಅವನಿಗೆ ತೃಪ್ತಿಯಾಯಿತು. ಊಡಿದರೆ, ಉಂಡರೆ ದಿವ್ಯ ತೃಪ್ತಿಯನ್ನು ತರುವ ಆ ಮಾನಸಾಹಾರದ ವಿವರವನ್ನು ಲೋಕದ ಆತ್ಮಪೋಷಣೆಗಾಗಿ ಹೇಳಿದ ಪ್ರಭುದೇವ :

ವಿವೇಕ-ಯುಕ್ತಿಯ ಅಕ್ಕಿಯನ್ನು ಗೋಪ್ಯದ ಒರಳೊಳಗಿಕ್ಕಿ, ಅಭಿನ್ನಮನದ ಒನಕೆಯಿಂದ ಕುಟ್ಟಿ, ಕಲ್ಮಷದ ತೌಡನ್ನು ಕೇರಬೇಕು. ಅದನ್ನು ಸಮತೆಯ ನೀರಿನಲ್ಲಿ ಜಾಲಿಸಿ ಆಶೆಯ ಕಲ್ಲನ್ನು ಕಳೆದು, ದಯೆ ಎಂಬ ಹಾಲಿನಲ್ಲಿ ಬೇಯಿಸಿ ಮಾಡಿದರೆ ಪರಮಾನ್ನವಾಗುವುದು. ಅದಕ್ಕೆ ಸಮರಸವೇ ಶಾಕಪಾಕ, ನೆನಹದ ಲವಲವಿಕೆಯೇ ತುಪ್ಪ, ನೈರ್ಮಲ್ಯವೇ ಶಿವದಾನ ; ಇಷ್ಟನ್ನೂ ಅಳವಡಿಸಿಟ್ಟುಕೊಂಡು — ಇವಾವುದನ್ನೂ ಪಂಚೇಂದ್ರಿಯವೆಂಬ ನಾಯಿ ಮುಟ್ಟದಂತೆ, ಅರಿಷಡ್ವರ್ಗವೆಂಬ ತೊತ್ತುಗಳು ಮುಟ್ಟದಂತೆ, ಅಷ್ಟಮದಗಳೆಂಬ ಮಕ್ಕಳು ಮುಟ್ಟದಂತೆ ಎಚ್ಚರಿಕೆಯಿಂದ ಕಾದುಕೊಂಡಿದ್ದುದರಿಂದ—ದೇವರಿಗೆ ಆ ಆತ್ಮಪಾಕ ಅರ್ಪಿತವಾಯಿತು : (787)

ಎಂದು ಪ್ರಭುದೇವನು ಚೆನ್ನಬಸವಣ್ಣನಿಗೆ ಹೇಳಿದನು. ಬಸವಣ್ಣ ಮಾಡಿದ ಆತ್ಮಾರ್ಪಣಕ್ಕೆ ಚೆನ್ನಬಸವಣ್ಣನ ಸಲಹೆಯೇ ಮೂಲಕಾರಣ. ಆದುದರಿಂದಲೇ ಚೆನ್ನಬಸವಣ್ಣನಿಗೆ ಪ್ರಭುದೇವನ ಪುರಸ್ಕಾರ.

ಮೇಲಾಗಿ ಪ್ರಭುದೇವನು ಬಸವಣ್ಣನೊಡನೆ—ತನಗೆ ನಾಲ್ಕು ಜನ್ಮವೆಂದೂ, ಅವನಿಗೆ ಏಳು ಜನ್ಮವೆಂದೂ, ಚೆನ್ನಬಸವನಿಗೆ ಒಂದೇ ಜನ್ಮವೆಂದೂ ನಿರೂಪಿಸಿ, "ನೀನು

ಗುರುವೆನ್ನುವ ಮಾತು ಹಾಗಿರಲಿ, ನಾನು ಜಂಗಮನೆಂಬ ಮಾತು ಹಾಗಿರಲಿ-ನಾವಿಬ್ಬರೂ ಚೆನ್ನಬಸವನ ಶೇಷಪ್ರಸಾದವನ್ನು ಕೊಂಡರೆ ನಮ್ಮ ಭವಪಾಶ ಹರಿಯುವುದು (790) ಎಂದು ಚೆನ್ನಬಸವಣ್ಣನನ್ನು ಮತ್ತೆ ಮತ್ತೆ ಮೆಚ್ಚಿಕೊಳ್ಳುವನು.

ಅದೇ ಕಾರಣಕ್ಕಾಗಿ ಬಸವಣ್ಣನೂ "ಕಾಣಬಾರದ ಘನವನ್ನು ಕರಸ್ಥಲದಲ್ಲಿ ತೋರಿದ, ಹೇಳಬಾರದ ಘನವನ್ನು ಮನಸ್ಥಲದಲ್ಲಿ ತೋರಿದ. ಅವನಿಂದ ನಾನು ಬದುಕಿದೆ" ಎಂದು ಚೆನ್ನಬಸವಣ್ಣನನ್ನು ತಾನೂ ಸುತ್ತಿಸುವನು (791).

ಆಗ ಚೆನ್ನಬಸವಣ್ಣನು ಪ್ರಭುದೇವನನ್ನು ಬೆಡಗಿನಿಂದ ಕೊಂಡಾಡುತ್ತ, "ಮನೆ ಬೆಂದು ಕಂಭ ಉರಿಯಿತ್ತು. ಆ ಕಂಭದ ಮೇಲೊಂದು ರತ್ನವಿತ್ತು. ಅದರ ಬೆಳಕು ಮೂರು ಲೋಕವನ್ನೂ ಆವರಿಸಿತು" ಎಂದು ಪ್ರಭುದೇವರ ನಿರಂಜನ ದಿವ್ಯ ಸ್ಥಿತಿಯನ್ನು ಭೌತ ಉಪಾಧಿಗಳನ್ನು ಮೀರಿ ಜಾಜ್ವಲ್ಯಮಾನವಾಗಿರುವ ಒಂದು ಅಪೂರ್ವರತ್ನಕ್ಕೆ ಹೋಲಿಸುವನು (797).

## 20

ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮದ ಮುನಿಸನ್ನು ಕಳೆಯಬೇಕೆಂದು ಬಸವಣ್ಣನು ಪ್ರಭುದೇವರನ್ನು ಪ್ರಾರ್ಥಿಸುತ್ತ, "ನಾನು ನಿಮ್ಮ ಕೃಪೆಯನ್ನು ಪಡೆದು ಫಲವೇನಯ್ಯ, ನಿಮ್ಮ ಶರಣರು ನನ್ನ ಮೇಲೆ ಮುನಿದು ಹೋದ ಬಳಿಕ?" ಎಂದು ಕೊರಗುವನು (799). ಅಯುಕ್ತ ರೀತಿಯಿಲ್ಲಿ ವರ್ತಿಸಿದ ಆ ಜಂಗವರ ಬಗ್ಗೆ ಅಷ್ಟೊಂದು ಭಯಪಡಬೇಕಾ[illegible]ದು ಪ್ರಭುದೇವನು ಬಸವಣ್ಣನಿಗೆ ಮನವರಿಕೆ ಮಾಡಿ ಕೊಡಲು, ಆ ಜಂಗಮ[illegible]ನ್ನು, "ಕಾ[illegible] ಒರೆಗ[illegible], ಅವನು [illegible]ವನುಮೂಲಕ ಪ್ರಯತ್ನಿಸುವನು (800–805).

ಆದರೆ ಜಂಗಮಪ್ರಾಣಿಯಾದ ಬಸವಣ್ಣನು ಆ ಬಗೆಯನ್ನು ಒಪ್ಪದೆ, ಶಿವನ ಸಾಕಾರಸ್ವರೂಪಿಯಾದ ಜಂಗಮವನ್ನು ತಿರಸ್ಕರಿಸಿ, ಲಿಂಗೋಪಾಸನೆ ಮಾಡುವುದೊಂದು ವಿಪರ್ಯಾಸವೆಂದು ತನ್ನ ಮಾನವದೇವೋಪಾಸನೆಯ ನಿಲುವನ್ನು ಸ್ಪಷ್ಟಪಡಿಸುವನು, ಸಮರ್ಥಿಸುವನು (807). ಆಗ ಪ್ರಭುದೇವನು–ಜಂಗಮಕ್ಕೆ ಆ ವಿಧವಾದ ಶಿವಸಾಕಾರ ಘನತೆ ಬರಬೇಕಾದರೆ, ಆ ತೋರ ಶಿವಜ್ಞಾನವಿರಬೇಕೆಂದು ವಾದಿಸಿ, ತಾತ್ವಿಕವಾಗಿ ಬಸವಣ್ಣನ ಜಂಗಮಲಿಂಗೋಪಾಸನೆಯನ್ನು ಒಪ್ಪಿ, "ನೀನೆಂದುದನಲ್ಲೆನಬಹುದೇ ? ಎನ್ನ ಮನದ ಕಪ್ಪ ಕಳೆದು ನಿರ್ಲೇಪವ ಮಾಡಿ, ಎನ್ನ ನಿರ್ವಯಲಲ್ಲಿ ನಿಲಿಸಿ ಪ್ರತಿಷ್ಠಿತನ ಮಾಡುವಾತ ನೀನೆಂಬುದು ಸತ್ಯವಚನ ನೋಡಾ" ಎಂದು ಆತನನ್ನು ಕೊಂಡಾಡಿ, ಮುನಿದು ಎದ್ದು ಹೋಗಿದ್ದ ಶಿವಶರಣರನ್ನು ಸಂತೈಸಿ ಕರೆದು ತಾರೆಂದು ಬಸವಣ್ಣನನ್ನು ಕಳಿಸುವನು (810)

ಬಸವಣ್ಣನು ಆ ಶಿವಗಣಂಗಳಿದ್ದಲ್ಲಿಗೆ ಹೋಗಿ, ತನ್ನನ್ನು ಕ್ಷಮಿಸಿ ತನ್ನ ಆತಿಥ್ಯವನ್ನು ಮನ್ನಿಸಿ ತನ್ನ ಮನೆಗೆ ಬರಬೇಕೆಂದು ಅವರನ್ನು ಆಹ್ವಾನಿಸುತ್ತ, "ನನ್ನಲ್ಲಿ ದುರ್ಗುಣವಿದೆ ಯೆಂದು ನೀವು ನನ್ನನ್ನೇ ಬಹಿಷ್ಕರಿಸ ಬೇಡಿ—ಇಲಿಯನ್ನು ಕೊಲ್ಲಲು ಮನೆಗೆ ಬೆಂಕಿ

ಹಚ್ಚುವರೇ ?" ಎಂದು ಪ್ರಾರ್ಥಿಸುವನು (813). "ತಪ್ಪೆನ್ನದು, ಕ್ಷಮೆ ನಿಮ್ಮದು ; ನಿಮ್ಮ ಕರುಣದಕಂದ ನಾನು" ಎಂದು ಸೆರಗೊಡ್ಡಿ ಬೇಡುವನು.

ಆ ಮಹಾಗಣಂಗಳು ಮುನಿಸು ತಿಳಿದು ಪ್ರಸನ್ನರಾದರು, ತೃಪ್ತರಾದರು.

ಲಿಂಗಕ್ಕೆ ಭಕ್ತಿ ಮಾಡಿದರೆ ಭವ ಹರಿಯುದೆಂದೂ, ಜಂಗಮವು ಮುಖಲಿಂಗವೆಂದರಿತು ಅವರನ್ನು ಪೂಜಿಸಿ, ಅವರಿಗೆ ದಾಸೋಹ ಮಾಡಿ ಪ್ರಸನ್ನತೆಯನ್ನು ಪಡೆದ ಬಸವಣ್ಣ. ಬಸವಣ್ಣನ ಆ ಪ್ರಸನ್ನತೆಯ ಪ್ರಸಾದವನ್ನು ಸ್ವೀಕರಿಸಿ ತೃಪ್ತನಾದನು ಪ್ರಭುದೇವನು. ಅಲ್ಲಮಪ್ರಭು ದೇವನ ಆ ತೃಪ್ತಿಯಿಂದ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಕ್ಕೆ ತೃಪ್ತಿಯಾಯಿತು. ಅದರಿಂದ ಸಚರಾಚರವೆಲ್ಲಾ ತಣಿಯಿತು.

ಈ ತೃಪ್ತಿಪವಾಡವನ್ನು ಸುಳ್ಳೆಂದು ಬಿಜ್ಜಳನು ವಾದಿಸಲು, ಅವನಿಗೆ ಬಸವಣ್ಣನು—ಒಂದು ಕಪ್ಪೆಯ ಹೊಟ್ಟೆಯಲ್ಲಿ ಪ್ರಭುದೇವನ ಪ್ರಸಾದವನ್ನು ತೋರಿಸಿದನು (820).

ಪ್ರಾಣಲಿಂಗದ, ಜಂಗಮಲಾಂಛನದ ಮತ್ತು ಪ್ರಸಾದದ ಪೂರ್ವಾಶ್ರಯವನ್ನು ಕಳೆದು ಬಸವಣ್ಣನು ಲಿಂಗ ಪ್ರಾಣಿಯಾದ, ಜಂಗಮ ಪ್ರಾಣಿಯಾದ ಮತ್ತು ಮಹಾ ಪ್ರಸಾದಿಯಾದ, ಈ ಮಹತ್ಸಾಧನೆಗಾಗಿಯೇ ಅವನು ಮರ್ತ್ಯಕ್ಕೆ ಅವತರಿಸಿ ಬಂದನೆಂದು ಪ್ರಭುದೇವನು ಅಭಿಪ್ರಾಯಪಟ್ಟನು (823). ಮಹನೀಯನಾದ ಆ ಬಸವಣ್ಣನ ಪ್ರಸಾದವನ್ನು ಉಂಡು ತಾನು ನಿರುಪಮ ಸುಖಿಯಾದುದಾಗಿ ಪ್ರಭುದೇವನು ಕೃತಕೃತ್ಯತೆಯನ್ನು ವ್ಯಕ್ತಪಡಿಸಿದನು (826).

ಆಗ ಬಸವಣ್ಣನು—"ತನ್ನನ್ನು ರಕ್ಷಿಸುವುದಕ್ಕಾಗಿ ಪ್ರಭು[illegible] ಬೋಳಾದನೇ ಹೊರತು, ಹೊನ್ನು-ಹೆಣ್ಣು-ಮಣ್ಣಿಗಾಗಿಯಲ್ಲವೆಂದೂ[illegible]ಡರೆ ದಿವ[illegible] ಪಂಚೇಂದ್ರಿಯಗಳಲ್ಲಿ ಬ್ರಹ್ಮಚಾರಿಯಾದುದು ತನ್ನನ್ನು ಉದ್ಧರಿಸಲಿಕ್ಕಾಗಿಯೇ"-ಎಂದೂ ಪ್ರಭುದೇವರನ್ನು ಸುತ್ತಿಸುವನು (831-832).

ಬಸವಣ್ಣನ ಆಚಾರಕ್ಕೆ ಪ್ರಾಣವಾಗಿ, ಪ್ರಭುದೇವನ ಜ್ಞಾನಕ್ಕೆ ಆಚಾರವಾಗಿ—ಆ ಉಭಯಸಂಗದ ಸುಖದ ಪ್ರಸನ್ನಕ್ಕೆ ಪರಿಣಾಮಪ್ರಸಾದಿಯಾದ ಮತ್ತು ಅವಿರಳ ಜ್ಞಾನಿಯಾದ ಚೆನ್ನಬಸವಣ್ಣನನ್ನು ಪ್ರಭುದೇವನು ಕೊಂಡಾಡುವನು (837-840). ಚಿಕ್ಕವನಾದರೂ ಅವನು ಯುಗಜುಗವೆಲ್ಲವನ್ನೂ ಮೀರಿದ ಶರಣನೆಂದೂ ಗೌರವಿಸುವನು (844-845).

ತಾನು ಹೊಸೆದು ಮಾಡಿದ ಕಿಚ್ಚೆಂದು ಹೇಗೆ ಮುಟ್ಟಲಾಗದೋ, ಹಾಗೆಯೇ ನಾನು ಸಾಕಿ ಸಲಹಿದವನೆಂದು ಚೆನ್ನಬಸವನನ್ನು ಲಘುವಾಗಿ ಕಾಣಲಾಗದೆಂದು ಬಸವಣ್ಣನು ಅವನಿಗೆ ನಮಸ್ಕರಿಸುವನು (846). ಬಸವಣ್ಣನ ಪ್ರಕಾರ : ಚೆನ್ನಬಸವಣ್ಣನು ಅಂಗ ಗುಣಗಳೆಲ್ಲವನ್ನೂ ಅತಿಗಳೆದು ಪ್ರಸಾದದಲ್ಲಿ ಬ್ರಹ್ಮಚಾರಿಯಾದವನು (848) ಮತ್ತು ಅಂಗವಿಕಾರವಳಿದು ಸತಿಸಂಗವರಿಯದವನು (850).

ಪ್ರಭುದೇವನ್ನು ಕುರಿತು ಮಡಿವಾಳನು, "ಸಂಸಾರಸಾರಾಯದ ತನಿರಸವ ಹಿಂಡಿ ಹಿಳಿದಾಡಿದನಯ್ಯ. ಸವರಿಕೊಂಡು ಹರಿದು ಹತ್ತುವನಲ್ಲ, ಮರಳಿ ನೋಡುವನಲ್ಲ—

ಇಂತಪ್ಪ ವೀರರುಂಟೇ?" ಎಂದು ಸ್ತುತಿಸಲು (864), ಅವನನ್ನು ಪ್ರಭುದೇವನು,"ಉರಿ ಉಂಡು ಉಷ್ಣವಿಲ್ಲದ ಸ್ವಯಂಜ್ಯೋತಿಯ ನಿಜನಿವಾಸದಲ್ಲಿ ನಿಶ್ಚಿಂತನಾದವನು" ಎಂದು ವರ್ಣಿಸುವನು (865). ಆಗ ಮಡಿವಾಳನು ಪ್ರಭುದೇವನಿಗೆ ಬಸವಣ್ಣನನ್ನು ತೋರಿ "ಆಱು ಜನ್ಮದವನೆಂಬರು ಬಸವಣ್ಣನ. ಗಾಱು ಮಾತ ಕೇಳಲಾಗದು" (872) ಎಂದು ಬಸವಣ್ಣನ ವಿಚಾರವಾಗಿ ಇದ್ದ ತಪ್ಪು ಕಲ್ಪನೆಯನ್ನು ಖಂಡಿಸುವನು.*

ಮುಂದೆ ಹಡಪದ ಅಪ್ಪಣ್ಣನು (878), ನಾಗಾಯಕ್ಕ (880), ಸೊಡ್ಡಳ ಬಾಚರಸ (882), ಕಕ್ಕಯ್ಯ (884), ಮೋಳಿಗೆ ಮಾರತಂದೆ (886), ಏಕಾಂತ ರಾಮತಂದೆ (888), ಶಂಕರ ದಾಸಿಮಯ್ಯ (890), ಮೇದರ ಕೇತಯ್ಯ (892), ಘಟ್ಟಿವಾಳ ಮುದ್ದಣ್ಣ (894-895)—ಇವರು ಎರಡೆರಡು ವಚನಗಳಿಂದ ಪ್ರಭುದೇವನನ್ನು ಸ್ತೋತ್ರಮಾಡುವರು.

## 21

ಹೀಗೆ ಶರಣರೆಲ್ಲರೂ ತಮ್ಮನ್ನು ಸ್ತೋತ್ರ ಮಾಡುತ್ತಿರಲು ಪ್ರಭುದೇವನು—ತನ್ನ ಅವತಾರದ ಅವಸಾನವನ್ನು ಕುರಿತು, "ಆದಿಯಲ್ಲಿ ಬಸವಣ್ಣನು ಏಳುನೂರೆಪ್ಪತ್ತು ಅಮರಗಣಂಗಳು ಸಹಿತ ಶಿವನಾಣತಿಯಿಂದ ಮರ್ತ್ಯಕ್ಕೆ ಬಂದ. ಆ ಅವತಾರದ ಮಣಿಹ (Duty) ಪೂರೈಸಿತು. ಇನ್ನು ನೀವು ನಿಮ್ಮ ನಿಮ್ಮ ನಿಜದಲ್ಲಿ ಐಕ್ಯರಾಗಿ. ನನಗಿನ್ನು ಸಾಕಾರದ ಸುಳುಹಿಲ್ಲ" ಎಂದು ತಿಳಿಸುವನು (896).

ಆಗ ಬಸವಣ್ಣನು, "ಕಾಯದ ಮಾಯದ ಸಡಗರದಲ್ಲಿ ನನ್ನನ್ನು ಹುಟ್ಟಿಸಿದೆ: ಅದು ನಿನ್ನ ಲೀಲೆ. ಪರವಾದಿ ಒರೆಗಲ್ಲಾದಲ್ಲಿ—ಮೂನ್ನೂರ ಅರವತ್ತು ಸತ್ತ ಪ್ರಾಣಗಳನ್ನು ಎತ್ತಿ, ಮುವ್ವತ್ತಾರು ಕೊಂಡೆಯವನ್ನು ಪರಿಹರಿಸಿ, ಎಂಬತ್ತೆಂಟು ಪವಾಡಗಳನ್ನು ಮೆರೆದೆ: ಅದೂ ನಿನ್ನ ಲೀಲೆ. ನನ್ನ ಮನದ ಮಲಿನವನ್ನು ತೊಳೆಯಲೆಂದು ಬಂದು ಶೂನ್ಯಸಿಂಹಾಸನವನ್ನು ಅಲಂಕರಿಸಿದೆ: ಅದೂ ನಿನ್ನ ಲೀಲೆ. ಆದುದರಿಂದ ನನ್ನ ಮರ್ಮವನ್ನು ನೀನೇ ಬಲ್ಲೆ. ಅದನ್ನು ನನಗೆ ತಿಳಿಸಿಕೊಡು" ಎಂದು ಕೇಳಿಕೊಂಡನು (898). ಅದಕ್ಕೆ ಪ್ರಭುದೇವನು ಗೊಗೇಶ್ವರಲಿಂಗದಲ್ಲಿ ತೆರೆಮರೆ ಯಾವುದೂ ಇಲ್ಲ ವೆನ್ನುವನು (899).

ಬಸವಣ್ಣನು ಪ್ರಭುದೇವನಿಗೆ ಹೇಳಿದ: "ಶಾಂತಿಯನ್ನು ಮಾಡ ಹೋದಾಗ ಬೇತಾಳ ವಾಯಿತು ಎಂಬಂತಾಯಿತು. 'ಬಾಯಾರಿಕೆ, ಲಿಂಗದ ಪೂಜೆಯಿಲ್ಲದೆ ನಾನು ನೀರು ಕುಡಿಯುವಂತಿಲ್ಲ' ಎಂದಾಗ, ನಾನು ಪರಹಿತಾರ್ಥವಾಗಿ ಅನಿಮಿಷನಿಗೆ ನನ್ನ ಪ್ರಾಣ ಲಿಂಗವನ್ನು ಕೊಟ್ಟೆ. ಪೂಜೆ ಮಾಡುತ್ತ ಮಾಡುತ್ತ ಆವನು ಮೈಮರೆತು ಮರೆಯಾದ. ಪ್ರಾಣಲಿಂಗವಿಲ್ಲದೆ, ಇತ್ತ, ನಾನು ಮರಳಿ ಕೈಲಾಸಕ್ಕೆ ಹೋದಾಗ, ಶಿವನು,'ನಿನ್ನ ಪ್ರಾಣ

---

*737-739ನೇ ವಚನದ ಪ್ರಕಾರ ಬಸವಣ್ಣನಿಗೆ ಈ ಕಲ್ಪನೆಯಿತ್ತು. 790ನೇ ವಚನದ ಪ್ರಕಾರ ಪ್ರಭುದೇವನೂ ಈ ಕಲ್ಪನೆಯಿಂದ ದೂರವಾಗಿಲ್ಲ.

ಲಿಂಗವನ್ನು ಹುಡುಕಿ ತಾ' ಎಂದು ಮತ್ತೆ ನನ್ನನ್ನು ಮರ್ತ್ಯಕ್ಕೆ ಕಳಿಸಿದನು. ಆ ದುಃಖದ ಹಿನ್ನೆಲೆಯಲ್ಲೇ, ಆ ಪ್ರಾಣಲಿಂಗದ ಅನ್ವೇಷಣೆಯಲ್ಲೇ ಲಕ್ಷದ ಮೇಲೆ ತೊಂಬತ್ತಾರು ಸಾವಿರ ವಚನಗಳನ್ನು ಹಾಡಿದೆ. ಆ ಪ್ರಾಣಲಿಂಗದ ರಹಸ್ಯವನ್ನು ಈಗ ನೀನು ನನಗೆ ಹೇಳು" ಎಂದು (900).

ಅದಕ್ಕೆ ಪ್ರಭುದೇವನು; "ಆ ಅಗಮ್ಯ ಲಿಂಗವನ್ನು ಅರಿತವರಾರು? ಅದು ಕೊಟ್ಟು ಕೊಂಡಾಡುವ ವ್ಯವಹಾರಕ್ಕೆ ಸಿಕ್ಕುವುದಿಲ್ಲ" ಎಂದನು (901).

ಆಗ ಬಸವನು—"ಗುರು-ಶಿಷ್ಯರ ಮಥನದಲ್ಲಿ ಸ್ವಯಂಜ್ಯೋತಿರ್ಲಿಂಗ ಉದಯವಾಗುವುದೆಂದಿದೆ ಶ್ರುತಿಯಲ್ಲಿ. ಆ ಮಾತು ಸುಳ್ಳೆ? ನಿಮ್ಮ ಮಹಾನುಭಾವಮಥನದಿಂದ ನನ್ನಲ್ಲಿ ನಿಜವನ್ನು ನೆಲೆಗೊಳಿಸು" ಎಂದು ಪ್ರಾರ್ಥಿಸಿದ (902). ಪರಬ್ರಹ್ಮವು ಮಾತಿನ ಮಥನಕ್ಕೆ ಸಿಕ್ಕುವುದಿಲ್ಲವೆಂದು ಪ್ರಭುದೇವನು ಮಾರ್ನುಡಿಯಲು, ಬಸವಣ್ಣನು, "ನನ್ನ ಪ್ರಾಣಲಿಂಗವೇ ನಿನ್ನ ಪ್ರಾಣಲಿಂಗವಾಯಿತು. ಇದರಿಂದ ನಿನ್ನ ಪ್ರಾಣವೇ ನನ್ನ ಪ್ರಾಣ. ಇನ್ನು ನಿನ್ನನ್ನು ಕೇಳದೆ ಯಾರಿಗೆ ಮೊರೆ ಇಡಲಿ? ಕರುಣೆಯಿಟ್ಟು ನನ್ನ ಆದಿ ಲಿಂಗವನ್ನು ತೋಱು" ಎಂದು ಒತ್ತಾಯ ಮಾಡಿದ (908).

ಆ ಸಮಯದಲ್ಲಿ ಚೆನ್ನಬಸವಣ್ಣನು ಮಧ್ಯೆ ಪ್ರವೇಶಿಸಿ, ವೃಷಭನಿಂದ ಹಿಂದೆ ಅನಿಮಿಷನು ಲಿಂಗವನ್ನು ಪೂಜೆಮಾಡಿಕೊಡುವೆನೆಂದು ತೆಗೆದುಕೊಂಡು ಅಡಗಿದ ವಿಚಾರವನ್ನು ಪ್ರಸ್ತಾಪಿಸುವನು (910).

ಪ್ರಭುದೇವನು ಬಸವಣ್ಣನ ನಿಷ್ಠೆಯನ್ನು ಕಂಡು ಮೆಚ್ಚಿ, "ಎತ್ತೆತ್ತ ನೋಡಿದರೆ ಬಸವನೆಂಬ ಬಳ್ಳಿ. ಆ ಬಳ್ಳಿಯ ಹಿಡಿದೆತ್ತಿದರೆ ಲಿಂಗವೆಂಬ ಗೊಂಚಲು. ಆ ಲಿಂಗವೆಂಬ ಗೊಂಚಲ ಹಿಡಿದೊತ್ತಿದರೆ ಭಕ್ತಿ ರಸಮಯವಾಯಿತು"—ಎನ್ನುತ್ತ ಬಸವನಿಂದ ತಾನೆ ಲಿಂಗದ ನಿಲವನ್ನು ಅರಿತುದಾಗಿ ನುಣುಚಿಕೊಳ್ಳುವನು (911). ಆಗ ಬಸವಣ್ಣನು—"ನಾನು ಮರ್ತ್ಯಲೋಕಕ್ಕೆ ಬಂದು ಇಷ್ಟು ದಿನವೂ ಅರಸುತ್ತಿದ್ದುದು ಕೈಸಾರಿದಂತಾಯಿತು. ಅಂದು ಅನಿಮಿಷನ ಪಾಲಾದ ನನ್ನ ಪ್ರಾಣಲಿಂಗವನ್ನು ನಿನ್ನ ಕೈಯಲ್ಲಿ ಕಂಡೆ. ಇನ್ನು ನನಗೆ ಭವಭಾಧೆ ತಪ್ಪಿತು" ಎಂದು ಹಿಗ್ಗಿ (912), ಆ ಲಿಂಗವು ತನಗೆ ಬರಬೇಕೆಂದು ಪ್ರಭುದೇವನಲ್ಲಿ ಬಿನ್ನಹ ಮಾಡುವನು. (914).

ಆಗ ಪ್ರಭುದೇವ ಹೇಳಿದ: ಮರಹು ಬರಬಾರದೆಂದು ಶ್ರೀಗುರು ನನ್ನ ಕರಸ್ಥಳಕ್ಕೆ ಕುರುಹನ್ನು ಕೊಟ್ಟನು. ಆ ಕುರುಹು ನೋಟದಲ್ಲಿ, ಆ ನೋಟ ಮನದಲ್ಲಿ, ಆ ಮನ ಭಾವದಲ್ಲಿ, ಆ ಭಾವ ಜ್ಞಾನದಲ್ಲಿ, ಆ ಜ್ಞಾನ ಸಮರಸದಲ್ಲಿ ಪರಿಣಮಿಸಿತು. ಇನ್ನು ಅರಿವ ಕುರುಹು ಯಾವುದಿದೆ? ನೀನು ಅರಸುವ ಕುರುಹು ನನ್ನ ಕರಸ್ಥಲದ ಲಿಂಗ. ಆ ಕರಸ್ಥಲದ ಲಿಂಗಸಹಿತವಾಗಿ ನಾನು ನಿನ್ನಲ್ಲಿ ಐಕ್ಯವಾಗಿದೇನೆ. ಹೀಗಾಗಿ—ನನ್ನ ಪ್ರಾಣಲಿಂಗ ನಿನ್ನ ಒಳಗಾಗಿದೆ—ಅಂದಮೇಲೆ ನೀನು ಕೇಳುವುದಾಗಲೇ ನಿನ್ನ ಕೈಸಾರಿದೆ, ಎಂದು (915).

ಆಗ ಬಸವಣ್ಣನು—ಬಹಳ ದಿನಗಳಾದ ಮೇಲೆ ತನ್ನ ಪುಣ್ಯದ ಫಲದಿಂದ ಪ್ರಭು

ದೇವನು ಗೋಚರವಾದನೆಂದೂ, ತನ್ನ ಪ್ರಾಣಲಿಂಗ ಪ್ರಭುದೇವನೇ ಆಗಿ, ಆತನು ತನ್ನ ಸರ್ವಾಂಗದಲ್ಲಿ ಸನ್ನಿಹಿತನಾಗಿರುವುದರಿಂದ ತನ್ನ ಚಿಂತೆ ಇನ್ನು ನಿಶ್ಚಿಂತೆಯಾಯಿತೆಂದೂ ಅರಿಕೆ ಮಾಡಿಕೊಳ್ಳುವನು (916).

ಪ್ರಭುದೇವನು ಬಸವಣ್ಣನನ್ನು ಕುರಿತು: "ಆದಿಯ ಲಿಂಗವಿಡಿದು ನಾನು ನಿನ್ನಲ್ಲಿ ಅಡಗಿದ ಬಳಿಕ ನಿನಗಿನ್ನೇಕೆ ಚಿಂತೆ? ಗೊಗೇಶ್ವರಲಿಂಗವು ನಿನ್ನ ಹೃದಯ ಕಮಲದಲ್ಲಿ ನೆಲೆಗೊಂಡು, ನಿನ್ನ ಕರಸ್ಥಳದಲ್ಲಿ ತೊಳಗಿ ಬೆಳಗುತ್ತಿದಾನೆ, ತಿಳಿದು ನೋಡು ಸಂಗನ ಬಸವಣ್ಣ"—ಎಂದು ಕರುಣಿಸುವನು* (919).

ಬಸವಣ್ಣ (926–933), ಚೆನ್ನಬಸವಣ್ಣ (934–942), ಮಡಿವಾಳಯ್ಯ (943–947) ಹಡಪದ ಅಪ್ಪಣ್ಣ (948–950), ಸೊಡ್ಡಳ ಬಾಚರಸ (950–953), ಅಕ್ಕನಾಗಾಯಿ (954–955), ಮೋಳಿಗಯ್ಯ (956–957), ಡೋಹರ ಕಕ್ಕಯ್ಯ (958–959) ಮತ್ತು ಮಿಕ್ಕ ಎಲ್ಲಾ ಗಣಂಗಳೂ ತಮ್ಮ ಐಕ್ಯಭಾವದ ಪರಾಮರಿಕೆಯನ್ನು ಹೇಳುವರು. ಕೊನೆಯದಾಗಿ ಪ್ರಭುದೇವನು ತನ್ನ ಪರಾಮರಿಕೆಯನ್ನು ಹೇಳುತ್ತ "ಘನನಿರಂಜನದ ಬೆಳಗಿಂಬಾದುದು ಏನೆಂಬೆನು" ಎಂದು ಭಾವಪರವಶನಾಗುವನು (951).

## 22

ಪ್ರಭುದೇವನು, ಮತ್ತೆ, ಮಿಕ್ಕೆಲ್ಲ ಅಸಂಖ್ಯಾತರಿಗೆ ನಿರ್ವಾಹಸ್ಥಿತಿಗತಿ (ಐಕ್ಯವಾಗುವ ಬಗೆ) ಯನ್ನು ಹೇಳಿದ ವಿವರ: "ಗಡು ಮೀರಿತು. ಕಲಿಯುಗದಲ್ಲಿ ಇನ್ನು ಮುಂದೆ ಶರಣರಾದ ನೀವು ಇರಬಾರದು"—ಎನ್ನುತ್ತ, ಬಸವಣ್ಣನಿಗೆ, ಕಪ್ಪಡಿಯ ಸಂಗಯ್ಯನಲ್ಲಿ ಒಡಗೂಡೆಂದೂ, ಚೆನ್ನಬಸವಣ್ಣನಿಗೆ ಉಳುಮೆಯಲ್ಲಿ ನಿಜವನ್ನು ಎಯ್ದೆಂದೂ, ಮಡಿವಾಳಯ್ಯನಿಗೆ ಮಹವನ್ನು ಒಡಗೂಡೆಂದೂ, ಸೊಡ್ಡಳಬಾಚರಸ ಮೊದಲಾದ ಪ್ರಮಥರೆಲ್ಲರೂ ನಿರ್ವಯಲ ಸಮಾಧಿಯಲ್ಲಿ ನಿಜವನ್ನು ಎಯ್ದುವುದೆಂದೂ ಹೇಳಿ, ಇಷ್ಟ ಉಳ್ಳವರು ಲಿಂಗದೊಳಗೆ ಬಗಿದು ಹೊಗಬಹುದೆಂದೂ, ಹೋಗುವವರು ಕಾಯ ಬೆರಸಿ ಕೈಲಾಸಕ್ಕೆ ಹೋಗಬಹುದೆಂದೂ, ತನಗಾದರೋ ಕದಳಿಯನ್ನು ಹೊಕ್ಕು ನಿಜದಲ್ಲಿ ಒಡಗೂಡುವುದೇ ಪ್ರಿಯವೆಂದೂ ನಿರೂಪಿಸುವನು (966).

ಹೀಗೆ ಪ್ರಭುದೇವನು–ಬಸವಣ್ಣ ಮುಂತಾದ ಎಲ್ಲಾ ಶರಣರಿಗೆ ನಿಜಸಮಾಧಿಯಾಗುವ ಪ್ರಕಾರವನ್ನು ನಿರೂಪಿಸಿ, ಬೀಳ್ಕೊಂಡು, ಕಲ್ಯಾಣದಿಂದ ಹೊರಟು, ಶ್ರೀ ಪರ್ವತದ ದಾರಿಯಲ್ಲಿ ಬಿಜಯ ಮಾಡುತ್ತಿದ್ದಾಗ ಗೋರಕ್ಷನೆಂಬ ಸಿದ್ಧನನ್ನು ಕಂಡನು. ಅವನೊಡನೆ ಸಂಭಾಷಣೆಯನ್ನು ನಡೆಸಿ, ಅವನ ವಜ್ರದೇಹವನ್ನು ಖಡ್ಗದಿಂದ ಕಡಿದು ಪರೀಕ್ಷೆಮಾಡಿ–ಆತನಿಗೆ ಉಪದೇಶವನ್ನು ಕೊಟ್ಟು ಕದಳಿಯನ್ನು ಹೊಗುವನು.

---

* ವೃಷಭನ ಬಾಯಿಂದ ಬಸವನಿಗೆ ಲಿಂಗ ಸಿಕ್ಕುವುದೆಂಬಂತೆ ಬಸವದೀಕ್ಷೆಯನ್ನು ಚಿತ್ರಿಸಿರುವ ಹರಿಹರನ ಮನಸ್ಸಿನಲ್ಲಿ ಈ ಸಂಪ್ರದಾಯವೇ ಇದ್ದಿತಾಗಬಹುದು.

ಹೊಗುವ ಮುನ್ನ ಕದಳಿಯ ಬಾಗಿಲಲ್ಲಿ ನಿಂತು ಈ ಮುಂದಿನಂತೆ ಅಪ್ಪಣೆ ಕೊಡಿಸಿದನು :

ಕಾಯಗೊಂಡವರು ಯಾರೇ ಆಗಲಿ—ಅವರನ್ನು ಮಾಯೆ ಕಾಡದೇ ಬಿಡಳು. ನಾನು ಕಾಯವೆಂಬ ಕಣ್ಣಡವನ್ನು ತೊಟ್ಟು ಕೈಲಾಸದಲ್ಲಿದ್ದಾಗ-ಮಹಾ ರುದ್ರನು ನನ್ನನ್ನು ನುಗ್ಗುನುರಿಮಾಡಿ ನೆಲಕ್ಕೆ ಹಾಕಿದ; ಇಂದಿಗೆ ಆ ಭವದ ಬಳ್ಳಿಯನ್ನು ಕತ್ತರಿಸಿದೆ. ನಾನು ಫಲಪದವಿಗಳನ್ನು ಒಲ್ಲೆನೆಂದುದರಿಂದ ನನಗೆ ಪುಣ್ಯಪಾಪಗಳೆರಡೂ ಇಲ್ಲದೆ ನಾನು ನಿರಂಜನನಾದೆ. ಸಂಸಾರಸಾಗರವನ್ನು ದಾಟಿ, ಮುಕ್ತಿದ್ವಾರದಲ್ಲಿ ತಲೆಬಾಗಿ ಹೋಗುತ್ತಿದೇನೆ. (867)—ಎಂದು.

ಕದಳಿಯನ್ನು ಹೊಕ್ಕು ನಿರವಯದಲ್ಲಿ ನಿವಾಸಿಯಾಗುವುದಕ್ಕೆ ಮುನ್ನ ಪ್ರಭುದೇವನು ವಿಶ್ವಕ್ಕೊಂದು ಸಂದೇಶವನ್ನು ಉಸುರಿರುವನು :

"ಕಾಯವೆಂಬ ಮಹಾಕದಳಿಯನ್ನು ಗೆಲ್ಲಬಲ್ಲವರಾರನ್ನೂ ಕಾಣೆ. ಅದನ್ನು ಸಂಸಾರ ಸಾಗರ ಏಳಾಗಿ ಬಳಸಿರುವುದು. ಭವವೆಂಬ ಮಹಾರಣ್ಯದಲ್ಲಿ ಪಂಚೇಂದ್ರಿಯವೆಂಬ ವಿಷದ ಮಳೆ ಸುರಿಯುತ್ತಿರುವುದು. ಕೋಪವೆನ್ನುವ ಹೆಬ್ಬುಲಿ ಮೊರೆಯುತ್ತಿರುವುದು. ಅಷ್ಟಮದವೆನ್ನುವ ಮದಕರಿಗಳು ನುಗ್ಗಾಡುತ್ತಿವೆ. ಕಾಮವೆಂಬ ಮೂರಂಬಿನ ಸೋನೆ ಸುರಿಯುತ್ತಿದೆ. ಮತ್ಸರವೆಂಬ ಮಹಾಸರ್ಪಗಳು ಕಿಡಿಯುಗುಳುತ್ತಿವೆ. ಆಸೆಯೆಂಬ ಪಾಪಿಯ ಕೂಸು ಹಿಸಿ ಹಿಸಿದು ತಿನ್ನುತ್ತಿದೆ. ತಾಪತ್ರಯವೆನ್ನುವ ಕೆಂಡದ ಮಳೆ— ಕಾಲಿಡಬಾರದು. ಅಹಂಕಾರವೆಂಬ ಗಿರಿಗಳು ಅಡ್ಡಗಟ್ಟಿವೆ. ಪಂಚಭೂತಗಳೆಂಬ ಭೂತ ಪ್ರೇತಗಳ ಭಯಂಕರ, ನೋಡಲಾಗದು. ಮಾಯೆಯೆನ್ನುವ ರಾಕ್ಷಸಿ ಮೈಯಿಂದ ಮಾಂಸವನ್ನು ಕಿತ್ತು ತಿನ್ನುತ್ತಿರುವಳು. ವಿಷಯವೆಂಬ ಭಾವಿಯನ್ನು ದಾಟಲಾಗದು. ಮೋಹವೆಂಬ ಮಸೆದ ಕತ್ತಿಯನ್ನು ಉಚ್ಚಿ ಮುರಿಯಲಾಗದು.

ಇಂತಹ ಕಾಯವೆಂಬ ಕದಳಿಯನ್ನು ಪ್ರವೇಶಿಸಲರಿಯದೆ ದೇವ-ದಾನವ-ಮಾನವರೆಲ್ಲಾ ಮತಿಗೆಟ್ಟು ಮರುಳಾಗಿ ಹಿಂಜರಿದು ಓಡಿದರು. ನಾನು ಈ ಕದಳಿಯನ್ನು ಹೊಕ್ಕು ಹೊಯ್ದಾಡಿ, ಒಂದು ಮುಳ್ಳಾದರೂ ಚುಚ್ಚದಂತೆ, ಒಂದಿಷ್ಟೂ ತರಚದಂತೆ ನುಸುಳಿ ನುಗ್ಗಿ ದಡಸೇರಿ ನಿಜಸಮಾಧಿಯಲ್ಲಿ ನಿಂತು ಪರವಶನಾಗಿ ನಿರಾಳಕ್ಕೆ ನಿರಾಳವಾಗಿದ್ದೇನೆ"— ಹೀಗೆನ್ನುತ್ತ (968) ಪ್ರಭುದೇವನು ಕದಳಿಯೊಳಕ್ಕೆ ನುಗ್ಗಿ ಮುಳ್ಳು ಮಸೆ ಮುಟ್ಟದೆ ಉತ್ತರಿಸಿ ನಿರಾಳಕ್ಕೆ ನಿರಾಳವಾದನು.

ಪ್ರಭುದೇವನು ಐಕ್ಯವಾದುದನ್ನು ತಿಳಿದು ಬಸವಣ್ಣನು, "ಆಚಾರಗಂಭೀರ ಅವಯವ ಗೆಟ್ಟಿತಲ್ಲಾ ! ಜ್ಞಾನಗಂಭೀರ ನಡೆನುಡಿಗೆಟ್ಟಿತಲ್ಲಾ" ಎಂದೂ (969), ಚೆನ್ನ ಬಸವಣ್ಣನು, "ಎನ್ನ ಮನದ ಮಹಿಮನೇ ಉರಿಯುಂಡ ಕರ್ಪುರದಂತಾದೆಯಲ್ಲಾ" (970) ಎಂದೂ, ಮಡಿವಾಳ ಮಾಚಯ್ಯನು, "ನಿಷ್ಠೆ ನಿಬ್ಬರ ತೊಟ್ಟು ಬಿಟ್ಟು ಸಚ್ಚಿದಾನಂದವಾದ ಪರಿಯ ನೋಡಾ !" ಎಂದೂ ಸ್ತೋತ್ರ ಮಾಡಿದರು.

ಸೊಡ್ಡಳ ಬಾಚರಸನು "ಪ್ರಭುದೇವನು ನಿರವಯಲ ಬೆರಸಲೊಡನೆ ಸತ್ಯಲೋಕದ

ಬಾಗಿಲ ಕದ ತೆರೆಯಿತು" (972) ಎನ್ನುತ್ತ ತಾನೂ ಲಿಂಗೈಕ್ಯವಾದನು.

ಆಗ ಬಸವಣ್ಣನು "ಎಮ್ಮವರಿಗೆ ಸಾವಿಲ್ಲ ಎಮ್ಮವರು ಸಾವನರಿಯರು (973)" ಎಂದು ನಿರೂಪಿಸಿ, ಧ್ಯಾನಮಗ್ನನಾಗಿದ್ದು ಮತ್ತೊಂದು ಮಾತನಾಡಿದನು: "ರಾಜ-ರಾಜಕೀಯ, ಭಂಗಾರ-ಶೃಂಗಾರ ಯಾವುದೂ ಸ್ಥಿರವಲ್ಲ. ಕಲ್ಯಾಣವು ಕೆಟ್ಟು ಹಾಳಾಗುವುದು. ಶಿವಾಚಾರದ ಅಭಿಮಾನದ ಜಗದೇವ ಮತ್ತು ಮೊಲ್ಲೆಯ ಬೊಮ್ಮಣ್ಣಗಳ ಕೈಯಲ್ಲಿ ಬಿಜ್ಜಳನು ಸಾಯುವನು. ಕೂಡಲ ಸಂಗಮದೇವರು ಬರೆದುದನ್ನು ಅಳಿಸುವನು (974). ನಾನು ಶಿವನಟ್ಟದಾಗ ಮರ್ತ್ಯಕ್ಕೆ ಬಂದು, ಶರಣರ ಸಂಘವನ್ನು ಕಟ್ಟಿ, ಅವರ ಸೇವೆ ಮಾಡುತ್ತ—ಇಷ್ಟುದಿನ ಬದುಕು ಬಾಳುವೆ ಮಾಡಿದೆ. ಬರಬೇಕೆಂದು ಈಗ ಶಿವನು ಕರೆಕಳಿಸಲು—ದೇವರ ನಿರೂಪಕ್ಕೆ ಹಸಾದವೆನ್ನುವೆನು"—ಎನ್ನುತ್ತ, ಅಸಂಖ್ಯಾತ ಮಹಾಗಣಂಗಳನ್ನೆಲ್ಲಾ ಕುರಿತು, "ನಾನು ನಿಮ್ಮ ಬಂಟರ ಬಂಟ, ಲೆಂಕರ ಲೆಂಕ, ನಿಮ್ಮ ತೊತ್ತಿನ ಪಡಿಗವನ್ನು ಹಿಡಿಯುವ ಪಡಿದೊತ್ತು ನಾನು. ನನ್ನಿಂದಾದ ತಪ್ಪು ಲೆಕ್ಕವಿಲ್ಲದಷ್ಟು: ನಡೆದು ತಪ್ಪಿದೆ, ನುಡಿದು ತಪ್ಪಿದೆ; ಮಾಡಿ ತಪ್ಪಿದೆ, ನೀಡಿ ತಪ್ಪಿದೆ; ಕೂಡಿ ತಪ್ಪಿದೆ, ಅರಿದು ತಪ್ಪಿದೆ. ನನ್ನ ತಪ್ಪನ್ನು ನೀವು ಒಪ್ಪ ಮಾಡಿಕೊಳ್ಳಬೇಕಲ್ಲದೆ ಮನಸ್ಸಿಗೆ ತರಲಾಗದು. ಕೂಡಲ ಸಂಗನೆಂಬ ಗಂಡನು ಕೂಡೋಣ ಬಾರೆಂದು ನನ್ನನ್ನು ಕೂಗುತ್ತಿದಾನೆ. ಹೋಗುವ ಅವಸರದಲ್ಲಿದೇನೆ. ಶರಣು ಶರಣಾರ್ಥಿ"—(976-984) ಎಂದು ಶರಣರನ್ನು ಬೀಳ್ಕೊಂಡು ತನ್ನ ಮನೆಯ ಒಡವೆವಸ್ತುಗಳನೆಲ್ಲಾ ಲಿಂಗ-ಜಂಗಮಕ್ಕೆ ಸೂರೆಗೊಟ್ಟು—ಏಳುನೂರೆಪ್ಪತ್ತು ಮಹಾಗಣಗಳಿಗೆ ನಿಜದ ಪ್ರಾಪ್ತಿಯನ್ನು ನಿರೂಪಿಸಿ ಕಳಿಸಿ, ತನ್ನ ಸಮಯಾಚಾರದ 36000 ಜಂಗಮರನ್ನು ಚೆನ್ನಬಸವಣ್ಣನ ವಶಕ್ಕೆ ಕೊಟ್ಟು, ಕಪ್ಪಡಿಗೆ ಬಂದು, ಸಂಗಮನಾಥನ ಶ್ರೀಪಾದ ಸಮೀಪದಲ್ಲಿ ನಿಂತು— "ಜನನ-ಮರಣವೆಂಬೆರಡಕ್ಕೆ ಹೊರಗಾದವನು ನಾನು. ನೀನು ಹೇಳಿದ ಕೆಲಸವನ್ನು ಮಾಡಿದೆ. ಇನ್ನು ಕೂಡಿಕೋ ಕೂಡಲ ಸಂಗಮದೇವ" ಎಂದು ಮೊರೆಯಿಟ್ಟನು (985). ಮತ್ತೆಯೂ—"ಹಿಂದೆ ನಾನು ಮಾಡಿದ ತಪ್ಪಿನಿಂದ ಈ ಜನ್ಮದಲ್ಲಿ ಬಂದೆ. ಶಿವಶರಣರು ಕರುಣೆಯಿಂದ ನನ್ನನ್ನು ನಿಸ್ಸೂತಕಿಯನ್ನಾಗಿ ಮಾಡಿದರು. ಪ್ರಭುದೇವನಿಂದ ನನಗೆ ಪ್ರಾಣಲಿಂಗ ಸಂಬಂಧವಾಯಿತು. ನೀನು ಹೇಳಿಕಳಿಸಿದ ಕೆಲಸ ಮಾಡಿ ಮುಗಿಸಿದ್ದೇನೆ. ಇನ್ನು ಕೂಡಿಕೋ ಕೂಡಲಸಂಗಮದೇವ (985 A). ನಿನ್ನ ಹೃದಯಕಮಲದ ಅಂತರಾಳದ ಏಕಪೀಠದ ಸಿಂಹಾಸನದಲ್ಲಿ ತೆರಪುಕೊಡು (987)" ಎನ್ನುತ್ತ ಕಪ್ಪಡಿಯ ಸಂಗಯ್ಯ ದೇವರ ಹೃದಯಕಮಲದಲ್ಲಿ ಬಗಿದು ಹೊಕ್ಕು ಲಿಂಗೈಕ್ಯನಾದನು.

ಆಗ ಅಕ್ಕನಾಗಾಯಿ ದುಃಖದಿಂದ "ಅಯ್ಯ, ನಾನಧಪೆಯಯ್ಯ, ಕೈಯ್ಯ ಕೋಲ ಕೊಂಬರೇ ಅಯ್ಯ?" ಎಂದು ಶಿವನನ್ನು ದೂರಿ (996) ಮರ್ತ್ಯಲೋಕದ ಮಹಾಮನೆ ಶೂನ್ಯವಾಯಿತು, ಎನ್ನನೊಯ್ಯದೆ ಹೋದೆಯಲ್ಲಾ" ಎಂದು ಬಸವಣ್ಣನನ್ನು ನೆನೆದು ಹಲುಬುತ್ತ (998) ಅವನ ಬೆಂಬಳಿಯಲ್ಲೇ ಲಿಂಗೈಕ್ಯವಾದಳು. ಆಗುವ ಮುನ್ನ ಬಸವಣ್ಣನ ಸಂಬಂಧವಾಗಿ, "ಅಗೋಚರವಾದ, ಅಸಾಧ್ಯವಾದ ಆಚಾರವನ್ನು

ಭೂಲೋಕದಲ್ಲಿ ಬೆಳಸಬೇಕೆಂದು ಭಕ್ತಿಯನ್ನು ಬಿತ್ತಿದೆ. ಈ ಶಿವಾಚಾರವು ಬೆಳವಣಿಗೆಯಾಗತಕ್ಕುದಲ್ಲವೆಂದು ಬಿಜ್ಜಳರಾಯನು ವಾದಿಸಲು—ಆತನನ್ನು ನಾನಾರೀತಿಯಿಂದ ನೀನು ಒಡಂಬಡಿಸಿದೆ. ಇಂದು ನಿನ್ನ ಬಂದ ಕೆಲಸವಾಯಿತು. ಲಿಂಗದೊಳಗೆ ಬಗಿದು ಹೊಗುವಾಗ—ಹಿಂದುಳಿದ ಲೋಕಕ್ಕೆ ದಾರಿ ತೋರಬೇಕೆಂದು ಸೆರಗನ್ನು ಕೊಟ್ಟು ಹೋಗಿರುವೆ ನೀನು"—ಎಂದು ಬಸವಣ್ಣನ ಅವತಾರದ ಘನತೆಯನ್ನೂ ಕೃಪಾಮಾರ್ದವವನ್ನೂ ಕೊಂಡಾಡಿದಳು (999).

ಚೆನ್ನಬಸವಣ್ಣನು—ತನ್ನ ಗುರು ಐಕ್ಯವಾಗಲು—"ಜಂಗಮವೇ ಲಿಂಗವೆಂದೂ, ಪ್ರಾಣವೇ ಲಿಂಗವೆಂದೂ ನಿಶ್ಚಯ ಮಾಡಿಕೊಟ್ಟು, ನನ್ನ ತಾಯಿ ನಾಗಾಯಿಯನ್ನು ನಿನ್ನ ಅಂತರಂಗದಲ್ಲಿ ಇಂಬುಗೊಂಡು, ಶಿವನಿಗೆ ಸುಜ್ಞಾನವಾಹನವಾಗಬೇಕೆಂದು ನಿರವಯವಾಗಿ ಹೋದೆಯಲ್ಲಾ"! (1000) ಎಂದು ಬಿನ್ನೈಸಿದನು. ಮತ್ತೆ, ಬಸವಣ್ಣ ಮುಂತಾದವರೆಲ್ಲಾ ಐಕ್ಯವಾಗಿ ತಾನು ಮಾತ್ರ ಹಿಂದುಳಿದುದನ್ನು ಪ್ರಸ್ತಾಪಿಸುತ್ತ "ಗೋರಿಕಲ್ಲ ಮಾಡ ಹೋಯಿತ್ತೆನಗೆ. ಹೂವಿನ ವಿಮಾನ ಹೋಯಿತ್ತೆನಗೆ. ಬಸವ ಹೋದನೆನಗೆ" ಎಂದು ಅಗಲಿಕೆಯ ವೇದನೆಯಲ್ಲಿ ವಿವಶನಾದನು (1007).

ಮಡಿವಾಳನ ಮಾತಿನಲ್ಲಿ ಹೇಳುವುದಾದರೆ, ಬಸವಣ್ಣನು ಉಟ್ಟ ಬಟ್ಟೆಯನ್ನೂ—ಮೆಟ್ಟಿದ ಕೆರವನ್ನೂ ಹರಿದು ಹೋದ. ಕಟ್ಟಿದ ಮುಡಿಯನ್ನು ಬಿಚ್ಚಿ, ಸೀಮೆ-ಸಂಬಂಧ ತಪ್ಪಿ ಹೋದ, ಲಿಂಗಕ್ಕೆ ಮಾಡಿ-ಆ ಮಾಟವನ್ನು ಮುಟ್ಟದೆ, ಜಂಗಮಕ್ಕೆ ಮಾಡಿ-ಆ ಮಾಟವನ್ನು ಕೈಯಲ್ಲಿ ಬಿಗಿವಿಡಿದುಕೊಂಡು ಹೋದ. ಬೆಳಗನ್ನು ಉಟ್ಟು ಬಯಲಾಗಿ ಹೋದ (1008).

ಓಂ ಶಾಂತಿಃ ಶಾಂತಿಃ ಶಾಂತಿಃ

## ಶೂನ್ಯಸಂಪಾದನೆಯ ಮೂಲ ಮತ್ತು ಸ್ವರೂಪ

ಇದು ಒಂದು ಶೂನ್ಯಸಂಪಾದನೆಯ ಮೆಯ್‌ಗೆಡಲೀಯದೆ ಸಂಗ್ರಹಿಸಿದ ವಸ್ತು ಶರೀರ. ಇಂತಹ ಅನೇಕ ಶೂನ್ಯಸಂಪಾದನೆಗಳಿರುವುದು ಪ್ರಸಿದ್ಧವಾದ ವಿಷಯ. ಅವು ಸಂಖ್ಯೆಯಲ್ಲಿ ನಾಲ್ಕೋ ಐದೋ ಎಂಬುದು ವಿವಾದಾಸ್ಪದ. ಇದುವರೆಗೂ ಅಚ್ಚಿನಲ್ಲಿ ಬಂದಿರುವುದಂತೂ (ಈ ಪರಂಪರೆಯಲ್ಲಿ ಕೊನೆಯದಾದ) ಗೂಳೂರು ಸಿದ್ಧವೀರನ ಶೂನ್ಯಸಂಪಾದನೆಯೊಂದೇ.

ಈ ಧಾಟಿಯಿಂದ ಯಾರಿಗಾದರೂ ಶೂನ್ಯಸಂಪಾದನೆ ಎಂಬ ಹೆಸರಿನ ಗ್ರಂಥಗಳು ಸ್ವತಂತ್ರವಾಗಿ ಸಂಖ್ಯೆಯಲ್ಲಿ ನಾಲ್ಕು ಅಥವಾ ಐದು ಇವೆ—ವ್ಯಾಸಭಾರತ, ಪಂಪ ಭಾರತ, ರನ್ನ ಭಾರತ, ಕುಮಾರವ್ಯಾಸ ಭಾರತ, ಸಾಳ್ವ ಭಾರತ ಎಂಬಂತೆ—ಎನಿಸು

ವುದು ಸಹಜ. ಆದರೆ ಇದು ವಾಸ್ತವವಾದುದಲ್ಲ; ಸಾದೃಶ್ಯದಿಂದಾದ ಅಪಪ್ರಥೆ. ಈ ಶೂನ್ಯಸಂಪಾದನೆಗಳ ಗದ್ಯ ಮತ್ತು ವಚನಘಟಿತವಾದ ಶಬ್ದಶರೀರದಲ್ಲಿ ಸಮಾನಾಂಶ ವಿಸ್ಮಯಕಾರಿಯಾಗುವಷ್ಟು ಅಧಿಕವಾಗಿದೆ. ಇದಕ್ಕೆಲ್ಲ "ಮೂಲ"ವೆಂದರೆ ಶಿವಗಣ ಪ್ರಸಾದಿ ರಚಿಸಿದ ಪ್ರಭುದೇವರ ಶೂನ್ಯಸಂಪಾದನೆಯೆ. ಇದನ್ನೇ ಮುಂದೆ ಬಂದ ಶೂನ್ಯಸಂಪಾದನ(ಪರಿಷ್ಕರಣ)ಕಾರರು "ಅದಕ್ಕೂ ಇದಕ್ಕೂ ಎದಕ್ಕೂ" ಬಳಸಿ ಕೊಂಡು, ಅದರೊಳಕ್ಕೆ ಒಂದೆರಡೆಡೆಗಳಲ್ಲಿ ತಮ್ಮದೇ ಎಂಬುದನ್ನು ಬಹಳವೆಂದರೆ $\frac{1}{3}$ ಭಾಗದಷ್ಟು ಸೇರಿಸಿರುವರು. ಹೀಗಾದ ಮೂರು ಪರಿಷ್ಕರಣಗಳನ್ನೇ ನಾವಿಂದು ಹಲಗೆಯ ದೇವರ ಶೂನ್ಯಸಂಪಾದನೆ, ಗುಮ್ಮಳಾಪುರದ ಸಿದ್ಧಲಿಂಗನ ಶೂನ್ಯಸಂಪಾದನೆ ಮತ್ತು ಗೂಳೂರು ಸಿದ್ಧವೀರನ ಶೂನ್ಯಸಂಪಾದನೆ ಎಂದು ವ್ಯವಹರಿಸುತ್ತಿರುವುದು.

ಆ ಪರಿಷ್ಕರಣಗಳಲ್ಲಿ ಮೂಲಶೂನ್ಯಸಂಪಾದನೆಯಲ್ಲಿದ್ದ ಕಥೆಯ ಧಾಟಿಯೂ, ಪಾತ್ರಸ್ವರೂಪವೂ ಸ್ವಲ್ಪಾಂಶದಲ್ಲಿ ಪಲ್ಲಟವಾಗಿರುವುದೂ ನಿಜ. ಆದರೆ ಹಲಗೆಯಾರ್ಯ ಮುಂತಾದವರು ಹಾಗೆ ಮಾಡಿದುದರಲ್ಲಿ ಅವರಿಗೆ ಮೂಲಶೂನ್ಯಸಂಪಾದನೆಯನ್ನು ವಿಕೃತಗೊಳಿಸುವ ವಿಗ್ರಹಭೇದನವಿಕಾರವಾಗಲಿ, ರೂಪಾಂತರಿಸಿ ಅದನ್ನು ತಮ್ಮ ದೆಂಬಂತೆ ಮಾಡಿಕೊಳ್ಳುವ ಕಳ್ಳಬುದ್ಧಿಯಾಗಲಿ ಇರಲಿಲ್ಲ. ಮಹಾದೇವಯ್ಯನೇ ತಮ ಗೆಲ್ಲ ಮೂಲ ಎಂದು ಗೌರವದಿಂದ ಅವರು ಸ್ಮರಿಸಿರುವರು. ಅಷ್ಟೇ ಅಲ್ಲ! ಆ ಮಹಾ ದೇವಯ್ಯನ ಪ್ರಾರ್ಥನೆಯ ಪ್ರಕಾರವೇ ಅವರೆಲ್ಲ ಕಾಲದಿಂದ ಕಾಲಕ್ಕೆ ಅವನ ಶೂನ್ಯ ಸಂಪಾದನೆಯಲ್ಲಿ ವ್ಯತ್ಯಾಸಗಳನ್ನು ಮಾಡಿರುವರು :

"ಶಿವಗಣಪ್ರಸಾದಿ ಮಹಾದೇವಯ್ಯಗಳ ನಿರೂಪವಿಡಿದು ಹಲಗೆಯದೇವರು [ತಮ್ಮ ಶೂನ್ಯಸಂಪಾದನೆಯನ್ನು ರಚಿಸಿದರು]" (K. A. 105, ಪುಟ ೧)

"[ಶಿವಗಣಪ್ರಸಾದಿ ಮಹಾದೇವಯ್ಯಗಳು ತಮ್ಮ ಶೂನ್ಯಸಂಪಾದನೆಯಲ್ಲಿ]ನ ವಚನ ಕ್ರಮ ತಪ್ಪಿದರೆ ನಿಮ್ಮ ಪರಿಜ್ಞಾನದಿಂದ ತಿದ್ದಿಕೊಂಬುದೆಂದು ಎನಲಾಗಿ—ಆ ವಾಕ್ಯ ವಿಡಿದು ಗುಮ್ಮಳಾಪುರದ ಸಿದ್ಧಲಿಂಗದೇವರು, ಅಲ್ಲಿ ಸಿದ್ಧರಾಮಯ್ಯದೇವರಿಗೆ ದೀಕ್ಷಾ ಕ್ರಮವಿಲ್ಲದಿರಲು ಬಸವಾದಿ ಪ್ರಮಥರ ವಚನಪ್ರಸಿದ್ಧವಾಗಿ ಸೇರಿಸಿದರು. ಆ ಪರಿ ಯಲೆ....ಗೂಳೂರು ಸಿದ್ಧವೀರದೇವರೆಂಬ ದಿವ್ಯಜ್ಞಾನಾನುಭಾವಿಯು ಈ ಶೂನ್ಯ ಸಂಪಾದನೆಯಂ ರಚಿಸಿ[ದರು]." ("ಉ"ಪ್ರತಿ—ಪುಟ ೪೨೨)

ನಿಜ, ಶಿವಗಣಪ್ರಸಾದಿ ಮಹಾದೇವಯ್ಯನು ತನ್ನ ಶೂನ್ಯಸಂಪಾದನೆಯ ಕೊನೆಗೆ "ಇಲ್ಲಿ ವಚನಕ್ರಮ ಸೇರುವೆ ತಪ್ಪುಳ್ಳಡೆ ನಿಮ್ಮ ಪರಮಜ್ಞಾನದಿಂ ತಿದ್ದಿ ಈ ವಚ ನಾನುಭಾವ ಪ್ರಸಂಗಮಂ ಮಾಡಿ ಸುಖಿಸುವುದು" ಎಂದು ಭವಿಷ್ಯತ್ತಿನ ಈ ಪ್ರಾಜ್ಞರನ್ನು ಕೋರಿದ್ದನು.

ಮಹಾದೇವಯ್ಯನಿಗಿಂತ ಹಿಂದೆ ಇಂತಹ ಸಂಪಾದನೆಯ ಗ್ರಂಥಗಳು ಇರಲಿಲ್ಲವೇ? ಇದು ಕ್ಲಿಷ್ಟವಾದ ಪ್ರಶ್ನೆ. ಈ ಸಂಪ್ರದಾಯಕ್ಕೆ ಇವನೇ ಪ್ರವರ್ತಕನೆನ್ನಲು ಇರುವ ಒಂದೇ ಒಂದು ಅಡ್ಡಿಯೆಂದರೆ—ನಾವು ಮುಂದೆ ಸಾಧಾರವಾಗಿ ಸಮರ್ಥಿಸುವಂತೆ

ಕಡೆಯ ಪಕ್ಷ ಮಹಾದೇವಯ್ಯನ ಸಮಕಾಲದವನಾದರೂ (ಹಿಂದಿನ ಕಾಲದವನೆಂದರೂ ಸರಿಯೆ) ಆಗಿರಬಹುದಾದ ಸಿಂಗಿರಾಜನ ಬಸವಪುರಾಣದಲ್ಲಿ ಉಲ್ಲಿಖಿತವಾಗಿರುವ (2-16 ಗ, 2-40 ಗ) "ಪ್ರಭುಸಂಪಾದನೆ" ಮತ್ತು "ಕ್ರಿಯಾಸಂಪಾದನೆ" ಎಂಬವು ಸಂಪಾದನೆಯ ಸಂಪ್ರದಾಯದ ಸ್ವತಂತ್ರ ಗ್ರಂಥಗಳಂತೆ ತೋರುವವಲ್ಲದೆ, ಅವುಗಳಲ್ಲಿ ವಸ್ತುವೈವಿಧ್ಯವೂ ತೋರುವುದು. ಅವೆಲ್ಲ ಮಹಾದೇವಯ್ಯನಿಗಿಂತ ಹಿಂದಿದ್ದ 'ಖಂಡ' ಸಂಪಾದನೆ (ಗ್ರಂಥ)ಗಳಿರಬಹುದು.

ಹೇಗೂ ಪಂಪನಿಗೆ ಪೂರ್ವದಲ್ಲಿ ಭಾರತದ ಒಂದೊಂದು ಉಪಾಖ್ಯಾನವನ್ನೇ ಕುರಿತ ಬಿಡಿ ಬಿಡಿ ಖಂಡಕಾವ್ಯಗಳೇ ಇದ್ದಂತೆ, ಮಹಾದೇವಯ್ಯನಿಗೆ ಪೂರ್ವದಲ್ಲಿ—ಪ್ರಭು ಸಂಪಾದನೆ, ಕ್ರಿಯಾಸಂಪಾದನೆ ಎಂದು ಮುಂತಾಗಿ ಸಂಪಾದನೆಯ ಖಂಡಕೃತಿಗಳು ಮಾತ್ರ ಇದ್ದಿರಬಹುದು. ಆ ಪ್ರಕಾರಕ್ಕೆ ಒಂದು "ಸಮಸ್ತ" ರೂಪವನ್ನು ಕೊಡುವ ಬೃಹತ್ ಶಿಲ್ಪದ ಬಿನ್ನಾಣ ಸಂಗಡಿಸಿದುದು ಈ ಮಹಾದೇವಯ್ಯನಿಂದಲೇ ಎನ್ನಬಹುದು.

ಸಿಂಗಿರಾಜನ ಬಸವಪುರಾಣದಲ್ಲಿ ಉಲ್ಲಿಖಿತವಾಗಿರುವ 'ಪ್ರಭುಸಂಪಾದನೆ'ಯಲ್ಲಿ ಪ್ರಭುದೇವನಿಗೂ ಬಸವಣ್ಣನಿಗೂ ನಡೆದ ತಂತಮ್ಮ ಪೂರ್ವಭವಾವಳಿಯನ್ನು ಕುರಿತ ಸಂವಾದವಿದೆ. (ಇಲ್ಲಿ ಸಂವಾದ ಅಚ್ಚ ವಚನಗಳಲ್ಲಿ ನಡೆಯುವುದೇ ಹೊರತು, ಮುಂದಣ ಶೂನ್ಯಸಂಪಾದನೆಗಳಲ್ಲಿ ಕಾಣುವಂತೆ ಮಧ್ಯದ ಗದ್ಯದ ಕೊಂಡಿಯ ಮಾತುಗಳು ಕಂಡು ಬರುವುದಿಲ್ಲ). ಅದರ ಕೊನೆಗೆ ಅಲ್ಲಿಯವರೆಗೂ ನಡೆದ ಸಂವಾದದಲ್ಲಿನ ವಿಷಯದ ಸಮರ್ಥನೆಗಾಗಿ ಚೆನ್ನಬಸವಣ್ಣನ ಮೂರು ವಚನಗಳನ್ನೂ, ಒಂದು ಹಾಡನ್ನೂ "ಸಾಕ್ಷಿ"ಯೆಂದು ಸೇರಿಸಿದೆ. ಇದರಲ್ಲಿ ಶಿವಗಣಪ್ರಸಾದಿಯ ಶೂನ್ಯಸಂಪಾದನೆಯಲ್ಲಿ ಇಲ್ಲದ ವಚನಗಳಿವೆ. ಕೊನೆಯ ಹಾಡೂ ಶಿವಗಣಪ್ರಸಾದಿಯಲ್ಲಿಲ್ಲ. ಇದನ್ನೆಲ್ಲ ನೋಡಿ ದರೆ ಶಿವಗಣಪ್ರಸಾದಿಯ ಕಾಲಕ್ಕೆ ಪೂರ್ವದಲ್ಲಿದ್ದ ಖಂಡಸಂಪಾದನೆಗಳ ಪ್ರಾಕೃತರೂಪ ಗಮ್ಯವಾಗುವುದು. ಶಿವಗಣಪ್ರಸಾದಿಯು ಶರಣರ ವಚನಪುಷ್ಪಗಳನ್ನು ಶಿವಾನುಭಾವ-ಸಂವಾದದ ಮಾಲೆಯಾಗಿ ಕಟ್ಟುವಲ್ಲಿ ತನ್ನದೇ ಆದ ಗದ್ಯಸೂತ್ರವನ್ನು ಬಂಧಕ್ಕಾಗಿ, ಆದರೂ ಬಂಧುರವಾಗಿ ತಂದು ಮಲುಕು ಹಾಕಿದನು. ಇದು ಈ ಪ್ರಕಾರಕ್ಕೆ ಅವನಿಂದ ಸಂದ ಒಂದು ನವ್ಯಾಂಶ.

ಈ ನವ್ಯಾಂಶವನ್ನು ಒಂದೆಂದು ಪರಿಗಣಿಸಿದಾಕ್ಷಣಕ್ಕೇ, ಗಣಿತ ರೀತಿಯಿಂದ, ಕಡೆ-ಗಣನೆ ಮಾಡಲಾಗದು. ಇವನ ಈ ನವೀನಾಂಶದ ಸೇರ್ಪಡೆಯಿಂದ ಅದುವರೆಗೂ ಕೇವಲ ವಚನರೂಪವಾಗಿದ್ದ ಸಂಪಾದನೆಯ ಕೃತಿಗಳು—ಗದ್ಯ ಮಿಶ್ರಣದಿಂದ—ಒಂದು ವಿಧವಾದ ಚಂಪೂಧೋರಣೆಯನ್ನು ಪಡೆಯಿತು. ಅನಾದಿಕಾಲದಿಂದಲೂ ಕನ್ನಡದ ಸಾಹಿತ್ಯಕ್ಷೇತ್ರದಲ್ಲಿ ಅದು ಶಿಷ್ಟಸ್ತರಕ್ಕೆ ಅನ್ವಯಿಸಲಿ, ಪಾಮರಸ್ತರಕ್ಕೆ ಅನ್ವಯಿಸಲಿ—ಕನ್ನಡಿಗರ ಉಸುರಿನ ಜಾಯಮಾನವೇ ಎನ್ನಬಹುದಾದ ಗದ್ಯ ಪದ್ಯ ಸಮವಾಯ ಸಮರುಚಿಯು—ಅದುವರೆಗೂ ತನಗೆ ಏಕಪ್ರಕಾರವಾಗಿ ಅಂಟಬಂದಿದ್ದ, ಆದುದರಿಂದಲೇ ಜನಾದರಣೆಯನ್ನು ಕಳೆದುಕೊಂಡಿದ್ದ ವೃತ್ತಕಂದಗದ್ಯಾತ್ಮಕವಾದ

ತನ್ನ ಜರಠ ಕವಚವನ್ನು ಕಳಚಿ, ವಚನ-ಹಾಡು-ಗದ್ಯಾತ್ಮಕವಾದ ಸಪುರವಸ್ತ್ರವನ್ನು ಧರಿಸಿ—ತನ್ನ ಧ್ರುವನಿರ್ಜರತರುಣದೇಹಲಾವಣ್ಯವನ್ನು ಪ್ರಕಟಗೊಳಿಸಿತು. ಹರಿಹರನಿಂದ ಒಂದು ರೀತಿಯಲ್ಲೂ, ಶಿವಗಣಪ್ರಸಾದಿಯಿಂದ ಮತ್ತೊಂದು ರೀತಿಯಲ್ಲೂ ಚಂಪೂಶೈಲಿಯು ಹೀಗೆ ಪಲ್ಲಟಗೊಂಡುದಕ್ಕೆ ಕಾರಣ ಶರಣರ ವಚನಸಾಹಿತ್ಯವು ವಿದ್ವಜ್ಜನರಲ್ಲೂ ಜನರಲ್ಲೂ ಬಳಕೆ ಒಡನಾಟಗಳನ್ನು ರೂಢಿಸಿ ಬೆಳೆಸಿದುದೇ ಇರಬೇಕು. ಜನಪದಸಾಹಿತ್ಯದಲ್ಲಿ ಇಂದಿಗೂ ನಾವು ಕಂಸಾಳೆಯ ಪದಗಳು ಮುಂತಾದೆಡೆಗಳಲ್ಲಿ ಚಂಪೂಶೈಲಿ ಜನಪ್ರಿಯವಾಗಿ ಒಗ್ಗಿನುಗ್ಗಿ ಬಂದಿರುವುದನ್ನು ಕಾಣಬಹುದು. ಯಕ್ಷಗಾನಬಯಲಾಟಗಳಲ್ಲಿಯಂತೂ ಇದು ಸನಾದವಾಗಿ ಕಣ್ಣಿಗೆ ಕಟ್ಟಿದೆ. ಇದರಿಂದ ಎಲ್ಲ ಅರ್ಥದಲ್ಲೂ "ಜನಪ್ರಿಯ"ವೆನ್ನಬಹುದಾದ ಚಂಪೂ ಒಂದಲ್ಲ ಒಂದು ಪ್ರಕಾರದಲ್ಲಿ ನಿರಂತರವಾಗಿ ನಮ್ಮ ಹೃದಯತಂತುವನ್ನು ಹಿಡಿದು ಮಿಡಿದೇ ಬಂದಿದೆ. ಕನ್ನಡದಲ್ಲಿ ಜೈನಪಂಡಿತರು ಚಂಪೂಪ್ರಕಾರವನ್ನು ಬರಡುಗೊಳಿಸಿ ಆರೂಢಿದ್ದಾಗ, ಅದಕ್ಕೆ ಶಿವಕವಿಗಳು ಅಡ್ಡ ಹಾರಿಸಿ ಹೊಸತಳಿಗಳನ್ನು ತಂದರು. ಇವಕ್ಕೊಂದು ಸಾಕ್ಷಿ ಮಹಾದೇವಯ್ಯನ ಶೂನ್ಯಸಂಪಾದನೆ.

## ಪ್ರಥಮ ಶೂನ್ಯಸಂಪಾದನೆಯ ಕಾಲವಿಚಾರ

ಹನ್ನೆರಡನೇ ಶತಮಾನದ ಬಸವಾದಿಪ್ರಮಥರ ವಚನಗಳ (ಸಂಕಲನ ಮತ್ತು) ಸಂಯೋಜನಕಾರ್ಯಕ್ಷೇತ್ರವನ್ನು ನಾವು ನಾಲ್ಕು ಘಟ್ಟಗಳಲ್ಲಿ ವಿಂಗಡಿಸಬಹುದು. ತಮ್ಮ ಕಾವ್ಯದೊಳಕ್ಕೇ ವಚನಗಳನ್ನು ರಗಳೆಯಾಗಿಯೋ ಷಟ್ಪದಿಯಾಗಿಯೋ ತಿರುಗಿಸಿ ಸಂಗ್ರಹಿಸಿದ ಹರಿಹರ- ರಾಘವಾಂಕರ ಹದಿಮೂರನೇ ಶತಮಾನ ಮೊದಲನೆಯದು. ಈ ಘಟ್ಟದಲ್ಲೇ ಖಂಡಸಂಪಾದನೆಗಳು ಮೈವೆತ್ತಿರುವ ಸಂಭವ.

ಕ್ರಿ. ಶ. 1416-1446 ರ ಅವಧಿಯ ಪ್ರೌಢದೇವರಾಯನ ದಂಡನಾಯಕನಾಗಿದ್ದ ಲಕ್ಕಣ್ಣದಂಡೇಶನಿಗೆ ಬಸವಣ್ಣನ ಕಥೆಯನ್ನು ಶಿವತತ್ವ ಚಿಂತಾಮಣಿಯಲ್ಲಿ ಸಂಗ್ರಹಿಸುವಲ್ಲಿ ಸಾಮಗ್ರಿಯನ್ನು ಒದಗಿಸಿದ ಅಮಲಬಸವಚಾರಿತ್ರ್ಯದ ಕರ್ತೃವಾದ ಸಿಂಗಿರಾಜನೂ*, ಆ ಸಿಂಗಿರಾಜನ ಅದೇ ಬಸವಚಾರಿತ್ರ್ಯದಿಂದ ತನ್ನ ಶೂನ್ಯಸಂಪಾದನೆಗೆ

---

* ಸಿಂಗಿರಾಜನಿಗೇ ಲಕ್ಕಣ್ಣನು ಮೂಲವೆಂದು ಹೇಳುವುದುಂಟು. ಇದು ಸಮಂಜಸವಲ್ಲ. ಲಕ್ಕಣ್ಣ ಮತ್ತು ಸಿಂಗಿರಾಜರ ಕೃತಿಗಳಲ್ಲಿ ಸಾದೃಶ್ಯವಿರುವುದರಿಂದ ಯಾರಿಗೆ ಯಾರು ಮೂಲವೆಂಬುದು ತೊಡಕಿನ ಪ್ರಶ್ನೆ. ಏಕೆಂದರೆ ನಮಗೆ ಲಕ್ಕಣ್ಣನ ಕಾಲ ತಿಳಿದಿದ್ದು ಸಿಂಗಿರಾಜನ ಕಾಲ ತಿಳಿಯದು. ಅಂದಾಕ್ಷಣಕ್ಕೇ ಖಚಿತವಾದ ಒಂದು ಕಾಲದಲ್ಲಿದ್ದ ಲಕ್ಕಣ್ಣನಿಗಿಂತ ಈಚೆಗೆ ಕಾಲ ತಿಳಿಯದ ಸಿಂಗಿರಾಜನನ್ನು ಎಳೆದು ಹಾಕುವುದು ಸರಿಯಲ್ಲ. ಸಿಂಗಿರಾಜನಿಗೆ ಲಕ್ಕಣ್ಣನಿಗಿಲ್ಲದ ಒಂದು

ಸ್ವತಂತ್ರ ಸಶಕ್ತ ಶೈಲಿಯಿತ್ತು. ಮೇಲಾಗಿ ಲಕ್ಕಣ್ಣ ಸಂಗ್ರಹಕಾರನೇ ಹೊರತು ಸ್ವತಂತ್ರ ಸಾಮರ್ಥ್ಯದವನಲ್ಲ. ಅವನ ಕೃತಿ ಪರಿಶೀಲನೆಯಿಂದ ಇದನ್ನು ಮನಗಾಣಬಹುದು:

ಶಿವತತ್ವ ಚಿಂತಾಮಣಿಯನ್ನು ಮೂರು ಭಾಗ ಮಾಡಬಹುದು.

(೧) ಶಿವನ ಲೀಲೆಗಳ ಸಂಗ್ರಹ.
(೨) ಬಸವಾದಿ ಪ್ರಾಚೀನರಿಂದ ಹಿಡಿದು ನೂತನಗಣಂಗಳವರೆಗಿನ ಅವರ ಕಥಾಸಂಗ್ರಹ.
(೩) ಷಟ್ಸ್ಥಲ ವಿಚಾರವನ್ನು ಒಳಗೊಂಡ ತತ್ವ ಮತ್ತು ಆಚರಣೆಯ ನಿರೂಪಣೆ.

ಲೀಲೆಗಳನ್ನು ಹೇಳುವಲ್ಲಿ ಲಕ್ಕಣ್ಣನು ಸ್ಕಾಂದಾದಿಪುರಾಣಗಳಿಂದ ಅನುವದಿಸುತ್ತಿರುವನೆಂಬುದು ಅವನ ಸೂಚನೆಯ ಪದ್ಯಗಳಲ್ಲೇ ಸ್ಪಷ್ಟವಾಗಿದೆ.

ತತ್ವ ಮತ್ತು ಆಚರಣೆಯ ಸಂಬಂಧವಾದ ದೀಕ್ಷಾ (ಮುಂತಾದ) ವಿಚಾರವನ್ನು ವಾತೂಳ ಮುಂತಾದ ಆಗಮುಗಳಿಂದ ಸಂಗ್ರಹಿಸಿದಂತೆ ಆತನೇ ಹೇಳಿಕೊಂಡಿದಾನೆ.

ಇನ್ನು ಇವೆರಡರ ಮಧ್ಯೆ ಬರುವ 'ಭುವನಕೋಶ' ಪರಿಚ್ಛೇದದಿಂದ ಹಿಡಿದು 'ನೂತನಗಣಂಗಳ ಕಥೆ' ಎಂಬ ಪರಿಚ್ಛೇದದ ವರೆಗಿನ ವಸ್ತುವಿಗೆ ಮೂಲದ ವಿಚಾರ: ಭುವನಕೋಶವನ್ನು ಲಿಂಗ ಪುರಾಣದಿಂದಲೂ, ಶಿವಲೋಕ ವಿಸ್ತಾರವನ್ನು ಶಿವಪುರಾಣದ ರುದ್ರಕೋಟಿ ಸಂಹಿತೆಯಿಂದಲೂ ಸಂಗ್ರಹಿಸಿ ಅನುವಾದ ಮಾಡಿರುವಂತೆ ಲಕ್ಕಣ್ಣನು ಸ್ಪಷ್ಟವಾಗಿ ಹೇಳಿಕೊಂಡಿರುವನು. ಆದರೆ ಮುಂದೆ ಬರುವ 'ಬಸವೇಶ್ವರನ ಜನನ'ದಿಂದ ಹಿಡಿದು 'ಮೀಮಾಂಸಕನ ಪವಾಡ'ದ ವರೆಗಿನ ಬಸವಣ್ಣನ ಕಥೆಯನ್ನು ಅವನು ಎಲ್ಲಿಂದ ಸಂಗ್ರಹಿಸಿರುವನೋ ಉದ್ದೇಶಪೂರ್ವಕವಾಗಿಯೇ ಹೇಳದೆ ಬಿಟ್ಟಂತಿದೆ. ಆದರೇನು ಅವನಿಗೆ ಸಿಂಗಿರಾಜನೇ ಮೂಲವೆಂಬುದು ಈ ಕೆಳಗಿನ ಉಲ್ಲೇಖಗಳನ್ನು ತಾಳಿನೋಡುವುದರಿಂದ ನಿರ್ಣಯಿಸಬಹುದು. ಈ ಸಮಯದಲ್ಲಿ ಸಿಂಗಿರಾಜನಿಗಿದ್ದ ಸ್ವತಂತ್ರ "ಕವಿ"ತ್ವವು ಶಿವ ತತ್ವ ಚಿಂತಾಮಣಿಯ ಕರ್ತೃವಿಗೆ ಇರಲಿಲ್ಲವೆಂಬುದನ್ನು ಮರೆಯಬಾರದು:

(1) . . . . . . ಪದಿನೆಂಟು ಮಂತ್ರಿಮುಖ
ದಾದ್ಯರಿಗೆ ತಿಳಿವುತ್ತಿರಲ್ಕುತ್ತರಾಶೆಯಿಂ
ಶ್ರೀಧರನೆನಿಪೊಬ್ಬ ಮೀಮಾಂಸಕಾಚಾರ್ಯ ಬಂದನಾಡಂಬರದೊಳು

(ಸಿಂ. ಪು. 27–3)

. . . . . . ಪದಿನೆಂಟು ಮಂತ್ರಿ ಮುಖದವರುಗಳ ಲೆಕ್ಕಂಗಳ
ತಂದೋದಿಸಲು ಶ್ರೀಧರಾಚಾರ್ಯನುಂ ಬಡಗ
ಣಿಂದ ಮೀಮಾಂಸಕನೆನಿಪ್ಪ ಪೆಸರೊಪ್ಪಿ ಮುದ
ದಿಂದ ಬರಲದ ಪೇಳ್ವೆ—

(ಶಿ. ತ. ಚಿಂ. 33–1)

(2) ತರ್ಕಮೀಮಾಂಸಕಾಚಾರಿಯಗೆ ಚಾಮರವ
ನಿಕ್ಕುವನ ಪೆಸರ್‌ಶೈವ, ಹಡಪಿ ವೈಷ್ಣವ, ಗದ್ದು
ಗಿಕ್ಕುವನ ಪೆಸರಾರುಹತ, ಪಾದುಕೆಯ ಪಿಡಿವವನ ಪೆಸರ್‌ಬೌದ್ಧ ಮುಂದೆ

(ಸಿಂ. ಪು. 27–7)

ಆಸನಿಕ್ಕುವನು ಶೈವ, ಚಾಮರವನುಚಿತ
ಬೀಸುವಂ ವೈಷ್ಣವಂ, ಬೊಕ್ಕಸದನಾರುಹತ,
ಲೇಸ ಕೊಂಡಾಡಿ ಪೊಗಳುವನು ಕಾಪಾಲಿ, ಪಾವುಗೆಯವಂ ವರಸೌರನು

(ಶಿ. ತ. ಚಿಂ. 33–3)

(3) ಅಱು ದರುಶನದರಸು ಬರೆ ಕುಳ್ಳಿದೇಳದಿಹ
ನಾರಿವಂ ಭಸ್ಮಧರ ಶೈವಪಾಷಂಡಿ? ಎನ
ಲಾರೈದು ಸಚಿವರಿವರೆಮ್ಮ ಭರಭಾರಕರು ಮೇಲೆ ಸಾಮರ್ಥ್ಯರು ಸದಾ
ಚಾರಿ ಬಸವೇಶರೆನಲಿಂತೀತನುತ್ಕೋಚಿ
ಮಿಾಱಿದ ಶರಣನೆಂದು ಕೇಳಿಹೆವು ಕೆಲಭ್ರಷ್ಟ
ಗಾರಸಿದ್ಧಾಂತಗಳ ನಟಿಸುತಿಹನೀತನೇ ಅಂತಲಾಗರ್ವದವನು

(ಸಿಂ. ಪು. 27-11)

ಇವನಾರು ಬಿಜ್ಜಳ ಮಹೀಪಾಲ ಮೆಯ್ಗೆ ಭ
ಸ್ಮವ ಪೂಸಿಕೊಂಡಿರ್ದ ಶೈವಪಾಷಂಡಿ? ಎನ
ಲಪನಿಪನು ನುಡಿದನೀತನು ಬಸವದಂಡೇಶ ಶಿವಭಕ್ತಿಭರಿತನೆನಲು
ಇವನ ಬಲ್ಲೆವು ನಾಸ್ತಿಕನು ಶಿವನೆ ದೈವವೆಂ
ದವಗಡಿಸಿ ನುಡಿವುತಿಹನಿವ ಶುಷ್ಕ ತರ್ಕಿ ಮ
ತ್ತಿವನಹಂಕಾರಿ ಬಲುಗರ್ವಿಯೆನೆ......

(ಶಿ. ತ. ಚಿಂ. 33-5)

(4) ......ಶಿವನ ನಿಂದಿಪ ಪಾಪ
ಕರ್ಮಿಗಳ ಕಾಣುತಾಕ್ಷಣ ಶಿರವನರಿದು ರಸನ
ನಿರ್ಮೂಲ ಮಾಡಬೇಕಲ್ಲದೊಡೆ ನಿಜತನುವ ತ್ಯಜಿಪಾಗಮುವ ಕೇಳ್ ನೃಪ
ಶ್ರುತಿ

ಶ್ರುತ್ವಾನಿಂದಾಂ ಶಿವಸ್ಯಾಥ ತತ್‌ಕ್ಷಣಾದ್ದೈಹಿಕಂ ತ್ಯಜೇತ್ ।
ಸ್ವದೇಹಂ ವಾ ನಿಹತ್ಯಾಶು ರುದ್ರಲೋಕಂ ಸ ಗಚ್ಛತಿ॥
ಯೋ ವಾ ಚೋತ್ಪಾಟಯೇತ್ ಜಿಹ್ವಾಂ ಶಿವನಿಂದಾರತಸ್ಯ ತು ।
ತ್ರಿಸಪ್ತ ಕುಲಮುದ್ಧೃತ್ಯ ಶಿವಲೋಕಂ ಸ ಗಚ್ಛತಿ ॥

(ಸಿಂ. ಪು. 27-29)

......ಶಿವನಿಂದೆ ಮಾಳ್ಪನ ಕೊಲ್ವು
ದಸುವನುಳಿವುದು ಹಿತಂ ಸ್ಮೃತಿಯನಱು......

ಶ್ರುತ್ವಾನಿಂದಾಂ ಶಿವಸ್ಯಾಥ ತತ್‌ಕ್ಷಣಾದ್ದೈಹಿಕಂ ತ್ಯಜೇತ್ ।
ಸ್ವದೇಹಂ ವಾ ನಿಹತ್ಯಾಶು ರುದ್ರಲೋಕಂ ಸ ಗಚ್ಛತಿ ॥
ಯೋ ವಾ ಚೋತ್ಪಾಟಯೇತ್ ಜಿಹ್ವಾಂ ಶಿವನಿಂದಾರತಸ್ಯ ತು ।
ತ್ರಿಸಪ್ತ ಕುಲಮುದ್ಧೃತ್ಯ ಶಿವಲೋಕಂ ಸ ಗಚ್ಛತಿ ॥

(ಶಿ. ತ. ಚಿಂ. 33-13)

(5) ನೆತ್ರವಾಸಂಗಿ ಬಿದ್ದತ್ತತ್ತ ಶಬ್ದಗಳ
ಚಿತ್ರಿಸುವ ತೆಱದಿ ನಾನಾಮುಖದೊಳಿತಿಹಾಸ
ವೆತ್ತಿ ಭರ್ಗೋದೇವ ಧೀಮಹೀಯೆಂಬ ಮಂತ್ರವೆ ಮೂರ್ತಿಗೊಂಡೊಲಂತಾ
ತತ್ವತನುವಿರೆ ರಸಾವೇಶದಿಂ ಬಸವ ತಲೆ
ಸುತ್ತ ತೆಗೆದಿಕ್ಕಿದ ಜಗಕ್ಕೆ ಮುಂಡಿಗೆಯನೆ
ಮೃತ್ಯತಿಷ್ಠದ್ದಶಾಂಗುಲನ ಘನವಧಿಕವೊಳರೆತ್ತೆನುತ್ತೊರೆದ ವಚನ

ಪ್ರಧಾನವಾಗಿ ಪ್ರಭುದೇವನ ಸಂಬಂಧವಾದ ಪೂರ್ವಕಥಾ ವೃತ್ತಿಕೆಯನ್ನೂ†, ಗೌಣವಾಗಿ ಬಸವಣ್ಣನ ಸಂಬಂಧವಾದ ಪೂರ್ವ ಮತ್ತು ಸಂಪ್ರತಿಕಥಾಭಿತ್ತಿಯನ್ನೂ ಎತ್ತಿಕೊಂಡ ಶಿವಗಣಪ್ರಸಾದಿ ಮಹಾದೇವಯ್ಯನೂ ಇದ್ದ ಹದಿನಾಲ್ಕನೆಯ ಶತಮಾನ ಎರಡನೆಯದು. ಈ ಘಟ್ಟದಲ್ಲಿಯೇ ಸಿಂಗಿರಾಜನು ವಚನಗಳನ್ನು ತನ್ನ ಕಾವ್ಯದ ಛಂದಸ್ಸಿಗೆ ತಿರಿಗಿಸಿಕೊಳ್ಳುವುದರ ಜೊತೆಗೆ, ಪ್ರತ್ಯೇಕವಾಗಿಯೂ ಅವನ್ನು ತನ್ನ ಕಾವ್ಯದೊಳಗೇ ಉಲ್ಲೇಖಿಸಿ—ಬರಲಿದ್ದ ಶೂನ್ಯಸಂಪಾದನೆಯ ಮಾದರಿಗೆ ಮತ್ತಷ್ಟು ಪುಟ ಕೊಟ್ಟನು.

---

ವಚನ:

ದೇವಲೋಕಕ್ಕೆ ಸರಿ ಬೇಱೆ ಲೋಕವಿಲ್ಲ. ಶಿವಮಂತ್ರಕ್ಕೆ
ಸರಿ ಬೇಱೆ ಮಂತ್ರವಿಲ್ಲ, ಜಗಕ್ಕಿಕ್ಕಿದೆ ಮುಂಡಿಗೆಯನೆತ್ತಿಕೊಳ್ಳಿ
ಕೂಡಲಸಂಗಯ್ಯನಲ್ಲದೆ ಬೇಱೆ ದೈವವಿಲ್ಲ.

(ಸಿಂ. ಪು. 27–57)

...... ಮತ್ತೆ ಇತಿಹಾಸ ಭರ್ಗೋ ದೇವನೇ
ಈ ರೂಢಿಯೊಳು ದೈವವೆಂದು ತಲೆಸುತ್ತನತಿ
ತೋಱು ಮುಡಿಗೆಯನತ್ಯತಿಷ್ಠದ್ದಶಾಂಗುಲಂ
ಬೇಱೆ ದೈವವದಿಲ್ಲೆನುತ ವಚನವೆಂದ ......
ದೇವಲೋಕಕ್ಕೆ ಸರಿ ಬೇಱೆ ಲೋಕವಿಲ್ಲ, ಶಿವಮಂತ್ರಕೆ ಸರಿ
ಬೇಱೆ ಮಂತ್ರವಿಲ್ಲ, ಜಗಕಿಕ್ಕಿದೆ ಮುಂಡಿಗೆಯನೆತ್ತಿಕೊಳ್ಳಿ ಕೂಡಲ
ಸಂಗಯ್ಯನಲ್ಲದೆ ಬೇಱೆ ದೈವವಿಲ್ಲ.

(ಶಿ. ತ. ಚಿಂ. 33–26)

† ಈ ಮುಂದೆ ಬರುವ ಸಿಂಗಿರಾಜಪುರಾಣದಲ್ಲಿನ ಪ್ರಭುದೇವರ ಪೂರ್ವವೃತ್ತಾಂತವನ್ನು ಶಿವಗಣಪ್ರಸಾದಿಯ ಶೂನ್ಯಸಂಪಾದನೆಯಲ್ಲಿನ ಕಥೆಯೊಡನೆ ಹೋಲಿಸಿ ನೋಡಿ:

ಅನ್ಯಕಥನಾಗನುದಲ್ಲಿ—"ವೃಷಭನು ಇಂದ್ರನ ಖಾಂಡವವನವನ್ನು ಹೊಕ್ಕು ಓಡಾಡಿ, ಆ ಇಂದ್ರನ ಇಕ್ಷುವಾಟಿಯನ್ನು ತುಳಿದು ಕೆಡಿಸಿ ರಕ್ಷಕರನ್ನು ದಿಕ್ಕರಿಸಿದ. ಹೀಗೆ ಅನ್ಯಾಯವಾಯಿತೆಂದು ಶಿವನಿಗೆ ತಿಳಿಸಲು, ಆ ಶಿವನು "ವೃಷಭ, ನಿನ್ನ ಉಪಟಳಕ್ಕೆ ಅಂಜುವೆವು" ಎಂದನು. ಅದಕ್ಕೆ ಮುನಿದು ವೃಷಭನು (ಮರ್ತ್ಯಲೋಕಕ್ಕೆ) ಹೋದ" ಎಂಬುದು ಸರಿಯಲ್ಲ. (2–40)

ಕ್ರಿಯೆ ಮತ್ತು ಭಾವ ಈ ಎರಡೂ ವಾದಿಸುತ್ತ ಶಿವನ ಬಳಿ ಬಂದು ಪರಸ್ಪರ ಮೂದಲಿಸುತ್ತಿರಲು, ವೃಷಭನು ನ್ಯಾಯತೀರ್ಮಾನ ಮಾಡಲೆಂದು ಶಿವನು ಹೇಳಿದ. ಕೂಡಲೆ ಭಾವವು ವೃಷಭನ ಮುಖವನ್ನೂ, ಕ್ರೀ ದೇವತೆಗಳ ಮುಖವನ್ನೂ ಪ್ರವೇಶಿಸಿದವು (2–41).

ಕ್ರಿಯೆಗೆ ಕೃತಕಬುದ್ಧಿ ಬಂದಿತು. ಅದು ಅನಿಮಿಷ ಎಂಬ ಕ್ರತುಪುರುಷನ ಕೈಯಿಂದ ವೃಷಭನ ಬಾಲದ ಕೊನೆಯ ಒಂದು ರೋಮವನ್ನು ಹಿಡಿದಲುಗಾಡಿಸಿತು. (2–42).

ವೃಷಭನು ಬಾಲವನ್ನೆತ್ತಿ ಬಡಿಯಲು ಇಂದ್ರ ಅಗ್ನಿ ಮುಂತಾದವರು ನೊಂದು "ಶಿವನ ಆಟ ತಿಳಿಯುವುದು ಅಸಾಧ್ಯ. ಬುವಿ–ಬಾನಲ್ಲೆಲ್ಲೂ ಕರಿ–ತುರಗ ರಥ ಮುಂತಾದ ವಾಹನಗಳಿಲ್ಲವೆಂಬಂತೆ — ಈ ಎತ್ತನ್ನು ಸಿಂಗಾರ ಮಾಡಿಟ್ಟುಕೊಂಡಿದಾನೆ. ಇದಾದರೋ ದೇವಾಧಿದೇವತೆಗಳ ಮುಖಭಂಗಮಾಡುತ್ತಿದೆ" ಎಂದರು. (2 = 43–44).

ಶಿವನು ಸರ್ವಾಂತರ್ಯಾಮಿಯಾಗಿದ್ದೂ ಈ ಮಾತನಾಡಿಸಿದನೇ—ಎಂದು ನೊಂದು, ಈ

ಇಂದ್ರಗಿಂದ್ರರನ್ನು ನೋಡಿಕೊಳ್ಳುವೆನೆನ್ನುತ್ತ ವೃಷಭನು ಗೋಪ್ಯವಾಗಿ ಹೊರಟು, ಕೀಲಕ ಪರ್ವತದ ಶಿಖರದಲ್ಲಿ ನಿಂತು, ನಾಲ್ಕೂ ದಿಕ್ಕನ್ನು ಉಗ್ರವಾಗಿ ನೋಡಿದ (2-45).

ದಿಗ್ಬಂಧವಾಯಿತು. ಚಂದ್ರ ಸೂರ್ಯರು ಗತಿಗೆಟ್ಟರು. ದೇವಾಧಿದೇವತೆಗಳ ಸಿದ್ಧರಸ ಒಣಗಿ ಹೋಯಿತು. ಕಲ್ಪತರು, ಪರುಷ, ಚಿಂತಾಮಣಿಗಳು ನಿಷ್ಪ್ರಯೋಜಕವಾದವು. ಭೂಮಿಯಲ್ಲಿ ಹರಿಯುವ ನೀರು ಹಿಂಗಿತು, ಸುರಿವ ಮಳೆ ನಿಂತಿತು, ಕರೆವ ಹಸು ಮಾನಸಿಕೊಂಡಿತು (2=46-48).

ಈ ಉಗ್ರಪರಿಸ್ಥಿತಿಯ ವಾರ್ತೆ ಇಂದ್ರನಿಗೂ, ನಾರಾಯಣನಿಗೂ, ಶಿವನಿಗೂ ತಲುಪಿತು (2—49).

ಇಂದ್ರನೇ ಇದಕ್ಕೆಲ್ಲಾ ಮೂಲಕಾರಣನೆಂದು ಶಿವನು ತಿಳಿದು ಅವನನ್ನು ಕರೆದು—ವೃಷಭನನ್ನು ಕೈಲಾಸಕ್ಕೆ ಕರೆದು ತಾ ಇಲ್ಲದಿದ್ದರೆ—ಸಾಯುವೆ—ಎಂದು ಗದರಿಸುವನು (3-3).

ಇಂದ್ರನ ಕಡೆಯವರು ವೃಷಭನನ್ನು ಹುಡುಕಿ ಹಿಡಿದು ತರುವ ರಭಸದಲ್ಲಿ ಹೊರಡುವರು (3=13_15) ವೃಷಭನನ್ನು ಕಂಡು, ಎಳೆತರಲು ಹೆಣಗಿ, ನೋವು ತಿಂದು ಹಿಂತಿರುಗುವರು (3=16-21).

ಇತ್ತ ವೃಷಭನ ಕೋಪಾಗ್ನಿ ಭೂಮಂಡಲವನ್ನು ಸುಡುತ್ತ ಬರುವುದು. ಇದನ್ನೆಲ್ಲ ಹರಿ-ಹರ-ಬ್ರಹ್ಮರಿಗೆ ತಿಳಿಸುವೆನೆಂದು ಭೂದೇವಿ ಹೊರಟಳು. ಮೇರುಪರ್ವತದ ಸಮೀಪದಲ್ಲಿ ವೀರಶೈವನಾದ ದೇವಲಮುನಿಯ ಆಶ್ರಮವನ್ನು ಕಂಡಳು (3-2) ಅದು ಶೈವಸಾಮ್ರಾಜ್ಯದಂತಿತ್ತು (3-29).

ಭೂದೇವಿಯು ದೇವಲನಿಗೆ ತನ್ನ ಬವಣೆಯನ್ನು ಹೇಳಿಕೊಳ್ಳುವಳು. ಆಗ ಆ ಋಷಿಯು "ಆದಿರುದ್ರಲೀಲೆ: ಕೃತಯುಗದಲ್ಲಿ ನಂದಿಕೇಶ್ವರ ರೂಪ, ತ್ರೇತೆಯಲ್ಲಿ ದೇವಾಂಗಗಣರೂಪ, ದ್ವಾಪರದಲ್ಲಿ ಘಂಟಾಕರ್ಣರೂಪ, ಆಮೇಲೆ ಧರ್ಮಸ್ವರೂಪವಾದ ವೃಷಭಾವತಾರವಾಯ್ತು. ಈ ವೃಷಭನೊಡನೆ ದೇವತೆಗಳು "ಸಂಪಾದಿಸಲು" (=ಚರ್ಚಿಸಲು) ಮುಳಿದ ಮುನಿಸಿಂದ ಭೂಲೋಕಕ್ಕೆ ಈ ಉಪಹತಿಯಾಗಿದೆ" ಎಂದನು (3-37).

"ಹಿಂದೆ, ಧರ್ಮವು ವೃಷಭಾಕಾರವನ್ನು ತಳೆಯಲು—ಅದರ ಮೇಲೆ ಶಿವ ಕುಳಿತು ಕರ್ಮವನ್ನು ತುಳಿಸಿದ (3-38). ಅದೇ ವೃಷಭನು ಈಗ ಧರ್ಮರೂಪನ್ನು ಬಿಟ್ಟು, ಅಮೃತಶೀಕರ ಶೈಲ ಮಧ್ಯದಲ್ಲಿರುವನು. ಅವನಲ್ಲಿಗೆ ಹೋಗಿ ಪ್ರಾರ್ಥಿಸಿ ಭೂಮಿಗೆ ಅವನನ್ನು ಕರೆತಂದರೆ—ಎಲ್ಲವೂ ಸರಿಹೋಗುವುದು" ಎಂದು ದೇವಲನು ಹೇಳುವನು ಭೂದೇವಿಗೆ (3=38-40).

ಅದೇ ರೀತಿ ಭೂದೇವಿ ವೃಷಭನಲ್ಲಿಗೆ ಬಂದು ಬೇಡಿ, ಪ್ರಸನ್ನನಾಗುವಂತೆ ಮಾಡಿ, ದೇವಲ ಹೇಳಿಕೊಟ್ಟ ವೃಷಭಾಂಕಮಾಲೆಯನ್ನು ಪಠಿಸುತ್ತ ವೃಷಭನನ್ನು ಭೂಮಿಗೆ ಬಿಜಯಂಗೈಸಿ ತರುವಳು (3-41). ಇಳಿದು ಬಂದ ವೃಷಭ ಅಲ್ಲಿಂದ ದಕ್ಷಿಣಾಭಿಮುಖವಾಗಿ ಹೊರಟ (3-44).

ಕೃಷ್ಣವೇಣಿ ಮಲಪ್ರಹರಿಗಳ ದೆಶೆಯೊಳಾನಂದದಿಂದಿದ್ದು—ದಕ್ಷಿಣಕ್ಕೆ ತಿರುಗಿ ಏಕಚಕ್ರ—ದ್ವಿಚಕ್ರಪುರ—ಪಗರಟಿಗೆ—ಬಲಿಗ್ರಾಮ ಎಂದು ಯುಗಭೇದದಿಂದ ನಾಮಭೇದವನ್ನು ಹೊಂದಿದ ಬಲಿಗ್ರಾಮ (=ಬಳ್ಳಿಗಾವಿ)ಕ್ಕೆ ಬಂದು ನೆಲೆನಿಂತನು (3-47).

ಇತ್ತ ದೇವತಾಧೀಶನಾದ ಇಂದ್ರನು ಬೃಹಸ್ಪತಿಯನ್ನು ಕರೆದು "ವೃಷಭನನ್ನು ಕೈಲಾಸಕ್ಕೆ ಕರೆತರಲು ಏನು ಉಪಾಯ"ವೆಂದು ಕೇಳಲು, "ದೇವಾಂಗ—ಶೂನ್ಯಕಾಯ—ಘಂಟಾಕರ್ಣರಾದವನಿಗೆ "ಮಹಾಕಾಯ"ನು ಕರುಣಿಸಿದರೆ ಆದೀತು ಎಂದನು (4-3).

ಇಂದ್ರನು ಮಹಾಕಾಯನನ್ನು ಆಹ್ವಾನಿಸಿದ. ಅವನು "ತ್ರಿಪುರದಹನದಲ್ಲಿ ಪಾತ್ರವಹಿಸಿದ ವೃಷಭನ ಮಹಾತ್ಮೆಯನ್ನು ಹೇಳಿದ—ಶಿವನು ಕುಳಿತ ರಥವು ಪಾತಾಳಪರಿಯಂತ ಇಳಿಯಲು ಅದನ್ನು ಉದ್ಧರಿಸಿದವನು ಈ ವೃಷಭ. ಅವನೊಡನೆ ಜಗಳವಾಡಿದವರುಂಟೇ" ಎಂದು ಎಚ್ಚರಿಕೆಯ ಬುದ್ಧಿಮಾತು ಹೇಳಿದ ಇಂದ್ರನಿಗೆ (4=4-5).

ಆಗ ಇಂದ್ರನು ಮಹಾಕಾಯನಿಗೆ ದೇವತೆಗಳೊಳಗೆ ಒಬ್ಬನಾದ ಅನಿಮಿಷನನ್ನು ತೋರಿಸಿ— ಈತನ ಚೇಷ್ಟೆಯಿಂದ ಈ ಪಾಡಾಯಿತು ಎಂದು ಸ್ಪಷ್ಟಪಡಿಸುವನು (4–6).

ಆಗ ಮಹಾಕಾಯನು, "ವೃಷಭನಿಗೆ ಅಮೃತಸಂಜೀವಿನಿಯನ್ನು ಕೊಡುವ ಪ್ರಾಣಲಿಂಗ ಉಂಟು. ಅದನ್ನು ಭಕ್ತಿಭಾವದಿಂದ ಪಡೆದರೆ ಆ ವೃಷಭನು ಕೈಲಾಸಕ್ಕೆ ಬರುವನು (4–8)— ಎಂದು ಹೇಳಿಕೊಟ್ಟ.

ಅದೇ ಪ್ರಕಾರ ಶಿವಾರ್ಚಕರ ಉದರದಲ್ಲಿ ಅನಿಮಿಷನು (4–9), ಪಟ್ಟದ ಕಲ್ಲಿನಲ್ಲಿ ಹುಟ್ಟಿದ (4–10).

ಆ ಪಟ್ಟದ ಕಲ್ಲಿನಲ್ಲಿ ಚಾಳುಕ್ಯರಾಳುತ್ತಿರುವಾಗ ಒಬ್ಬ ಧನಿಕವಣಿಜ "ತ್ರೈಲೋಕ್ಯ ಚೂಡೇಶ" ಎಂಬವನಿದ್ದ. ಅವನ ಹೆಂಡತಿ ಮಹರ್ಲೇಖೆ. ಅವರ ಹೊಟ್ಟೆಯಲ್ಲಿ "ಅನಿಮಿಷ"ನು "ವಸುದೀಪ್ಯ" ಎಂಬ ಹೆಸರಿನಿಂದ ಹುಟ್ಟಿದ (4–12).

ಅವನಿಗೆ ವಾಣಿ "ವಹಿ"ಯನ್ನು ಬರೆಯುವಳು. ಶಿವಜ್ಞಾನದೀಕ್ಷೆಯಾದ ಮೇಲೆ (4–19), ಅವನೊಂದು ದಿನ ಓಲಗಕೊಟ್ಟಿದ್ದಾಗ—ಚಾರರು ಬಂದು ಅಪೂರ್ವ ಅಶ್ವಗಳು ಮಾರಾಟಕ್ಕೆ ಬಂದಿರುವುದೆಂದೂ, ಅವುಗಳಲ್ಲಿ "ಕ್ರತುಜವ" ಎಂಬುದು ಶ್ರೇಷ್ಠತೆವೆಂದೂ ಹೇಳುವರು. (4–20). ಅದರ ಮೇಲೆ ಕುಳಿತು ದೇಶಕೋಶಗಳನ್ನು ನೋಡಿಬರಲೆಂದು ವಸುದೀಪ್ಯನು ಹೊರಟನು. ಮಾರ್ಗ ಮಧ್ಯ ಒಂದು ಅಡವಿಗೆ ಬಂದು ಸೇರಿದಲ್ಲಿ (42–1), ಬೇಡರು ಬೇಟೆಯಾಡುತ್ತ ಬರಲು ಕುದುರೆಯು ಬೆಚ್ಚಿ ವಿಗಡಿಸಿತು (4–22) ವಸುದೀಪ್ಯನನ್ನು ಕೆಳಕ್ಕೆ ಕೆಡವಿ ತಾನೆಲ್ಲಿಗೋ ಓಡಿ ಹೋಯಿತು.

ಅವನಿಗೆ ಬಾಯಾರಿಕೆ,ಆದರೆ ಲಿಂಗದರ್ಶನವಾದಲ್ಲದೆ ನೀರು ಕುಡಿಯದ ವ್ರತ ಹಿಡಿದಿದ್ದ.ಅವನಿಗೆ ಎಲ್ಲಿಯೂ ಲಿಂಗದರ್ಶನವಾಗಲಿಲ್ಲ. ಹಲುಬುತ್ತ ಬರುತ್ತಿರುವಾಗ ಬಲಿಗ್ರಾಮ (ಬಳ್ಳಿಗಾವಿ)ದ ಬಳಿಯಲ್ಲಿ ವೃಷಭನು ಕಾಣಿಸಿದ. ಬಳಿ ಬಂದು ನೋಡುತ್ತಾನೆ....ಅದರ ಮೇಲೆ ಲಿಂಗ ಮುದ್ರೆಯೂ ಇರಲಿಲ್ಲ—ನಿರಾಶೆಯಾಯಿತು (4–27). ಇನ್ನೇಕೆ ಈ ದೇಹದ ಮೇಲಣಾಶೆ ಎಂದು ಅವನು ಹತಾಶನಾದುದನ್ನು ಆ ವೃಷಭನು ಕಂಡು (4–30) ಅವನ ಲಿಂಗದರ್ಶನನೇಮವನ್ನು ಕೇಳಿ ಕರುಣಿಸಿ, ತನ್ನ "ಸಂಜೀವನ ಅಮೃತಾಂಗದ ಆತ್ಮಜ್ಯೋತಿನಿಷ್ಠೆಯ ನಿಧಾನ ಜಿಹ್ವಾಗ್ರದಲ್ಲಿ ಲಿಂಗವನ್ನು ನಿಲಿಸಿ" ವಸುದೀಪ್ಯನಿಗೆ ವೃಷಭನು ತೋರಿಸಿದನು (4–31). ಆಗ ವಸುದೀಪ್ಯನು ಮುಖವರಳಿ ತನ್ನ ಬೊಗಸೆಗೈಯನ್ನು ಚಾಚಿ ವೃಷಭನ ಮುಂದೆ ಒಡ್ಡಿ "ನಾನು ಲಿಂಗಪ್ರಾಣಿ, ದರ್ಶನವಾಯಿತು, ನೀನು ನನ್ನನ್ನು ರಕ್ಷಿಸುವುದಾದರೆ ನನಗೆ ಆ ಲಿಂಗಸ್ಪರ್ಶನ ಒದಗುವಂತೆ ಕರುಣಿಸು" ಎಂದನು. ಕೃಪಾಮೂರ್ತಿಯಾದ ವೃಷಭನು ಅವನ ಕೈಯಲ್ಲಿ ಆ ಅಮೃತಲಿಂಗವನ್ನು ನಿಕ್ಷೇಪಿಸಿದನು (4–32).

ಆ ಲಿಂಗದರ್ಶನಲೋಲುಪ್ತನಾದ ವಸುದೀಪ್ಯನಿಗೆ ಜಾತಿಸ್ಮರಣೆಯಾಗಿ, ಲಿಂಗಪ್ರಾಣಿಯಾಗಿ, ಅದನ್ನೇ ನಿಮಿಷಾರ್ಧವೂ ಬಿಡದೆ ನಟ್ಟು ನೋಡುತ್ತಿದ್ದುದರಿಂದ ಅವನೆ "ಅನಿಮಿಷ"ನೆಂದು ಪ್ರಖ್ಯಾತನಾದ. ಸಮಾಧಿ ಸ್ಥಿತಿಯಲ್ಲಿದ್ದ ಅವನನ್ನು ಅವನ ಆಪ್ತರು ಕಂಡು "ಶಿಲಾತಲಂಗೊಳಿಸಿ, ಸೂಕ್ಷ್ಮಾಲಯಂಗಟ್ಟಿ ಮಣ್ಮುಚ್ಚಿದರು". ಅನಿಮಿಷನು ಅಲ್ಲಿಯೇ ಧ್ಯಾನಸಮಾಧಿಯಲ್ಲಿ ತನ್ಮಯನಾಗಿದ್ದನು (4–33).

ಅಂತರ್ಧನವನ್ನು ಅಸ್ಮಕ್ಷೇತ್ರದಲ್ಲಿ ನಿಕ್ಷೇಪಿಸಿ, ಅಂತದಱಿ ಹೊಲಬುದಪ್ಪಿರ್ದ ಭಾವದ ಸೂತ್ರದೆಂತ್ರದೆಡೆಯಱಿಯದೆ ಆರ್ತದೊಳು ಚೂಡಾಮಣಿಯನಱಿಸಿ ಬಪ್ಪಾತ್ಮರೂಪದಂತು ಲಿಂಗಪ್ರಾಣಿಯಾದ ಬಸವ ಬರೆ—ಶಿವನು ಕೂರ್ತು ಅದಂ ತಿಳಿದುಕೊಳ್ಳ [=ಕೊಳ್ಳು]ದಂಜನಸಿದ್ಧಿ ಜಂಗಮ—ಮುಖಾಂತರವೆನಲು—ವೃಷಭ ಬಸವನಹ ತಾತ್ಪರ್ಯಕೊಗೆದ ಕಥನಾರ್ಥ ವಚನ :— [ಶಿ.ಪ್ರ.ಮ.ಶೂ. ವಚನ=] ಚೆನ್ನಬಸವದೇವರ ಸಂಪಾದನೆಯ ವಚನ No. 242, 900, 910.

ಪ್ರೌಢದೇವರಾಯನ ಕಾಲದ ಮಹಲಿಂಗನು ಸಂಕಲನ ಮಾಡಿದ ಪ್ರಭುದೇವರ ಷಟ್ಸ್ಥಲದ ವಚನಗಳನ್ನು ತನ್ನ ಶೂನ್ಯಸಂಪಾದನೆಗೆ ಯಥೇಚ್ಛವಾಗಿ ಬಳಸಿಕೊಂಡ, ಮತ್ತು ಕ್ರಿ. ಶ. 1513 ರಲ್ಲಿ ಭಾವಚಿಂತಾರತ್ನವನ್ನು ಬರೆದ ಗುಬ್ಬಿಯ ಮಲ್ಲಣಾರ್ಯ II ನಿಂದ ತನ್ನ ಗದ್ಯಗ್ರಂಥವಾದ "ವೀರಶೈವಾಮೃತ"ವನ್ನು (ವೀರಶೈವಾಮೃತಮಹಾ ಪುರಾಣವಾಗಿ) ಪದ್ಯಾನುವಾದವಾಗಲೆಂದು ಇಚ್ಛಿಸಿದ ಹಲಗೆಯಾರ್ಯನೂ, ಒಂದು ರೀತಿಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ಶಿವಗಣಪ್ರಸಾದಿಯ ಪ್ರಭುದೇವರ ಶೂನ್ಯ

---

"ಸೋಮಶೇಖರನ ಕರುಣದ ಕಳಾಪ್ರಕೃತಿ ತಾ ನೇಮಮಂ ಕೈಕೊಂಡು ಒಂದೊಂದು ಬುದ್ಧಿ ಯುಪಸಾಮುದಿಂದ ಎನ್ನ ಲಿಂಗವನೊಯ್ದನು" ಎಂದುಕೊಳ್ಳುತ್ತ ವೃಷಭನು ಕೈಲಾಸಕ್ಕೆ ಬಂದ (4-35).

ಕೈಲಾಸದ ಬಾಗಿಲಲ್ಲಿ ಲಿಂಗವಿಲ್ಲದೆ [ಬರುಬನಾಗಿ] ಬಂದು ನಿಂತಿದ್ದ ವೃಷಭನನ್ನು ಮಹ ಕಾಳ ರುದ್ರ ಎಂಬ ದ್ವಾರಪಾಲಕ ವಿಚಾರಿಸಿದಾಗ, "ನಾನು ಮರ್ತ್ಯಕ್ಕೆ ಕಾರಣಾಂತರ ಹೋಗಿ ಬಾರದುದನ್ನು ಕಂಡು, ಶಿವನೇ ಬೇರೊಂದು ರೂಪಾಗಿ ಅಲ್ಲಿಗೆ ಬಂದು ನನ್ನ ಲಿಂಗವನ್ನು ಕೊಂಡೊ ಯ್ಯಲು, ಒಡನೆಯೇ ನಾನೂ ಬಂದೆ" ಎಂದನು (4-36). ಲಿಂಗವಿರಹಿತನಾದ ಅವನನ್ನು ದ್ವಾರ ಪಾಲಕರು ನೋಡಲೊಲ್ಲದೆ ತಮ್ಮ ಅಂಗರಕ್ಷಕರಾದ ಸಿಂಗಕೇಶ—ಪ್ರವಿಡರೆಂಬವರಿಗೆ ನೇಮಿಸಿ ಮುಖತಿರುವಿದರು. ಆ ಅಂಗರಕ್ಷಕರು ಅವನನ್ನು ತಡೆದು ಭಂಗಿಸಿದರು—ನೀನು ಪ್ರಾಣಲಿಂಗವನ್ನು ನೀಗಿದ ಮಹಾಪಾತಕಿ ಪರಶಿವನ ಮಹಾಮನೆಯ ಬಾಗಿಲಿಗೆ ಬರದಿರು" ಎಂದು (4-38). ಇದನ್ನು ಶಿವನು ಕೇವಲಜ್ಞಾನದಿಂದ ಅರಿತು ಓಡಿಬಂದು "ಏವುದೈ ನಿಮಗೆ ಸಂವಾದ? ವೃಷ ಭಂಗೇಕೆ ಲಿಂಗ? ತಾ ಲಿಂಗ" ಎಂದು ಮಧ್ಯೆ ಪ್ರವೇಶಿಸಿದ (4-39).

ಆದರೆ ದ್ವಾರಪಾಲಕರಾಗಲಿ ಅಂಗರಕ್ಷಕರಾಗಲಿ ಶಿವನ ಮಾತನ್ನೂ ಮನ್ನಿಸದೆ "ಲಿಂಗಬಾಹಿರ ನನ್ನು ಈ ತೆಱದೊಳಗೆ ಪುಗಲೀಯೆವು" ಎಂದು ಹಠ ಹಿಡಿಯುವರು. ಶಿವನು,"ನೀನಿಳೆಯೊಳವತರಿಸಿ ನಿಂದೆಯ ನೀಗಿ ಬಾ ಹೋಗು" ಎಂದು ಭೂಮಿಗೆ ವೃಷಭನನ್ನು ಕಳಿಸಿಕೊಡುವನು (4-42).

"ಮರ್ತ್ಯದೊಳು ನೀನಿರ್ದ ನೆಲೆಯೆ ಕೈಲಾಸವಹುದು ಈ ಪ್ರಮಥರೀ ರುದ್ರಲೋಕ ಸಹಿತಾನೆ ಬಹೆನು. ಅಲಸದಂತೀಗಲೇಳ್ನೂಱೆಪ್ಪತ್ತಮರಗಣ ಕುಲಸಹಿತ ನಡೆ" ಎನ್ನುತ್ತ ಅವನಿಗೆ ಪಂಚ ಪರುಷವನ್ನು ಪ್ರದಾನ ಮಾಡುವನು (4-46).

ಆಗ ವೃಷಭನು ಶಿವನನ್ನು ಕುರಿತು "ಆದಡಾ ಮಹಾಘನಲಿಂಗ ಬಂದೆನ್ನ ಕೈಸಾರ್ವುಪಾಯ ವೇನೀ ಭವದ ಬಂಧನಿವೃತ್ತಿ ಎಂತಹುದದ ನಿರೂಪಿಸು ಎನ್ನಲು ಶಿವನ ಉತ್ತರ: "ನಿರ್ದೇಹನೊರ್ವ ಬಂದು ನಿಂದುದೇ ಕುಱುಹಾತನೇ ನಾನು, ನಿನ್ನಿಂದ ಹಿಂದ್ವೋದ ತಾರಕಬ್ರಹ್ಮರೂಪದ ಲಿಂಗ ಬಂದಪುದು, ಬಳಿಕವೀ ಲೋಕವು" ಎಂದು (4-47).

[ಇಲ್ಲಿಂದ ಮುಂದೆ ನಿರ್ಮಾಯನ ಕಥೆ ಬರುವುದು. ಶಿ. ತ. ಚಿಂ. ಯಲ್ಲಿ (29=34-41).]

ಹಿಂದೆ ಲೀಲಾಪ್ರಕೃತಿಯಿಂದ ಗಣೇಶಾವತಾರ ಬಂದರೆ ನಾನು ನೀನೆಯಾಗಿರೆನೆ? ಏಕೆ ಈ ವೃಥಾ ಸಂದೇಹ? ಅಭವಗೆ ಭವಮುಂಟೆ? ನೀನಾನೆಂಬ ಮಱೆಯಲಿಹ ಮಾತಿದೇಕೆ? (4-48) ಎಂದು ಶಿವನು ಸಂತೈಸುವನು.

(ಮಾದೇವಸ್ವರೂಪಂಗೆ ಕುಚಿತಕೋಱತೆಯ ಕುಂದು ನಿಂದೆವೊರಿಸಲ್ಕೆ ಜನನ ವೈಕಾರವಂ ತೊಡರ್ಚಿದ ತೊಡಕಿದೇನು?" ಎಂಬ ಆಕ್ಷೇಪಣೆಯನ್ನು ಸಿಂಗಿರಾಜನು "ಶಿವನ ಲೀಲಾರೂಪು ಜನಿತಜಡನೇ" ಎಂದು ತಳ್ಳಿಹಾಕುವನು (4-49).

ಆದರೆ ಗುಮ್ಮಳಾಪುರದ ಸಿದ್ಧಲಿಂಗನು ಬಸವಾದಿ ಪ್ರಮಥರು ಜಗದ್ಧಿತಾರ್ಥವಾಗಿ ಅವತರಿಸಿ ದವರೇ ಹೊರತು ಶಾಪಹತರಾಗಿ ಜನಿಸಿದವರಲ್ಲವೆನ್ನುವನು. ಅದನ್ನು ಸಿದ್ಧವೀರನು ಅನು ಮೋದಿಸಿರುವನು.)

ಸಂಪಾದನೆಯನ್ನು ಪದ್ಯರೂಪದ ಪ್ರಭುಲಿಂಗಲೀಲೆಗೆ ತಿರುಗಿಸಿದ ಚಾಮರಸನೂ* ಇದ್ದ ಹದಿನೈದನೇ ಶತಮಾನವು ಮೂರನೆಯ ಘಟ್ಟ. ಈ ಅವಧಿಯಲ್ಲಿ ಮೂಲ ಶೂನ್ಯ ಸಂಪಾದನೆ ಮೊದಲ ಪರಿಷ್ಕರಣಕ್ಕೆ ಒಳಗಾಯಿತು; ಮೇಲಾಗಿ ಅದು ಷಟ್ಪದಿ (ಪ್ರಭು ಲಿಂಗಲೀಲೆಯ) ರೂಪವನ್ನು ತಳೆದು ಪಾಡುಗಬ್ಬವಾಗಿ ಭಿನ್ನ ಭಿನ್ನ ರುಚಿಯವರಿಗೆ ಒಗ್ಗಿ ಬಂದಿತು.

ಕೊನೆಯ ಘಟ್ಟವಾದ ಹದಿನಾರನೆಯ ಶತಮಾನಕ್ಕೆ ಸೇರಿದವರೇ ತೋಂಟದ ಸಿದ್ಧ ಲಿಂಗನ ಶಿಷ್ಯರಾದ ಗುಮ್ಮಳಾಪುರದ ಸಿದ್ಧಲಿಂಗ ಮತ್ತು ಗೂಳೂರು ಸಿದ್ಧವೀರ. ಈ ಅವಧಿಯಲ್ಲಿ ಇವರಿಬ್ಬರೂ ಸಿದ್ಧರಾಮನ ದೀಕ್ಷೆಯ ಅಂಶವನ್ನು ಮಾತ್ರ ಹಲಗೆ ಯಾರ್ಯನಲ್ಲಿ ಒಪ್ಪಿಕೊಂಡು ಮಿಕ್ಕಂತೆ ಹಲವಾರು ಅಂಶಗಳಲ್ಲಿ ಭಿನ್ನಾಭಿಪ್ರಾಯವನ್ನು ಹೊಂದಿದ್ದು ಶಿವಗಣಪ್ರಸಾದಿಯ ಮೂಲ ಶೂನ್ಯಸಂಪಾದನೆಯನ್ನು ವ್ಯಗ್ರತೆಯಿಂದ ತಿದ್ದಿದರು.

ಕಡೆಯ ಎರಡು ಘಟ್ಟಗಳಲ್ಲಿ ಮೂಲಶೂನ್ಯಸಂಪಾದನೆಯೊಳಕ್ಕೆ ಅಧಿಕ ಸಂಖ್ಯೆಯಲ್ಲಿ ಸೇರ್ಪಡೆಯಾದ ಶಿವಶರಣರ ವಚನಗಳ ಮೂಲಕ ವೀರಶೈವಧರ್ಮದ ಪ್ರಕ್ರಿಯೆಗಳು

---

* ಇವನನ್ನು ಶಿವಗಣಪ್ರಸಾದಿಗಿಂತ ಪೂರ್ವದವನೆನ್ನಲು ಯಾವ ಆಧಾರವೂ ಇಲ್ಲ. ಈ ಚಾಮರಸನು ಪ್ರೌಢದೇವರಾಯನ (1416–1446) ಸಮಕಾಲೀನನೆಂದೂ ಅಂದಿನ ನೂರೊಂದು ವಿರಕ್ತರಲ್ಲಿ ಒಬ್ಬನೆಂದೂ ಹೇಳಿರುವ ತೀರ ಪೌರಾಣಿಕ ಕವಿಯಾದ ಅದ್ರೀಶ (ಸು. 1580)ನ ಹೇಳಿಕೆಯನ್ನು ಅಲ್ಲಗಳೆಯಲು ಸಾಕ್ಷ್ಯಾಧಾರಗಳೇನಾದರೂ ದೊರೆತುದಾದರೆ ಶೂನ್ಯಸಂಪಾದನೆಯ (ಮತ್ತು ಅದನ್ನೇ ಹೋಲುವ ಪ್ರಭುಲಿಂಗಲೀಲೆಯ) ಕಥೆಯ ಪರಿವರ್ತನೆಯ ಸೂತ್ರದ ಆಧಾರ ದಿಂದ ಚಾಮರಸನನ್ನು ಹಲಗೆಯಾರ್ಯನು ಗತಿಸಿಹೋದ ಮೇಲಣ ಮತ್ತು ಗುಮ್ಮಳಾಪುರದ ಸಿದ್ಧಲಿಂಗನಿಗಿಂತ ಹಿಂದಣ ಕಾಲಾವಧಿಯಲ್ಲಿ ನಿಲ್ಲಿಸಬಹುದು. ಇದಕ್ಕೆ ಇಂಬುಕೊಡುವ ಹಲವು ಅಂಶಗಳು ಪ್ರಭುಲಿಂಗಲೀಲೆಯ ಕಥೆಯ ಶಯ್ಯೆಯಲ್ಲಿ ಹುದುಗಿವೆ:

(1) ಪ್ರಭುದೇವ—ಬಸವಣ್ಣ—ಅಕ್ಕಮಹಾದೇವಿ ಮುಂತಾದವರು ಶಾಪಹತರಾಗಿ ಭೂಮಿಗೆ ಅವತರಿಸಿದವರಲ್ಲ.

(2) ಪ್ರಭುದೇವನಿಗಾಗಲಿ, ಅಕ್ಕಮಹಾದೇವಿಗಾಗಲಿ ಮದುವೆಯಾಗಿರಲಿಲ್ಲ.

(3) ಗೊಗ್ಗಯ್ಯ ಮತ್ತು ಗೋರಕ್ಷರ ಪ್ರಸಂಗಗಳನ್ನು ಬಿಟ್ಟು ನುಲಿಯ ಚಂದಯ್ಯ ಮುಂತಾದ ಯಾವ ಅಧಿಕ ಸಂಪಾದನೆಗಳೂ ಇಲ್ಲ. (ಗುಮ್ಮಳಾಪುರದ ಸಿದ್ಧಲಿಂಗನು ಪ್ರಭುಲಿಂಗಲೀಲೆಯ ಅನುಕರಣೆಯಿಂದಲೇ ಗೋರಕ್ಷಪ್ರಸಂಗವನ್ನು ಒಂದು ಸಂಪಾದನೆಯಾಗಿ ಬೆಳೆಸಿ ತನ್ನ ಪರಿಷ್ಕರಣ ದಲ್ಲಿ ಸೇರಿಸಿದ್ದಾನೆ. ಮತ್ತು ಚಾಮರಸನು ಹಲಗೆಯಾರ್ಯನ ಪ್ರಭಾವಕ್ಕೆ ಒಳಗಾಗಿದ್ದಾನೆ: ಮರುಳುಶಂಕರದೇವರ ಪ್ರಸಂಗದಲ್ಲಿ. (ಹೋಲಿಸಿ: ಹ–900 ಮತ್ತು ಪ್ರ. ಲೀ. 15–6. ಆದರೆ ಚಾಮರಸನು ಶಿವಗಣಪ್ರಸಾದಿ–ಹಲಗೆಯಾರ್ಯರಿಂದ ಭಿನ್ನವಾಗಿ ಹೋದ ಮೊದಲಿಗನೆನ್ನು ವುದನ್ನು ಮರೆಯಬಾರದು. ಈ ಚಾಮರಸನ ಪ್ರಭಾವ ಹಲವಂಶಗಳಲ್ಲಿ ಸಿದ್ಧಲಿಂಗ ಮತ್ತು ಸಿದ್ಧ ವೀರರ ಮೇಲೆ ಬಿದ್ದಿದೆ.)

(4) ಮೊದಲೆರಡು ಶೂನ್ಯಸಂಪಾದನೆಗಳಲ್ಲಿ ಕಾಣದ ಗೊಗ್ಗಯ್ಯನ ಪ್ರಸಂಗ ಇಲ್ಲಿದ್ದು ಅದನ್ನು ಮುಂದಿನ ಶೂನ್ಯಸಂಪಾದನಕಾರರು ಅಳವಡಿಸಿಕೊಂಡಿರುವರು.

(5) ಕೊನೆಯ ಎರಡು ಶೂನ್ಯಸಂಪಾದನೆಗಳಲ್ಲಿ ಮಾತ್ರ ಕಂಡು ಬರುವ ಬಿಜ್ಜಳನ ಕೊಲೆಗೆ ಕಾರಣವೆನ್ನಲಾದ ಹರಳಯ್ಯ ಮಧುವಯ್ಯರ ಘಟನೆ ಇಲ್ಲಿಲ್ಲ.

ವಿಶದಗೊಂಡವು. ಜೊತೆಗೆ ವೀರಶೈವದ ಜೀವರತ್ನವಾದ ಕಾಯಕ ತತ್ವವನ್ನು ಪ್ರತಿಪಾದಿಸುವ ಹೊಸ ಹೊಸ ಸಂಪಾದನೆಗಳು ರಚಿತವಾಗಿ ಸೇರ್ಪಡೆಯಾದವು.

ಈ ದೃಷ್ಟಿಯಿಂದ ಮೇಲೆ ಪ್ರಸ್ತಾಪಿಸಿರುವ ಗ್ರಂಥಕರ್ತೃಗಳನ್ನು ಕಾಲಕ್ರಮದಲ್ಲಿ ಈ ಕೆಳಗಿನಂತೆ ನಿಲ್ಲಿಸಬಹುದು:

(1) ಸಿಂಗಿರಾಜ (ಬಸವ ಚಾರಿತ್ರ್ಯ)
(2) ಶಿವಗಣಪ್ರಸಾದಿ ಮಹಾದೇವಯ್ಯ (ಪ್ರಥಮ ಶೂನ್ಯಸಂಪಾದನೆ)
(3) (ಅ) ಲಕ್ಕಣ್ಣದಂಡೇಶ (ಶಿವತತ್ವ ಚಿಂತಾಮಣಿ)
(ಆ) ಮಹಾಲಿಂಗ (ವಚನ ಸಂಕಲನ)
(ಇ) ಹಲಗೆಯಾರ್ಯ (ಎರಡನೆಯ ಶೂನ್ಯಸಂಪಾದನೆ)
(4) ಚಾಮರಸ (ಪ್ರಭುಲಿಂಗಲೀಲೆ)
(5) ಗುಮ್ಮಳಾಪುರದ ಸಿದ್ಧಲಿಂಗ (ಮೂರನೇ ಶೂನ್ಯಸಂಪಾದನೆ)
(6) ಗೂಳೂರು ಸಿದ್ಧವೀರ (ನಾಲ್ಕನೇ ಶೂನ್ಯಸಂಪಾದನೆ)

## ಕೃತಿ-ಕೃತಿಪತಿ-ಕೃತಿಕರ್ತ

ಹನ್ನೆರಡನೇ ಶತಮಾನದ ಪ್ರಾಚೀನ ಕರ್ಣಾಟಕದ ಜನತೆಯ ಬಹುಪಾಲು ಆಳರಸರ ಜಗ್ಗುಲಗ್ಗೆಯಿಂದಾಗಿ ಪರಿಣಮಿಸಿದ ಬಡತನಕ್ಕೆ ಅಂಟಿ ಬಂದ ಮಿತಿಮೀರಿದ ದುಡಿಮೆಯಿಂದಾಗಿ, ಆ ದುಡಿಮೆಗೇ ಅಂಟಿ ಬಂದ ಜಾತಿಸೂತಕದಿಂದಾಗಿ— ವಿಶ್ರಾಂತಿಯಿಲ್ಲದೆ, ಮಾನಮರ್ಯಾದೆ ಇಲ್ಲದೆ, ಕಡೆಗೆ ಗೇಣುಹೊಟ್ಟೆಗೆ ಹಿಡಿ ಅನ್ನವೂ ಇಲ್ಲದೆ ಭೂಮಿಯ ಮೇಲೆ ಮನುಷ್ಯನಾಗಿ ಹುಟ್ಟುವುದೊಂದು ಶಾಪವೆಂದು ತವಕತಲ್ಲಣಕ್ಕೆ ಒಳಗಾಗಿದ್ದರು.

ಆಗ ಕಲ್ಯಾಣದಲ್ಲಿ ಮೂಲಮೂರ್ತಿಯಾಗಿ ಬಸವಣ್ಣನೂ, ಇಡೀ ಕರ್ಣಾಟಕದಲ್ಲಿ ಜಂಗಮಮೂರ್ತಿಯಾಗಿ ಪ್ರಭುದೇವನೂ ನಡೆಸಿದೊಂದು ದೊಡ್ಡ ಚಳುವಳಿಯಿಂದ ಜನದಲ್ಲಿ ಜಾಗೃತಿ, ಭರವಸೆ, ಎದೆಗಾರಿಕೆ, ಕರ್ಮಕೌಶಲ, ತ್ಯಾಗಶೀಲ—ಮುಖ್ಯವಾಗಿ ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಪಕ್ಕ ಬಿಚ್ಚುವಂತಾಯಿತು.

ಅವರ ದಿಗ್ದರ್ಶನದಲ್ಲಿ ಸಾಧನೆ ಮಾಡಿದ ಜನ ಕೈತುಂಬ ಕೆಲಸಮಾಡಿ, ಹೊಟ್ಟೆ ತುಂಬ ಊಟಮಾಡಿ, ಕಣ್ತುಂಬ ನಿದ್ರೆ ಮಾಡಿದರು. ಇಂತಹ ಸಮತೋಲನದ ಜೀವನವನ್ನು — ಅದು ಪಾರ್ಥಿವೇ ಆಗಲಿ — ಅವರ ತಾತ ಮುತ್ತಾತರ ಏಳೇಳು ತಲೆಮಾರಿನಲ್ಲಿ ಯಾರೂ ನಡೆಸಿರಲಿಲ್ಲ.

ಎಂಬುದಿಷ್ಟೇ ಯಾವ ಜನಸಮೂಹಕ್ಕಾದರೂ ಘನತೆಯನ್ನು ಸಂಪಾದಿಸಿಕೊಡುವುದಾದರೂ, ಆ ಜನ ತಮ್ಮೊಂದು ದಿವ್ಯ ಅತೃಪ್ತಿಯಿಂದ ತಮ್ಮ ಜೀವ ವಜ್ರಕ್ಕೆ ಆಧ್ಯಾತ್ಮಿಕ ಸಾಣೆಯಿಟ್ಟು, ಹಲವಾರು ಮುಖಕೊಟ್ಟು, ಹೊರಚಿಮ್ಮಿದ ಲೌಕಿಕಕಾಂತಿಯೇ ಅಲೌಕಿಕವೆಂಬಂತೆ ಪಜ್ವಳಿಸುವ ಹಾಗೆ ಮಾಡಿದರು.

ಮೇಲಾಗಿ ಅಂದಿನ ಸಾಹಿತ್ಯ-ನೃತ್ಯ-ಸಂಗೀತ ಮುಂತಾದ ಲಲಿತಕಲೆಯ ಒಳಪ್ರಕಾರಗಳಲ್ಲಿ—ಜನಸಾಮಾನ್ಯದ ರುಚಿ ಅಭಿರುಚಿಗಳೂ, ಅವರ ಜೀವನದ ಶಯ್ಯೆವಿನ್ಯಾಸಗಳೂ, ಅವರ ಅನುಭಾವದ ಧ್ವನಿಧೋರಣೆಗಳೂ ಹಾಳತವಾಗಿ ಮೇಳೈಸಿಬಂದವು. ಈ ಎಲ್ಲ ಪರಿಪಾಕದಲ್ಲಿ ಪಕ್ವವಾಗಿ ಬಂದ ಶರಣಸಾಹಿತ್ಯವು ಶಿಷ್ಟಸಾಹಿತ್ಯದಂತೆ ಕಡುಪೆಡಸೂ ಆಗದೆ, ಜನಪದ ಸಾಹಿತ್ಯದಂತೆ ಅತಿ ನೀರು ಜೋರೂ ಆಗದೆ ತನ್ನದೇ ಆದ ಒಂದು ಸಮರಸವನ್ನು ಮೈಗೂಡಿಸಿಕೊಂಡಿತು.

ಅದು ಸರಳತೆಯಿಂದ ಮುಗ್ಧರನ್ನೂ ಸೂಕ್ಷ್ಮತೆಯಿಂದ ವಿದಗ್ಧರನ್ನೂ ತನ್ನತ್ತ ಆಕರ್ಷಿಸಿತು. ಅದರಲ್ಲಿ ಅಡಗಿದ್ದ ಸಂದೇಶ ಮಾಧುರ್ಯವಂತೂ ಇಬ್ಬರಿಗೂ ಅನ್ವಯವಾಗುವುದಿತ್ತು, ಹಾಗೂ ಗನ್ಯವಾಗಿತ್ತು.

ಈ ಪರಿಣಾಮಕ್ಕಾಗಿ ಕಲ್ಯಾಣವನ್ನು ಕೇಂದ್ರಮಾಡಿಕೊಂಡು ಮನಸ್ಸು ಮೈಯಿಮಾತಿಂದ ದುಡಿದ ಬಸವಣ್ಣ-ಚೆನ್ನಬಸವಣ್ಣ-ನಾಗಾಯಕ್ಕ, ಸೊನ್ನಲಿಗೆಯಿಂದ ದುಡಿದ ಸಿದ್ಧರಾಮ, ಉಡುತಡಿಯಿಂದ ದುಡಿದ ಅಕ್ಕಮಹಾದೇವಿ, ಎಲ್ಲೆಡೆಯಿಂದ ದುಡಿದ ಪ್ರಭುದೇವ ಇವರೆಲ್ಲರಿಗೆ ಬೆಂಬಲವಾಗಿದ್ದ ಹಡಪದಪ್ಪಣ್ಣ, ಮುಕ್ತಾಯಕ್ಕ, ಸೊಡ್ಡಳಬಾಚರಸ, ಕಿನ್ನರ ಬೊಮ್ಮಣ್ಣ, ಮಡಿವಾಳ ಮಾಚಯ್ಯ, ಮೋಳಿಗೆ ಮಾರಯ್ಯ, ಮೇದರ ಕೇತಯ್ಯ, ಏಕಾಂತದ ರಾಮಯ್ಯ, ಘಟ್ಟವಾಳ ಮುದ್ದಣ್ಣ, (ಕಡೆಗೆ ಆ ಕಾಲದವರಲ್ಲದ ಪೂರ್ವಾಚಾರ್ಯರಾದ ಕಕ್ಕಯ್ಯ, ಶಂಕರದಾಸಿಮಯ್ಯ) ಇವರೆಲ್ಲರ ಜೀವನ ಸೂತ್ರಗಳನ್ನು ಹಾಸುಹೊಕ್ಕಾಗಿ ಬೀಸಿ, ಅವರ ವಚನ ವಾಕ್ಯಗಳನ್ನು ಬಣ್ಣ ಬಣ್ಣವಾಗಿ ಪೂಸಿ, ಶೂನ್ಯಸಂಪಾದನೆಯೆಂಬ ಅದ್ಭುತ ದಿವ್ಯಾಂಬರವನ್ನು ನೇದಿರುವನು ಶಿವಗಣಪ್ರಸಾದಿ ಮಹಾದೇವಯ್ಯ.

ಅವನ ಈ ಶೂನ್ಯಸಂಪಾದನೆ ವೀರಶೈವ ಧರ್ಮದ ಮಹಾಪ್ರಸ್ಥಾನ. ಅದೇ ನಮ್ಮ ಪರಿಷ್ಕೃತ ಬೈಬಲ್ಲು ಮತ್ತು ಖುರಾನು.

ಇಲ್ಲಿ ವೀರಶೈವದ ಎರಡು ಶ್ವಾಸಕೋಶಗಳಂತಿರುವ ಪ್ರಭುದೇವನ ಮತ್ತು ಬಸವಣ್ಣನ ಹೋರಾಟದ ಬದುಕಿನ ಬಳ್ಳಿಗಳು ಸಮನ್ವಯದ ಹಂದರದ ಮೇಲೆ ಹಬ್ಬಿವೆಯೆನ್ನಬಹುದು.

ಈ ಶೂನ್ಯಸಂಪಾದನೆಯು ಮುಖ್ಯವಾಗಿ ಪ್ರಭುದೇವರ ಶೂನ್ಯಸಂಪಾದನೆಯೇ ಆದರೂ ಬಸವಣ್ಣನ ಧಾರ್ಮಿಕಜೀವನ ಅದರೊಳಗೇ ಓತಪ್ರೋತವಾಗಿದೆ.* ಶೂನ್ಯ

* ಶಿವಗಣಪ್ರಸಾದಿ ಮಹಾದೇವಯ್ಯನ ಪ್ರಭುದೇವರ ಶೂನ್ಯಸಂಪಾದನೆಯಲ್ಲಿ ಜರಿಯಾಗಿ ಬಂದಿರುವ ಬಸವಣ್ಣನ ಜೀವನ ವೃತ್ತಾಂತ ಈ ಮುಂದಿನಂತಿದೆ:

ಸಿಂಗಿರಾಜ ಪುರಾಣದಲ್ಲಿರುವಂತೆ ವೃಷಭ-ಅನಿಮಿಷ ಪ್ರಸಂಗದಿಂದ—ಲಿಂಗವಿರಹಿತನಾಗಿ ಕೈಲಾಸಕ್ಕೆ ಬಂದ ವೃಷಭನನ್ನು ಶಿವನು ಕಂಡು ಕೋಪಿಸಿಕೊಂಡು "ಅನಿಮಿಷನಿಗೆ ಕೊಟ್ಟ ಲಿಂಗವನ್ನು ಮರಳಿ ಕೊಂಡು ಬಾ" ಎಂದು ಆಗ್ರಹದಿಂದ ಭೂಲೋಕಕ್ಕೆ ಕಳಿಸಿದನು. ಹೀಗೆ ಶಿವನಿಗೆ ವೃಷಭನನ್ನು ಕಳಿಸುವಲ್ಲಿ ಅವನಿಂದ ಮರ್ತ್ಯದಲ್ಲಿ ಶಿವಭಕ್ತಿ ಪ್ರಚಾರವಾಗಲಿ ಮತ್ತು ಶೈವಮತ ಪ್ರಬಲವಾಗಲಿ ಎಂಬ ಉದ್ದೇಶವೂ ಇತ್ತು. ಏಳುನೂರೆಪ್ಪತ್ತು ಅಮರಗಣಗಳೂ ವೃಷಭನ ಜೊತೆಗೂಡಿದರು.

ವೃಷಭನು ಭೂಲೋಕಕ್ಕೆ ಇಳಿದು, ಶೈವಾಗಮಾಚಾರ್ಯನಾದ ಮಂಡಗೆಯ ಮಾದಿರಾಜನ ಹೆಂಡತಿ ಮಾದಾಂಬಿಕೆಯ ಹೊಟ್ಟೆಯಲ್ಲಿ ಹುಟ್ಟಿ ಬಂದ. ಅವನಿಗೆ "ಬಸವಣ್ಣ" ಎಂದು ನಾಮಕರಣವಾಯಿತು. ಆ ಬಸವಣ್ಣನು ಕೂಡಲಸಂಗಮದೇವರಿಂದ ಉಪದೇಶವನ್ನು ಪಡೆದು ಸರ್ವಾಚಾರ ಸಂಪನ್ನನಾದ.

ಇತ್ತ ಬಸವಣ್ಣನ ಭಕ್ತಿ-ಜ್ಞಾನ-ವೈರಾಗ್ಯವನ್ನು ಒರೆಗೆ ಹಚ್ಚಿ ಪ್ರಕಾಶಕ್ಕೆ ತರಲೆಂದು ಕಲ್ಯಾಣದಲ್ಲಿ ಪರವಾದಿ ಬಿಜ್ಜಳ, ಅವನಿಗೆ ನೆರವಾಗಿ ಮಂಚಣ್ಣ ಮುಂತಾದ ಮುವ್ವತ್ತಾರು ಜನ ಕೊಂಡೆಯರು, ಇವರಿಂದ ಸಜ್ಜಾದ ಪರೀಕ್ಷಾಕ್ಷೇತ್ರ ಸಿದ್ಧವಾಯಿತು ಶಿವನ ಲೀಲೆಯಿಂದ.

ಅಂಗದ ಮೇಲೆ ಲಿಂಗ ಉಳ್ಳವರೆಲ್ಲರೂ ಸಂಗಮನಾಥ ಸ್ವರೂಪಿಗಳು— ಎಂಬುದೇ ಬಸವಣ್ಣನ ನಿಲವು. ಲಿಂಗ-ಜಂಗಮ ಯಾವುದೂ ಇಲ್ಲವೆಂಬುದೇ ಬಿಜ್ಜಳನ ವಾದ; ಬಸವಣ್ಣನ ಈ ಭಕ್ತಿ ಪಂಥ ಬಿಜ್ಜಳನಿಗೆ ಸರಿಬೀಳಲಿಲ್ಲ.

ಆ ಘಟ್ಟದಲ್ಲಿ ಒಂದು ಘಟನೆ ನಡೆಯಿತು. ಅದೊಂದು ಪವಾಡ: ಶಿವನು ಎಸೆದ ಒಂದು ಓಲೆಯ ಗರಿ—ಬಿಜ್ಜಳನು ಓಲಗಕೊಟ್ಟು ಕುಳಿತಿದ್ದಾಗ—ಅವನ ಸಿಂಹಾಸನದಲ್ಲೇ ಬಂದು ಬಿದ್ದಿತು. ಅದರಲ್ಲಿದ್ದುದು ಯಾವ ಲಿಪಿಯೋ? ಏನು ವಿಷಯವೋ? ಆಸ್ಥಾನದ ಸೇನಬೋವರೊಬ್ಬರಿಗೂ ಅದರ ತಲೆ ಬಾಲ ತಿಳಿಯಲಿಲ್ಲ. ಅದನ್ನು ಓದಿದವನಿಗೆ ಆನೆ-ಸೇನೆ-ಕುದುರೆ-ಭಂಡಾರವನ್ನು ಕೊಟ್ಟು ಅವನನ್ನು ಅರವತ್ತಾರು ಕರಣಕ್ಕೆ ಅಧಿಪತಿಯನ್ನಾಗಿ ಮಾಡುವೆನೆಂದು ಬಿಜ್ಜಳ ಭಾಷೆ ಕೊಟ್ಟನು.

ಎಲ್ಲರೂ ಸುಮ್ಮನಿದ್ದ ಆ ನೀರವನಿಶ್ಚಲ ಸಭೆಯಲ್ಲಿ ಬಸವಣ್ಣನೆದ್ದು ಆ ಓಲೆಯನ್ನು ಹರನ ನಿರೂಪವೆಂದು ಬಗೆದು, ಶಿರದ ಮೇಲೆ ಹೊತ್ತು, "ಶಿವಶರಣು" ಎಂದು ಕೈಗೆತ್ತಿಕೊಂಡು ಓದಿ ಅದರಲ್ಲಿನ ಸೂಚನೆಯಂತೆ 60 ಕೋಟಿ ಹೊನ್ನಿದ್ದ ನಿಕ್ಷೇಪ ಒಂದನ್ನು ಅಗೆಸಿ ತೆಗೆಸಿ ಬಿಜ್ಜಳನಿಗೆ ಸಲ್ಲಿಸಿದ. ಒಡನೆಯೆ ಬಸವಣ್ಣನು ಶಿರಪ್ರಧಾನಭಂಡಾರಿಯಾಗಿ ನೇಮಕವಾದ.

ಆದರೂ ಬಸವಣ್ಣ ಬಿಜ್ಜಳರಿಗಿದ್ದ ತಾತ್ವಿಕ ಭಿನ್ನಾಭಿಪ್ರಾಯಗಳು ತಗ್ಗಲಿಲ್ಲ. ಶಿವಾಚಾರವನ್ನು ಬಿಜ್ಜಳನು ಅಲ್ಲಗಳೆದಾಗಲೆಲ್ಲ ಬಸವಣ್ಣನು ಅವನನ್ನು ಒಡಂಬಡಿಸಲು ಹಲವಾರು ಪವಾಡಗಳನ್ನು ಮೆರೆಯಬೇಕಾಯಿತು. (ಅವನು ಏನೇ ಅದ್ಭುತ ಪವಾಡಗಳನ್ನು ಮೆರೆದರೂ ಬಿಜ್ಜಳನನ್ನು ಒಡಂಬಡಿಸುವ ಪವಾಡವನ್ನು ಮೆರೆಯಲಾಗಲಿಲ್ಲ!)

ಜೊತೆಗೆ ಪ್ರಭುದೇವನ ಕೈಸೇರಿದ್ದ ತನ್ನ ಪ್ರಾಣಲಿಂಗವನ್ನು ಮರಳಿ ಪಡೆಯುವುದಕ್ಕಾಗಿ ಬಸವಣ್ಣ ಪರಿತಪಿಸುತ್ತಲೇ ಇದ್ದ. ಆ ಜಂಗಮಶ್ರೇಷ್ಠನು ಎಂದು ಬಂದಾನೋ ಎಂದು ದಾಸೋಹವನ್ನು ಹರಹಿಕೊಂಡು— ಮಣ್ಣನ್ನು ಜಾಲಿಸಿ ಚಿನ್ನವನ್ನು ತೆಗೆಯುವಂತೆ— ಕಣ್ಣಲ್ಲಿ ಪ್ರಾಣವಿಟ್ಟುಕೊಂಡಿದ್ದನು.

ಹೀಗಿರುವಲ್ಲಿ ಅವನ ಪುಣ್ಯದ ಫಲವಾಗಿ ಪ್ರಭುದೇವನು ಕಲ್ಯಾಣಕ್ಕೆ ಬಂದು ಬಸವಣ್ಣನ ಮನದ ಮಲಿನವನ್ನು ತೊಳೆದು ಶೂನ್ಯಸಿಂಹಾಸನದಲ್ಲಿ ಮೂರ್ತಿಗೊಂಡನು.

ಇನ್ನು "ಕಲಿಯುಗದಲ್ಲಿ ಮುಂದೆ ಇರಬಾರದು" ಎಂದು ಕಲ್ಯಾಣದ ಶಿವಶರಣರಿಗೆ ಆ ಪ್ರಭುದೇವನು ಸಾಮೂಹಿಕವಾಗಿ ಕರೆಯಿತ್ತ. ಅವನ ಅಪ್ಪಣೆಯ ಪ್ರಕಾರ ಬಸವಣ್ಣನು ಕೂಡಲಸಂಗಮದಲ್ಲಿ "ನಿಜವನ್ನು ಎಯ್ದಲು" ನಿಶ್ಚಿಯಿಸಿ, "ಜಗದೇವ ಮೊಲ್ಲೆಯ ಬೊಮ್ಮಣ್ಣಗಳ ಕೈಯ್ಯಲ್ಲಿ

ಸಂಪಾದನೆಯು ಪ್ರಭುದೇವರ ಜೀವನವೃತ್ತಾಂತದಿಂದ ಆರಂಭವಾದರೂ, ಅದರ ಸಂರಂಭವೆಲ್ಲಾ ಕಲ್ಯಾಣದಲ್ಲಿ, ಆದುದರಿಂದಲೇ ಅದು ಅವನು ಕದಳಿಯಲ್ಲಿ ಕಣ್ಮರೆಯಾದಲ್ಲಿಗೇ ಸಮಾಪ್ತಿಯಾಗದೆ, ಬಸವಾದಿಪ್ರಮಥರ ಅವತಾರದ ಇತಿಶ್ರೀಯನ್ನು ಹಾಡಿ, ಆ ಅವತಾರದ ಕಾರ್ಯಕ್ಷೇತ್ರವಾದ ಕಲ್ಯಾಣದ ಚರಮಗೀತೆಯಿಂದ ದಿವ್ಯ ದುಃಖದಲ್ಲಿ ತುಂಬಿ ಮುಡಿಯುವುದು.

ಪ್ರಭುದೇವನು ಶೂನ್ಯಸಂಪಾದನೆಯ ಪ್ರಾರಂಭದಲ್ಲಿ ಮುಕ್ತಾಯಕ್ಕ ಸಿದ್ಧರಾಮರನ್ನು ಕಾಣುವನಾದರೂ, ಅದು ಅವನ ಜಂಗಮಜೀವನದಲ್ಲಿ ಮುಂದೆಯೂ ಸಂಭವಿಸುವ ಹಲವಾರು ಪ್ರಸಂಗಗಳಲ್ಲಿ ಕೆಲವಾಗಿದ್ದು—ಅವು ಅವನು ಕಲ್ಯಾಣದತ್ತ ಖಚಿತವಾಗಿ ಹಿಡಿದ ಹಾದಿಯಲ್ಲಿ ಸಂಭವಿಸುವಂಥವು. ಆಮೇಲೆ ಪ್ರಭುದೇವನು ಕಲ್ಯಾಣವನ್ನೇ ಕುರಿತು ಬಿಲ್ಲಿನಿಂದ ಜಿಗಿದ ಬಾಣದಂತೆ ಹೋಗುವನು. ಆಗ ಅವನು ಬಸವಾದಿಪ್ರಮಥರಿಂದ ಸತ್ಕೃತನಾದುದು ಶೂನ್ಯಸಂಪಾದನೆಯ ಪ್ರಥಮಘಟ್ಟದ ಘಟನಾವಳಿಯಲ್ಲಿ ಸಾರರೂಪವಾದುದು.

ಸತ್ಕೃತನಾದ ಮೇಲೆ ಪ್ರಭುದೇವನು ದೇಶಸಂಚಾರಕ್ಕೆ ಹೊರಟನಾದರೂ ಆ ವೃತ್ತಾಂತವು ಶೂನ್ಯಸಂಪಾದನೆಯಲ್ಲಿ ಕೇವಲ ವಾರ್ತಾರೂಪದಲ್ಲಿ ಸಂಗ್ರಹವಾಗಿ, ಮತ್ತೆ ಅವನು ಕಲ್ಯಾಣಕ್ಕೆ ಬಂದು ಅಲ್ಲಿನ ಶರಣರೊಡನೆ ನಡೆಸಿದ ಅವನ ಅನುಭಾವ ಕಾರ್ಯಕ್ರಮವೇ ಶೂನ್ಯಸಂಪಾದನೆಯ ಎರಡನೇ (ಅಥವಾ ಕೊನೇ) ಘಟ್ಟದ ಘಟನಾವಳಿಯಲ್ಲಿ ಸಾರರೂಪವಾದುದು.

ಈ ವಿನ್ಯಾಸದಿಂದ—ಸುತ್ತುಮುತ್ತಿಗೆಲ್ಲ ಬೆಳಕು ಚೆಲ್ಲಿ ಉರಿದ ಬಸವಕಕ್ಕಡಕ್ಕೆ ಪ್ರಭುದೇವನೇ ಸುರಿದ ತುಪ್ಪವೆಂಬುದೂ ಸ್ಪಷ್ಟ.

ಪ್ರಭುದೇವನು ತನ್ನ ದಿವ್ಯ ಸಂದೇಶದಿಂದ ಬಸವಣ್ಣ ಮುಂತಾದವರನ್ನು ಕೃತಾರ್ಥರನ್ನಾಗಿ ಮಾಡಿದನೆಂದಿರುವುದಾದರೂ, ಆ ಅಲ್ಲಮಪ್ರಭುವಿಗೇ ಗುರುಸ್ಥಾನದಲ್ಲಿ ನಿಲ್ಲುವನು ಬಸವಣ್ಣನೆಂಬ—ಒಂದು ಇತಿವೃತ್ತದ ಸೂತ್ರದಿಂದ ಭಕ್ತ ಮತ್ತು ಜಂಗಮದ ಸಮಾನತೆ ಮತ್ತು ಸಮರಸವನ್ನು ಸ್ಥಾಪಿಸಿರುವನು ಶಿವಗಣಪ್ರಸಾದಿ ಮಹಾದೇವಯ್ಯ ತನ್ನ ಶೂನ್ಯಸಂಪಾದನೆಯಲ್ಲಿ :

ಬಸವನೇ ವೃಷಭನೆಂದೂ, ಆ ವೃಷಭನು ಅನಿಮಿಷನಿಗೆ ಶಿವಲಿಂಗವನ್ನು ಕೊಟ್ಟಿದ್ದನೆಂದೂ, ಆ ಅನಿಮಿಷನಿಂದಲೇ ಅಲ್ಲಮನು ಆ ಪ್ರಾಣಲಿಂಗವನ್ನು ಪಡೆದನೆಂದೂ, ಆ ಘನಲಿಂಗವನ್ನೇ ತತ್ಪರೂಪದಲ್ಲಿ ಅಲ್ಲಮನಿಂದ ಬಸವಣ್ಣನು ಮತ್ತೆ ಪಡೆದನೆಂದೂ ಬಳಿಕೆಯಲ್ಲಿರುವ ಕಥೆ ಹೇಳುವುದು.

ಈ ಪವಣಿಗೆಯಿಂದ ಗುರು-ಶಿಷ್ಯ ಸಂಬಂಧವು ಪರಸ್ಪರ ಗೌರವಾಸ್ಪದವಾಗಿ ಈ ಶೂನ್ಯಸಂಪಾದನೆಯ ಶಯ್ಯೆಯಲ್ಲಿ ಪ್ರಕಟಗೊಂಡಿದೆ. ಇಲ್ಲಿನ ಇಂಥದೇ ಇನ್ನೊಂದು ಪ್ರಸಂಗ

---

ಮಡಿದಹನು ಜಿಜ್ಜಳನು" ಎಂದು ಮಮ್ಮಲಮರುಗುತ್ತ, ತನ್ನ ಮನೆಯಲ್ಲಿದ್ದುದನ್ನೆಲ್ಲ ಲಿಂಗ ಜಂಗಮಕ್ಕೆ ಸೂರೆಗೊಟ್ಟು ಕಪ್ಪಡಿಗೆ ಹೋಗಿ ಲಿಂಗೈಕ್ಯನಾದ.

ವನ್ನು ಪ್ರಸ್ತಾಪಿಸಬಹುದು: ಬಸವಣ್ಣನು ಚೆನ್ನಬಸವಣ್ಣನ ಗುರು-ಹಿರಿಯನೆಂಬುದು ವಾಸ್ತವಿಕವಾದರೂ ಆ ಚೆನ್ನಬಸವಣ್ಣನಿಂದಲೇ ಪ್ರಾಣಲಿಂಗದ ರಹಸ್ಯವನ್ನು ತಿಳಿದು ಕೊಳ್ಳುವನು ಬಸವಣ್ಣ†.

ಸತ್ಯಾನ್ವೇಷಣೆಯ ಪಥದಲ್ಲಿ ಆಗುತ್ತ ಹೋಗುವ ನಿರಂತರ ಪ್ರಗತಿಗೆ ಇದು ಮಾದರಿ. ಆದುದರಿಂದಲೇ— ಲೌಕಿಕದಲ್ಲೇ ಅಲ್ಲ, ಅಲೌಕಿಕದಲ್ಲೇ ಆಗಲಿ; ಚಿಕ್ಕದು ದೊಡ್ಡದು ಎಂಬುದು ಕೇವಲ ತಾತ್ಕಾಲಿಕ; ಪ್ರಗತಿಯ ಪಥದಲ್ಲಿ ಅವು ಪರಸ್ಪರ ಪೂರಕ ಮತ್ತು ತಾರಕ.

ಉಪಸಂಹರಿಸಿ ಹೇಳುವುದಾದರೆ— ಶೂನ್ಯಸಂಪಾದನೆಯಲ್ಲಿ ಪ್ರಭುದೇವನೇ ನಾಯಕ ನಾದರೂ ಅವನಿಗೆ ಹೊಯರ್‌ಕಯ್ಯಾಗಿ ಬಸವಣ್ಣನ ಪಾತ್ರವನ್ನು ದಳದಳವಾಗಿ ಅರಳಿ ಸಿರುವನು ಶಿವಗಣಪ್ರಸಾದಿ. ಇವನು ಹೀಗೆ ಮಾಡುವಲ್ಲಿ ತನಗಿಂತ ಹಿಂದಿನ ಯಾವ "ಪುರಾಣ"ದಲ್ಲೂ ನಾಯಕಪಾತ್ರವಾಗಿ ಚಿತ್ರಣಗೊಳ್ಳದ ಪ್ರಭುದೇವನ ದಿವ್ಯ ಜೀವನ ವನ್ನು ಕಂಡರಿಸುವುದರ ಜೊತೆಗೆ, ಮಹಾಮಹಿಮಾನ್ವಿತನಾದ ಆ ಪ್ರಭುದೇವನ ವ್ಯಕ್ತಿ ತ್ವದ ವಿಶೇಷ ಕಾಂತಿಯನ್ನು ಬಣ್ಣ ಬಣ್ಣವಾಗಿ ಕ್ರೋಢೀಕರಿಸಿ, ಕಲ್ಯಾಣದ ಕ್ರಾಂತಿ ಪುರುಷನಾದ ಬಸವಣ್ಣನ ಮೇಲೆ ಹೊರಚೆಲ್ಲಿ, ಅವನ ಅಂದಚಂದವನ್ನು ನಾನಾ ಕೋನ ಗಳಿಂದ ಪ್ರದರ್ಶಿಸುವುದನ್ನು ಮುಖ್ಯ ಗುರಿಯಾಗಿಟ್ಟುಕೊಂಡಿದ್ದನು. ಜೊತೆಗೆ ಚೆನ್ನ ಬಸವಣ್ಣನ ಜ್ಞಾನ ಮಡಿವಾಳ ಮಾಚಯ್ಯನ ಗಂಡುನಿಷ್ಠೆ— ಮಿಳಿತವಾಗಿ ಕಂಗೊಳಿಸು

---

† ಶಿವಗಣಪ್ರಸಾದಿಯನ್ನು ಅನುಸರಿಸಿ ಚೆನ್ನಬಸವಣ್ಣನ ಒಂದು ವ್ಯಕ್ತಿಚಿತ್ರವನ್ನು ಈ ಮುಂದಿ ನಂತೆ ರೂಪಿಸಿಕೊಳ್ಳಬಹುದು:

ಒಕ್ಕುಮಿಕ್ಕ ಶೇಷಪ್ರಸಾದದಿಂದ ಚೆನ್ನಬಸವಣ್ಣನು ಭ್ರೂಣವಾಗಿ ತಾಯ ಹೊಟ್ಟೆಯಲ್ಲಿ ಇರು ವಾಗಲೇ ಅವನಿಗೆ ಬಸವಣ್ಣನು ವಿಭೂತಿಪಟ್ಟವನ್ನು ಕಟ್ಟಿ, ಅನುಗ್ರಹಿಸಿ ಕಾಪಾಡಿದಂತೆ ಚೆನ್ನ ಬಸವಣ್ಣನ ಒಂದು ವಚನ (538)ದಿಂದಲೇ ವ್ಯಾವರ್ಣಿತವಾಗಿದೆ.

ಇವನು ವಯಸ್ಸಿನಲ್ಲಿ ಎಲ್ಲರಿಗೂ ಕಿರಿಯನಾದರೂ ಮಹಾಮೇಧಾವಿಯೆಂದು ಹಲವರು ಶರ ಣರು ಪ್ರಶಂಸೆಮಾಡಿರುವರು. ಶರೀರಧಾರಿಯಾಗಿದ್ದೂ ಇಷ್ಟು ದಿವ್ಯಜ್ಞಾನವನ್ನು ಪಡೆದಿರುವುದು. ಕಾಲಾಗ್ನಿರುದ್ರನಿಗೂ ಕಾಮಸಂಹಾರಿಗೂ ಸಾಧ್ಯವಿಲ್ಲವೆಂದಿರುವನು ಸಾಕ್ಷಾತ್ ಪ್ರಭುದೇವ (489).

ಇಂತೆಲ್ಲ ಜ್ಞಾನಸಂಪದ್ಯುಕ್ತನಾದರೂ ಚೆನ್ನಬಸವಣ್ಣನು ನಿರಹಂಕಾರಿ. ಅವನನ್ನು ಕಂಡು— "ಮಹಾಜ್ಞಾನಕ್ಕೆ ನಿರಹಂಕಾರವೇ ಶೃಂಗಾರ" ಎಂದು ಮಡಿವಾಳಮಾಚಯ್ಯನು ತೃಪ್ತಿಯ ಉದ್ಗಾರವೆತ್ತಿರುವನು (585).

ಪ್ರಭುದೇವ-ಬಸವಣ್ಣ ಮುಂತಾದವರ ಪೂರ್ವಭವಾವಳಿಯನ್ನು ತಿಳಿಯಹೇಳುವಲ್ಲಿ ಚೆನ್ನ ಬಸವಣ್ಣನನ್ನು ಪ್ರವಾದಿಯನ್ನಾಗಿ ಶಿವಗಣಪ್ರಸಾದಿ ಬಳಸಿಕೊಂಡಿರುವುದಕ್ಕೆ—ಅವನು ದಿವ್ಯ ಜ್ಞಾನಿಯಾಗಿದ್ದನೆಂಬ ಪ್ರತೀತಿಯೇ ಕಾರಣ.

ಮೇಲಾಗಿ ಇವನು—ಪ್ರಾಣಲಿಂಗ ರಹಸ್ಯವನ್ನು ಬಲ್ಲವನಾದುದರಿಂದಲೇ— ಸಾಕ್ಷಾತ್ ಬಸವಣ್ಣ ನಿಗೇ ಪ್ರಾಣಲಿಂಗ ಸಂಬಂಧವಾಗಿ ಉಪದೇಶಮಾಡಿದಂತೆ ನಿರೂಪಿಸಲಾಗಿದೆ: ಕಳೆದುಕೊಂಡ ಪ್ರಾಣಲಿಂಗವನ್ನು ಪಡೆಯುವುದೆಂತು ಎಂದು ಬಸವಣ್ಣನು ಚಿಂತಿಸುತ್ತಿದ್ದಾಗ ಶಿವನು ತಾನೇ ಅದನ್ನು ಬಸವಣ್ಣನಿಗೆ ಬೋಧಿಸಲೆಂದು ನಾಗಾಂಬಿಕೆಯ ಗರ್ಭದಲ್ಲಿ ಚೆನ್ನಬಸವಣ್ಣನಾಗಿ ಉದ್ಭವಿಸಿ ಬಂದನೆಂಬುದೇ ಶಿವಗಣಪ್ರಸಾದಿ ಮುಂತಾದವರ ನಂಬಿಕೆ.

ವಂತೆ ಸಜ್ಜುಗೊಳಿಸಿದನು. ಈ ಹಿನ್ನೆಲೆಯಲ್ಲಿ ಅಕ್ಕಮಹಾದೇವಿ ಮುಂತಾದವರ ವಿಭೂತಿ ಸಂಭವಿಸುವುದು.

ಕೊನೆಯದಾಗಿ, ಈ ಶೂನ್ಯಸಂಪಾದನೆಯಲ್ಲಿ (ಮೊದಲಿಗೆ) ಶೈವನಾಗಿದ್ದನೆನಿಸಿ ಕೊಂಡಿರುವ ಸಿದ್ಧರಾಮನು ಕೊನೆಯವರೆಗೂ ಶೈವನಾಗಿಯೇ ಉಳಿದು—ಅಂದರೆ ಲಿಂಗ ಧಾರಿಯಾಗಿ ಮತಾಂತರ ಹೊಂದದಿದ್ದರೂ—ವೀರಶೈವಧುರೀಣರ ಸಮೇಳದಲ್ಲಿ ಸಮ ಸಮಪುರಸ್ಕೃತನೂ, ಸಮಾನಪೂಜ್ಯನೂ ಆದನೆಂಬಂತೆ ಚಿತ್ರಣಗೊಂಡಿರುವುದಂತೂ ಶಿವಗಣಪ್ರಸಾದಿಗೆ ವಿಶ್ವಧರ್ಮದಲ್ಲಿದ್ದ ಶ್ರದ್ಧೆಯನ್ನು ಸಾರಿ ಹೇಳುವುದು. ಮುಖ್ಯವಾಗಿ ಪರಧರ್ಮೀಯರ ಬಗ್ಗೆ ಪ್ರಭುದೇವನಿಗೆ ಎಷ್ಟು ಗೌರವಭಾವವಿತ್ತು ಎಂಬುದು ಗವ್ಯ ವಾಗುವುದು. ಸಿದ್ಧರಾಮನಂತಹ ಮಹನೀಯನಿಗೆ ಲಿಂಗಧಾರಣೆಯ ಅವಶ್ಯಕತೆ ಇಲ್ಲ ವೆಂದು ಪ್ರಭುದೇವನು ಹೇಳಿದಾಗ, ಆ ನಿಲವನ್ನು ಒಪ್ಪಿ (ಅನ್ಯಮತಗಳನ್ನು ಖಂಡಿಸಿ ಸ್ವಮತವನ್ನು ಸ್ಥಾಪಿಸುವ ಕುರುಕ್ಷೇತ್ರದಲ್ಲಿ—ವಿಷಾದಯೋಗವನ್ನು ದೂರಮಾಡಿ ಕೈಗೆ ಬಿಲ್ಲುಬಾಣವೆತ್ತಿಕೊಂಡು ಕಣಕ್ಕಿಳಿದಿದ್ದ) ಬಸವಣ್ಣ—ಚೆನ್ನಬಸವಣ್ಣ—ಮಡಿ ವಾಳ ಮುಂತಾದವರು—ಪರಧರ್ಮದ ಬಗ್ಗೆ ಮತ್ತು ಪರಧರ್ಮೀಯರ ಬಗ್ಗೆ ಗೌರ ವಾನ್ವಿತ ಪರಿವರ್ತನೆಯನ್ನು ಹೊಂದಿ—ಅಲ್ಲಮನನ್ನು ಪೂಜಿಸಿ ತಾವೂ ಪೂಜ್ಯರಾದ ರೆಂಬುದನ್ನು ಬಿಡಿಸಿ ತೋರಿಸಿರುವನು ಶಿವಗಣಪ್ರಸಾದಿ ಮಹಾದೇವಯ್ಯ. ಇದೆಲ್ಲ ಕರ್ಣಾಟಕದ ಧರ್ಮಕ್ಕೆ ಸಾಹಿತ್ಯಕ್ಕೆ ಮಹಾದೇವಯ್ಯ ಕೊಟ್ಟಂಥ ಬಲು .ದೊಡ್ಡ ಕೊಡುಗೆ. ಅದು ಅವನ ದೊಡ್ಡತನಕ್ಕೂ ತಗುವಂತಹ ತೂಕವಾದ ಕಾಣಿಕೆ.

ಮತ್ತು ಅದು ಮಹಾದೇವಯ್ಯನ ವ್ಯಕ್ತಿತ್ವಕ್ಕೆ ಹಿಡಿದ ಹತ್ತಾರು ಕನ್ನಡಿಯಂತಿದೆ.

ಇಂತಹ ಮಹನೀಯನ ಘಟನಾತ್ಮಕವಾದ ಜೀವನಚರಿತ್ರೆ ನಮಗೆ ತಿಳಿಯದು. ಅವನ ಸಂಬಂಧವಾಗಿ ಆಮೇಲೆ ಬಂದ ಶೂನ್ಯಸಂಪಾದನಕಾರರು ಕೃತಜ್ಞತೆಯಿಂದ ಆಡುವ ಒಂದೆರಡು ಮಾತುಗಳಿಂದಲಾಗಲಿ, ಪೂರ್ವಕವಿಗಳನ್ನು ಸ್ಮರಿಸುವ ಅವಸರದಲ್ಲಿ ಸಿದ್ಧನಂಜೇಶನು ಮಾಡಿರುವ ಅವನ ನಾಮಸ್ಮರಣೆಯಿಂದಲಾಗಲಿ ಅವನ ಜೀವನ ವೃತ್ತಾಂತದ ಮೇಲೆ ಬೆಳಕೂ ಬೀಳುವುದಿಲ್ಲ, ಬಿದ್ದರೂ ಹೊಸದೇನೂ ಕಾಣುವುದಿಲ್ಲ. ಆದುದರಿಂದ ಈ ಸಂಬಂಧವಾಗಿ ಬಾಹ್ಯಾಧಾರಗಳಿಲ್ಲವೆನ್ನಬಹುದು. ಇಲ್ಲಿ ಆಡಬೇಕಾದ ಒಂದು ಮಾತೆಂದರೆ—ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಇಷ್ಟು ದೊಡ್ಡ ಕೆಲಸಮಾಡಿ ಇಷ್ಟು ಕಡಿಮೆ ಪ್ರಶಂಸೆ ಪಡೆದವನೆಂದರೆ ಮಹಾದೇವನಂತಹವನು ಇನ್ನೊಬ್ಬನಿಲ್ಲ.

ಮಹಾದೇವಯ್ಯನ ಹೆಸರಿಗೆ ಅಂಟಿ ಬಂದಿರುವ "ಶಿವಗಣಪ್ರಸಾದಿ" ಎಂಬುದು ಅವನ ನಿತ್ಯಕಾಯಕದ ಹೆಸರು—ಹಾಗೆಂದೇ ಅವನು ಹೆಸರುವಾಸಿಯಾಗಿದ್ದಾನೆ:

"ಶಿವಗಣಂಗಳು ಆರೋಗಿಸಿ ಮಿಕ್ಕ ಶಿವಪ್ರಸಾದಮಂ ಕಂಡು, ಉಬ್ಬಿಕೊಬ್ಬಿ ನಲಿ ನಲಿದಾಡುತ್ತ ಆ ಪ್ರಸಾದದೊಳು ಅಣುಮಾತ್ರಮಂ ನೆಲಕ್ಕೆ ತಪ್ಪಲೀಯದೆ ಎತ್ತಿ ತಂದು, ಮಹಾಪ್ರಸಾದರಾಶಿಯಂ ಮಾಡಿ, ಆ ಪ್ರಸಾದಮಂ ಅಷ್ಟವಿದಾರ್ಚನೆಯಿಂದ ರ್ಚಿಸಿ, ಪರಮಾನಂದದಿಂ ಪ್ರಸಾದಮಂ ಸ್ವೀಕಾರಂ ಮಾಡಿ ಪರಮ ಪರಿಣಾಮದೊಳಿಪ್ಪ

ಶಿವಗಣಪ್ರಸಾದಿ"ಗಳು ಬಸವಣ್ಣನ ಮನೆಯಲ್ಲಿದ್ದರೆಂದು ತನ್ನ ಶೂನ್ಯಸಂಪಾದನೆಯಲ್ಲಿ (279 ಗ) ವರ್ಣನೆ ಮಾಡುವಾಗ ಮಹಾದೇವಯ್ಯನು ತನ್ನ ವೃತ್ತಿಯನ್ನೂ ಚಿತ್ತ ವೃತ್ತಿಯನ್ನೂ ಕುರಿತಂತೆ ಕಾಣುವುದು. ಅವನ ಶೂನ್ಯಸಂಪಾದನೆಯಲ್ಲಿ ಬರುವ ಮರುಳು ಶಂಕರ ದೇವರ ಪಾತ್ರದ ಎಲ್ಲ ಘನತೆ ಗಾಂಭೀರ್ಯ ಪ್ರಸನ್ನತೆ ಮತ್ತು ನಿರಾಡಂಬರ ಗುಪ್ತಭಕ್ತಿಯ ಚಿತ್ರಣಕ್ಕೆ ಮಹಾದೇವಯ್ಯನು ತನ್ನ ಹೃನ್ನಾಳದ ಬಿಸಿರಕ್ತವನ್ನು ಬಳಸಿದ್ದಾನೆ. ಮಹಾದೇವಯ್ಯನು ತನ್ನ ಕೃತಿಯಲ್ಲಿ ಕಲ್ಯಾಣದ ಬಗ್ಗೆ ಹರಿಸಿರುವ ಮಮತೆಯ ಭಾವದ ಬೆಂಬಲದಿಂದ— ಕಲ್ಯಾಣವೇ ಅವನ ನೆಲೆವೀಡಾಗಿತ್ತೆಂದೂ ಊಹಿಸಬಹುದು. ಹೀಗೆ ಕಲ್ಯಾಣದವನೇ (?) ಆದ ಮಹಾದೇವಯ್ಯನು ಕಲ್ಯಾಣದ ಕ್ರಾಂತಿಜ್ಯೋತಿಗೆ ಪುಟವಿಡುವ ಸ್ಫಟಿಕ ಘಟವಾಗಿ ಏರ್ಪಟ್ಟುದು ಚರಿತ್ರೆಯ ಒಂದು ಅಪೂರ್ವಯೋಗ.

## ಆಮೇಲೆ ಬಂದ ಶೂನ್ಯಸಂಪಾದನೆಗಳು

ಇದುವರೆಗೆ ಅಚ್ಚಿನಲ್ಲಿ ಕಂಡಿರುವುದು ಮತ್ತು ಪ್ರಚಾರದಲ್ಲಿರುವುದು ನಾಲ್ಕರಲ್ಲಿ ಒಂದೇ ಶೂನ್ಯಸಂಪಾದನೆ. ಅದು ಗೂಳೂರು ಸಿದ್ಧವೀರನದು (ಇತ್ತೀಚಿನದು ಮತ್ತು ಕೊನೆಯದು). ಇವನ ಹಿಂದಿನವನು ಗುಮ್ಮಳಾಪುರದ ಸಿದ್ಧಲಿಂಗ. ಅವನಿಗೆ ಹಿಂದಿನವನು ಹಲಗೆಯಾರ್ಯ, ಅವನಿಗೂ ಹಿಂದಿನವನು ನಮ್ಮ ಶಿವಗಣಪ್ರಸಾದಿ ಮಹಾದೇವಯ್ಯ. ಇವನದೇ ಪ್ರಪ್ರಥಮ ಶೂನ್ಯಸಂಪಾದನೆ. ಇದನ್ನು ಮೂಲವಾಗಿ ಇಟ್ಟುಕೊಂಡೇ ಮುಂದೆ ಬಂದ ಹಲಗೆಯಾರ್ಯ ಮುಂತಾದವರು ಪರಿಷ್ಕರಣವನ್ನು ಕೈಗೊಂಡರು. ಹೀಗೆ ಪರಿಷ್ಕರಿಸುವಲ್ಲಿ ಮೂಲ ಶೂನ್ಯಸಂಪಾದನೆಯಲ್ಲಿ ಇದ್ದುದನ್ನು ಬಿಟ್ಟಿರುವುದು ಒಂದಂಶವಾದರೆ ಸೇರಿಸಿರುವುದು ನೂರಂಶ—ಅದೂ ಮುಖ್ಯವಾಗಿ ಸಿದ್ಧರಾಮನ ದೀಕ್ಷಾಪ್ರಸಂಗವನ್ನು ಪ್ರತಿಷ್ಠಾಪಿಸುವುದಕ್ಕಾಗಿ, ಮತ್ತು ನುಲಿಯ ಚಂದಯ್ಯ ಮುಂತಾದವರನ್ನು ಕುರಿತ ಹೊಸ ಹೊಸ ಉಪಸಂಪಾದನೆಗಳ ಸೇರ್ಪಡೆಗಾಗಿ. ಜೊತೆಗೆ ಬಸವಣ್ಣ ಮುಂತಾದವರ ದೀರ್ಘವಾದ ಕಥೆಗಳೂ, ವೀರಶೈವದ ಮತೀಯ ಪರಿಭಾಷೆಯ ವಿವರಗಳೂ ಹಲಗೆಯಾರ್ಯನ ಪರಿಷ್ಕರಣದ ವೈಶಿಷ್ಟ್ಯವಾದರೆ ಶಿವಶರಣರ ಅವತಾರ ಹುಟ್ಟು ಬೆಳವಣಿಗೆಗೆ ಸಂಬಂಧಿಸಿದ ಕಲ್ಪನೆ-ವಿಚಾರಗಳು ಪಲ್ಲಟಗೊಂಡವು ಕೊನೆಯ ಎರಡು ಪರಿಷ್ಕರಣಗಳಲ್ಲಿ.*

ಈ ಕಾರಣಗಳಿಂದಲೋ ಅಥವಾ ಯಾವುದೋ ಮಾಯೆಯಿಂದಲೋ—ಪರಿಷ್ಕರಣಗಳೆಲ್ಲ ಸ್ವತಂತ್ರ ಶೂನ್ಯಸಂಪಾದನೆಗಳೆಂಬಂತೆ ಅರಿಯದವರಿಗೆ ಅದ್ಭುತವಾಗಿ ಕಂಡವು.

---

* ಇದಕ್ಕೆ ಕಾರಣ ಆ ವೇಳೆಗೆ ರಚಿತವಾಗಿದ್ದ ಚಾಮರಸನ ಪ್ರಭುಲಿಂಗಲೀಲೆ. ಪ್ರಭುದೇವರ ಕಥಾಸಂಪ್ರದಾಯದಲ್ಲಿ ಮೂರು ಪ್ರಕಾರಗಳಿವೆ: ಮೊದಲನೆಯದು ಹರಿಹರನಿಂದ, ಎರಡನೆಯದು

ಆದರೆ ಅವೆಲ್ಲದರ ನಿಲುವಿಗೆ ಮತ್ತು ಚೆಲುವಿಗೆ ಶಿವಗಣಪ್ರಸಾದಿಯ ಶೂನ್ಯಸಂಪಾದನೆಯೇ ಬೆನ್ನೆಲುಬು ಮತ್ತು ಮೈಕಟ್ಟು.

ಪ್ರಥಮ ಶೂನ್ಯಸಂಪಾದನೆಯಲ್ಲಿ ಯಾವುದಿದ್ದಿಷ್ಟರೆ ಮುಂದಿನ ಮೂರು ಪರಿಷ್ಕರಣಗಳು ರೂಪುಗೊಳ್ಳುತ್ತಲೇ ಇರಲಿಲ್ಲವೋ—ಅದೇ, ಕಲ್ಯಾಣದಲ್ಲಿ ಸಿದ್ಧರಾಮನಿಗಾಯಿತೆಂಬ ವೀರಶೈವ ದೀಕ್ಷೆಯ ಪ್ರಸಂಗ. ಅದೊಂದು ಹೀನಾಯವಾದ ಕೊರತೆಯಾಗಿ ತೋರಿತು. ಅದನ್ನು ಹಲಗೆಯಾರ್ಯನು ಅತ್ಯದ್ಭುತವಾಗಿ ತುಂಬಿಕೊಟ್ಟನು. ಹೀಗೆ ಮಾಡುವಲ್ಲಿ ಅವನಿಗೆ ತನ್ನ ಶೂನ್ಯಸಂಪಾದನೆಯನ್ನು ವೀರಶೈವಧರ್ಮದ ಕೈಪಿಡಿಯಾಗಿ ಮಾಡುವ ಮಹತ್ವಾಕಾಂಕ್ಷೆಯೂ ಸೇರಿತ್ತು. ಇದೆಲ್ಲದರ ಜೊತೆಗೆ ನುಲಿಯಚಂದಯ್ಯನ ಒಂದು ಪ್ರಸಂಗ (ಸಂಪಾದನ)ವನ್ನು ಅಧಿಕವಾಗಿ ರಚಿಸಿ ಸೇರಿಸಿದ ಹಲಗೆಯದೇವ. ಇದನ್ನು ಮುಂದೆ ಬಂದ ಶೂನ್ಯಸಂಪಾದನಕಾರರಿಬ್ಬರೂ ತಮ್ಮತಮ್ಮ ಅನುಕೂಲಕ್ಕೆ ತಕ್ಕಂತೆ ಸಂಗ್ರಹಿಸಿಯೂ, ತಮ್ಮ ಅಭಿರುಚಿಗೆ ಹೊಂದುವಂತೆ ಅಳವಡಿಸಿಯೂ ತಮ್ಮ ತಮ್ಮ ಶೂನ್ಯಸಂಪಾದನೆಗಳೊಳಕ್ಕೆ ಸೇರ್ಪಡೆಮಾಡಿಕೊಂಡರು. ಅಷ್ಟೇ ಅಲ್ಲದೆ ಗುಮ್ಮಳಾಪುರದ ಸಿದ್ಧಲಿಂಗನು ಆಯ್ದಕ್ಕಿಮಾರಯ್ಯನ ಸಂಪಾದನೆಯನ್ನು ಹೊಸದಾಗಿ ಕಟ್ಟಿ ಸೇರಿಸಿ, ತನಗಿಂತ ಹಿಂದಿನ ಶೂನ್ಯಸಂಪಾದನೆಗಳಲ್ಲಿ ಸೂಚನೆ ಮಾತ್ರವಾಗಿದ್ದ ಗೋರಕ್ಷಪ್ರಸಂಗವನ್ನು ಒಂದು ಸಂಪಾದನೆಯಾಗಿ ವಿಸ್ತರಿಸಿದನು. ಕೊನೆಯವನಾದ ಗೂಳೂರು ಸಿದ್ಧವೀರನು ಇವಷ್ಟನ್ನೂ ಇಟ್ಟುಕೊಂಡು, ಜೊತೆಗೆ, ತನ್ನವೇ ಆದ ಘಟ್ಟಿವಾಳ ಮುದ್ದಣ್ಣ ಮತ್ತು ಮೋಳಿಗೆಮಾರಯ್ಯಗಳ ಸಂಪಾದನೆಗಳನ್ನು ಕಟ್ಟಿ ಸೇರಿಸಿದನು.

ಇನ್ನು ಶೂನ್ಯಸಂಪಾದನೆಗಳ ಕಥಾಶರೀರವನ್ನು ಕುರಿತು ಒಂದು ಮಾತು: ಶಿವಗಣಪ್ರಸಾದಿಯು ತನ್ನ ಶೂನ್ಯಸಂಪಾದನೆಯೊಳಕ್ಕೆ ಕಲಾತ್ಮಕ ಅಭಿವ್ಯಕ್ತಿಗೆ ಹಿನ್ನೆಲೆಯಾಗಿ ತೀರ ಅವಶ್ಯವಾದಷ್ಟು ವಿಚಾರಗಳನ್ನು ಮಾತ್ರ ಶಿವಶರಣರ ಸಂಬಂಧವಾಗಿ ಅಲ್ಲಲ್ಲಿ ಸೂಚಿಸಿರುವನು. ಆದರೆ ಹಲಗೆಯಾರ್ಯನು ತನ್ನ ಶೂನ್ಯಸಂಪಾದನೆಯೊಳಕ್ಕೆ ಅಜಗಣ್ಣ, ಸಿದ್ಧರಾಮ, ಬಸವಣ್ಣ, ಚೆನ್ನಬಸವಣ್ಣ ಮುಂತಾದವರ ಜೀವನವನ್ನು ಕುರಿತ ಸುದೀರ್ಘಾಖ್ಯಾನಗಳನ್ನು ತಂದು ತುರುಕಿದನು. ಇದನ್ನೆಲ್ಲ ಮುಂದೆ ಬಂದ ಶೂನ್ಯಸಂಪಾದನಕಾರರು ಅಷ್ಟಾಗಿ ಮಾನ್ಯಮಾಡಲಿಲ್ಲವೆನ್ನಬಹುದು. ಆದರೆ ಗುಮ್ಮಳಾಪುರದ ಸಿದ್ಧಲಿಂಗನು ಬಸವಣ್ಣನ ಕಥೆಯೊಂದಕ್ಕೆ ವಿಶೇಷ ಪಕ್ಷಪಾತವನ್ನು ತೋರಿ

---

ಸಿಂಗಿರಾಜನಿಂದ, ಮೂರನೆಯದು ಚಾಮರಸನಿಂದ ಪ್ರವರ್ತಿತ. ಕೊನೆಯದು ಪಾಲ್ಕುರಿಕೆ ಸೋಮನಾಥನಲ್ಲೇ ಪ್ರಚ್ಛನ್ನವಾಗಿತ್ತು. ಅದನ್ನು ಸ್ಫುಟಗೊಳಿಸಿದವನು ಚಾಮರಸ ಎನ್ನಲೂ ಬಹುದು. ಹರಿಹರನ ಮತ್ತು ಸಿಂಗಿರಾಜನ ಸಂಪ್ರದಾಯಗಳನ್ನು ಮೇಳನಗೊಳಿಸಿ ಬಳಸಿದವರು ಶಿವಗಣಪ್ರಸಾದಿ ಮತ್ತು ಹಲಗೆಯದೇವ; ಚಾಮರಸನದನ್ನು ಬಳಸಿದವರು ಗುಮ್ಮಳಾಪುರದ ಸಿದ್ಧಲಿಂಗ ಮತ್ತು ಗೂಳೂರು ಸಿದ್ಧವೀರರು. ಅಂತೆಯೇ ಚಾಮರಸನ ಪ್ರಭುಲಿಂಗಲೀಲೆಯೂ ಶಿವಗಣಪ್ರಸಾದಿ ಮಹಾದೇವಯ್ಯ (ಮತ್ತು ಹಲಗೆಯದೇವ)ನ ವಿಚಾರಧಾರೆಯಿಂದ ಪ್ರಭಾವಿತವಾಗಿವೆಯೆಂಬುದೂ ಅಷ್ಟೇ ಸತ್ಯ.

ಅದನ್ನು ತನ್ನ ಶೂನ್ಯಸಂಪಾದನೆಯಲ್ಲಿ ಮತ್ತಷ್ಟು ಸುವಿಸ್ತಾರವಾಗಿ ಬೆಳಸಿರುವನು. (ಇದು ಸ್ವರೂಪದಲ್ಲಿ ಹಲಗೆಯಾರ್ಯನು ಹೇಳಿರುವುದಕ್ಕಿಂತ ಬೇರೆಯಾದುದು.) ಸಿದ್ಧಲಿಂಗನ ಆ ಕಥೆಯನ್ನೇ ಸಿದ್ಧವೀರನೂ ಸಂಗ್ರಹಿಸಿರುವನು.

ಕೊನೆಯ ಇವರಿಬ್ಬರ ಪ್ರಕಾರ ಬಿಜ್ಜಳನ ಕೊಲೆಯ ಸಂಬಂಧವಾಗಿ ಹರಳಯ್ಯ ಮಧುವಯ್ಯರ ಪಾತ್ರ ಸಮಾವೇಶವಾಗುವುದು. ಇವರಿಗಿಂತ ಹಿಂದೆ ಈ ಅಂಶ ಎಲ್ಲಿಯೂ ಪ್ರಸ್ತಾಪಗೊಂಡಿಲ್ಲ.

ಒಟ್ಟನಲ್ಲಿ ಶಿವಗಣಪ್ರಸಾದಿಯ ಶೂನ್ಯಸಂಪಾದನೆಯನ್ನು ಅವನ ಪ್ರಾರ್ಥನೆಯ ಮೇರೆಗೇ ಆದರೂ—ಅವನ ಇಂಗಿತವನ್ನು ಅರಿಯದೆ, ತಮ್ಮ ಮತೀಯತೆಯನ್ನೇ ಮುಂದುಮಾಡಿ ಪರಿಷ್ಕರಿಸುವಲ್ಲಿ, ಮೂಲಕೃತಿಯ ಮತ್ತು ಅದರ ಕರ್ತೃವಿನ ಬಂಧಕ್ಕೆ ಮತ್ತು ಒಟ್ಟಂದಕ್ಕೆ ಅಪಚಾರ ಮಾಡಿರುವರು—ಆಮೇಲೆ ಬಂದ ಮೂವರೂ ಶೂನ್ಯಸಂಪಾದನಕಾರರು.

ಎಲ್ಲಕ್ಕಿಂತ ಹೆಚ್ಚು ಶೋಚನೀಯವಾದ ವಿಚಾರವೆಂದರೆ ಇಡಿಯಾಗಿ ಶೂನ್ಯಸಂಪಾದನಕಾರರು ವಚನಗಳ ಪಾಠದ ಪಾವಿತ್ರ್ಯವನ್ನು ಕಾಪಾಡಿಕೊಂಡು ಬರಲಿಲ್ಲ. ವಚನಗಳನ್ನು ಸಂಭಾಷಣೆಗೆ ಹೊಂದಿಸುವಲ್ಲಿ ಅಲ್ಪಾಂಶದಲ್ಲಿ ಇದು ಅನಿವಾರ್ಯವೆಂದು ಒಪ್ಪಬಹುದಾದರೂ, ಶರಣರ ವಚನಗಳನ್ನು ಸ್ವೇಚ್ಛೆಯಾಗಿ ತಿರಿಚುವುದೊಂದು ಪಾಪಕಾರ್ಯ. ಈ ಮಾತು ಶಿವಗಣಪ್ರಸಾದಿಗೆ ಅಷ್ಟಾಗಿ ಅನ್ವಯಿಸದಿದ್ದರೂ ಹಲಗೆಯಾರ್ಯನಿಗೆ ಏನೇನೂ ಸಾಲದೆನಿಸುವುದು.

ಗುಮ್ಮಳಾಪುರದ ಸಿದ್ಧಲಿಂಗ ಮತ್ತು ಸಿದ್ಧವೀರರು ಶರಣರ ವಚನಗಳಲ್ಲಿ ಹಲಗೆಯಾರ್ಯನಷ್ಟು ಪ್ರಕ್ಷೇಪಮಾಡದೆ ಶಿವಗಣಪ್ರಸಾದಿಯಲ್ಲಿರುವ ಮೂಲಪಾಠವನ್ನೇ ಮತ್ತೆ ಬಳಕೆಗೆ ತರಲು ಪ್ರಯತ್ನಿಸಿರುವರಾದರೂ—ಅವರ ಪ್ರಜ್ಞೆಗೇ ಮೀರಿ ತಮಗಿಂತ ಹಿಂದಿನವರು ಪ್ರವರ್ತಿಸಿದ ಪ್ರಕ್ಷೇಪಗಳಲ್ಲಿ ಕೆಲವು ಸಿದ್ಧಲಿಂಗ ಮತ್ತು ಸಿದ್ಧವೀರರ ಶೂನ್ಯಸಂಪಾದನೆಗಳಲ್ಲಿ ಸೇರಿಕೊಂಡಿವೆ.

ಮಹಾದೇವಯ್ಯನು ತನ್ನ ಶೂನ್ಯಸಂಪಾದನೆಯನ್ನು ಕಥಾಪ್ರಸಂಗಗಳಿಗೆ ತಕ್ಕಂತೆ ಉಪಸಂಪಾದನೆಗಳನ್ನಾಗಿ ವಿಭಾಗಿಸಲಿಲ್ಲ. ಅದು ಇಡಿಯಾಗಿ ಒಂದು. ಬಳಸಿರುವ ವಚನಗಳ ಅನುಕ್ರಮಾಂಕವು ಪ್ರಾರಂಭದಿಂದ ಮುಕ್ತಾಯದವರೆಗೆ ಅಖಂಡವಾಗಿ ಮುಂದುವರಿಯುವುದು. ಇದನ್ನೇ ಹಲಗೆಯಾರ್ಯ ಮತ್ತು ಗುಮ್ಮಳಾಪುರದ ಸಿದ್ಧಲಿಂಗ ಅನುಸರಿಸಿರುವರು. ಆದರೆ ಇವರು ಹೊಸದಾಗಿ ಸೇರಿಸಿರುವ ಮತ್ತು ಬದಲಾಗಿ ಪ್ರತಿಸ್ಥಾನಿಸಿರುವ ವಚನಗಳಿಂದಾಗಿ—ಒಂದೇ ವಚನವು ಮೂರೂ ಅಥವಾ ನಾಲ್ಕೂ ಶೂನ್ಯಸಂಪಾದನೆಗಳಲ್ಲಿ ಇದ್ದರೂ—ಅಲ್ಲಿ ಅವುಗಳ ಕ್ರಮಾಂಕವು ಭಿನ್ನಭಿನ್ನವಾಗಿರುವುದು ಅನಿವಾರ್ಯ.

ಈ ಅಖಂಡ ಪ್ರವಾಹಸದೃಶವಾದ ಕಥಾಪೂರವು ಸುಲಭಗವ್ಯವಾಗಲೆಂದು—ಅದನ್ನು ಗೂಳೂರು ಸಿದ್ಧವೀರನು ಹಲವಾರು ಪರಿಚ್ಛೇದಗಳಾಗಿ ವಿಂಗಡಿಸಿ, ಪ್ರತಿ

ಯೊಂದು ಪರಿಚ್ಛೇದ (ಉಪಸಂಪಾದನ)ದ ಆದಿ ಅಂತ್ಯಗಳಲ್ಲಿ ಕಂದ-ಒಕ್ಕಣೆಗಳೆಂಬ ಎಲ್ಲೆ ಕಲ್ಲುಗಳನ್ನು ನಟ್ಟನು.

## ಗ್ರಂಥಸಂಪಾದನೆ

ಶಿವಗಣಪ್ರಸಾದಿ ಮಹಾದೇವಯ್ಯನ ಈ ಪ್ರಭುದೇವರ ಶೂನ್ಯಸಂಪಾದನೆಯೆಂಬ ಈ ಗ್ರಂಥವನ್ನು ಪರಿಷ್ಕರಿಸಲು ಈ ಕೆಳಕಂಡ ಓಲೆಯ ಮತ್ತು ಕಾಗದದ ಪ್ರತಿಗಳನ್ನು ಬಳಸಿಕೊಳ್ಳಲಾಗಿದೆ:

(1) K. 1022 (=ಶಿ). ಇದು ಕನ್ನಡ ಅಧ್ಯಯನಸಂಸ್ಥೆ, ಮಾನಸಗಂಗೋತ್ರಿಯಲ್ಲಿರುವ ಓಲೆಯ ಪ್ರತಿ. ಇದು ಸಮಗ್ರವಾಗಿದ್ದರೂ—ಮೊದಲಲ್ಲಿ ಮತ್ತು ಅಲ್ಲಲ್ಲಿ ಕೆಲವು ಗರಿಗಳು ನಷ್ಟವಾಗಿ ಹೋಗಿವೆ. ಇದರಲ್ಲಿ ಶಕಟರೇಫದ ಬಳಕೆಯಿದ್ದು—ಅದು ಸರಿಯಾಗಿದೆ. ಹಲವಾರು ಲಿಪಿಕಾರ ಸ್ಖಾಲಿತ್ಯಗಳಿದ್ದರೂ—ಇದಕ್ಕೆ ಮೂಲವಾಗಿದ್ದ ಪ್ರತಿ ಕವಿಪ್ರತಿಗೆ ಬಹಳ ಸಮೀಪವಾದುದೆನಿಸುವುದು: "ಸಾಧಾರಣ ಸಂವತ್ಸರದ ಮಾರ್ಗಶಿರ ಶು. 10 ರಲ್ಲೂ ಚಿನ್ನವರದ ಬಸಪ್ಪಯ್ಯನವರಿಗೆ ಗುಮ್ಮಹಾಳಪುರದ ಬರಹದ ಬಸವಣ್ಣ ದೇವರು ಬರೆದ" ಪ್ರತಿಯಿದು.

(2) ಶ್ರೀ. ಎಚ್. ದೇವಿರಪ್ಪ, ಎಂ.ಎ., ಅವರಿಂದ ಎರವಲು ತಂದ ಒಂದು ಓಲೆಯ ಗ್ರಂಥ "ದೇ". ಇದರಲ್ಲಿ ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆಯ 485 ನೇ ವಚನವ ವರೆಗಿನ ಗ್ರಂಥಭಾಗ ಮಾತ್ರವಿದ್ದು—ಉಳಿದದ್ದು ನಷ್ಟವಾಗಿ ಹೋಗಿದೆ. ಇದು ಅಷ್ಟು ಉತ್ತಮವಾದ ಪ್ರತಿಯಲ್ಲದಿದ್ದರೂ—ಶಿಪ್ರತಿಯಲ್ಲಿ ನಷ್ಟವಾಗಿದ್ದ ಭಾಗಗಳನ್ನೆಲ್ಲಾ ಇದರಿಂದ ತುಂಬಿಕೊಳ್ಳಲು ಸಾಧ್ಯವಾಯಿತು.

(3) K.A 105 (=ಹ) ಇದೂ ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿಯಲ್ಲಿನ ಕಾಗದದ ಪ್ರತಿ. ಇದು ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆಯ ಪ್ರತಿಯಲ್ಲ—ಹಲಗೆಯದೇವರ ಶೂನ್ಯಸಂಪಾದನೆಯ ಏಕೈಕ ಪ್ರತಿ. ಇದರಲ್ಲಿ ಶಿವಗಣಪ್ರಸಾದಿ ತನ್ನ ಶೂನ್ಯಸಂಪಾದನೆಗೆ ಬಳಸಿಕೊಂಡಿರುವ ವಚನಗಳೆಲ್ಲಾ ದೊರೆಯುವವು. ಈ ಹಲಗೆಯಾರ್ಯನ ಶೂನ್ಯಸಂಪಾದನೆಯ ಪ್ರತಿಯಲ್ಲಿ "ಶಿ"ಪ್ರತಿಯ ಪಾಠಗಳೆಲ್ಲ ಅಡಕವಾಗಿದ್ದು ಮೇಲಿಷ್ಟು ಪ್ರಕ್ಷಿಪ್ತ ಪಾಠಗಳು ಸೇರಿವೆ. ಈ ಮಿಶ್ರಣ ಸರಳವಾಗಿದ್ದು—ಶಿಪ್ರತಿಯ ಸಹಾಯದಿಂದ ಶಿವಗಣಪ್ರಸಾದಿಯ ಮೂಲಪಾಠವನ್ನು ಬೇರ್ಪಡಿಸಿಕೊಳ್ಳುವುದು ಸುಲಭ:

ಆಡಿ ಕಾಲು ದಣಿಯವು. ನೋಡಿ ಕಣ್ಣು ದಣಿಯವು. ಹಾಡಿ (ಬಾಯಿ=) ಮನ

ವಣಿಯದಿನ್ನೇವೆನಿನ್ನೇವೆನಯ್ಯ, ನಿಮ್ಮ(=ನಿಮ್ಮುವ) ಕೈಮುಟ್ಟಿ ಪೂಜಿಸಿ ಮನ(=ಕೈ) ದಣಿಯಲೊಲ್ಲದಿನ್ನೆವೆ( + ನಿನ್ನೇವೆ. ನಿಮ್ಮ ಮೂರುತಿ ಧ್ಯಾನದಿಂದೆನ್ನ ಮನ ನೆನೆನೆನೆದು ಎನ್ನ ಮನದಣಿಯಲೊಲ್ಲ ದಿನ್ನೇವೆನಿನ್ನೇವೆ.) ಕೂಡಲಸಂಗಮದೇವ ನಿಮ್ಮ ಉದರವ ಬಗಿದು ಹೊಗುವ ಭರವಸವೆನಗೆ. (ಶಿ. 713, ಹ 1283).

Note: ಕಂಸಾಂತರ್ಗತವಾದ ಪಾಠ ಹಲಗೆಯ ದೇವನ ಶೂನ್ಯಸಂಪಾದನೆಯದು; ಉಳಿದುದು ಶಿವಗಣಪ್ರಸಾದಿಯದು.

(4) ದಾವಣಗೆರೆಯ D.R.M. ಕಾಲೇಜಿನ ಕನ್ನಡ ಉಪಾಧ್ಯಾಯರಾದ ಶ್ರೀಯುತ ಉಮಾಪತಿ, ಎಂ.ಎ., ಅವರು ಕೃಪೆಯಿಟ್ಟು ಕೊಟ್ಟ ಗೂಳೂರು ಸಿದ್ಧವೀರನ ಶೂನ್ಯ ಸಂಪಾದನೆಯ ಕೋರಿ ಕಾಗದದ ಪ್ರತಿ (=ಉ).

(5) ಪ್ರೊ. ಸಂ. ಶಿ. ಭೂಸನೂರುಮಠ, ಎಂ.ಎ., ಅವರು ಸಂಪಾದಿಸಿ ಕ್ರಿ. ಶ. 1958 ರಲ್ಲಿ ಪ್ರಕಟಿಸಿದ "ಗೂಳೂರು ಸಿದ್ಧವೀರಣ್ಣೊಡೆಯರು ಸಂಗ್ರಹಿಸಿದ ಪ್ರಭು ದೇವರ ಶೂನ್ಯಸಂಪಾದನೆ" (=ಗೂ). ಇದರಲ್ಲಿನ ಪಾಠಗಳನ್ನು "ಗೂ" ಎಂಬ, ಪಾಠಾಂತರಗಳನ್ನು "ಗೂ R" ಎಂಬ ಸಂಕೇತದಿಂದ ಸೂಚಿಸಲಾಗಿದೆ.

ಮೇಲಣ ಐದು ಸಾಮಗ್ರಿಗಳನ್ನು ಬಳಸಿಕೊಂಡು ಈ ಶಿವಗಣಪ್ರಸಾದಿಯ ಪ್ರಭುದೇವರ ಶೂನ್ಯಸಂಪಾದನೆಯನ್ನು ಸಂಪಾದಿಸಲಾಗಿದೆ. ಮೇಲಣ ಪ್ರತಿಗಳ ಪರಸ್ಪರ ಸಂಬಂಧವನ್ನು ಮುಂದಣ ರೇಖಾಚಿತ್ರದಿಂದ ತೋರಿಸಿದೆ:




ಉ ಪ್ರತಿಯ ಅಥವಾ ಗೂ ಪ್ರತಿಯ ಪಾಠವನ್ನು ನಾನು ಬಹಳ ಎಚ್ಚರಿಕೆಯಿಂದ—ವಿಷವನ್ನು ವೈದ್ಯಕ್ಕೆ ಬಳಸಿದಂತೆ—ಬಳಸಿಕೊಂಡಿದ್ದೇನೆ. ಏಕೆಂದರೆ ಆ ಪ್ರತಿಗಳು ನನ್ನ ಅಭಿಪ್ರಾಯದಲ್ಲಿ ಮಿಶ್ರ ಪ್ರತಿಗಳು. (ಗುಮ್ಮಳಾಪುರದ ಸಿದ್ಧಲಿಂಗನ ಶೂನ್ಯಸಂಪಾ

ದನೆಯ ಪ್ರತಿಗಳಿಗೂ ಇದೇ ಮಾತು ಅನ್ವಯಿಸುವುದು. ಮುಂದಿನ ವಚನವನ್ನು ಪರಿಶೀಲಿಸಿ:

(೧) [1]ನೀನಳವಡಿಸಿ[1] ಕೊಟ್ಟ ಪದಾರ್ಥ ನಿಮಗರ್ಪಿತವಯ್ಯ, ನಿಮ್ಮ ಆರೋಗಣೆ ಮಹಾ ಆರೋಗಣೆ, ಸಕಲ [2]ಗಣಂಗಳಿಗೆ[2] ಹಿತಾ[3]ರ್ಥ[3] ಕೂಡಲಚೆನ್ನಸಂಗಮದೇವ ನಿನಗೆ [4]ಕ್ಷುತ್ತಿಲ್ಲಾಗಿ[4] ನಾನು ಅರ್ಪಿತವ [5]ಮಾಡಲಿಲ್ಲಯ್ಯ[5].

(೨) ಬಸುಱ[3] ಬಾಯಾಗಿ, ಬಾಯಿ ಬಸುಱಾಗಿ ಇಪ್ಪುದ ತೊಡೆವ, ಕಣ್ಣೆ ತಲೆಯಾಗಿ, ತಲೆಯ ಕಣ್ಣಾಗಿರಿಸಿದ. ಕಾಲೆ ಕೈಯಾಗಿ, ಕೈಯೆ ಕಾಲಾಗಿ ನಡೆಸಿದ. ನೆಳಲ ಸುಟ್ಟು [6]ಉಡುಗೊಱ[3]ಯನೆನಗೆ[6] ಕೊಟ್ಟನು. ಮಥನವಿಲ್ಲದ ಸಂಗಸುಖವ ನೆನಗೆ ತೋಱಿಸಿದನು. ಕೂಡಲಸಂಗಮದೇವ, [7]ಪ್ರಭುವಿನ[7] ಶ್ರೀಪಾದಕ್ಕೆ ಶರಣೆನುತ್ತಿದ್ದೆನು.
833-1411-1224-19-95.

Note: ಮೇಲಣ ಎರಡು ವಚನಗಳಿಗೆ ಕೊಟ್ಟಿರುವ ಪಾಠಾಂತರಗಳಿಂದ—ಶಿಯ ಶುದ್ಧ ಪಾಠವನ್ನು ಬಿಟ್ಟು ಹಲಗೆಯಾರ್ಯನ ಪ್ರಕ್ಷಿಪ್ತ ಪಾಠಗಳನ್ನು ಗುಮ್ಮಳಾಪುರದ ಸಿದ್ಧಲಿಂಗ ಮತ್ತು ಗೂಳೂರು ಸಿದ್ಧವೀರರು ಹೇಗೆ ತಮ್ಮ ಶೂನ್ಯಸಂಪಾದನೆಗಳೊಳಕ್ಕೆ ಸ್ವೇಚ್ಛೆಯಾಗಿ ಮಿಶ್ರಣ ಮಾಡಿಕೊಳ್ಳುತ್ತಿರುವರೆಂಬುದನ್ನು ಕಾಣಬಹುದು. ಆದುದರಿಂದಲೇ ನಾನು ಪ್ರಸ್ತುತಗ್ರಂಥವನ್ನು ಪರಿಷ್ಕರಿಸುವಲ್ಲಿ ಗೂಳೂರು ಸಿದ್ಧವೀರನ ಶೂನ್ಯಸಂಪಾದನೆಯ ಪಾಠಗಳನ್ನು ಗುಮಾನಿಯಿಂದಲೇ ನೋಡುತ್ತ ಬಂದಿರುವೆನು. ಒಂದು ಪಕ್ಷ ಗುಮ್ಮಳಾಪುರದ ಸಿದ್ಧಲಿಂಗನ ಶೂನ್ಯಸಂಪಾದನೆಯ ಪ್ರತಿಗಳು ನನಗೆ ಸಕಾಲದಲ್ಲಿ ಒದಗಿಬಂದಿದ್ದರೆ ಕೂಡ ಹಾಗೇ ಮಾಡುತ್ತಿದ್ದೆನು. (ಆದರೆ ನನಗೆ ಅವು ದೊರೆತುದು ನನ್ನ ಗ್ರಂಥಪರಿಷ್ಕರಣವನ್ನೆಲ್ಲ ಮುಗಿಸಿ ಮುನ್ನುಡಿಯನ್ನು ಬರೆಯುತ್ತಿದ್ದಾಗ.)

ಆದುದರಿಂದ ನಾನು ಮುಖ್ಯವಾಗಿ ಎರಡು ಮೂರು ಪ್ರತಿಗಳ ಆಧಾರದಿಂದ ಪ್ರಸ್ತುತ ಗ್ರಂಥವನ್ನು ಪರಿಷ್ಕರಿಸಿರುವೆನೆಂಬುದನ್ನು ಮತ್ತೊಮ್ಮೆ ಹೇಳಲಿಚ್ಛಿಸುತ್ತೇನೆ.

ಒಟ್ಟಿನಲ್ಲಿ ಈ ನನ್ನ ಸಂಪಾದನಕಾರ್ಯ—ರಾಗಿಹಿಟ್ಟು, ಕೀರೆಸೊಪ್ಪು, ಸಮುದ್ರದ ಉಪ್ಪು—ಈ ಪರಿಮಿತ ಸಾಮಗ್ರಿಗಳಿಂದ ಸಿದ್ಧಗೊಂಡ ಮೋಳಿಗೆ ಮಾರಯ್ಯನ ಮನೆಯ ಅಡಿಗೆಯಂತಿದೆ. ಅಂದು ಅದರಿಂದ ಬಸವಣ್ಣ ತೃಪ್ತಿಪಟ್ಟಿದಾನೆ, ಇಂದು ಇವರಿಂದ ಅವನೂ ಅವನ ಅನುಯಾಯಿಗಳೂ ತೃಪ್ತರಾಗುವರೆಂದು ನಂಬಿದ್ದೇನೆ:

"ಶಿವಯೋಗಿನಿ ಸಂತೃಪ್ತೇ ತೃಪ್ತಂ ಭವತಿ ಚರಾಚರಂ" ಎಂಬುದೇ ನನ್ನ ವಿಶ್ವಾಸ.

---

[1] (ಶಿಗು ಗೂ) ನಮಗೆ ನೀನಳವಡಿಸಿ (ಹ). [2] ಶಿ (ಶಿ ಹ ಗು) ಕರಣಂಗಳಿಗೆ (ಗೂ). [3] (ಶಿ ಗು ಗೂ) ರ್ಥವಯ್ಯ (ಹ). [4] (ಶಿಗೂ) ಕ್ಷುತ್ತಿಲ್ಲವಾಗಿ (ಹ ಗು). [5] (ಶಿ ಗು ಗೂ) ಮಾಡಲಿಲ್ಲವಯ್ಯ (ಹ). [6] (ಶಿ) ಸೀರೆಯನು ಉಡುಗೊರೆಯನೆನಗೆ (ಹ) ಸೀರೆಯ ನೆನಗೆ ಉಡುಗೊರೆಯ (ಗು) (ಗೂ). [7] (ಶಿ ಗು ಗೂ) ಪ್ರಭುದೇವರ (ಹ).

# ಗ್ರಂಥವಿನ್ಯಾಸ

ಮೊದಲೇ ಶ್ರುತಪಡಿಸಿರುವಂತೆ ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯ ಸಂಪಾದನೆ ಗೂಳೂರು ಸಿದ್ಧವೀರನ ಶೂನ್ಯಸಂಪಾದನೆಯಂತೆ ಉಪಸಂಪಾದನೆಗಳಾಗಿ ವಿಭಾಗವಾಗದೆ ಅಖಂಡವಾಗಿರುವುದು. ಓದುಗರು ವಿಚಾರಯಾನದಲ್ಲಿ ಅಲ್ಲಲ್ಲಿ ತಂಗುವ ಸೌಕರ್ಯಕ್ಕಾಗಿ ಅದನ್ನು ಇಪ್ಪತ್ತೆರಡು ಭಾಗ ಮಾಡಿದ್ದೇನೆ. ಆದರೂ ಇಪ್ಪತ್ತೆರಡೇ ಶೀರ್ಷಿಕೆಗಳನ್ನು ಕೊಡದೆ—ಹೆಚ್ಚು ವಿವರಗಳನ್ನು ಓದುಗರಿಗೆ ನೋಡಿದೊಡನೆಯೇ ಒದಗಿಸಲೆಂದು—ಶೀರ್ಷಿಕೆಯನ್ನು ಧಾರಾವಾಹಿಯಾಗಿ ಕೊಟ್ಟಿದ್ದೇನೆ.

ಪ್ರತಿಯೊಂದು ವಚನದ ಕೊನೆಗೂ ಶಿವಗಣಪ್ರಸಾದಿಯ ಶೂನ್ಯಸಂಪಾದನೆಯಲ್ಲಿ ಅವಕ್ಕಿರುವ ಕ್ರಮಾಂಕವನ್ನು ಕೊಡುವುದರ ಜೊತೆಗೆ, ಉಳಿದ ಶೂನ್ಯಸಂಪಾದನೆಗಳಲ್ಲಿ ಆಯಾ ವಚನಕ್ಕಿರುವ ಕ್ರಮಾಂಕವನ್ನು ಕೊಡುವುದರಿಂದ ತೌಲನಿಕ ಅಭ್ಯಾಸಕ್ಕೆ ಹೆಚ್ಚು ಇಂಬು ದೊರೆತಂತಾಗುವುದೆಂದು—ಹಾಗೆ ಮಾಡಲು ಪ್ರಯತ್ನಿಸಿದೆ. ಆದರೆ ನನಗೆ ಗ್ರಂಥಸಂಸ್ಕರಣ ನಡೆಸಿದಾಗ ಗುಮ್ಮಳಾಪುರದ ಸಿದ್ಧಲಿಂಗನ ಶೂನ್ಯಸಂಪಾದನೆಯ ಸುಳಿವು ಸಿಗಲಿಲ್ಲವಾದುದರಿಂದ ಹಲಗೆಯಾರ್ಯನ ಮತ್ತು ಗೂಳೂರು ಸಿದ್ಧವೀರನ ಶೂನ್ಯಸಂಪಾದನೆಗಳಲ್ಲಿನ ಕ್ರಮಾಂಕಗಳನ್ನು ಮಾತ್ರ ಅಲ್ಲಲ್ಲೇ ಕೊಟ್ಟಿದ್ದೇನೆ.

ಆಮೇಲೆ ಪೂಜ್ಯರಾದ ಡಿ. ಎಲ್. ನರಸಿಂಹಾಚಾರ್ಯರು, ಪ್ರೊ. ಸಂ. ಶಿ. ಭೂಸನೂರು ಮಠ ಮತ್ತು ಪ್ರೊ. ಆರ್. ಸಿ. ಹಿರೇಮಠ ಅವರು ಕೃಪೆಮಾಡಿ ನನಗೆ ಒದಗಿಸಿದ ಗುಮ್ಮಳಾಪುರದ ಸಿದ್ಧಲಿಂಗನ ಶೂನ್ಯಸಂಪಾದನೆಯ ಎರಡು ಪ್ರತಿಗಳಿಂದ ಮಹದುಪಕಾರವಾಗಿದೆ. ತತ್ಫಲವಾಗಿ ಶಿವಗಣಪ್ರಸಾದಿಯ ಶೂನ್ಯಸಂಪಾದನೆಯಲ್ಲಿನ ವಚನಗಳ ಕ್ರಮಾಂಕದೊಡನೆ ಉಳಿದ ಮೂರು ಶೂನ್ಯಸಂಪಾದನೆಗಳಲ್ಲಿ ಅವಕ್ಕಿರುವ ಕ್ರಮಾಂಕವನ್ನು ಕೊಟ್ಟು ಸಮಗ್ರವಾದ ಒಂದು ಪಟ್ಟಿಯನ್ನು ಕೊಡಲು ಸಾಧ್ಯವಾಯಿತು. ನಾಲ್ಕು ಶೂನ್ಯಸಂಪಾದನೆಗಳ ತೌಲನಿಕ ಅಧ್ಯಯನಕ್ಕೆ ಈ ಪಟ್ಟಿ ಅಂಜನ ಬಿಂದುವಿನಂತಿದೆ. ಅದನ್ನು 63 ನೇ ಪುಟದಿಂದ ನೋಡಬಹುದು.

ಅಕ್ಕಮಹಾದೇವಿಯ ಪ್ರಸಂಗವನ್ನು ನಾಲ್ಕು ಶೂನ್ಯಸಂಪಾದನೆಗಳಿಂದ ಪಾಠ ಸಂಗ್ರಹಿಸಿ ಸಂಪಾದಿಸಿ—ಒಂದು ತೌಲನಿಕ ದರ್ಶನಕ್ಕೆ ಅನುಮಾಡಿಕೊಟ್ಟಿರುವೆನು.

ಗ್ರಂಥದ ಕೊನೆಗೆ ಹಲಗೆಯಾರ್ಯ-ಸಿದ್ಧಲಿಂಗ-ಸಿದ್ಧವೀರರ ಶೂನ್ಯಸಂಪಾದನೆಗಳಲ್ಲಿ ಬರುವ ಅಧಿಕ ಸಂಪಾದನೆಗಳನ್ನು ಆಯಾ ಮೂಲದಿಂದ ಎತ್ತಿಕೊಂಡು ಮುಂದೆ ಬಂದ ಶೂನ್ಯಸಂಪಾದನೆಗಳಲ್ಲಿನ ಆಯಾ ಭಾಗದೊಡನೆ ಹೋಲಿಸಿ ಪಾಠಾಂತರಗಳನ್ನು ಗುರುತಿಸಿ ಪರಿಷ್ಕರಿಸಿ ಕೊಟ್ಟಿದೆ.

ಹಾಗೆಯೇ ಉಳಿದ ಮೂರು ಶೂನ್ಯಸಂಪಾದನೆಗಳಲ್ಲಿ ಬರುವ ಅಧಿಕ ವಚನಗಳನ್ನೆಲ್ಲ

ಮುಂದಿನ ಸಂಪುಟದಲ್ಲಿ ವರ್ಗೀಕರಿಸಿಕೊಟ್ಟು—ಅವುಗಳ ಬಗ್ಗೆ ಮತ್ತು ಇಡಿಯಾಗಿ ನಾಲ್ಕು ಶೂನ್ಯಸಂಪಾದನೆಗಳ ಬಗ್ಗೆ ನಾನು (ಈ ಗ್ರಂಥವನ್ನು ಜಾಗ್ರತೆ ಪ್ರಕಟಿಸಬೇಕೆಂಬ ಅವಸರದಲ್ಲಿ) ಯಾವ ಯಾವ ವಿಚಾರಗಳನ್ನು ಪೀಠಿಕೆಯಲ್ಲಿ ಪ್ರಸ್ತಾಪಿಸಲಾರದೇ ಹೊದೆನೋ ಅವನ್ನೆಲ್ಲ ಕುರಿತು ವ್ಯವಧಾನದಿಂದ ವಿಮರ್ಶಿಸುವವನಿದ್ದೇನೆ.

ಈ ನನ್ನ ಗ್ರಂಥವನ್ನು ಪ್ರಕಟಿಸಲು ಶ್ರೀ ಬೃಹನ್ಮಠ ಸಂಸ್ಥಾನದವರು ಅಭಿಮಾನದಿಂದ ಮುಂದೆ ಬಂದು ಶ್ರೀಮಠದ ಮಹಾಕರ್ತೃಗಳಿಗೆ ಅದನ್ನು ಅರ್ಪಿಸಿಕೊಂಡು ನನ್ನನ್ನು ಕೃತಾರ್ಥನನ್ನಾಗಿ ಮಾಡಿರುವುದರಿಂದ ಅವರಿಗೆ ನಾನು ಚಿರಋಣಿ.

ಈ ನನ್ನ ಸಾರಸ್ವತ ಸಾಹಸಕ್ಕೆ ನಾನಾ ರೀತಿಯಲ್ಲಿ ಸಹಾಯಮಾಡಿದ ಶ್ರೀಯುತರುಗಳಾದ ಪ್ರೊ. ಆರ್. ಸಿ. ಹಿರೇಮಠ, ಪ್ರೊ. ಸಂ. ಶಿ. ಭೂಸನೂರುಮಠ, ಪ್ರೊ. ಡಿ. ಎಲ್. ನರಸಿಂಹಾಚಾರ್, ಡಾ. ಎಂ. ಎಸ್. ಸುಂಕಾಪುರ, ಎಸ್. ಉಮಾಪತಿ, ಎಂ.ಎ., ಎಚ್. ದೇವಿರಪ್ಪ, ಎಂ.ಎ., ಇವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಪ್ರೊ. ಡಿ. ಜವರೇಗೌಡ, ಎಂ.ಎ., ಅವರು ನನ್ನ ಈ ಗ್ರಂಥಸಂಪಾದನೆಗೆ ಅತ್ಯವಶ್ಯಕವಾಗಿದ್ದ 'ಹ' ಮತ್ತು 'ಶಿ' ಪ್ರತಿಗಳನ್ನು ಸಂಸ್ಥೆಯ ಓಲೆಯ ಭಂಡಾರದಿಂದ ಒದಗಿಸಿರುವರು. ಅದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಕೊನೆಯದಾಗಿ ನನ್ನ ವಿದ್ಯಾರ್ಥಿ ಮಿತ್ರರಾದ ಕೆ. ಅನಂತರಾಮು, ಬಿ.ಎ. ಅವರು ಈ ಗ್ರಂಥದ ಹಸ್ತಪ್ರತಿಯನ್ನು ತಯಾರಿಸುವಲ್ಲಿ ನನಗೆ ಆಸರೆಯಾಗಿ ನಿಂತುದನ್ನು ಎಂದಿಗೂ ಮರೆಯುವಂತಿಲ್ಲ.

ಈ ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟ ಶ್ರೀಯುತರುಗಳಾದ ಜಿ. ಎಚ್. ರಾಮರಾವ್ ಮತ್ತು ಜಿ. ಎಚ್. ಕೃಷ್ಣಮೂರ್ತಿ ಅವರಿಗೆ ನಮಸ್ಕಾರ.

15–7–69
ಮೈಸೂರು

ಎಲ್. ಬಸವರಾಜು

# ವಚನಗಳ ಕ್ರಮಾಂಕಗಳ ಪಟ್ಟಿ

[ನಾಲ್ಕು ಶೂನ್ಯ ಸಂಪಾದನೆಗಳಲ್ಲಿರುವಂತೆ]

**ಸೂಚನೆ:** ಶಿವಗಣ ಪ್ರಸಾದಿಯ ಶೂನ್ಯಸಂಪಾದನೆಯಲ್ಲಿನ ವಚನಗಳ ಕ್ರಮಾಂಕವನ್ನು ಈ ಮುಂದಿನ ಪಟ್ಟಿಯಲ್ಲಿ ಕೊಟ್ಟು ಅವುಗಳ ಪಕ್ಕಪಕ್ಕದಲ್ಲೇ ಕ್ರಮವಾಗಿ ಹಲಗೆಯಾರ್ಯನ, ಗುಮ್ಮಳಾಪುರದ ಸಿದ್ಧಲಿಂಗನ ಮತ್ತು ಗುಳೂರು ಸಿದ್ಧವೀರನ ಶೂನ್ಯಸಂಪಾದನೆಗಳಲ್ಲಿ ಆಯಾ ವಚನಗಳಿಗಿರುವ ಅಂಕಗಳನ್ನು ಕೊಡಲಾಗಿದೆ. ಈ ವಿನ್ಯಾಸದಿಂದ ಮೊದಲನೆ ಶೂನ್ಯಸಂಪಾದನಕಾರನಾದ ಶಿವಗಣಪ್ರಸಾದಿಯನ್ನು ಹಲಗೆಯದೇವ ಮುಂತಾದವರು ಎಷ್ಟು ಅನುಸರಿಸುವರು, ಎಲ್ಲಿ ಅವನನ್ನು ಬಿಟ್ಟು ಬೇರೆಯಾಗಿ ಮತ್ತೆ ಕೂಡಿಕೊಳ್ಳುವರು, ಯಾವ ಸನ್ನಿವೇಶಗಳ ಸ್ಥಳಾಂತರ ಮಾಡುವರು, ಯಾವ ವಚನಗಳನ್ನು ಬಿಡುವರು ಮತ್ತು ಎಷ್ಟು ವಚನಗಳನ್ನು ಹೆಚ್ಚಾಗಿ ಸೇರಿಸುವರು ಮುಂತಾದ ಅಂಶಗಳನ್ನು ಒಂದೇ ನೋಟಕ್ಕೆ ತಿಳಿಯಲು ಸಾಧ್ಯವಾಗುವುದು.

ಏನೇ ಭಿನ್ನಾಭಿಪ್ರಾಯವನ್ನು ಹೊಂದಿದ್ದರೂ—ಉಳಿದ ಶೂನ್ಯಸಂಪಾದನಕಾರರು ಪ್ರಥಮ ಶೂನ್ಯಸಂಪಾದನಕಾರನ ಛಾಯಾನುವರ್ತಿಗಳೆಂಬುದನ್ನು ಯಾರಾದರೂ ಮನಗಾಣಬಹುದು. (ಅವರು ವಚನಗಳನ್ನು ಸಂವಾದವಾಗಿ ಕಟ್ಟುವಲ್ಲಿ ಬಳಸಿರುವ ಸೂತ್ರಪ್ರಾಯವಾದ ಗದ್ಯದ ಬಗ್ಗೆಯೂ ಅವರಿಗೆ ಇದೇ ಮಾತು ಅನ್ವಯಿಸುವುದು.)

ಶಿವಗಣಪ್ರಸಾದಿ, ಹಲಗೆಯಾರ್ಯ ಮತ್ತು ಗುಮ್ಮಳಾಪುರದ ಸಿದ್ಧಲಿಂಗ ಈ ಮೂವರ ಶೂನ್ಯ ಸಂಪಾದನೆಗಳು ಪರಿಚ್ಛೇದ (ಉಪಸಂಪಾದನ) ವಿಭಾಗವಿಲ್ಲದೆ ಅಖಂಡವಾಗಿ ಮುಂದುವರಿದರೆ— ಗೂಳೂರು ಸಿದ್ಧವೀರಣ್ಣೊಡೆಯನದರಲ್ಲಿ ಮಾತ್ರ ಪರಿಚ್ಛೇದ (ಉಪಸಂಪಾದನೆ)ಗಳು ಏರ್ಪಡುವುವು.

ಗ್ರಂಥ ಪರಿಮಿತಿಯಾದರೋ ನಾಲ್ಕು ಶೂನ್ಯಸಂಪಾದನೆಗಳಲ್ಲಿ ಕ್ರಮವಾಗಿ 1012, 1599, 1439 ಮತ್ತು 1543 ವಚನಗಳು ಇರುವುವು. ಕೊಟ್ಟಿರುವ ಈ ಸಂಖ್ಯೆಗಳಲ್ಲಿ ಆಯಾ ಶೂನ್ಯ ಸಂಪಾದನೆಗಳಲ್ಲಿ ಬರುವ ಹಾಡುಗಳ ಪದ (ನುಡಿ)ಗಳ ಸಂಖ್ಯೆಯೂ ಸೇರಿರುವುದನ್ನು ಗಮನಿಸಬೇಕು.

ಈ ವಿಧವಾದ ವಚನಸಂಖ್ಯಾದೃಷ್ಟಿಯಿಂದ ಶಿವಗಣಪ್ರಸಾದಿಯ $\frac{1}{3}$ ಭಾಗದಷ್ಟು ಅಧಿಕವಾಗಿ ಉಳಿದ ಮೂರು ಶೂನ್ಯಸಂಪಾದನೆಗಳಲ್ಲಿ ಒಂದೊಂದರಲ್ಲೂ ಸೇರಿದೆಯೆಂದೂ ಸ್ಥೂಲವಾಗಿ ಹೇಳಬಹುದು.

ಶೂನ್ಯಸಂಪಾದನೆಗಳಲ್ಲಿ ಅತ್ಯಂತ ಬೃಹತ್ತಾದುದು ಹಲಗೆಯಾರ್ಯನದು, ಸಂಗ್ರಹವಾದುದು ಶಿವಗಣಪ್ರಸಾದಿಯದು.

ಮುಂದಿನ ಕ್ರಮಾಂಕಗಳಲ್ಲಿ ತಲೆದೋರುವ ಏರುಪೇರನ್ನು ಓರೆಅಂಕಿಗಳಿಂದ ಸೂಚಿಸಲಾಗಿದೆ.

| | |
|---|---|
| ೧-೧-೧-1-1 | ೮-೮ -೮ -1 -8 |
| ೨-೨-೨-1-2 | ೯-೯ -೯ -1 -9 |
| ೩-೩-೩-1-3 | ೧೦-೧೦-೧೦-1-10 |
| ೪-೪-೪-1-4 | ೧೧-೧೧-೧೧-1-11 |
| ೫-೫-೫-1-5 | ೧೨-೧೨-೧೨- × |
| ೬-೬-೬-1-6 | ೧೩-೧೩-೧೩-1-12 |
| ೭-೭-೭-1-7 | ೧೪-೧೪-೧೪-1-13 |

೧೫-೧೫-೧೫-1-14
೧೬-೧೬-೧೬-1-15
೧೭-೧೭-೧೭-1-16
೧೮-೧೮-೧೮-1-17
೧೯-೧೯-೧೯-1-18
೨೦-೨೦-೨೦-1-19
೨೧-೨೧-೨೧-1-20
೨೨-೨೨-೨೨-1-21
೨೩-೨೩-೨೩-1-22
೨೪-೨೪-೨೪-1-23
೨೫-೨೫-೨೫-1-24
೨೬-೨೬-೨೬-1-25
೨೭-೨೭-೨೭-1-26
೨೮-೨೮-೨೮-1-27
೨೯-೨೯-೨೯-1-28
೩೦-೩೦-೩೦- ×
೩೧-೩೧- × - ×
೩೨-೩೨-೩೧-1-30
೩೩-೩೩-೩೨-1-31
೩೪-೩೪-೩೩-1-32
೩೫-೩೫-೩೪-1-33
೩೬-೩೬-೩೫-1-34
೩೭-೩೭-೩೬-1-35
೩೮-೩೮-೩೭-1-36
೩೯-೩೯-೩೮-1-37
೪೦-೪೦-೩೯-1-38
೪೧-೪೧-೪೦-1-39
೪೨-೪೨-೪೧-1-40
೪೩-೪೩-೪೨-1-41
೪೪-೪೪-೪೩-1-42
೪೫-೪೫-೪೪-1-43
೪೬-೪೬-೪೫-1-44

೪೭-೪೭-೪೬-1-46
೪೮-೪೮-೪೭-1-47
೪೯-೪೯-೪೮-1-49
೫೦-೫೦-೪೯-1-51
೫೧-೫೧-೫೦-1-52
೫೨-೫೨-೫೧-1-53
೫೩-೫೩-೫೨-1-54
೫೪-೫೪-೫೩-1-55
೫೫-ಪ್ರ. ೪೨-೫೪-1-56>
೫೬- ,, -೫೫-1-58>
೫೭-ಪ್ರ. ೪೩-೫೬-1-57<
೫೮- ,, -೫೭-1-59<
೫೯- ,, -೫೮-1-60
೬೦- × -೫೯-1-61
೬೧-ಪ್ರ. ೪೩-೬೦-1-62
೬೨- ,, -೬೧-1-63
೬೩- ,, -೬೨-1-64
೬೪- ,, -೬೩-1-65
೬೫- ,, -೬೪-1-66
೬೬- ,, -೬೫-1-67
೬೭-ಪ್ರ. ೪೪-೬೬-1-68
೬೮- ,, -೬೭-1-69
೬೯- ,, -೬೮-1-70
೭೦- ,, -೬೯-1-71
೭೧- ,, -೭೦-1-72
೭೨- ,, -೭೧-1-73
೭೩- ,, -೭೨-1-74
೭೪-೫೫-೭೩-1-75
೭೫-೫೬-೮೪-1-76
೭೬-೫೭-೭೫-1-77
೭೭-೫೮-೭೬-1-78

೨

೭೮-೫೯ -೭೭ -2-1>
೭೯-೬೦ -೭೮ -2-4
೮೦-೬೧ -೭೯ -2-2<
೮೧-೬೨ -೮೦- 2-3<
೮೨-೬೩ -೮೧ -2-5
೮೩-೬೪ -೮೨ -2-6
೮೪-೬೫ -೮೩ -2-7
೮೫-೬೬ -೮೪ -2-9
೮೬-೬೭ -೮೫ -2-10
೮೭-೬೮ -೮೬ -2-11
೮೮-೭೦ -೮೭ -2-12
೮೯-೭೧ -೮೮ -2-13
೯೦-೭೨ -೮೯ -2-15
೯೧-೭೩ -೯೦ -2-16
೯೨-೭೪ -೯೧ -2-17
೯೩-೭೫ -೯೨ -2-18
೯೪-೭೬ -೯೩ -5-19
೯೫-೭೭ -೯೪ -2-20
೯೬-೭೮ -೯೫ -2-21
೯೭-೭೯ -೯೬ -2-22
೯೮-೮೦ -೯೭ -2-23
೯೯-೮೧ -೯೮ -2-24
೧೦೦-೮೨ -೯೯ -2-25
೧೦೧-೮೨ -೧೦೦-2-26
೧೦೨-೮೪ -೧೦೧-2-27
೧೦೩-೮೫ -೧೦೨-2-28
೧೦೪-೮೬ -೧೦೩-2-29
೧೦೫-೮೭ -೧೦೪-2-30
೧೦೬-೮೮ -೧೦೫-2-31
೧೦೭-೮೯ -೧೦೬-2-32
೧೦೮-೯೦ -೧೦೭-2-33
೧೦೯-೯೧ -೧೦೮-2-34
೧೧೦-೯೨ -೧೦೯-2-35
೧೧೧-೯೩ -೧೧೦-2-36
೧೧೨-೯೪ -೧೧೧-2-37
೧೧೩-೯೫ -೧೧೨-2-38
೧೧೪-೯೬ -೧೧೩-2-39
೧೧೫-೯೭ -೧೧೪-2-40
೧೧೬-೯೮ -೧೧೫-2-41

೩

೧೧೭-೯೯ -೧೧೬-3-1
೧೧೮-೧೦೦-೧೧೭-3-2
೧೧೯-೧೦೧-೧೧೮-3-3
೧೨೦-೧೦೨-೧೧೯-3-4
೧೨೧-೧೦೩-೧೨೦-3-5
೧೨೨-೧೦೪-೧೨೧-3-6
೧೨೩-೧೦೫-೧೨೨-3-7
೧೨೪-೧೦೬-೧೨೩-3-8
೧೨೫-೧೦೭-೧೨೪-3-9
೧೨೬-೧೦೭-೧೨೫-3-10
೧೨೭-೧೦೯-೧೨೬-3-11
೧೨೮-೧೧೦-೧೨೭-3-12
೧೨೯-೧೧೧-೧೨೮-3-13
೧೩೦-೧೧೨-೧೨೯-3-14
೧೩೧-೧೧೩-೧೩೦-3-15
೧೩೨-೧೧೪-೧೩೧-3-16
೧೩೩-೧೧೫-೧೩೨-3-17
೧೩೪-೧೧೬-೧೩೩-3-18
೧೩೫-೧೧೭-೧೩೪-3-19
೧೩೬-೧೧೮-೧೩೫-3-20
೧೩೭-೧೧೯-೧೩೬-3-21
೧೩೮-೧೨೦-೧೩೭-3-22
೧೩೯-೧೨೧-೧೩೮-3-23
೧೪೦-೧೨೨-೧೩೯-3-24
೧೪೧-೧೨೩-೧೪೦-3-25

೧೪೨-೧೨೪-೧೪೧-3-26
೧೪೩-೭೮೬-೧೪೨-3-27
೧೪೪-೧೨೫-೧೪೩-3-28
೧೪೫-೧೨೬-೧೪೪-3-29
೧೪೬-೧೨೭-೧೪೫-3-30
೧೪೭-೧೨೮-೧೪೬-3-31
೧೪೮-೧೨೯-೧೪೭-3-32
೧೪೯-೭೮೭-೧೪೮-3-33
೧೫೦-೧೩೦-೧೪೯-3-34
೧೫೧-೧೩೧-೧೫೦-3-35
೧೫೨-೧೩೨-೧೫೧-3-36
೧೫೩-೧೩೩-೧೫೨-3-37
೧೫೪- × -೧೫೩- ×
೧೫೫-೧೩೪-೧೫೪-3-38
೧೫೬-೧೩೫-೧೫೫-3-39
೧೫೭-೧೩೬-೧೫೬-3-40
೧೫೮-೧೩೭-೧೫೮>-3-42>
೧೫೯- × -೧೫೭<-3-41<
೧೬೦-೧೩೮-೧೫೯-3-43
೧೬೧-೧೩೯-೧೬೦-3-44
೧೬೨-೧೪೦-೧೬೧-3-45
೧೬೩-೧೪೧-೧೬೨-3-46
೧೬೪-೧೪೨-೧೫೩-3-47
೧೬೫-೧೪೩-೧೬೪-3-48
೧೬೬-೧೪೪-೧೬೫-3-49
೧೬೭-೧೪೫-೧೬೬-3-50
೧೬೮-೧೪೬-೧೬೭-3-51
೧೬೯-೧೪೭-೧೬೮-3-52
೧೭೦-೧೪೮-೧೬೯-3-53
೧೭೧-೧೪೯-೧೭೦-3-54
೧೭೨-೧೫೦-೧೭೧-3-55
೧೭೩-೧೫೧-೧೭೨-3-56
೧೭೪-೧೫೨-೧೭೩-3-57
೧೭೫- × -೧೭೪-3-58
೧೭೬-೧೫೩-೧೭೫-3-59
೧೭೭-೧೫೪-೧೭೬-3-60
೧೭೮- × -೧೭೭-3-61
೧೭೯-೧೫೫-೫೪೫-3-62
೧೮೦-೧೫೬-೫೪೬-3-63
೧೮೧-೩೮೦-೧೭೮-3-64
೧೮೨-೧೫೭-೧೭೯-3-65
೧೮೩-೩೭೯-೧೮೦-3-66
೧೮೪- { ೧೫೮ / ೩೭೮< } -೧೮೧-3-67
೧೮೫-೩೩೭<-೧೮೨-3-68
೧೮೬-೩೭೬<-೧೮೩-3-69
೧೮೭-೩೭೫<-೧೮೪-3-70
೧೮೮- × - × -3-71
೧೮೯-೧೫೯-೧೮೫-3-72
೧೯೦-೧೬೦-೭೩೩-3-74
೧೯೧-೧೬೧-೧೮೬-3-75
೧೯೨-೧೬೨-೧೮೭-3-76
೧೯೩-೧೬೩-೧೮೮-3-77
೧೯೪-೧೬೪-೧೮೯-3-78
೧೯೫-೧೬೫-೧೯೦-3-79
೧೯೬-೧೬೭-೧೯೧-3-80
೧೯೭-೧೬೮-೧೯೨-3-81
೧೯೮-೧೬೯-೧೯೩-3-82
೧೯೯-೧೭೨-೧೯೪-3-83
೨೦೦-೧೭೩-೧೯೫-3-84
೨೦೧-೧೭೪-೧೯೬-3-85
೨೦೨-೧೭೫-೧೯೭-3-*100*
೨೦೩-೧೭೮-೧೯೮-3-101
೨೦೪-೧೭೯-೧೯೯-3 102

೨೦೫-೧೮೧-೨೦೦-3-103
೨೦೬-೧೮೫-೨೦೧-3-104
೨೦೭-೧೮೬-೨೦೨-3-106
೨೦೮-೧೮೭-೨೦೩-3-107
೨೦೯-೨೧೫-೨೦೪-3-108
೨೧೦-೨೧೬-೨೦೫-3-109
೨೧೧-೨೧೭-೨೦೬-3-110
೨೧೨-೨೧೮-೨೦೭-3-111
೨೧೩-೨೧೯-೨೦೮-3-112
೨೧೪-೨೨೦-೨೦೯-3-113
೨೧೫-೨೨೧-೨೧೦-3-114
೨೧೬-೨೨೨-೨೧೧-3-115
೨೧೭-೨೨೫-೨೧೨-3-116
೨೧೮-೨೨೬-೨೧೩-3-117
೨೧೯-೨೨೭-೨೧೪-3-118
೨೨೦-೨೨೮-೨೧೫-3-119
೨೨೧-೨೨೯-೨೧೬-3-120
೨೨೨-೨೩೦-೨೧೭-3-121
೨೨೩-೨೩೧-೨೧೮-3-122
೨೨೪-೨೩೨-೨೧೯-3-123
೨೨೫-೨೩೩-೨೨೦-3-124
೨೨೬-೨೩೪-೨೨೧-3-125
೨೨೭-೨೩೫-೨೨೨-3-126
೨೨೮-೨೩೬-೨೨೩-3-127
೨೨೯-೨೪೪-೨೨೪-3-128
೨೩೦-೨೪೫-೨೨೫-3-129
೨೩೧-೨೪೭-೨೨೬-3-130
೨೩೨-೨೪೮-೨೨೭-3-133
೨೩೩-೨೪೯-೨೨೮-3-134
೨೩೪-೨೫೦-೨೨೯-3-135
೨೩೫-೨೫೧-೨೩೦-3-136
೨೩೬-೨೫೨-೨೩೧-3-137
೨೩೭-೨೫೩-೨೩೨-3-138
೨೩೮-ಪ್ರ. ೪೪-೨೩೩-3-139
೨೩೯-ಪ್ರ. ೪೫-೨೩೪-3-140

೪

೨೪೦-೩೧೨-೨೩೫-4-1
೨೪೧-೩೧೩-೨೩೬-4-2
೨೪೨-೩೧೪-೨೩೭-4-3
೨೪೩-೩೧೫-೨೩೮-4-4
೨೪೪-೩೧೬-೨೩೯-4-5
೨೪೫-೩೧೭-೨೪೦-4-6
೨೪೬-೩೨೨-೨೪೧-4-7
೨೪೭-೩೨೩-೨೪೨-4-8
೨೪೮- X -೨೪೮-4-9
೨೪೯-೩೨೪-೨೪೪<-4-11
೨೫೦-೩೨೫-೨೪೫<-4-12
೨೫೧-೩೨೬-೨೪೬<-4-13
೨೫೨-೩೨೭-೨೪೭-4-14
೨೫೩-೩೨೮-೨೪೮-4-15
೨೫೪-೩೨೯-೨೪೯-4-16
೨೫೫-೩೩೦-೨೫೦-4-17
೨೫೬-೩೩೧-೨೫೧-4-18
೨೫೭-೩೩೨-೨೫೨-4-19
೨೫೮-೩೩೩-೨೫೩-4-20
೨೫೯-೩೩೫-೨೫೪-4-21
೨೬೦-೩೩೬-೨೫೫-4-22
೨೬೧-೩೩೭-೨೫೬-4-25
೨೬೨-೩೩೮-೨೫೭- ×
೨೬೩-೩೩೯-೨೫೮- ×
೨೬೪-೩೪೦-೨೫೯-4-26
೨೬೫-೩೪೧-೨೬೦-4-27
೨೬೬-೩೪೨-೨೬೧-4-28
೨೬೭-೩೪೩-೨೬೨-4-29

೧೬೮-೩೪೪- × - ×
೧೬೯-೩೪೫-೧೬೪-4-31
೧೭೦-೩೪೬-೩೬೫-4-32

೫

೧೭೧-೩೪೭-೧೬೬-4-33
೧೭೨-ಪು. 58-೧೬೭-4-34
೧೭೩-೩೪೮-೧೬೮-4-35
೧೭೪-೩೪೯-೧೬೯-4-36
೧೭೫-೩೫೦-೧೭೦-4-37

೬

೧೭೬-೩೫೧-೧೭೧-4-38
೧೭೭-೩೫೨-೧೭೨-4-39
೧೭೮-೩೫೩-೧೭೩-4-40
೧೭೯-೩೫೪-೧೭೪-4-41
೧೮೦-೩೫೫-೧೭೫-4-42
೧೮೧-೩೫೬-೧೭೬-4-43

೭

೧೮೨-೩೫೭-೧೭೭- ×
೧೮೩-೩೫೮-೧೭೮- ×
೧೮೪-೩೫೯-೧೭೯- ×
೧೮೫-೩೬೦-೧೮೦- ×
೧೮೬-೩೬೧-೧೮೧- ×
೧೮೭-೩೬೨-೧೮೨- ×
೧೮೮-೩೬೩-೧೮೩-5-1
೧೮೯-೩೬೫-೧೮೪-5-2
೧೯೦-೩೬೬-೧೮೫-5-3
೧೯೧-೩೬೭-೧೮೬-5-4
೧೯೨-೩೬೮-೧೮೭-5-5
೧೯೩-೩೬೯-೧೮೮-5--6
೧೯೪-೩೭೦-೧೮೯-5-7
೧೯೫ ೩೭೧ ೧೯೦ 5 8
೧೯೬ ೩೭೨ ೧೯೧ 5 9
೧೯೭ ೩೭೩ ೧೯೨ 5 10
೧೯೮ ೩೮೨ ೧೯೩ 5 11
೧೯೯ ೩೮೩ ೧೯೪ 5 12
೨೦೦ ೩೮೪ ೧೯೫ 5 13
೨೦೧ ೩೯೧ ೧೯೬ 5 14
೨೦೨ ೩೯೨ ೧೯೭ 5 15
೨೦೩ ೩೯೩ ೧೯೮ 5 16
೨೦೪ ೩೯೪ ೧೯೯ 5 17
೨೦೫ ೩೯೫ ೨೦೦ 5 18
೨೦೬ ೩೯೬ ೨೦೧ 5 19
೨೦೭ ೩೯೭ ೨೦೨ 5 20
೨೦೮ ೩೯೮ ೨೦೩ 5 21
೨೦೯ ೩೯೯ ೨೦೪ 5 22
೨೧೦ ೪೦೦ ೨೦೫ 5 23
೨೧೧ ೪೦೧ ೨೦೬ 5 24
೨೧೨ ೪೦೨ ೨೦೭ 5 25
೨೧೩ ೪೦೩ ೨೦೮ 5 26
೨೧೪ ೪೦೪ ೨೦೯ 5 27
೨೧೫ ೪೦೫ ೨೧೦ 5 28
೨೧೬ ೪೧೯ ೨೧೧ 5 29
೨೧೭ ೪೨೫ ೨೧೨ 5 30
೨೧೮ ೪೨೬ ೨೧೩ 5 31
೨೧೯ ೪೨೭ ೨೧೪ 5 32
೨೨೦ ೪೨೮ ೨೧೫ 5 33
೨೨೧ ೪೨೯ ೨೧೬ 5 34
೨೨೨ ೪೩೦ ೨೧೭ 5 35
೨೨೩ ೪೩೧ ೨೧೮ 5 36
೨೨೪ ೪೩೨ ೨೧೯ 5 37
೨೨೫ ೪೩೩ ೨೨೦ 5 38
೨೨೬ ೪೩೬ ೨೨೧ 5 39
೨೨೭ ೪೩೭ ೨೨೨ 5 40
೨೨೮ ೪೫೨ ೨೨೩ 5 41

೩೨೯ ೪೫೩ ೩೨೪ 5 42
೩೩೦-೪೫೪-೩೨೫-5-43
೩೩೧-೪೫೫-೩೨೬-5-44
೩೩೨-೪೫೬-[೩೨೭ {೨೬೩}]-{4-30}
೩೩೩-೪೫೭-೪೨೮-5-45
೩೩೪-೪೫೮-೩೨೯-5-46
೩೩೫-೪೫೯-೩೩೦-5-47
೩೩೬-೪೬೦-೩೩೧-5-48
೩೩೭-೪೬೧-೩೩೨-5-49
೩೩೮-೪೬೨-೩೩೩-5-50
೩೩೯-೪೬೩-೩೩೪-5-51
೩೪೦-೪೬೪-೩೩೫-5-52
೩೪೧-೪೬೫-೩೩೬-5-53
೩೪೨-೪೭೭-೩೩೭-5-54
೩೪೩-೪೭೮-೩೩೮-5-55
೩೪೪-೪೭೯-೩೩೯-5-56
೩೪೫-೪೮೦-೩೪೦-5-57
೩೪೬-೪೮೧-೩೪೧-5-58
೩೪೭-೪೮೨-೩೪೨-5-59
೩೪೮-೪೮೩-೩೪೩-5-60
೩೪೯-೪೮೪-೩೪೪-5-61
೩೫೦-೪೮೫-೩೪೫-5-62
೩೫೧-೪೮೬-೩೪೬-5-63
೩೫೨-೪೮೭-೩೪೭-5-64
೩೫೩-೪೮೮-೩೪೮-5-65
೩೫೪-೪೮೯-೩೪೯-5-66
೩೫೫-೪೯೦-೩೫೦-5-67
೩೫೬-೪೯೧-೩೫೧-5-68
೩೫೭-೪೯೨-೩೫೨-5-69
೩೫೮-೪೯೩-೩೫೩-5-70
೩೫೯-೪೯೪-೩೫೪-5-71
೩೬೦-೪೯೫-೩೫೫-5-72
೩೬೧-೪೯೬-೩೫೬-5-73
೩೬೨-೪೯೭-೩೫೭-5-74
೩೬೩-೪೯೯-೩೫೯-5-76
೩೬೪-೫೦೦-೩೬೦-5-77
೩೬೫-೫೦೧-೩೬೧-5-78
೩೬೬-೫೧೫-೩೬೨-5-79
೩೬೭-೫೧೬-೩೬೩-5-80
೩೬೮-೫೧೭-೩೬೪-5-81
೩೬೯-೫೨೩-೩೬೬-5-83
೩೭೦-೫೨೪-೩೬೭-5-84
೩೭೧-೫೨೫-೩೬೮-5-85
೩೭೨-೫೨೬-೩೬೯-5-86
೩೭೩-೫೨೭-೩೭೦-5-87
೩೭೪-೫೨೮-೩೭೧-5-88
೩೭೯-೫೩೪-೩೭೬-5-93 ಹಾಡು

**ಊ**

೩೮೦-೮೯೪- × -6-1
೩೮೧-೮೯೫-೬೬೭-6-2
೩೮೨-೮೯೬-೬೬೮-6-3
೩೮೩-೮೯೭-೬೬೯-6-7
೩೮೪-೯೧೭>-೬೭೦-6-9
೩೮೫-೮೯೮-೬೭೨-6-16
೩೮೬-೮೯೯-೬೭೩-6-17
೩೮೭-೯೦೧-೬೭೪-6-18
೩೮೮-೯೦೨>-೬೭೫-6-19
೩೮೯-೯೦೦<-೬೭೬-6-20
೩೯೦-೯೦೭-೬೭೮-6-22
೩೯೦-೯೦೮-೬೭೯-6-23
೩೯೧-೯೩೯-೬೯೫-6-41
೩೯೨-೯೪೦-೬೯೬-6-42
೩೯೭-....?-೭೦೧-6-47 ಹಾಡು

೩೯೮-೯೩೧<-೭೦೨-6-48
೩೯೯-೯೫೧-೭೦೩-6-49
೪೦೦-೯೫೭-೭೦೪-6-50
೪೦೧-೯೫೮-೭೦೫-6-51

೯

೪೦೨-೯೬೮-೭೧೯-11-1
೪೦೩-೯೬೯-೭೨೦-11-2
೪೦೮- ?-೭೨೫- ? ಹಾಡು
೪೦೯-೯೮೫-೭೨೬-11-8
೪೧೦-೯೮೬-೭೨೭-11-9
೪೧೫- ?-೭೩೨- ? ಹಾಡು
೪೧೬-೯೯೧-೭೩೪-11-15
೪೧೭-೯೯೨-೭೩೫-11-16
೪೧೮-೯೯೩-೭೩೬-11-17
೪೧೯-೯೯೪-೭೩೭-11-18

೧೦

೪೨೦-೯೯೫-೭೩೮-7-1
೪೨೧-೧೦೦೪-೭೩೯-7-2
೪೨೨-೧೦೦೫-೭೪೦-7-3
೪೨೩-೧೦೦೬-೭೪೧-7-4
೪೨೪-೧೦೦೭-೭೪೨-7-5
೪೨೫-೧೦೦೮-೭೪೩-7-6
೪೨೬-೧೦೦೯-೭೪೪-7-7
೪೨೭-೧೦೧೦-೭೪೫-7-8
೪೨೮-೧೦೧೧-೭೪೬-7-9
೪೨೯-೧೦೧೨-೭೪೭-7-10
೪೩೦-೧೦೧೩-೭೪೮-7-11
೪೩೧-೧೦೧೪-೭೪೯-7-12
೪೩೨-೧೦೧೫-೭೫೦-7-13
೪೩೩-೧೦೧೬-೭೫೧-7-14
೪೩೪-೧೦೧೭-೭೫೨-7-15
೪೩೫-೧೦೧೮-೭೫೩-7-16
೪೩೬-೧೦೧೯-೭೫೪-7-17
೪೩೭-೧೦೨೦-೭೫೫-7-18
೪೩೮-೧೦೨೧-೭೫೬-7-19
೪೩೯-೧೦೨೨-೭೫೭-7-20
೪೪೦-೧೦೨೩-೭೫೮-7-21
೪೪೧-೧೦೨೪-೭೫೯-7-22
೪೪೨-೧೦೨೫-೭೬೦-7-23
೪೪೩-೧೦೨೬-೭೬೧-7-24
೪೪೪-೧೦೨೭-೭೬೨-7-25
೪೪೫-೧೦೨೮-೭೬೩-7-26
೪೪೬-೧೦೨೯-೭೬೪-7-27
೪೪೭-೧೦೩೦-೭೬೫-7-28
೪೪೮-೧೦೩೧-೭೬೬-7-29
೪೪೯-೧೦೩೨-೭೬೭-7-30
೪೫೦-೧೦೩೩-೭೬೮-7-31
೪೫೧-೧೦೩೪-೭೬೯-7-32
೪೫೨-೧೦೩೫-೭೭೦-7-33
೪೫೩-೧೦೩೬-೭೭೧-7-34
೪೫೪-೧೦೩೭-೭೭೨-7-35
೪೫೫-೧೦೩೮-೭೭೩-7-36

೧೧

೪೫೬-೫೩೫-೭೭೪-8-1
೪೫೭-೫೩೬-೭೭೫-8-3
೪೫೮-೫೩೭-೭೭೬-8-4
೪೫೯-೫೩೮-೭೭೭-8-5
೪೬೦-೫೩೯-೭೭೮-8-6
೪೬೧-೫೭೭-೭೭೯-8-7
೪೬೨-೫೭೮-೭೮೦-8-8
೪೬೩-೫೭೯-೭೮೧-8-9
೪೬೪-೫೮೦-೭೮೨-8-10
೪೬೫-೫೮೧-೭೮೩-8-11
೪೬೬-೫೮೨-೭೮೪-8-12

೪೬೭-೫೮೩-೭೮೫-8-13

೪೭೨-೫೮೮-೭೯೦-8-18 ಹಾಡು

೪೭೩- ?-೭೯೧-8-19

೪೭೪-೫೪೦-೭೯೨-8-20

೪೭೫-೫೪೧-೭೯೩-8-21

೪೭೬-೫೪೨-೭೯೪-8-22

೪೭೭-೫೪೩-೭೯೫-8-23

೪೭೮-೫೭೪-೭೯೬-8-24

೪೭೯-೫೭೬-೭೯೭-8-25

೪೮೦-೫೮೯-೭೯೮-8-26

೪೮೧-೫೯೦-೭೯೯-8-27

೪೮೨-೫೯೧-೮೦೦-8-28

೪೮೩-೫೯೨-೮೦೧-8-29

೪೮೪-೫೯೩-೮೦೨-8-30

೪೮೫-೫೯೪-೮೦೫-8-31

೪೮೬-೫೯೫-೮೦೬- ×

೪೮೭-೫೯೬-೮೦೭-8-32

೪೮೮-೫೯೭-೮೦೮-8-33

೪೮೯-೫೯೮-೮೦೯-8-34

೪೯೦-೫೯೯-೮೧೦-8-35

೪೯೧-೬೦೦-೮೧೧-8-36

೪೯೨-೬೦೧-೮೧೨-8-37

೪೯೩-೬೦೨-೮೧೩-8-38

೪೯೪-೬೦೩-೮೧೪-8-39

೪೯೬-೬೦೪-೮೧೫-8-40

೪೯೭-೬೩೫-೮೧೬-8-42

೪೯೮-೬೩೭-೮೧೭-8-43

೪೯೯-೬೩೮-೮೧೮-8-44

೫೦೦-೬೩೯-೮೧೯-8-45

೫೦೧-೬೪೦-೮೨೦-8-46

೫೦೨-೬೪೧-೮೨೧-8-47

೫೦೩-೬೪೨-೮೨೨-8-48

೫೦೪-೬೪೩-೮೨೩-8-49

೫೦೫-೬೪೪-೮೨೪-8-50

೫೦೬-೬೪೫-೮೨೫-8-51

೫೦೭-೬೬೯-೮೨೬-8-52

೫೦೮-೬೭೦-೮೨೭-8-53

೫೦೯-೬೭೧-೮೨೮-8-54

[೫೧೦ ೫೪೪] ೬೭೨-೮೨೯-8-55

೫೧೧-೫೪೫-೮೩೦-8-56

೫೧೨-೫೪೬-೮೩೧-8-57

೫೧೩-೫೪೭-೮೩೨-8-68

೫೧೪-೫೪೮-೮೩೩-8-59

೫೧೫-೫೪೯-೮೩೪-8-60

೫೧೬-೫೫೦-೮೩೫-8-61

೫೧೭-೫೫೧-೮೩೬-8-62

೫೧೮-೫೫೨-೮೩೭-8-63

೫೧೯-೫೫೩-೮೩೮-8-64

೫೨೦-೫೫೪-೮೩೯-8-65

೫೨೧-೫೫೫-೮೪೦-8-66

೫೨೨-೫೫೬-೮೪೧-8-67

೫೨೩-೫೫೭-೮೪೨-8-68

೫೨೪-೫೫೮-೮೪೩-8-69

೫೨೯-೫೬೩-೮೪೮-8-74

೫೩೦-೫೬೪-೮೪೯-8-75

೫೩೧-೫೬೫-೮೫೦-8-76

೫೩೨-೬೭೩-೮೫೧-8-77

೫೩೩-೬೭೪-೮೫೨-8-78

೫೩೪-೬೭೫-೮೫೩-8-79

೫೩೫-೬೭೬-೮೫೪-8-80

೫೩೬-೬೭೭-೮೫೫-8-81

೫೩೭-೬೭೮-೮೫೬-8-82

೫೩೮-೬೭೯-೮೫೭-8-83

೫೩೯-೬೮೦-೮೫೮-8-84

೧೨

೫೪೦-೬೮೧-೩೮೨-9-1
೫೪೧-೬೮೨-೩೮೩-9-2
೫೪೨-೬೮೩-೩೮೪-9-4
೫೪೩-೬೮೪-೩೮೫-9-5
೫೪೪-೬೮೫-೩೮೬-9-6
೫೪೫-೬೮೬-೮೬೪-9-7
೫೪೬-೬೮೭-೮೬೫-9-8
೫೪೭-೬೮೮-೮೬೬-9-9
೫೪೮-೬೮೯-೮೬೭-9-10
೫೪೯-೬೯೦-೮೬೮-9-11
೫೫೦-೬೯೧-೮೬೯-9-12
೫೫೧-೬೯೨-೮೭೦-9-13
೫೫೨-೬೯೩-೮೭೧-9-14
೫೫೩-೬೯೪-೮೭೨-9-15
೫೫೪-೬೯೫-೮೭೩-9-16
೫೫೫-೬೯೬-೮೭೪-9-17
೫೫೬-೬೯೭-೮೭೫-9-18
೫೫೭-೬೯೮-೮೭೬-9-19
೫೫೮-೬೯೯-೮೭೭-9-20
೫೫೯-೭೦೦-೮೭೮-9-21
೫೬೦-೭೦೧-೮೭೯-9-22
೫೬೧-೭೦೨-೮೮೦-9-23
೫೬೨-೭೦೩-೮೮೧-9-26
೫೬೩-೭೦೪-೮೮೨-9-27
೫೬೪-೭೦೫-೮೮೩-9-28
೫೬೫-೭೦೬-೮೮೪-9-29
೫೬೬-೭೦೭ ೮೮೫-9-30
೫೬೭-೭೦೮- × - ×
೫೬೮-೭೦೯-೮೮೬-9-31
೫೬೯-೭೧೦-೮೮೭-9-32
೫೭೦-೭೧೧- × - ×
೫೭೧-೭೧೨-೮೮೮-9-33
೫೭೨-೭೧೩-೮೮೯-9-36
೫೭೩-೭೧೪-೮೯೦-9-37
೫೭೪-೭೧೫-೩೮೭-9-38
೫೭೫-೭೧೬-೩೮೮-9-39
೫೭೬-೭೧೭-೨೮೯-9-40
೫೭೭-೭೧೮-೩೯೦-9-41
೫೭೮-೭೧೯-೩೯೧-9-42
೫೭೯-೭೨೦-೩೯೨-9-43
೫೮೦-೭೨೧-೩೯೩-9-44
೫೮೧-೭೨೨-೩೯೪-9-45
೫೮೨-೭೨೩-೩೯೫-9-46
೫೮೩-೭೨೪-೩೯೬-9-47
೫೮೪-೭೨೫-೩೯೭-9-48
೫೮೫-೭೨೬-೩೯೮-9-49
೫೮೬-೭೨೭-೩೯೯-9-50
೫೮೭-೭೨೮-೪೦೦-9-51
೫೮೮-೭೨೯-೪೦೧-9-52
9-53

೧೩

೫೮೯-೭೩೦-೪೦೨-10-5
೫೯೦-೭೩೧-೪೦೩-10-6
೫೯೧-೭೩೨-೪೦೪-10-7
೫೯೨-೭೩೩-೪೦೫-10-8
೫೯೩-೭೩೪-೪೦೬-10-9
೫೯೪-೭೩೬-೪೦೭-10-11

ಸಿದ್ಧರಾಮನ ದೀಕ್ಷೆಯ ಘಟ್ಟ

೫೯೫-೮೭೩-೫೨೬-10-58
೫೯೬-೮೧೧-೪೯೧-10-1
೫೯೭-೮೧೨-೪೯೨-10-44
೫೯೮-೮೭೪-೬೪೩-10-102

೫೯೯-೮೭೫-೬೪೪-10-103

೬೦೦-೮೭೬-೬೪೫-{10-104 / 10-108}

೬೦೧-೮೭೭-೯೮೭-11-36

೬೦೨-೮೭೮-{೯೮೮ / ೧೨೦೩}-11-37

೬೦೩-೮೭೯-೯೮೯-11-38

೬೦೪-{೯೫೭ / ೮೮೦}-೯೯೦-11-39

೬೦೫-೮೮೧-೯೯೧-11-40

೬೦೬-೮೮೨-೯೯೨-11-41

೬೦೭-೮೮೩-೯೯೩-11-46

೬೦೮-೮೮೪-೯೯೪-11-47

೬೦೯-೮೮೫-೯೯೫-11-48

೬೧೦-೮೮೬-೯೯೬-10-3

೬೧೧-೮೮೭-೯೯೭-11-49

೬೧೨-೮೮೮-೯೯೮-11-53 >

೬೧೩-೮೮೯-೯೯೯-11-54

೬೧೪-೮೯೦-೧೦೦೦-11-52 <

೬೧೫-೮೯೧-೧೦೦೧-11-56

೬೧೬-೮೯೨-೧೦೦೨-11-57

## ೧೪

೬೧೭-೧೧೨೫-೧೦೦೪-16-4

೬೧೮-೧೧೨೬-೧೦೦೫-16-5

೬೧೯-೧೧೨೭-೧೦೦೬-16-6

೬೨೦-೧೧೨೮-೧೦೦೭-16-7

೬೨೦-೧೧೨೯-೧೦೦೮-16-8

೬೨೧-೧೧೩೦-೧೦೦೯-16-9

೬೨೨-೧೧೩೧-೧೦೧೦-16-10

೬೨೩-೧೧೩೩-೧೦೧೪-16-14

೬೨೪-೧೧೩೪-೧೦೧೫-16-23

೬೨೫-೧೧೩೫-೧೦೧೬-16-24

೬೨೬-೧೧೩೬-೧೦೧೭-16-25

೬೨೬A-೧೧೩೯-೧೦೧೮-16-26

೬೨೭-೧೧೪೦-೧೦೧೯-16-27

೬೨೮-೧೧೪೪-೧೦೨೧-16-29

೬೨೯-೧೧೪೫-೧೦೨೨-16-30

೬೩೦-೧೧೪೮-೧೦೨೩-16-31

೬೩೧-೧೧೪೯-೧೦೨೫-16-42

೬೩೨-೧೧೫೦-೧೦೨೬-16-43

೬೩೩-೧೧೫೧-೧೦೨೭-16-44

೬೩೪-೧೧೫೩-೧೦೨೮-16-45

೬೩೫- × -೧೦೨೯-16-46

೬೩೬- × -೧೦೩೦-16-47

೬೩೭-೧೧೫೪-೧೦೩೧-16-48

೬೩೮-೧೧೫೫-೧೦೩೩-16-52

೬೩೯-೧೧೫೬-೧೦೩೪-16-53

೬೪೦-೧೧೬೧>-೧೦೩೫-16-59>

೬೪೧-೧೧೫೮>-೧೦೩೬-16-55<

೬೪೨-೧೧೬೩-೧೦೩೭-16-76

೬೪೩-೧೧೬೯>-೧೦೩೯-16-70

೬೪೪-೧೧೭೦-೧೦೩೯A-16-71

೬೪೫-೧೧೭೧-೧೦೪೦-16-75

೬೪೭-[೦೧೬೪< / ೧೧೮೫]-೧೦೫೫-1-692

## ೧೫

೬೪೭-೧೨೨೧-೧೦೫೬-17-1

೬೪೮-೧೨೨೨-೧೦೫೭-17-2

೬೪೯-೧೨೨೩-೧೦೫೮-17-3

೬೫೦-೧೨೨೪-೧೦೫೯-17-4

೬೫೧-೧೨೨೫-೧೦೬೦-17-5

೬೫೨-೧೨೨೬-೧೦೬೧-17-6

೬೫೩-೧೨೨೭-೧೦೬೨-17-7

೬೫೪-೧೨೨೮-೧೦೬೩-17-8

೬೫೫-೧೨೨೯-೧೦೬೪ 17-9

೧೬

೬೫೬-೧೨೩೦-೧೦೬೫-17-12
೬೫೭-೧೨೩೧-೧೦೬೬-17-13
೬೫೮-೧೨೩೨-೧೦೬೭-17-14
೬೫೯-೧೨೩೩-೧೦೬೮-17-15
೬೬೦-೧೨೩೪-೧೦೬೯-17-16
೬೬೧-೧೨೩೫-೧೦೭೦-17-17
೬೯೨-೧೨೩೬-೧೦೭೧-17-18
೬೬೩-೧೨೩೭-೧೦೭೨-17-19
೬೬೪-೧೨೩೮-೧೦೭೩-17-20
೬೬೫-೧೨೩೯-೧೦೭೪-17-21
೬೬೬-೧೨೪೦-೧೦೭೫-17-22
೬೬೭-೧೨೪೧-೧೦೭೬-17-23
೬೬೮-೧೨೪೨-೧೦೭೭-17-24
೬೬೯-೧೨೪೩-೧೦೭೮-17-25

೧೭

೬೭೦-೧೨೪೪-೧೦೭೯-17-26
೬೭೧-೧೨೪೫-೧೦೮೦-17-27
೬೭೨-೧೨೪೬-೧೦೮೧-17-28
೬೭೩-೧೨೪೭-೧೦೮೨-17-29
೬೭೪-೧೨೪೮-೧೦೮೩-17-30
೬೭೫-೧೨೪೯-೧೦೮೪-17-31
೬೭೬-೧೨೫೦-೧೦೮೫-17-32
೬೭೭-[೧೨೫೧<br>೪೦೬]-೧೦೯೬-17-33
೬೭೮-೧೨೫೨-೧೦೮೭-17-34
೬೭೯-೧೨೫೩-೧೦೮೮-17-35
೬೮೦-೧೨೫೩-೧೦೮೯-17-36
೬೮೧-೧೨೫೫-೧೦೯೦-17-37
೬೮೨-೧೨೫೬-೧೦೯೧-17-38
೬೮೩-೧೨೫೭-೧೦೯೨-17-39
೬೮೪-೧೨೫೮-೧೦೯೩-17-40
೬೮೫-೧೨೫೯-೧೦೯೪-17-41
೬೮೬-೧೨೬೦-೧೦೯೫-17-42
೬೮೭-೧೨೬೧-೧೦೯೬-17-43
೬೮೮-೧೨೬೨-೧೦೯೭-17-44
೬೮೯-೧೨೬೩-೧೦೯೮-17-45
೬೯೦-೧೨೬೪-೧೦೯೯-17-46
೬೯೧-೧೨೬೫-೧೧೦೦-17-48
೬೯೨-೧೨೬೬-೧೧೦೧-17-49
೬೯೩-೧೨೬೭-೧೧೦೨-17-50
೬೯೪-೧೨೬೮-೧೧೦೩-17-51
೬೯೫-೧೨೬೯-೧೧೦೪-17-52
೬೯೬-೧೨೭೦-೧೧೦೫-17-53
೬೯೭-೧೨೭೧-೧೧೦೬-17-54
೬೯೮೧-೨೭೨-೧೧೦೭-17-55
೬೯೯-೧೨೭೩-೧೧೦೮-17-56
೭೦೦-೧೨೭೪-೧೧೦೯-17-57
೭೦೧-೧೨೭೫-೧೧೧೦-17-58
೭೦೨-೧೨೭೬-೧೧೧೧-17-59
೭೦೩-೧೨೭೭-೧೧೧೨-18-1
೭೦೪-೧೨೭೮-೧೧೧೩-18-2
೭೦೫-೧೨೭೯-೧೧೧೪-18--3
೭೦೬-೧೨೮೦-೧೧೧೫-18-4
೭೦೭-೧೨೮೧-೧೧೧೬-18-5
೭೦೮-೧೨೮೨-೧೧೧೭-18-6
೭೦೯-೧೨೮೩-೧೧೧೮-18-7
೭೧೦-೧೨೮೪-೧೧೧೯-18-8
೭೧೧-೧೨೮೫-೧೧೨೦-18-9
೭೧೨-೧೨೮೬-೧೧೨೧-18-10
೭೧೩-೧೨೮೭-೧೧೨೨-18-11
೭೧೪-೧೨೮೮-೧೧೨೩-18-12

೧೮

೭೧೫-೧೨೮೯-೧೧೨೪-18-13
೭೧೬-೧೨೯೦-೧೧೨೫-18-14
೭೧೭-೧೨೯೧-೧೧೨೬-18-15
೭೧೮-೧೨೯೨-೧೧೨೭-18-16
೭೧೯-೧೨೯೩-೧೧೨೮-18-19
೭೨೦-೧೨೯೪-೧೧೨೯-18-20
೭೨೧-೧೨೯೫-೧೧೩೦-18-21
೭೨೨-೧೨೯೬-೧೧೩೧-18-22
೭೨೩-೧೨೯೭-೧೧೩೨-18-23
೭೨೪-೧೨೯೮-೧೧೩೩-18-24
೭೨೫-೧೨೯೯-೧೧೩೪-18-25
೭೨೬-೧೩೦೦-೧೧೩೫-18-26
೭೨೭-೧೩೦೧-೧೧೩೬-18-27
೭೨೮-೧೩೦೨-೧೧೩೭-18-28
೭೨೯-೧೩೦೩-೧೧೩೮-18-29
೭೩೦-೧೩೦೪-೧೧೩೯-18-30
೭೩೧-೧೩೦೫-೧೧೪೦-18-31
೭೩೨-೧೩೦೬-೧೧೪೧-18-32
೭೩೩-೧೩೦೭-೧೧೪೨-18-33
೭೩೪-೧೩೦೮-೧೧೪೩-18-34
೭೩೫-೧೩೦೯-೧೧೪೪-18-35
೭೩೬-೧೩೧೦-೧೧೪೫-18-36
೭೩೭-೧೩೧೧-೧೧೪೬-18-37
೭೩೮-೧೩೧೨-೧೧೪೭-18-38
೭೩೯-೧೩೧೩-೧೧೪೮-18-39
೭೪೦-೧೩೧೪-೧೧೪೯-18-41
೭೪೧-೧೩೧೫-೧೧೫೦-18-42
೭೪೨-೧೩೧೬-೧೧೫೧-18-40
೭೪೩-೧೩೧೭-೧೧೫೨-18-46
೭೪೪-೧೩೧೮-೧೧೫೩-18-47
೭೪೫-೧೩೧೯-೧೧೫೪-18-48
೭೪೬-೧೩೨೦-೧೧೫೫-18-49
೭೪೭-೧೩೨೧-೧೧೫೬-18-50
೭೪೮-೧೩೨೨-೧೧೫೭-18-51
೭೪೯-೧೩೨೩-೧೧೫೮-18-52
೭೫೪-೧೩೨೮-೧೧೬-೩18-57 ಹಾಡು
18-58
18-59

೧೯

೭೫೫-೧೩೨೯-೧೧೬೪-19-1
೭೫೬-೧೩೩೦-೧೧೬೫-19-2
೭೫೭-೧೩೩೧-೧೧೬೬19-3
೭೫೮-೧೩೩೨-೧೧೬೭-19-4
೭೫೯-೧೩೩೩-೧೧೬೮-19-5
೭೬೦-೧೩೩೪-೧೧೬೯-19-6
೭೬೧-೧೩೩೫-೧೧೭೦-19-7
೭೬೨-೧೩೩೬-೧೧೭೧-19-8
೭೬೩-೧೩೩೭-೧೧೭೨-19-9
೭೬೪-೧೩೩೮-೧೧೭೩-19-10
೭೬೫-೧೩೩೯-೧೧೭೪-19-11
೭೬೬-೧೩೪೦-೧೧೭೫-19-12
೭೬೭-೧೩೪೧-೧೧೭೬-19-13
೭೬೮-೧೩೪೨-೧೧೭೭-19-14
೭೬೯-೧೩೪೩-೧೧೭೮-19-15
೭೭೦-೧೩೪೪-೧೧೭೯-19-16
೭೭೧-೧೩೪೫-೧೧೮೦-19-17
೭೭೨-೧೯೪೬-೧೧೮೧-19-18
೭೭೩-೧೩೪೭-೧೧೮೨-19-19
೭೭೪-೧೩೪೮-೧೧೮೩-19-20
೭೭೫-೧೩೪೯-೧೧೮೪-19-22
೭೭೬-೧೩೫೦-೧೧೮೫-19-23
೭೭೭-೧೩೫೧-೧೧೮೬-19-24
೭೭೮-೧೩೫೨-೧೧೮೭-19-25

೭೭೯-೧೩೫೩-೧೧೮೮-19-26
೭೮೦-೧೩೫೪-೧೧೮೯-19-27
೭೮೧-೧೩೫೫-೧೧೯೦-19-28
೭೮೨-೧೩೫೬-೧೧೯೧-19-29
೭೮೩-೧೩೫೭-೧೧೯೨-19-30
೭೮೪-೧೩೫೮-೧೧೯೩-19-31
೭೮೫-೧೩೬೦-೧೧೯೪-19-32
೭೮೬-೧೩೬೧-೧೧೯೫-19-33
೭೮೭-೧೩೬೨-೧೧೯೬-19-34
೭೮೮-೧೩೬೩-೧೧೯೭-19-35
೭೮೯-೧೩೬೪-೧೧೯೮-19-42
೭೯೦-೧೩೬೫- × - ×
೭೯೧-೧೩೬೬-೧೨೦೦-19-44
೭೯೨-೧೩೯೭-೧೨೦೧-19-45
೭೯೩-೧೩೬೮-೧೨೦೨-19-46
೭೯೪-೧೩೭೦-೧೨೦೪-19-48
೭೯೫-೧೩೭೧-೧೨೦೫-19-49
೭೯೬-೧೩೭೨-೧೨೦೬-19-50
೭೯೭-೧೩೭೩-೧೨೦೭-19-51
೭೯೮-೧೩೭೪-೧೨೦೮-19-52

೨೦

೭೯೯-೧೩೭೫-೧೨೧೦-19-54
೮೦೦-೧೩೭೬-೧೨೧೧-19-61
೮೦೧-೧೩೭೭-೧೨೧೨-19-62
೮೦೨-೧೩೭೮-೧೨೧೩-19-63
೮೦೩-೧೩೭೯-೧೨೧೪-19-64
೮೦೪-೧೩೮೦-೧೨೧೫-19-65
೮೦೫-೧೩೮೩-೧೨೧೬-19-66
೮೦೬-೧೩೮೪-೧೨೧೭-19-67
೮೦೭-೧೩೮೫-೧೨೧೮-19-68
೮೦೮-೧೩೮೬-೧೨೧೯-19-69
೮೦೯-೧೩೮೭-೧೨೨೦-19-70
೮೧೦-೧೩೮೮-೧೨೨೧-19-71
೮೧೧-೧೩೮೯-೧೨೨೨-19-72
೮೧೨-೧೩೯೦-೧೨೨೩-19-73
೮೧೩-೧೩೯೧-೧೨೨೪-19-74
೮೧೪-೧೩೯೨-೧೨೨೫-19-75
೮೧೫-೧೩೯೩-೧೨೨೬-19-76
೮೧೬-೧೩೯೪-೧೨೨೭-19-77
೮೧೭-೧೩೯೫-೧೨೨೮-19-78
೮೧೮-೧೩೯೬-೧೨೨೯-19-79
೮೧೯-೧೩೯೭-೧೨೩೦-19-80
೮೨೦-೧೩೯೮-೧೨೩೧-19-82
೮೨೧-೧೩೯೯-೧೨೩೨-19-83
೮೨೨-೧೪೦೦-೧೨೩೩-19-84
೮೨೩-೧೪೦೧-೧೨೩೪-19-85
೮೨೪-೧೪೦೨-೧೨೩೫-19-86
೮೨೫-೧೪೦೩-೧೨೩೬-19-87
೮೨೬-೧೪೦೪-೧೨೩೭-19-88
೮೨೭-೧೪೦೫-೧೨೩೮-19-89
೮೨೮-೧೪೦೬-೧೨೩೯-19-90
೮೨೯-೧೪೦೭-೧೨೪೦-19-91
೮೩೦-೧೪೦೮-೧೨೪೧-19-92
೮೩೧-೧೪೦೯-೧೨೪೨-19-93
೮೩೨-೧೪೧೦-೧೨೪೩-19-94
೮೩೩-೧೪೧೧-೧೨೪೪-19-95
೮೩೪-೧೪೧೨-೧೨೪೫-19-96
೮೩೫-೧೪೧೩-೧೨೪೬-19-97
೮೩೬-೧೪೧೪-೧೨೪೭-19-98
೮೩೭-೧೪೧೫-೧೨೪೮-19-99
೮೩೮-೧೪೧೬-೧೨೪೯-19-100
೮೩೯-೧೪೧೭-೧೨೫೦-19-101
೮೪೦-೧೪೧೮-೧೨೫೧-19-102
೮೪೧-೧೪೧೯-೧೨೫೨-19-103

೮೪೨-೧೪೨೦-೧೨೫೩-19-104
೮೪೩-೧೪೨೧-೧೨೫೪-19-105
೮೪೪-೧೪೨೩-೧೨೫೬-19-107
೮೪೫-೧೪೨೪-೧೨೫೭-19-108
೮೪೬-೧೪೨೫-೧೨೫೮-19-109
೮೪೭-೧೪೨೬-೧೨೫೯-19-110
೮೪೮-೧೪೨೭-೧೨೬೦-19-111
೮೪೯-೧೪೨೮-೧೨೬೧-19-112
೮೫೦-೧೪೨೯-೧೨೬೨-19-113
೮೫೧-೧೪೩೦-೧೨೬೩-19-114
೮೫೨-೧೪೩೧-೧೨೬೪-19-115
೮೫೩-೧೪೩೨-೧೨೬೫-19-116
೮೫೪-೧೪೩೩-೧೨೬೬-19-117
೮೫೫-೧೪೩೪-೧೨೬೭-19-118
೮೫೬-೧೪೩೫-೧೨೬೮-19-119
ಹಾಡು ೮೬೧-೧೪೪೦-೧೨೭೩-19-124
೮೬೨-೧೪೪೧-೧೨೭೪-19-126
೮೬೩-೧೪೪೨-೧೨೭೫-19-127
೮೬೪-೧೪೪೩-೧೨೭೬-19-128
೮೬೫-೧೪೪೪-೧೨೭೭-19-129
೮೬೬-೧೪೪೫-೧೨೭೮-19-130
೮೬೭-೧೪೪೬-೧೨೭೯-19-131
೮೬೮-೧೪೪೭-೧೨೮೦-19-132
೮೬೯-೧೪೪೮-೧೨೮೧-19-133
೮೭೦-೧೪೪೯-೧೨೮೨-19-134
೮೭೧-೧೪೫೦-೧೨೮೩-19-135
೮೭೨-೧೪೫೧-೧೨೮೪-19-136
೮೭೩-೧೪೫೨-೧೨೮೫-19-137
೮೭೪-೧೪೫೩-೧೨೮೬-19-138
೮೭೫-೧೪೫೪-೧೨೮೭-19-139
೮೭೬-೧೪೫೫-೧೨೮೮-19-140
೮೭೭-೧೪೫೬-೧೨೮೯-19-141

೮೭೮-೧೪೫೭-೧೨೯೦-19-142
೮೭೯-೧೪೫೮-೧೨೯೧-19-143
೮೮೦-೧೪೫೯-೧೨೯೨-19-144
೮೮೧-೧೪೬೦-೧೨೯೩-19-145
೮೮೨-೧೪೬೧-೧೨೯೪-19-146
೮೮೩-೧೪೬೨-೧೨೯೫-19-147
೮೮೪-೧೪೬೩-೧೨೯೬-19-148
೮೮೫-೧೪೬೪-೧೨೯೭-19-151
೮೮೬-೧೪೬೫-೧೩೦೦-19-152
೮೮೭-೧೪೬೬-೧೩೦೧-19-153
೮೮೮-೧೪೬೭-೧೩೦೨-19-154
೮೮೯-೧೪೬೮-೧೩೦೩-19-155
೮೯೦-೧೪೬೯-೧೩೦೪-19-156
೮೯೧-೧೪೭೦-೧೩೦೫-19-157
೮೯೨-೧೪೭೧-೧೩೦೬-19-158
೮೯೩-೧೪೭೨-೧೩೦೭-19-159
೮೯೪-೧೪೭೩-೧೩೦೮-15-54
೮೯೫-೧೪೭೪-೧೩೦೯-15-55

೨೧

೮೯೬-೧೪೭೫-೧೩೧೦-20-1
೮೯೭-೧೪೭೬-೧೩೧೧-20-2
೮೯೮-೧೪೭೭-೧೩೧೨-20-3
೮೯೯-೧೪೭೮- × -20-4
೯೦೦-೧೪೭೯- × ×
೯೦೧-೧೪೮೦- × ×
೯೦೨-೧೪೮೧- × -20-5
೯೦೩-೧೪೮೨- × -20-6
೯೦೪-೧೪೮೩- × -20-7
೯೦೫-೧೪೮೪- × -20-8
೯೦೬-೧೪೮೫- × -20-9
೯೦೭-೧೪೮೬- × -20-10
೯೦೮-೧೪೮೭- × -20-11

೯೦೯-೧೪೮೮-೧೩೧೮-20-12
೯೧೦-೧೪೮೯ × ×
೯೧೧-೧೪೯೦-೧೩೧೩-10-23
೯೧೨-೧೪೯೧ × ×
೯೧೩-೧೪೯೨-೧೩೧೯-10-28
೯೧೪-೧೪೯೩ × ×
೯೧೫-೧೪೯೪ × ×
೯೧೬-೧೪೯೫ × ×
೯೧೭-೧೪೯೬ × ×
೯೧೮-೧೪೯೭ × ×
೯೧೯-೧೪೯೮ × ×
೯೨೦-೧೪೯೯-೧೩೧೬-20-16
೯೨೧-೧೫೦೦-೧೩೧೭-20-17
೯೨೨-೧೫೦೧-೧೩೧೫-20-15
೯೨೩-೧೫೦೨-೧೩೨೦-20-29
೯೨೪-೧೫೦೩-೧೩೩೩-20-35
೯೨೫-೧೫೦೪-೧೩೩೪-20-36
೯೨೬-೧೫೦೫ × 20-29
೯೨೭-೧೫೦೬-೧೩೩೫-20-38
೯೨೮-೧೫೦೭-೧೩೩೬-20-39
೯೨೯-೧೫೦೮-೧೩೩೭-20-40
೯೩೦-೧೫೦೯-೧೩೩೮-20-41
೯೩೧-೧೫೧೦-೧೩೩೯-20-42
೯೩೨-೧೫೧೧-೧೩೪೦-20-43
೯೩೩-೧೫೧೨-೧೩೪೧-20-44
೯೩೪-೧೫೧೩-೧೩೪೨-20-45
೯೩೫-೧೫೧೪-೧೩೪೩-20-46
೯೩೬-೧೫೧೫-೧೩೪೪-20-47
೯೩೭-೧೫೧೬-೧೩೪೫-20-48
೯೩೮-೧೫೧೭-೧೩೪೭-20-49
೯೩೯-೧೫೧೮-೧೩೪೮-20-51
೯೪೦-೧೫೧೯-೧೩೪೯-20-52
೯೪೧-೧೫೨೦-೧೩೫೦-20-53
೯೪೨-೧೫೨೧-೧೩೫೧-20-54
೯೪೩-೧೫೨೨-೧೩೫೪-20-55
೯೪೪-೧೫೨೩-೧೩೫೫-20-56
೯೪೫-೧೫೨೪-೧೩೫೬-20-57
೯೪೬-೧೫೨೫-೧೩೫೭-20-58
೯೪೭-೧೫೨೬-೧೩೫೮-20-59
೯೪೮-೧೫೨೭-೧೩೬೦-20-68
೯೪೯-೧೫೨೮-೧೩೬೧-20-69
೯೫೦-೧೫೨೯-೧೩೬೨-20-70
೯೫೧-೧೫೩೦-೧೩೬೩-20-71
೯೫೨-೧೫೩೧-೧೩೬೪-20-72
೯೫೩-೧೫೩೨-೧೩೬೫-20-73
೯೫೪-೧೫೩೩-೧೩೬೬-20-74
೯೫೫-೧೫೩೪-೧೩೬೭-20-75
೯೫೬-೧೫೩೫-೧೩೬೮-20-76
೯೫೭-೧೫೩೬-೧೩೬೯-20-77
೯೫೮-೧೫೩೭-೧೩೭೦-20-78
೯೫೯-೧೫೩೮-೧೩೭೧-20-79
೯೬೦-೧೫೩೯-೧೩೭೭-20-85
೯೬೧-೧೫೪೦-೧೩೭೮-20-86
೯೬೨-೧೫೪೧-೧೩೭೯-20-87
೯೬೩-೧೫೪೨-೧೩೮೦-20-88
೯೬೪-೧೫೪೩-೧೩೮೧-20-89
೯೬೫-೧೫೪೪ × 20-91
20-92

೨೨

೯೬೬-೧೫೪೫-೧೩೮೨-21-11
೯೬೭-೧೫೪೬ × ×
೯೬೮-೧೫೪೭-೧೩೮೯-21-12
೯೬೯-೧೫೪೮-೧೩೯೦-21-13
೯೭೦-೧೫೪೯-೧೩೯೧-21-14

೯೭೧-೧೫೫೦-೧೩೯೨-21-15
೯೭೨-೧೫೫೧-೧೩೯೩-21-16
೯೭೩-೧೫೫೨-೧೩೯೪-21-17
೯೭೪-೧೫೫೩-೧೩೯೫-21-18
೯೭೫-೧೫೫೪-೧೩೯೬-21-19
೯೭೬-೧೫೫೫-೧೪೦೮-21-31
೯೭೭-೧೫೫೬-೧೪೦೯-21-32
ಹಾಡು ೯೮೪-೧೫೬೩-೧೪೧೭-21-39
೯೮೫-೧೫೬೪-೧೪೧೮-21-45
೯೮೫ A-೧೫೬೫-೧೪೧೯- ×
೯೮೬-೧೫೬೬- × -21-46
೯೮೭-೧೫೬೭-೧೪೨೦-21-47
ಹಾಡು ೯೯೪-೧೫೭೪- × - ×
೯೯೫-೧೫೭೫-೧೪೨೧-21-48
೯೯೬-೧೫೮೩-೧೪೨೨-21-60
೯೯೭-೧೫೮೪-೧೪೨೩-21-61
೯೯೮-೧೫೮೫-೧೪೨೪-21-62
೯೯೯-೧೫೮೬-೧೪೨೫-21-63
೧೦೦೦-೧೫೮೭-೧೪೨೬-21-64
ಹಾಡು ೧೦೦೫-೧೫೯೨-೧೪೩೧-21-69
೧೦೦೬-೧೫೯೩-೧೪೩೨-21-70
೧೦೦೭-೧೫೯೪-೧೪೩೩-21-71
೧೦೦೮-೧೫೯೫-೧೪೩೪-21-72
೧೦೦೯-೧೫೯೬-೧೪೩೬-21-74
೧೦೧೦-೧೫೯೭-೧೪೩೭-21-76
೧೦೧೧-೧೫೯೮-೧೪೩೮-21-78
೧೦೧೨-೧೫೯೯-೧೪೩೯-21-79

### ಶಿವಗಣಪ್ರಸಾದಿ ಮಹಾದೇವಯ್ಯನ

# ಪ್ರಭುದೇವರ
# ಶೂನ್ಯಸಂಪಾದನೆ

ಶ್ರೀಮತ್ಪರಮತತ್ವ, ಪರಮಾನಂದ, ಪರಂಜ್ಯೋತಿ, ಪರಮೇಶ್ವರ, ಅಗಮ್ಯ, ಅಗೋಚರ, ಅಪ್ರಮೇಯ, ಅನಾಮಯ, ಅನುಪಮ, ಅಪ್ರತರ್ಕ್ಯ, ಮಹಾಜ್ಞಾನ ಪ್ರಭಾಮಯ, ಯಮ-ನಿಯಮಾಸನ-ಪ್ರಾಣಾಯಾಮ-ಪ್ರತ್ಯಾಹಾರ ಧ್ಯಾನ-ಧಾರಣ ಸಮಾಧ್ಯಷ್ಟಾಂಗಯೋಗೀಶ್ವರ, ದೇಹೇಂದ್ರಿಯಮನಃಪ್ರಾಣಾಹಂಕಾರಾದಿ ಗುಣ ಧರ್ಮ ಕರ್ಮ ನಿರ್ಲೇಪನ, ಸಕಲಭುವನಭವನಾಂತರಂಗ, ನಿತ್ಯನಿರ್ಮಲಸ್ವರೂಪ, ಶಿವಶರಣ ಹೃತ್ಕಮಲ ಕರ್ಣಿಕಾವಾಸಮತ್ತಮಧುಕರಾಯಮಾನ ಇಷ್ಟಲಿಂಗ ಪ್ರಾಣಲಿಂಗ ತೃಪ್ತಿಲಿಂಗಾಲಿಂಗಿತಾಂಗಲೇಪ, ಗುರುಲಿಂಗ ಜಂಗಮ ಪ್ರಸಾದ-ಪಾದೋದಕಾದಿ ಪಂಚಾಚಾರ ಪ್ರತಿಷ್ಠಾಪನಾಚಾರ್ಯ, ಭಕ್ತ-ಮಾಹೇಶ್ವರ-ಪ್ರಸಾದಿ-ಪ್ರಾಣಲಿಂಗಿ-ಶರಣೈಕ್ಯಾದಿ ಷಟ್ಸ್ಥಲಚಕ್ರವರ್ತಿ, ಬಸವ-ಚೆನ್ನಬಸವರಾಜ ಪ್ರಾಣನಾಯಕ, ಶ್ರೀ ವೀರಶಿವಾಚಾರ ಶಿರೋರತ್ನ, ಶ್ರೀ ವೀರಶಿವಾಚಾರ ಪ್ರಥಮನಾಯಕ, ಶ್ರೀ ವೀರಶಿವಾಚಾರ ಶಿವಾಚಾರ್ಯ, ಮರ್ತ್ಯಲೋಕಪಾವನಕಾರಣಾವತಾರ, ಅನಿಮಿಷ ಶ್ರೀ ಚರಣಾಂಭೋಜಾತಕರ್ಣಿಕಾವಾಸ, ಗುಹೇಶ್ವರನಾಮಾಮೃತಸ್ವೀಕಾರಸಂತುಷ್ಟ, ಶ್ರೀಮತ್ಸಕಲ ಜಗದಾಚಾರ್ಯರುಮಪ್ಪ ಅಲ್ಲಮಪ್ರಭುದೇವರು ; ಬಸವರಾಜದೇವರು-ಚೆನ್ನಬಸವರಾಜ ದೇವರು ಮುಖ್ಯವಾದ ಅಸಂಖ್ಯಾತಮಹಾಗಣಂಗಳೊಡನೆ ಮಹಾನುಭಾವ ಪ್ರಸಂಗಮಂ ಮಾಡಿದ ಸರ್ವಕರಣ ಶೂನ್ಯಸಂಪಾದನೆಯ ಸದ್ಗೋಷ್ಠಿ ಕಥಾಪ್ರಸಂಗಮಂ, ಮುಕ್ತಕಮಾಗಿರ್ದ ಶಿವಾದ್ವೈತವಚನಗಳಿಂ, ಉತ್ತರ-ಪ್ರತ್ಯುತ್ತರ ಸಂಬಂಧವಾಗಿ ಸೇರಿಸಿ ಶಿವಗಣಪ್ರಸಾದಿಮಹಾಪೇವಗಳು ಮರ್ತ್ಯಲೋಕದ ಮಹಾಗಣಂಗಳಿಗೆ ಆ ಮಹಾ ಪ್ರಸಂಗಮಂ ಸಮರ್ಪಿಸಿದ ಭೇದವೆಂತಿರ್ದುದೆಂದಡೆ ಪ್ರಥಮದಲ್ಲಿ

## ಪ್ರಭುದೇವರ ಸಾಂಗತ್ಯ

ನಿತ್ಯನಿರಂಜನ ಪರಂಜ್ಯೋತಿಸ್ವರೂಪನಪ್ಪ ಪರಮೇಶ್ವರನ ಶ್ರೀ ಕೈಲಾಸಮಂದಿರದ ಒಡ್ಡೋಲಗದೊಳುಪ್ಪುತ್ತಿರ್ಪ ಅನಂತರುದ್ರಗಣಂಗಳೊಳಗೆ ಅತ್ಯಂತ ಶ್ರೇಷ್ಠನಾಗಿರುತ್ತಿರ್ಪ ನಿರ್ಮಾಯನೆಂಬ ಒಬ್ಬ ಮಹಾಗಣೇಶ್ವರನು ಶಿವನಿಂದಧಿಕವಾಗಿ ಒಪ್ಪುತ್ತಿರಲು, ಆ ಗಣೇಶ್ವರನ ಪ್ರತಾಪಶಕ್ತಿಯನು ಶ್ರೀ ಪಾರ್ವತೀದೇವಿಯರು ಪರಮೇಶ್ವರನ ಕೈಯೊಳು

ಕೇಳಿ, ಈತನ ನಿರ್ಮಾಯನೆಂಬ ಬಿರಿದ ಬಿಡಿಸಿ, ಮಾಯಾಸಕ್ತನಂ ಮಾಡಿತೋಱದಪೆ ನೆಂದು ಜಗನ್ಮಾತೆಯಪ್ಪ ಹೈಮವತಿ ಆ ಶಿವನ ಬೆಸನಂ ಪಡೆದು—ಒಂದು ದಿನ ತನ್ನ ಓಲಗದ ರುದ್ರಕನ್ನಿಕೆಯರೊಳಗೊಬ್ಬ ಅತ್ಯಂತ ಸುರೂಪೆಯಪ್ಪ ಸ್ತ್ರೀಯಂ ಕರೆದು, ಆಕೆಗೆ ಕಾಮಲತೆಯೆಂಬ ನಾಮಮಂ ಕೊಟ್ಟು, ಆ ಸ್ತ್ರೀಗೆ ತನ್ನಿಂದಧಿಕಮಪ್ಪ ಸುರೂಪ ಲಾವಣ್ಯಮಂ ಕರುಣಿಸಿ, ನೀನು ನಿರ್ಮಾಯನೆಂಬ ಗಣೇಶ್ವರಂ ಬಪ್ಪ ದಾರಿಯಲಿ ನಿಂದು, ನಿನ್ನ ವಿಲಾಸಮಂ ನಾನಾ ವಿಧದಿಂ ತೋಱ, ಆತನ ಕಣ್ಮನಕ್ಕೆ ಕಾಮಜಾಲಮಂ ಬೀಸಿ ಸೊಗಸನಿತ್ತು, ಅವನ ಮನದ ನೆನಹು ನಿನ್ನ ಕೂಟಕೆ ಬಪ್ಪ ಹಾಂಗೆ ಮಾಡಿ, ಮಾಯಾಸಕ್ತನಂ ಮಾಡುಹೋಗೆಂದು ನಿರೂಪಿಸಲಾಕನ್ನಿಕೆಯು—ಶ್ರೀ ಪಾರ್ವತೀ ದೇವಿಯರ ಅನುಜ್ಞೆಯಂ ಕೈಕೊಂಡು, ಆ ಗಣೇಶ್ವರನೆಂದಿನಂತು ಶ್ರೀ ಪರಮೇಶ್ವರನ ಓಲಗಕ್ಕೆ ಬಪ್ಪ ದಾರಿಯೊಳ್ ನಿಂದು, ಮುಕ್ತಿದಾನಿಯು ನಿರೂಪಿಸಿದ ಹಾಂಗೆ ತನ್ನ ಸುರೂಪಲಾವಣ್ಯಮಂ ತೋಱ ಮೆಱೆವುತ್ತಿರಲು, ಆಯಕನ ಸೌಂದರ್ಯಮಂ ಕಂಡು ಕಣ್ಸೋಲ್ತು ನೋಡಿ, ಮನಂಮುಟ್ಟೆ ಹಾರೈಸಿ, ಚಿತ್ತ ಸಂಚಲಮಾಗಿ, ಕರಣಂಗಳ್ ಕದಡಿ, ಕಾಮಾತುರಂ ಕೈಮಿಕ್ಕು, ಮೀಱ, ಕೂಟಕ್ಕೆ ತವಕಿಸುತ್ತಾಕ್ಷಣ ತನ್ನೊಳ್ ತಾನೆ ಎಚ್ಚತ್ತು, [1]ಹಾಹಾ ಎನಗೀಮಾಯಾಧೀನವೆಲ್ಲಿಂದೆಲ್ಲಿ ಪುಟ್ಟಿತ್ತೆಂದು ಅನುತಾಪಾಗ್ನಿ ಯೊಳ್ ಕರಗಿ-ಕೊರಗಿ, ತನ್ನತಾನೆ ಸಂತವಿಸಿ, ವಿವೇಕದಿಂ ತಿಳಿದು ನೋಡಿ, ಎನಗಿ, ಸ್ತ್ರೀಯ ದೆಸೆಯಿಂ ಭವಪ್ರಾರಂಭವಾಯಿತೆಂದಱದು, ಚಿಂತಾಕ್ರಾಂತನಾಗಿ, ಎಂದಿನಂತು ಶಿವನ ಓಲಗಕೆ ಬರಲು, ಆ ಸದಾಶಿವನು ಆ ಗಣೇಶ್ವರನ ಸ್ಥಿತಿಗತಿಯಂ ಕಂಡಱದು ನೀನು ಮಾಯೆಗೆ ಮನಸೋಲ್ತ ಕಾರಣ ಮರ್ತ್ಯಲೋಕದಲ್ಲಿ ಹುಟ್ಟಿ, ಆ ರುದ್ರಕನ್ನಿಕೆ ಯೊಳು ಸುರತಸುಖಮಂ ಸುಖಿಸುತ್ತಿರು ಹೋಗೆನಲು, ಆ ನಿರ್ಮಾಯನೆಂಬ ಗಣೇಶ್ವರನು ದೈನ್ಯಂಬಡುತ, "ದೇವ ! ನಿಮ್ಮ ಸನ್ನಿಧಿಯೊಳಗಿರ್ದು ನಿಮ್ಮ ಕರುಣದಿಂದ ಅಧಿಕತರದ ನಾಮಮಂ ಪಡೆದು, ಗಣೇಶ್ವರರೊಳಗೆಲ್ಲ ಅಧಿಕ ಗಣೇಶ್ವರನಾಗಿರ್ದು, ಮರ್ತ್ಯಲೋಕ ದಲ್ಲಿ ಹೋಗಿ ಪುಟ್ಟಿ ನಿಮ್ಮನೆಂತಱದಪೆ"ನೆಂದು ತಲೆಗುತ್ತಿ ಕಂಗಳುದಕಂ ಧಳಧಳನೆ ಸುರಿವುತ್ತಿರಲು, ಆ ಗಣೇಶ್ವರಂಗೆ ಸಚ್ಚಿದಾನಂದಮೂರ್ತಿ ಮುಕ್ತಿಪ್ರದಾಯಕ ನಿರೂಪಿ ಸಿದ: "ಮರ್ತ್ಯವೆಂಬುದು ಎನ್ನ ಕರ್ಮಟ! ಅಲ್ಲಿ ಇದ್ದಡೇನು? ಇಲ್ಲಿ ಇದ್ದಡೇನು? ಎಲ್ಲಿಗಂ ನಾನೆ ಕರ್ತ. ನೀನಂಜದಿರು. ನಿನ್ನ ಮುಸುಕಿದ ಮಾಯೆಯಂ ನಿವೃತ್ತಿಯ ಮಾಡಿದ ಪೆದು. ನಾವೆ ನಿನಗೆ ಪ್ರಾಣಲಿಂಗವಾಗಿ ಬಂದು, ನಿನ್ನ ಸರ್ವಾಂಗದೊಳು ನೆಲೆಗೊಂಡು, ನಿಜಲಿಂಗೈಕ್ಯನ ಮಾಡಿ, ನಿರ್ವಾಣ ಸಮಾಧಿಯೊಳು ನಿಲಿಸಿದಪೆವು. ನಿನ್ನಿಂದ ಮರ್ತ್ಯ ಲೋಕದ ಶಿವಾಚಾರ ಜೀರ್ಣೋದ್ಧಾರವಾದಪುದು. ನಿನ್ನಿಂದ ಮರ್ತ್ಯಲೋಕದ ಮಹಾಗಣಂಗಳಿಗೆ ಜ್ಞಾನಾನಂದ ಸುಖಮಪ್ಪುದು. ನೀನು ಹೋಗೆ"ಂದು ಶಿವನು ಅಭಯಹಸ್ತಮಂ ಕುಡಲು, ಮಹಾಪ್ರಸಾದವೆಂದು ಅನುಜ್ಞೆಯಂ ಕೈಕೊಂಡು, ಮಾನವಾಕಾರಚೈತನ್ಯಕಳೆಯಂ ಧರಿಸಿ, ಮರ್ತ್ಯಲೋಕಕ್ಕೆ ಇಳಿದು, ಮೇರುವಿಂ ದಕ್ಷಿಣ ಪ್ರಾಂತ ದೇಶಂಗ[1]ಳೊಪ್ಪುತ್ತಿಪ್ಪ. ಬನವಾಸಿಯೆಂಬ ಗ್ರಾಮದೊಳಗೆ ಇಪ್ಪ, ನಾಗ-

ವಾಸಾಧಿಪತಿಯಪ್ಪ ಶಿವಭಕ್ತನ ಸತಿ ಸುಜ್ಞಾನಾದೇವಿಯ ಗರ್ಭದಿಂದೊಗೆದು, ಸಕಲ ಪುಣ್ಯ-ಪಾಪಂಗಳಿಗೆ ಒಳಗಲ್ಲವೆಂಬುದಂ ಜಗಕ್ಕೆ ತೋರ್ಪಂತೆ ಅಲ್ಲಮನೆಂಬ ನಾಮವ ತಳೆದು, ದಿನದಿನಕ್ಕೆ ಬೆಳೆದು, ದಿವ್ಯರೂಪಲಾವಣ್ಯ ಸಂಪೂರ್ಣಮಾಗಿ, ವಾದ್ಯವಿದ್ಯಾಭ್ಯಾಸದಿಂದಿರುತ್ತಮಿರಲಾ ರುದ್ರಕನ್ನಿಕೆ-ಶಿವನ ನಿರೂಪದಿಂ ಆ ಪುರದ ಒಬ್ಬ ಶಿವಭಕ್ತೆಯ ಬಸುಱೊಳೊಗೆದು, ಕಾಮಲತೆಯೆಂಬ ನಾಮಮಂ ಧರಿಸಿ, ಅತ್ಯಂತಸುರೂಪಿಯಾಗಿ, ನೋಡೆ ನೋಡೆ ಬೆಳೆದು, ನವಯೌವನವೆಡೆಗೊಂಡು, ನೃತ್ಯ ವಿದ್ಯಾಭ್ಯಾಸದಿಂದಿರುತ್ತ, ಅಲ್ಲಮಂಗೆ ಸತಿಯಾಗಿ— ಇಬ್ಬರುಂ ಸುರತೋನ್ಮತ್ತ ಸುಖದೊಳ್ ಪರವಶರಾಗಿ, ಹಲವು ಕೆಲವು ಸಂವತ್ಸರಂಗಳಂ ಕಳೆವುತ್ತಿರಲಾಪುರದ ಗುಹೇಶ್ವರನೆಂಬ ಮೂಲಸ್ಥಾನದ ಪರಿಚರ್ಯದಿಂವಿರ್ಪರು ಇರಲಾ ರುದ್ರಕನ್ನಿಕೆಯು ವಿಶಾಪವನೆಯ್ದಲಾಕೆಯನಗಲ್ದು ಚಿಂತೆಯೊಳ್ ಮುಳುಂಗಿ, ಪುಷ್ಪವಾಟಿಕೆಯೊಳ್ ಕುಳ್ಳಿರ್ದು, ಪರವಶನಾಗಿ ಇರುತ್ತಮಿರೆ, ತನಗೆಯಾ ಪರಮೇಶ್ವರನ ಕರುಣಪ್ರಸನ್ನವಪ್ಪ ಕಾಲದೊಳು, "ಕಾಮತತ್ವದ ಅಳಿವು ಶಿವತತ್ವದ ಉಳಿವು" ಎಂಬುದು ಸತ್ಯವಾದಂತೆ ಕರ್ಮಕ್ಷಯಮಾಗಿ, ಸುಜ್ಞಾನಾಂಕುರವನೊಳಕೊಂಡಿರ್ಪ ಅಲ್ಲಮಪ್ರಭುದೇವರ ಸತ್ಪಿಂಡದೊಳಡಗಿರ್ದ ಶಿವತತ್ವನಿದರ್ಶನ ವೆಂತಿರ್ದುದೆಂದಡೆ ಪ್ರಥಮದಲ್ಲಿ ಪಿಂಡಸ್ಥಲವಾದುದು :*

## ಪಿಂಡಸ್ಥಲ

ಕಲ್ಲೊಳಗಣಪಾವಕನಂತೆ, ಉದಕದೊಳಗಣ ಪ್ರತಿಬಿಂಬದಂತೆ, ಬೀಜದೊಳಗಣ ವೃಕ್ಷದಂತೆ, ಶಬ್ದದೊಳಗಣ ನಿಶ್ಶಬ್ದದಂತೆ, ಗೊಗೇಶ್ವರ, ನಿಮ್ಮ ಶರಣಸಂಬಂಧ. ೧-೧-1-1 ಮತ್ತಂ:

[1]ಕಲ್ಲೊಳಗಣ[1] ಕಿಚ್ಚು ಉರಿಯಬಲ್ಲುದೆ? ಬೀಜದೊಳಗಣ ವೃಕ್ಷ ಉಲಿಯಬಲ್ಲುದೆ? ತೋಱಲಿಲ್ಲಾಗಿ ಬೀಱಲಿಲ್ಲಾರಿಗೆಯು. ಗೊಗೇಶ್ವರ ನಿಂದ ನಿಲವನನುಭವಸುಖಿ ಬಲ್ಲ! ೨-೨-1-2

[2]ಇಂತು[2] ಪಿಂಡದಲ್ಲಿ ಶಿವತತ್ವವನಡಗಿಸಿಕೊಂಡಿರ್ದ ಪ್ರಭುದೇವರ ಅಂತರಂಗದೊಳಗಣ ಶಿವತತ್ವವೆ ಜ್ಞಾನಾಂಕುರಸ್ವರೂಪಮಾಗಿ, ಆ ಸುಜ್ಞಾನ ದೃಷ್ಟಿಯಿಂ ತಿಳಿದು ನೋಡಿ, ನಾನೀ ಮಾಂಸಪಿಂಡ ಹುಟ್ಟುವಂದು ಹುಟ್ಟಿದವನಲ್ಲ, ಬೆಳೆವಲ್ಲಿ ಬೆಳೆದವನಲ್ಲ, ಅಳಿವಲ್ಲಿ

---

* ಮೊದಲಿಂದ ಇಲ್ಲಿಯವರೆಗಿನ ಪಾಠ "ಶಿ"ದಲ್ಲಿ ಲುಪ್ತವಾಗಿರುವುದರಿಂದ—"ದೇ" ಪ್ರತಿಯಿಂದ ಉಲ್ಲಿಖಿತವಾಗಿದೆ. ಮೇಲಾಗಿ ಅದನ್ನು "ಹ" ಪ್ರತಿಯಿಂದ ,ತಾಳೆ ನೋಡಿದೆ.

1 (ಶಿಗೂ). ಶಿಲೆಯೊಳಗಗ್ನಿ, ಉದಕದೊಳಗಣ ಪ್ರತಿಬಿಂಬ, ಬೀಜದೊಳಗಣ ವೃಕ್ಷ, ಶಬ್ದದೊಳಗಣ ನಿಶ್ಶಬ್ದವಿಪ್ಪಂತೆ ಶಿವಶರಣರ ಸಂಬಂಧವೆಂತದು ಮತ್ತಂ: ಕಲ್ಲೊಳಗಣ (ಹ).

2 (ಶಿ) ಕಲ್ಲೊಳಗಣ ಕಿಚ್ಚು ಉರಿಯದು, ಬೀಜದೊಳಗಣ ವೃಕ್ಷ ಉಲಿಯದು, ಕಾಣಬಾರದದು, ಕ್ರಿಯೆಗೆ ಬಾರದು ಶಿವಶರಣರ ನಿಲವ ಅನುಭವಿಬಲ್ಲನು ಅದೆಂತೆಂದಡೆ ಇಂತು (ಹ).

ಅಳಿದವನಲ್ಲ ಈ ಬ್ರಹ್ಮಾಂಡಾದಿ ಸಮಸ್ತ ಪ್ರಪಂಚುಗಳು ಹುಟ್ಟದ ಮುನ್ನವೆ ಆದಿಚಿತ್ ಶಕ್ತಿಯಿಂದುದಯಿಸಿದೆನೆಂದು ತನ್ನ ತಾನು ವಿವೇಕಿಸುತ್ತಿದ್ದನು. ಅದೆಂತೆಂದೆನೆ: ವಚನ:

ಆದಿಯಾಧಾರವಿಲ್ಲದಂದು,ಹಮ್ಮು-ಬಿಮ್ಮು ಇಲ್ಲದಂದು,ಸುರಾಳ-ನಿರಾಳವಿಲ್ಲದಂದು, ಶೂನ್ಯ-ನಿಶ್ಶೂನ್ಯವಿಲ್ಲದಂದು, ಸಚರಾಚರವೆಲ್ಲಾ ರಚನೆಗೆ ಬಾರದಂದು, ಗೊಗೇಶ್ವರ, ನಿಮ್ಮ ಶರಣನುದಯಿಸಿದನಂದು. ೩--೩-1-3 ಮತ್ತಂ

ನಾದ-ಬಿಂದುಗಳಿಲ್ಲದಂದು ನಿರ್ಭಯನೆಂಬ ಗಣೇಶ್ವರನು. ಉತ್ಪತ್ತಿ-ಸ್ಥಿತಿ-ಲಯ ವಿಲ್ಲದಂದು ಅಕ್ಷಯನೆಂಬ ಗಣೇಶ್ವರನು. ಓದು-ವೇದಂಗಳಿಲ್ಲದಂದು ಓಂಕಾರನೆಂಬ [1]ಗಣೇಶ್ವರನು.[1] ಗೊಗೇಶ್ವರನೆಂಬ ಲಿಂಗವಿಲ್ಲದಂದು ನಿರ್ಮಾಯನೆಂಬ ಗಣೇಶ್ವರನ್ನು ೪-೪-1-4.

ಇಂತು ನಿರಾಕಾರನಾಗಿರ್ದ ತನ್ನ ಪೂರ್ವಸ್ಥಿತಿಯಂ ವಿವೇಕಿಸಿ ಅಱಿದ ಪ್ರಭುದೇವರು ಕೈಲಾಸದಲ್ಲಿ ನಿರ್ಮಾಯನಾಗಿದ್ದ ಅವತಾರಮಂ ವಿವೇಕಿಸುತ್ತಿದ್ದನು. ಅದೆಂತೆಂದಡೆ:

ಬ್ರಹ್ಮವಿಷ್ಣುಗಳ ಮಾಯೆ ತೊತ್ತಳದುಳಿ[2]ವಂದು[2], ರುದ್ರಗಣ-ಪ್ರಮಥಗಣಂ ಗಳೆಂಬರ ಮಾಯೆ ಮರುಳ್ಮಾಡಿ ಕಾಡುವಂದು, ನೊಸಲ ಕಣ್ಣ ಪಂಚಮುಖ ದವರಿಗೆ ಮಾಯೆಯರ್ಧಾಂಗಿಯಾದಂದು, ಅಷ್ಟಾಶೀತಿ ಸಹಸ್ರ ಋಷಿಗಳ ಮಾಯೆ ತಪೋಮದದಲ್ಲಿ ಕೆಡಹುವಂದು ನಾನು [3]ನಿರ್ಮಾಯನಾಗಿರ್ದೆ[3] ಕಾಣಾ ಗೊಗೇಶ್ವರ. ೫-೫-1-5.

ಇಂತು ತನ್ನ ರುದ್ರಾವತಾರದ ಗಣೇಶ್ವರತ್ವಮಂ ತಿಳಿದು ನೋಡಿದ ಪ್ರಭುದೇವರು, ನಾಲ್ಕು ಯುಗಂಗಳು ತೊಡಗಿ ಮರ್ತ್ಯಲೋಕದಲ್ಲಿ ತಾನು ಚರಿಸಿಬಂದ ವೃತ್ತಾಂತವಮಂ ನಿರೂಪಿಸುತ್ತಿರ್ದನು. ಅದೆಂತೆಂದೆನೆ: ವಚನ:

ಕೃತಯುಗದಲ್ಲಿ ನಾನು ಭಕ್ತಿಕಾರಣ ಸ್ಥೂಲಕಾಯನೆಂಬ ಗಣೇಶ್ವರನಾಗಿರ್ದೆನಯ್ಯ. ತ್ರೇತಾಯುಗದಲ್ಲಿ ನಾನು ಭಕ್ತಿಕಾರಣ ಶೂನ್ಯಕಾಯನೆಂಬ ಗಣೇಶ್ವರನಾಗಿರ್ದೆನಯ್ಯ. [4]ದ್ವಾಪರ[4]ದಲ್ಲಿ ನಾನು ಭಕ್ತಿಕಾರಣ ಅನಿಮಿಷನೆಂಬ ಗಣೇಶ್ವರನಾಗಿರ್ದೆನಯ್ಯ. ಕಲಿ ಯುಗದಲ್ಲಿ ನಾನು ಭಕ್ತಿಕಾರಣ ಅಲ್ಲಮಪ್ರಭುವೆಂಬ ಗಣೇಶ್ವರನಾಗಿರ್ದೆನಯ್ಯ; ಗೊಗೇಶ್ವರನಟ್ಟದ ಮಣಿಹದಲ್ಲಿ ತದ್ಗತನಾಗಿರ್ದೆನಯ್ಯ! ೬-೬-1-6.

ಇಂತು ಮೂಲಜ್ಞಾನದಿಂ ತನ್ನ ಪೂರ್ವಾಪರಸಂಬಂಧವಮಂ ವಿವೇಕಿಸಿ ಅಱಿದ ಪ್ರಭುದೇವರು ತನ್ನಿಂದನ್ಯವಾದ ಸಂಸಾರಭ್ರಾಂತಿಯ ಭಾವಮಂ ನಿವೃತ್ತಿಯಂ ಮಾಡು ತ್ತಿರ್ದನು. ಅದೆಂತೆಂದಡೆ;

---

[1] (ಶಿಹ) ಯುಗಜುಂಗಗಳಿಲ್ಲದಂದು ಊರ್ಧ್ವ ಮುಖನೆಂಬ ಗಣೇಶ್ವರನು (ಗೂ). [2] (ಶಿ) ವಂದು, ದೇವದಾನವರ ಮಾಯೆ ಅಗಿದಗಿದು ತಿಂಬಂದು (ಗೂ) (ಹ). [3] (ಶಿ) ಮಾಯಾ ಕೋಳಾಹಳನಾಗಿರ್ದೆ (ಗೂ ಹ). [4] (ಶಿ) ದ್ವಾಪಾರ (ಗೂ ಹ).

## ಸಂಸಾರಹೇಯಸ್ಥಲ

ಕಾಯದ ಮೊದಲಿಂಗೆ ಬೀಜವಾವುದೆಂದಱಿಯದೀ ಲೋಕವೆಲ್ಲ. [1]ಇಂದ್ರಿಯಂಗಳಿಂದುದಯವಲ್ಲ. ಸ್ವಪ್ನ ವಿಷಯದಿಂದುದಯವಲ್ಲ. ಅಱಿವಿನ ಕಳೆಯಿಂದುದಯವಲ್ಲ.[1] ಇದಾವಂಗೆ ತಿಳಿಯಬಾರದಾಗಿ ಶುದ್ಧ ಸುಯಿದಾನವಲ್ಲ ಕಾಣಾ ಗೊಗೇಶ್ವರ. ೭-೭-1-7.

ಹಳ್ಳದೊಳಗೆ [2]ಹುಳ್ಳಿ[2] ಬರುತ್ತಿರಲು ತೆರೆನೊರೆಗಳು ತಾಗದಿಪ್ಪವೆ? ಸಂಸಾರಸಾಗರದೊಳಗೆ ಮುಳುಗಾಡುತ್ತಿಪ್ಪ ಪ್ರಾಣಿಗಳಿಗೆ ಸುಖ ದುಃಖಂಗಳು ತಾಗದಿಪ್ಪವೇ? ಇದು ಕಾರಣ, ಮೂರ್ತಿಯಾದುದಕ್ಕೆ ಪ್ರಳಯವಾಯಿತ್ತು ಕಾಣಾ ಗೊಗೇಶ್ವರ! ೮-೮-1-8.

ಆಯಿತ್ತೆ ಉದಯಮಾನ, ಹೋಯಿತ್ತೆ ಅಸ್ತಮಾನ? ಅಱಿದವಲ್ಲಾ ನೀರಲಾದ ನಿರ್ಮಿತಂಗಳೆಲ್ಲ! ? ಕತ್ತಲೆ ಕವಿಯಿತ್ತು ಮೂಱು ಲೋಕದೊಳಗೆ! ಇದಱಿಚ್ಛ್ಯಗವೇನು ಹೇಳಾ ಗೊಗೇಶ್ವರ? ೯-೯-1-9. ಮತ್ತಂ

ಸಂಸಾರವೆಂಬ ಹೆಣ ಬಿದ್ದರೆ ತಿನ ಬಂದ ನಾಯ ಜಗಳವ ನೋಡಿರೆ! ನಾಯ ಜಗಳವ ನೋಡಿ ಹೆಣ ನಗುತ್ತಿದೆ. ಗೊಗೇಶ್ವರನೆಂಬ ಲಿಂಗವಲ್ಲಿಲ್ಲ ಕಾಣಿರಯ್ಯ. ೧೦-೧೦-1-10. ಮತ್ತಂ

ನೀರ ಬೊಂಬೆಯ ಜೋಹವ ತೊಟ್ಟು, ಅಗ್ನಿಯ ಬಣ್ಣದ ಹೊದಕೆಯ ಹೊದೆದು, ಗಾಳಿಯ ಗತಿಯಲಿ ಸುಳಿದಾಡುವ ಪ್ರಾಣಿಗಳು ದೇವರನೆತ್ತ ಬಲ್ಲರೈ ಗೊಗೇಶ್ವರ? ೧೧-೧೧-1-11. ಮತ್ತಂ

ಕರ್ಮದ ಗಡಣ ಹಿಂಗಿದವಿಂದು. ಪಾಪದ ಬಲೆ ಬಳಸಿಹೋದವು. ಒಲ್ಲೆನೊಲ್ಲೆ ನೀ ಸಂಸಾರದಲ್ಲಿ ನೊಂದೆ ಬೆಂದೆನಾಗಿ. ಮಾಯದಾ ತಲೆಯ ಮೆಟ್ಟಿ ಹೋದೆನು. ಇನ್ನು ಮರಳಿ ಬಾರೆನು ಗೊಗೇಶ್ವರ, ನಿಮ್ಮಾಣೆ. ೧೨-೧೨-X

## ಜೀವ ಭಾವಭ್ರಾಂತಿ ನಿರಸನ ಸ್ಥಲ

ನೆಲದ ಬೊಂಬೆಯ ಮಾಡಿ, ಜಲದ ಬಣ್ಣವನುಡಿಸಿ, ಹಲವು ಪರಿಯಾಶ್ರಮದಲ್ಲಿ ಉಲಿವ ಗೆಜ್ಜೆಯ ಕಟ್ಟಿ, ವಾಯುವನಲಸಂಚಕ್ಕೆ ಅರಳೆಲೆಯ ಶೃಂಗಾರವ ಮಾಡಿ ಆಡಿಸುವ ಯಂತ್ರವಾಹಕನಾರೊ? ಬಯಲ ಕಂಭಕ್ಕೆ ತಂದು, ಸ್ವಯವಾಗಿ ಪರವ ನೆಲೆಗೊಳಿಸಿದರೆ ಪ್ಪುಮುವದ್ಗಯ ಕಾಣ ಗೊಗೇಶ್ವರ. ೧೩-೧೩-1-12.

ಮಾನದ ತೋರಿಹ ಆಕಳಿಗೆ ಕೊಳಗದ ತೋರಿಹ ಕೆಚ್ಚಲು. ತಾಳಮರದುದ್ದಿಹವೆರಡು ಕೋಡು. ಅದನಱಸ ಹೋಗಿ ಆಱು ದಿನ, ಅದು ಕೆಟ್ಟು ಮೂಱು ದಿನ. ಅಘಟಿತ ಘಟಿತ ಗೊಗೇಶ್ವರ, ನಾವಱಿಸುವ ಬಾಳ್ಕೆ. ೧೪-೧೪-1-13. ಮತ್ತಂ :

---

[1] (ಶಿಹ) ಇಂದ್ರಿಯಂಗಳು ಬೀಜವಲ್ಲ. ಆ ಕಳಾಭೇದವಲ್ಲ. ಸ್ವಪ್ನ ಬಂಪೆಱಿಗಿತ್ತಲ್ಲ! (ಗೂ).
[2] (ಶಿ ಗೂ) ಹುಲಿ (ಹ).

ಅಡವಿಯೊಳಗೆ ಕಳ್ಳರು ಕಡವಸದ ಸ್ವಾಮಿಯನು ಹುಡುಕಿ ಹುಡುಕಿ ಅಱಸುತ್ತೈದಾರೆ. ಸೊಡರು ನಂದಿ ಕಾಣದೆ, ಅನ್ನಪಾನದ ಹಿರಿಯರೆಲ್ಲರು ಅಧರಪಾನವನುಂಡು, ಸುರಾಪಾನವ ಬೇಡುತ್ತೈದಾರೆ. ಅ[1]ರ[1]ದ ಹಾರುವನೊಬ್ಬನು ಅರಿದ ತಲೆಯ ಹಿಡಿದುಕೊಂಡು [2]ಅಧ್ಯಾತ್ಮಗೞ[2] ನೆತ್ತರ ಕುಡಿದನು ನೋಡ ಗೊಗೇಶ್ವರ. ೧೫-೧೫-1-14.

ಜಂಬೂದ್ವೀಪದ ಬೆವಹಾರಿ ಖಂಡ-ಭಂಡವ ತುಂಬಿ, ಕುಂಭಿನಿಯುದರದ ಮೇಲೆ ಪಸರವನಿಕ್ಕಿದ. ಉಷ್ಣತೃಷ್ಣೆ ಹೆಚ್ಚಿ [3]ಕಡಲೇೞ[3] ಕುಡಿದು ನೀರಡಿಸಿ ಅಱಿಲುಗೊಂಡು ಬೆಱಗಾದ. ಶಿಶು ತಾಯ ಹೆಣನ ಹೊತ್ತುಕೊಂಡು ಹೆಸರ [4]ಹೇಳಿಸುತ್ತೈದಾನೆ.[4] ಗೊಗೇಶ್ವರನ ನಿಲುವ ವಸುಧೆಯಾಕೃತಿ ನುಂಗಿತ್ತು. ೧೬-೧೬-1-15. ಮತ್ತಂ :

ಗಗನದ ಮೇಲೊಂದು ಅಭಿನವದ ಗಿಣಿ ಹುಟ್ಟಿ ಸಯಸಂಭ್ರಮದಲ್ಲಿ ಮನೆಯ ಮಾಡಿತ್ತು. ಒಂದು ಗಿಣಿ ಇಪ್ಪತ್ತೈದು ಗಿಣಿಯಾಯಿತ್ತು. ಬ್ರಹ್ಮನಾ ಗಿಣಿಗೆ ಹಂಜರವಾದ. ವಿಷ್ಣುವಾ ಗಿಣಿಗೆ ಕೊಱೆಯ ಕೂಳಾದ. ರುದ್ರನಾ ಗಿಣಿಗೆ ತಾ ಕೋಲಾದ. ಇಂತೀ ಮೂವರ ಮುಂದಣ ಕಂದನ ನುಂಗಿ, ದೃಷ್ಟ ನಾಮ ನಷ್ಟವಾಯಿತ್ತು ಕಾಣಾ ಗೊಗೇಶ್ವರ. ೧೭-೧೭-1-16.

ಇಂತು, ಜೀವಭಾವಭ್ರಾಂತಿಯಂ ನಿವೃತ್ತಿ ಮಾಡಿದ ಪ್ರಭುದೇವರು ; ನಾನು ಶಿವನು, ನನಗೆ ಇಲ್ಲದ ಜೀವಭಾವಭ್ರಾಂತಿತಾನೇತಱಿಂ ಘಟಿಸಿತೆಂದು ಸುವಿವೇಕದಿಂ ವಿಚಾರಿಸಿ ನೋಡಲು, ಮಿಥ್ಯಾಭಾವನುಪ್ಪ ಮಾಯಾಸಂಬಂಧದಿಂದಾಯಿತ್ತೆಂದಱಿದು, ತನಗೆ ಇದಿರಿಟ್ಟು ತೋಱುವ ಮಾಯೆಗೆ ತಾನನ್ಯನಾಗಿ, ಆ ಮಾಯಾವಿಲಾಸಮಂ ನಿವೃತ್ತಿ ಮಾಡುತ್ತಿರ್ದನು. ಅದೆಂತೆಂದಡೆ : ಮಾಯಾವಿಡಂಬನಸ್ಥಲವಾದುದು.

## ಮಾಯಾವಿಡಂಬನಸ್ಥಲ

ರಕ್ಕಸಿಗಿಬ್ಬರು ಮಕ್ಕಳು, ತೊಟ್ಟಿಲಮೇಲೈವರು. ರಕ್ಕಸಿ ಬಾಣತಿಯಾದರೆ ಮಕ್ಕಳಿಗಿನ್ನೆಂತೊ ? ತೊಟ್ಟಿಲ ತೂಗುವೆ ; ಜೋಗುಳವಾಡುವೆ. ರಕ್ಕಸಿಬಾಣತಿಯ ತೊಟ್ಟಿಲು ನುಂಗಿತ್ತು. ಇದೇನು ಹೇಳ, ಗೊಗೇಶ್ವರ ? ೧೮-೧೮-1-17. ಮತ್ತಂ :

ಆಡಂಬರದೊಳಗಾಡಂಬರವಿದೇನೊ? ಹಾಱಿತ್ತುಬ್ರಹ್ಮನೋಲಗ ಕೆದಱಿತ್ತಿದೇನೊ? ಸಾರು ಸಾರೆನುತ್ತ ವಿಷ್ಣುವಜನ ನುಂಗಿ ರುದ್ರಯೋನಿಯೊಳಗಡಗಿತ್ತಿದೇನೊ ? ಬೇರಿಲ್ಲದ ಮರ, ನೀರಿಲ್ಲದ ನೆಳಲಲ್ಲಿ ತೋಱಿದ ಪ್ರತಿಬಿಂಬವನೇನೆಂಬೆ ಗೊಗೇಶ್ವರ ? ೧೯-೧೯-1-8.

ಕೋಣನ ಕೊಂಬಿನ ತುದಿಯಲ್ಲಿ ಏಳುನೂಱೆಪ್ಪತ್ತು ಸೇದೆಯ ಬಾವಿ. ಬಾವಿಯೊಳಗೊಂದು ಬಗರಿಗೆ. ಬಗರಿಗೆಯೊಳಗೊಬ್ಬ ಸೂಳೆ ನೋಡ ! ಸೂಳೆಯ ಕೊರಳಲ್ಲಿ ಏಳು

[1] (ಶಿವೇ) ಱ (ಗೂ). [2] (ಶಿಹ) ಅಧ್ಯಾತ್ಮ ವಿಕಾರದ (ದೇಗೂ). [5] (ಶಿ) ಕಡಲೇಳು ಸಮುದ್ರವ (ದೇಹಗೂ). [4] (ಶಿಹ) ಹೇಳುತ್ತೈದಾನೆ (ದೇಗೂ).

ನೂಱಿಪ್ಪತ್ತು ಆನೆ ನೇಱಿತ್ತ ಕಂಡೆ ಗೊಗೇಶ್ವರ. ೨೦-೨೦-1-9. ವಿತ್ರಂ :

ಪಂಚಾಶತ್‌ಕೋಟಿ ವಿಸ್ತೀರ್ಣಭೂಮಂಡಲವನೊಂದು ತಲೆಯಿಲ್ಲದ ಮುಂಡ ಬಂದು ನುಂಗಿತ್ತ ಕಂಡೆ. ತಲೆಯಿಲ್ಲದೆ ನಾನು ಕಂಡು ಬೆಱಗಾದೆನು. ನವಖಂಡಮಂಡಲ ಭಿನ್ನ ವಾದಂದು ಆ ತಲೆಯ ಕಂಡವರುಂಟೆ ಗೊಗೇಶ್ವರ ?! ೨೧-೨೧-1-೨೦. ವಿತ್ರಂ :

ಊರ ಮಧ್ಯದ ಕಣ್ಣ ಕಾಡಿನೊಳಗೆ ಐದು ಹೆಣ ಬಿದ್ದೈದಾವೆ. ಬಂದು-ಬಂದು ಅಳುವರು. ಬಳಗ ಘನವಾದ ಕಾರಣ ಹೆಣನೂ ಬೇಯದು, ಕಾಡೂ ನಂದದು, ಮಾಡ ಉರಿಯಿತ್ತು ಗೊಗೇಶ್ವರ. ೨೨-೨೨-1-21. ವಿತ್ರಂ :

ಕೆಂಡದ ಗಿರಿಯ ಮೇಲೊಂದು ಅರಗಿನ ಕಂಭವಿದ್ದುದ ಕಂಡೆ. ಅರಗಿನ ಕಂಭದ ಮೇಲೊಂದು ಹಂಸೆ ಇದ್ದುದ ಕಂಡೆ. ಕಂಭ ಬೆಂದಿತ್ತು, ಹಂಸೆ ಹಾಱಿತ್ತು, [1]ಕೆಂಡ ನೆತ್ತಲಡಗಿತ್ತು[1] ಗೊಗೇಶ್ವರ? ೨೩-೨೩-1-22. ವಿತ್ರಂ :

ಭೂತ ಭೂತವ ಕೂಡಿ ಅದ್ಭುತವಾಯಿತ್ತು. ಕಿಚ್ಚು ಕೋಡಿತ್ತು. ನೀರು ನೀರಡ ಸಿತ್ತು. ಉರಿ ಪವನ [2]ದೋಷ[2]ದೊಳಗಿದ್ದು ವಾಯುವಿನ್ಮಡಿಸಿತ್ತು ಗೊಗೇಶ್ವರ. ೨೪-೨೪-1-23. ವಿತ್ರಂ :

ಅಂಗದ ಕೊನೆಯ ಮೇಲಣ ಕೋಡಗ ಕೊಂಬಿಂಗೆ ಹಾಱಿತ್ತಯ್ಯ. ಒಂದು ಚೋದ್ಯವ ನೋಡು ಕಂಡಯ್ಯ ! ಕೈಯ ನೀಡಲು ಮೈಯೆಲ್ಲವ ನುಂಗಿತ್ತು. ಒಯ್ಯನೆ ಕರೆದಡೆ ಮುಂದೆ ಬಂದು ನಿಂದಿತ್ತು. ಮುಯ್ಯಾಂತಡೆ ಬಯಲಾಯಿತ್ತು ಗೊಗೇಶ್ವರ. ೨೫-೨೫-1-24 ವಿತ್ರಂ :

ಹಿರಿದಪ್ಪ ಜಲಧಿಯ ಮಡುವಿನೊಳಗೆ ಕರಿಯ ಕಬ್ಬಿಲ ಜಾಲವ ಬೀಸಿದ ನೋಡಯ್ಯ. ಅರಿದ ತಲೆಯೈದು, ಅರಿಯದ ತಲೆಯೈದು, ಕರಿಯ ತಲೆಯೈದು ಮುಂದೈದಾವೆ ನೋಡಯ್ಯ. ಕರಿಯ ಕಬ್ಬಿಲ ಜಾಲವ ಹೊತ್ತುಕೊಂಡು ಹೋದರೆ ನೇತ್ರದಲೋಕುಳಿಯಾಡಿತ್ತ ಕಂಡೆ ಗೊಗೇಶ್ವರ. ೨೬-೨೬-1-25 ವಿತ್ರ :

ಭೂಮಿಯ ಕಠಿಣವನು, ಆಕಾಶದ ಮೃದುವನು ತಿಳಿವ ಗಮನದಲ್ಲಿಯೆ ನಿಂದಿತ್ತು. ಉದಕದೊಳಗೆ ಹುಟ್ಟಿದ ತೃಷ್ಣೆ ಉದಕವನಱಸಿತ್ತಲ್ಲಾ ! ಒಳಗೆ ಸತ್ತು ಹೊಱಗೆ ಆಡುತ್ತದೆ. ಗೊಗೇಶ್ವರನಲ್ಲಿಯೆ ನಿಂದನು. ೨೭-೨೭-1-26 ವಿತ್ರಂ :

ಹುಲಿಯ ತಲೆಯ ಹುಲ್ಲೆ, ಹುಲ್ಲೆಯ ತಲೆಯ ಹುಲಿ, ಎರಡಱ ನಡು ಒಂದಾ ಯಿತ್ತು. ಹುಲಿಯಲ್ಲ, ಹುಲ್ಲೆಯಲ್ಲ. ಕೆಲದಲೊಂದು ಬಂದು ಮೆಲುಕಾಡುತ್ತಿದ್ದುದು. ತಲೆಯಿಲ್ಲದ ಮುಂಡ ಎಲೆಗಳ ಮೇದರೆ ಎಲೆಮುಱಿಯಾಯಿತ್ತು, ಗೊಗೇಶ್ವರ. ೨೮-೨೮-1-27 ವಿತ್ರಂ :

ಅರಗಿನ ಪುತ್ಥಳಿಯಃನುರಿ ಕೊಂಡಡೆ ಉದಕ ಬಾಯಾರಿತ್ತಿದೇನು ? ಅಗೆಯಿ ಭೋ ! ಬಾವಿಯ ಅಗೆಯಿ ಭೋ ! ಅಗೆದಾತ ಸತ್ತ, ಬಾವಿ ಬತ್ತಿತ್ತು ! ಇದು ಕಾರಣ, ಮೂಱು ಲೋಕ ಬಱುಸೂಱೆ ಹೋಯಿತ್ತು ಗೊಗೇಶ್ವರ. ೨೯-೨೯-1-28. ವಿತ್ರಂ :

[1] (ಶಿಸೇಹ) × (ಗೂ). [2] (ಹಲು) × (ಶಿಗೂದೇ).

[1]ಇಲ್ಲದಲ್ಲಿ ಇಲ್ಲವಿದ್ದಿತ್ತು. ಇಲ್ಲನೆಂಬುದು ಉಂಟು ನೋಡ. ಉಂಟೆಂದಲ್ಲಿ ಇಲ್ಲ ಉಂಟಾಯಿತ್ತು. ಉಂಟಾದುದ ತಿಳಿದಡೆ ಅದೆ ಇಲ್ಲ.[1] ಆ ಇಲ್ಲದಲ್ಲಿ ಒಂದು ತಲೆ ಉದಯಿಸಿತ್ತು. ತಲೆಯೊಳಗೆ ಮೂಱು ಲಿಪಿಯ ಕಂಡೆ. ಲಿಪಿಯೊಳಗೊಂದು ಧ್ವನಿಯ ಕಂಡೆ. ಧ್ವನಿಯ ಬಣ್ಣ ತಲೆ ಎತ್ತದ ಮುನ್ನ—ಐದು ಬಾಯ ರಕ್ಕಸಿ ಆಗುಳಿಸಿ ನುಂಗಿದಳು. ಆ ರಕ್ಕಸಿಗೆ ಕೋಡಗ ಹುಟ್ಟಿ ಕೋಣನ ಕೊರಳ ಕಟ್ಟಿಕೊಂಡಿತ್ತ ಕಂಡೆ. ಕೋಣನ [2]ಕೋಡ[2] ಮುಱಿದು ಈಡಾಡಿದರೆ ಕೋಡಗ [3]ಸತ್ತಿತ್ತು.[3] ಅಡವಿಯ ಸುಟ್ಟು, ಆಕಾಶವ ಹೊಕ್ಕು ಗೊಗೇಶ್ವರ ಲಿಂಗದಲ್ಲಿ ಗುರುಕಾರುಣ್ಯವ ಪಡೆದೆನು! ೩೦-೩೦-×.

## ಗುರುದರ್ಶನ-ಲಿಂಗಪ್ರಾಪ್ತಿ

ಇಂತು ಮಾಯಾವಿಲಾಸಮಂ ನಿವೃತ್ತಿ ಮಾಡಿ, ನಿರ್ಮಾಯ ತಾನಾಗಿ, ಸಕಳ ಪ್ರಪಂಚವ್ಯಾಪ್ತಿಗಳೆಲ್ಲವನು ಮಱೆದು, ಶಿವಜ್ಞಾನಪ್ರಕಾಶದೊಳು ಅಂತರಂಗ ಶುದ್ಧಾತ್ಮನಾಗಿ ಶಿವಚಿಂತಾ ಸಮಾರೋಹೆಯೊಳು ಕರಣಾದಿ ಗುಣಂಗಳು ಸಮಾಧಾನ ವನೆಯ್ದಿ, ಏಕಾಗ್ರ ಚಿತ್ತದೊಳು ಶಿವಭಾವವೆಡೆಗೊಂಡು, ಸದ್ವಾಸನಾವಿವೇಕದೊಳು ಮನಂ ಮುಳುಂಗಿ, ನವಮಾಸಂ ತೀವಿದ ಗರ್ಭಿಣಿಯಂತೆ, ಶಿವ ತತ್ವವಿದ್ಯೆ ಒಳಗೊಳಗೆ ಸಂಪೂರ್ಣವಾಗಿ ಎಡೆಗೊಂಡು, ಗುರುಹಸ್ತ ಬಂದು ಸೋಂಕದ ಮುನ್ನವೆ, ಶಿಖಿಕರ್ಪೂರ ದಂತಾದಪ್ಪುದೆಂಬ ಭಾವವಿದಿರಿಂಗೆ ಸೂಚಿಸುತ್ತಮಿರೆ, ಗುರುವಿಂದ ಮುನ್ನವೆ ಶಿಷ್ಯನು ಗುರುವೆಂಬ ಶಿವಾದ್ವೈತವಾಕ್ಯಂ ಸತ್ಯವಾದಂತೆ, ಅಂತರಂಗದೊಳು ಗುರುಭಾವಂ ತಲೆದೋಱುತ್ತುಮಿಪ್ಪ ಅಲ್ಲಮ ಪ್ರಭುದೇವರು, ಒಂದು ದಿನ, ಒಂದು ಏಕಾಂತ ಸ್ಥಲದೊಳು ಶಿವಚಿಂತಾತುರಸಮಾಧಿಯೊಳು ಕುಳ್ಳಿರ್ದಿರಲು, ಅಂಜನ ಉಳ್ಳವಂಗೆ ನಿಧಾನ ಮೈದೋಱುವಂತೆ ಶಿವಜ್ಞಾನಾಂಜನದೃಷ್ಟಿಯ ಮುಂದೆ ಅನಾದಿಸಂಸಿದ್ಧವಾದ ಅನಿಮಿಷ ದೇವರ ಸಮಾಧಿ ಕಾಣಬರುತ್ತಿರೆ—ಅಲ್ಲಿ ಪರಮಹರುಷಿತನಾಗಿ, ಆ ಸಮಾಧಿಯ ಮುಸುಂಕಿದ ಭೂಮಿಯನು ಅಗಲಕ್ಕೆ ತೊಲಗಿಸಿ ನೋಳ್ಪಾಗಳು, ಒಂದು ಶಿವಾಲಯದಾಕಾರವಾಗಿರೆ ಕಂಡು, ತನ್ನೊಳ್ ತಾನೆ ಹಾರೈಸಿ ಪರಿಣಾಮಿಸುತ್ತಿರ್ದನು. ಆ ಪ್ರಸ್ತಾವದ ವಚನ:

ಅವಳ ನೋಟವೆನ್ನ ಮರ್ತ್ಯಕ್ಕೆ ತಂದಿತ್ತಯ್ಯ! [4]ಅವಳ ಕೂಟದ ಸವಿ ಅವಗಡಿಸಿ ಕಾಡಿತ್ತಯ್ಯ[4]! ಅವಳ ಬೇಟದ ಬೇರು ಹರಿದಲ್ಲಿ ತ್ರಿಪುರ ಹಾಳಾದುದ ಕಂಡೆನು! ಉರಿಯ ಮೇಲೆ ಉರಿ ಎಱಗಿದರೆ ತಂಪು ಮಾಡಿತ್ತ ಕಂಡೆನು! ಕರಿಯ ಬೇಡನ

---

[1] (ದೇಹ) ಇಲ್ಲದಲ್ಲಿ ಇಲ್ಲನೆ ಇದ್ದಿತ್ತು. ಇಲ್ಲವೆಂಬುದು ಉಂಟು ನೋಡ. ಉಂಟೆಂದಲ್ಲಿ ಇಲ್ಲ ಇಲ್ಲ ಉಂಟಾಯಿತ್ತು. ಉಂಟೆಂದು ತಿಳಿದಡೆ ಅದೆ ಇಲ್ಲ (ಶಿ). [2] (ದೇಹ) ಕೋಡಗ (ಶಿ). [3] (ಹ) ಸಿಕ್ಕಿತ್ತು (ಶಿದೇ). [4] (ದೇಹ) × (ಶಿ)

ಕಸ್ತೂರಿಯ ಮೃಗ ನುಂಗಿದರೆ, ಹಿರಿಯ ಹೆಂಡತಿ ಓಲೆಗಳೆದುದ ಕಂಡೆನು! ಕಾರಿರುಳ ಕೋಟೆಯ ಕವಿಯ ಕಾಳಗವಗೆಲಿದು ಹೂಳಿರ್ದ ನಿಧಾನವ ಕಂಡೆನು ಕಾಣಗೊಗೇಶ್ವರ! ೩೧-೩೧- × .

ಇಂತು ಅನಿಮಿಷದೇವರ ಸಮಾಧಿಯಂ ಕಂಡು ಒಳಪೊಕ್ಕು ನೋಳ್ಪಾಗಳು, ಒಂದು [1]ದೀಪ್ತಿ[1] ಬೆಳಗುತ್ತಮಿರೆ ಕಂಡು, ಸ್ವಸ್ಥಪದ್ಮಾಸನದೊಳು ಕುಳ್ಳಿರ್ದು, ಕರಸ್ಥಲ ದೊಳು ಅಮೃತಲಿಂಗಮಂ ಪಿಡಿದು, ಆ ಲಿಂಗದೊಳು ಆಲಿಂಗನಮಾಗಿ, ಕರಣಂಗಳೆಲ್ಲ ನಿಷ್ಕರಣಮನೆಯ್ದಿ, ಭಾವ ನಿರ್ಭಾವದೊಳ್ ನಿಂದು, ನೋಟ ನಟ್ಟು, ದೃಷ್ಟಿ [2]ನಟ್ಟೈಸಿ[2]—ಎವೆ ಹಳಚದೆ, ಅಱಿವು ಕಱಿಗೊಂಡು ತಾನೆಂಬುದು ತರಹರಮಾಗಿ, [3]ನಾನೆಂಬುದು[3] ನಿಷ್ಪತಿಯಾಗಿ, ಉಭಯದ ಸಂದು ಸಯವಾಗಿ, ಮನೋಲಯಸ್ಥಾನ ದೊಳು ಸರ್ವಚೈತನ್ಯಂ ಪರಮಚೈತನ್ಯಮನೆಯ್ದಿ, ತನು ಪರಮಕಾಷ್ಠೆಯೊಳ್ ಪರವಶವಾಗಿ

ಊರ್ಧ್ವಶೂನ್ಯಮಧಶ್ಶೂನ್ಯಂ ಮಧ್ಯಶೂನ್ಯಂ ನಿರಾಮಯಂ
ಸರ್ವಶೂನ್ಯಮನಾಭಾಸಂ ಸಮಾಧೀತ್ಯಸ್ಯ ಲಕ್ಷಣಂ

ಎಂಬ ಸಿದ್ಧಾಂತವಾಕ್ಯಾರ್ಥಂ ತನ್ನೊಳ್ ಪೂರಿತಮಾಗಿ, ನಿತ್ಯ ನಿಜಸಮಾಧಿಯೊಳು ಮೂರ್ತಿಗೊಂಡಿಪ್ಪ ಆ ಸದ್ಗುರುವಂ ಕಂಡ ಪ್ರಸ್ತಾವದ ವಚನ:

ಪುಣ್ಯ ಉಳ್ಳ ಕಾಲಕ್ಕೆ ಮಣ್ಣು ಹೊನ್ನಹುದು! ಪುಣ್ಯ ಉಳ್ಳ ಕಾಲಕ್ಕೆ ಪಾಷಾಣ ಪರುಷವಪ್ಪುದು—ನೋಡಯ್ಯ! ಮುನ್ನ ಮುನ್ನವೆ ಅಚ್ಯೊತ್ತಿದ ಭಾಗ್ಯವೆನ್ನ ಕಣ್ಣ ಮುಂದೆ ಕಾಣ ಬಂದಿತ್ತು ನೋಡ! ಮಣ್ಣ ಮಱೆಯ ದೇಗುಲದೊಳಗೊಂದು ಮಾಣಿಕ್ಯವ ಕಂಡ ಬಳಿಕ—ಇನ್ನು ಮುನ್ನಿನಂತೆ ಇಪ್ಪುದೆ ಗೊಗೇಶ್ವರ?! ೩೨-೩೨-1-30.

ಅಱಸುವ ಬಳ್ಳಿ ಕಾಲ ಸುತ್ತಿದಂತೆ, ಬಯಸುವ ಬಯಕೆ ಕೈಸಾರಿದಂತೆ, ಬಡವ ನಿಧಾನವನೆಡಹಿ ಕಂಡಂತೆ—ನಾನಱಸುತ್ತಲಱಸುತ್ತ ಬಂದು ಭಾವಕ್ಕಗಮ್ಯನ ಕಂಡೆ ನಯ್ಯ! ಎನ್ನ ಅಱಿವಿನ ಹಱಿವ ಕಂಡೆನಯ್ಯ! ಎನ್ನ ಒಳಹೊಱಗೆ ಸರ್ವಾಂಗ ಪರಮ ಪ್ರಕಾಶದೊಳು ಬೆಳಗುವ ಜ್ಯೋತಿಯ ಕಂಡೆನಯ್ಯ! ಕುಱುಹಳಿದ ಕರಸ್ಥಳದ ನಿಬ್ಬೆಱಗಿನ ನೋಟದ ಎನ್ನ ಪರಮಗುರುವ ಕಂಡು ಬದುಕಿದೆನು ಕಾಣಾ ಗೊಗೇಶ್ವರ. ೩೩-೩೩-1-31.

ಇಂತು ಅನಿಮಿಷದೇವರ ಕಂಡು, ಈತನೆ ಗುರು, ನಾನೆ ಶಿಷ್ಯನೆಂದು, ಈ ಶ್ರೀಗುರು ವಿನ ಚರಣವ ಹಿಡಿದು ಅತೀತವಾದ ಪರವಸ್ತುವನಱಿದಪೆನೆಂದು ನಿಶ್ಚಯವ ಮಾಡಿದ ವಚನ:

ಕಂಡುದ ಹಿಡಿಯಲೊಲ್ಲದೆ ಕಾಣದುದ ಹಿಡಿದಹೆನೆಂದು ಸಿಕ್ಕಿದೆಂಬ ಬಳಲಿಕೆ

[1] (ಶಿ) ದೃಷ್ಟಿ (ದೇಹ). [2] (ಶಿದೇ) ತುಷ್ಟೈಸಿ (ಹ). [3] (ದೇ) ನೀನೆಂಬುದು (ಹಶಿ).

ನೋಡಾ! ಕಂಡುದನೆ ಕಂಡು ಗುರುಪಾದವ ಹಿಡಿದಲ್ಲಿ ಕಾಣದುದ ಕಾಣ ಬಹುದು ಗೊಗೇಶ್ವರ. ೩೪–೩೪–1–32.

ಮತ್ತಂ ಆ ಶ್ರೀಗುರುಮೂರ್ತಿಯ ನೋಡಿ ಕೊಂಡಾಡಿದ ವಚನ:

ಕಾಯದಲಾದ ಮೂರ್ತಿಯಲ್ಲ, ಜೀವದಲಾದ ಮೂರ್ತಿಯಲ್ಲ. ಪ್ರಾಣದಲಾದ ಮೂರ್ತಿಯಲ್ಲ, ಪುಣ್ಯದಲಾದ ಮೂರ್ತಿಯಲ್ಲ. ಮುಕ್ತಿಯಲಾದ ಮೂರ್ತಿಯಲ್ಲ. [1]ಯುಗದಲಾದ ಮೂರ್ತಿಯಲ್ಲ.[1] ಶಿವನಲಾದ ಮೂರ್ತಿಯಲ್ಲ, ಶಕ್ತಿಯಲಾದ ಮೂರ್ತಿಯಲ್ಲ. ಇದೆಂತಹ ಮೂರ್ತಿಯೆಂದು ಉಪಮಿಸುವೆ! ಕಾಣಬಾರದ ಕಾಯ, ನೋಡಬಾರದ ತೇಜ, ಉಪಮಿಸಬಾರದ ನಿಲವು. ಕಾರಣವಿಡಿದು ಕಣ್ಣಿಂಗೆ ಗೋಚರವಾದ ಸುಖವನೇನೆಂದು ಹೇಳುವೆನು ಗೊಗೇಶ್ವರ! ೩೫–೩೫–1–33. ಮತ್ತಂ.

ಸ್ಫಟಿಕದ ಘಟದಂತೆ-ಒಳಹೊಱಗಿಲ್ಲ ನೋಡ! ವಿಗಡ ಚರಿತ್ರಕ್ಕೆ ಬೆಱಗಾದೆನು. ನೋಡುವರೆ ಕಾಣಬರುತ್ತಿದೆ, ಮುಟ್ಟುವರೆ ಕೈಗೆ ಸಿಲುಕದು. ಹೊದ್ದುವರೆ ಸಮೀಪ, ಹತ್ತೆ ಸಾರೆ ಅತ್ತತ್ತ [2]ತೋಱುತ್ತದೆ.[2] ಆಕಾರ ನಿರಾಕಾರವ ನುಂಗಿ ಬಯಲ ಸಮಾಧಿಯಲ್ಲಿ ಸಿಲುಕಿತ್ತು ನೋಡ! ದರುಶನದಿಂದಲಮೃತಾಹಾರವಾಯಿತ್ತು, ಬೆರಸಿದೊಡಿನ್ನೆಂತೊ ಗೊಗೇಶ್ವರ. ೩೬–೩೬–1–34.

ಇಂತು ಪ್ರಭುದೇವರು ಅನಿಮಿಷದೇವರ ಮೂರ್ತಿಯಂ ಕಂಡು ಕೊಂಡಾಡಿ, ಈ ಶ್ರೀಗುರುವಿನ ಕೈಯಲ್ಲಿ ನಾನು ಉಪದೇಶವ ಹಡೆದಹೆನೆಂದಡೆ ಈ ಮಹಾತ್ಮನು ತಾನೆಂಬುದನೂ ಅಱಿಯನು. ಇದಿರೆಂಬುದನೂ ಅಱಿಯದೆ ನಿಶ್ಶಬ್ದ ವೇದಿಸಿ ಮುಗ್ಧನಾಗಿದ್ದನಾಗಿ ಇದಿರಿಟ್ಟು ಉಪದೇಶವ ಮಾಡುವನಲ್ಲ. ಎನಗೆ ನಾನೆ ಗುರೂಪದೇಶವ ಪಡೆಯಬೇಕೆಂದು ನಿಶ್ಚೈಸಿದ ವಚನ:

ನಡೆ-ನುಡಿ ಇಲ್ಲದ ಗುರುವ ಕಂಡು, ಉಪದೇಶವ ಹಡೆಯಲೆಂದು ಹೋದರೆ, ಒಡನೆ ನುಡಿಯನು. ನುಡಿಸಿದರೆ ಕೇಳನು. ಕಡೆ-ಮೊದಲ ಕಾರ್ಯವೆಂತಪ್ಪುದೊ ಅಯ್ಯ? ಮೂಗರ ಮೂಗರ ಪ್ರಸಂಗದಂತೆ ಇದೆ ಎನ್ನೊಳಗೆ ಅಱಿವಿನ ಪರಿಮಳ! ಹೊಱಗೆ ನೋಡಿದಡೆ ಮುಗ್ಧವಾಯಿತ್ತು!! ಇದೆಂತೆಂದುಪಮಿಸುವೆ ಅನಿಯಮದ ಬೆಡಗ! ಇದು ತನ್ನಿಂದ ತಾನಾಗಿಪ್ಪುದಲ್ಲದೆ ಭಿನ್ನವುಂಟೆ ಗೊಗೇಶ್ವರ? ೩೭–೩೭–1–35.

ಗುರುವನೂ ತನ್ನನೂ [3]ವಿಭಾಗಿಸಿ[3] ನೋಡಿ ನಿಶ್ಚೈಸುವ ವಚನ:

ಒಂದೆಂಬೆನೆ? ಎರಡಾಗಿದೆ. ಎರಡೆಂಬೆನೆ? ಒಂದಾಗಿದೆ. ಒಂದೆರಡೆಂಬ ಸಂದೇಹವಿದೇನೊ? ಅಗಲಲಿಲ್ಲದ ಕೂಟಕ್ಕೆ ಬಿಚ್ಚಿ ಬೇಱಾಗದ ಉಪದೇಶ. ಗುರು-ಶಿಷ್ಯರೆಂಬ ಭಾವಕ್ಕೆ ಭೇದ ಉಂಟೆ ಗೊಗೇಶ್ವರ? ೩೮–೩೮–1–36.

---

[1] (ಹ) ಯೋಗದಲಾದ ಮೂರ್ತಿಯಲ್ಲ (ಶಿ) ಯುಗದಲಾದ ಮೂರ್ತಿಯಲ್ಲ ಜುಗದಲಾದ ಮೂರ್ತಿಯಲ್ಲ (ದೇ) (ಗೂಳು) [2] (ಶಿಗೂದೇ) ಮೀರಿ ತೋರುತ್ತದೆ (ಹ). [3] (ಶಿದೇಗೂ) ವಿಚಾರಿಸಿ (ಹ)

ಮತ್ತಾ ಗುರುವಿನ ಸನ್ನಿಧಿಯಲ್ಲಿ ಜ್ಞಾನಲಿಂಗೋಪದೇಶಕ್ರಮವ ಬಿನ್ನಹಂಗೆಯ್ವ ಪ್ರಸ್ತಾವದ ವಚನ:

ಕಾಣಬಾರದ ಗುರುವು ಕಂಗೆ ಗೋಚರವಾದರೆ ಹೇಳಲಿಲ್ಲದ ಬಿನ್ನಪ, ಮುಟ್ಟಲಿಲ್ಲದ ಹಸ್ತಮಸ್ತಕ ಸಂಯೋಗ, ಪೂಸಲಿಲ್ಲದ ವಿಭೂತಿಯ ಪಟ್ಟ, ಕೇಳಲಿಲ್ಲದ ಕರ್ಣಮಂತ್ರ, ತುಂಬಿ ತುಳುಂಕದ ಕಳಶಾಭಿಷೇಕ, ಆಗಮವಿಲ್ಲದ ದೀಕ್ಷೆ, ಪೂಜೆಗೆ ಬಾರದ ಲಿಂಗ, ಸಂಗವಿಲ್ಲದ ಸಂಬಂಧ, ಸಯವಪ್ಪ ಅನುಗ್ರಹವ ಆನು ಕೈಕೊಂಬಂತೆ ಮಾಡಾ ಗೊಗೇಶ್ವರ. ೩೭-೩೭-1-37 ಮತ್ತಂ:

ನೀನೆನಗೆ ಶ್ರೀಗುರುವಪ್ಪಡೆ, ನಾನು ನಿನಗೆ ಶಿಷ್ಯನಪ್ಪಡೆ ಎನ್ನ ಕಾಯದ ಕರ್ಮವ ತೊಡೆದು, ಎನ್ನ ಕರಣಾದಿ ಗುಣಂಗಳ ಕಳೆದು, ನೀನೆನ್ನ ಕಾಯದಲ್ಲಿ ಅಡಗಿ, ನೀನೆನ್ನ ಪ್ರಾಣದಲ್ಲಿ ಅಡಗಿ, ನೀನೆನ್ನ ಭಾವದಲ್ಲಿ ಅಡಗಿ, ನೀನೆನ್ನ ಕರಸ್ಥಲಕ್ಕೆ ಬಂದು ಕಾರುಣ್ಯವ ಮಾಡಾ ಗೊಗೇಶ್ವರ. ೪೦-೪೦-1-38. ಮತ್ತಂ:

ಆದಿಯಿಂದತ್ತತ್ತಲೆನಗೆ ನೀನು ಗುರುವಯ್ಯ. ಅನಾದಿಯಿಂದತ್ತತ್ತಲೆನಗೆ ನೀನು ಗುರುವಯ್ಯ. ಈ ಎರಡು ನಾವು ಹುಟ್ಟದ ಮುನ್ನ ನಿಮಗೆ ನಾನು ಶಿಷ್ಯನಯ್ಯ. ಎನ್ನ ಭಾವಕಾಯದೊಳಗೆ ಭ್ರಮೆಯ ಕಳೆದು, ಎನ್ನ ಜ್ಞಾನಕಾಯದೊಳಗೆ ಮಱಹ ಕಳೆದು; ಎನ್ನ ಒಳಗೆ ತಿಳಿವಿನ ಬಗೆಯ ತೋಱುತ್ತ, ಹೊಱಗೆ ನುಡಿಯದಂತಿರ್ದಡೆ ಬಿಡೆನು ನೋಡಾ ನಿಮ್ಮ ಶ್ರೀಚರಣವ! ಮಾಡಿದಡೆ ಅಂತು ಪ್ರಸಾದವೆಂದು ಕೈಕೊಂಬೆ, ಮಾಡದಿರ್ದಡೆ ನೀವೆ ನಾನಾಗಿ ಮಹಾಪ್ರಸಾದವೆಂದು ಕೈಕೊಂಬೆನು. ಇಂತು ಆವ ತೆಱದಲಾದಡೂ ಎನ್ನ ಒಡಲ ನಿಮ್ಮಲ್ಲಿ ಸವೆದು ಹಡೆವೆನು ನಿಮ್ಮ ಕರುಣವನು. ಗೊಗೇಶ್ವರ, ಎನ್ನ ಇರವಿನ ಪರಿ ಇಂತುಟು ನೋಡಾ! ೪೧-೪೧-1-39.

ಮತ್ತಾ ಗುರುವಿನಲ್ಲಿ ಪ್ರಭುದೇವರು ಅಭಿನ್ನ ಕ್ರಿಯೆಯ ನಿಶ್ಚೈಸಿದ ವಚನ:

ಜ್ಯೋತಿಯೊಳಗಿಪ್ಪ ಕರ್ಪುರಕ್ಕೆ, ಅಪ್ಪುವಿನೊಳಗಿಪ್ಪ ಉಪ್ಪಿಂಗೆ, ಶ್ರೀಗುರುವಿನೊಳಗಿಪ್ಪ ಶಿಷ್ಯಂಗೆ ಬೇಱೆ-ಬೇಱೆ ಕ್ರಿಯಾವರ್ತನೆಯುಂಟೆ ಗೊಗೇಶ್ವರ? ೪೨-೪೨-1-40.

ಗುರು-ಶಿಷ್ಯ-ಭಾವದಲ್ಲಿ [1]ಭೇದವೆಂದಱಿಯದ[1] ಪ್ರಭುದೇವರು ತಮ್ಮ ಅಂತರಂಗದ ಬೋಧಾಮೂರ್ತಿಯನೆ ಆ ಶ್ರೀಗುರುವೆಂದು ನಿಶ್ಚೈಸಿ, ಆ ಅನಿಮಿಷದೇವರ ಶ್ರೀಪಾದಕ್ಕೆ ಶರಣೆಂದು, ಆ ಕರಸ್ಥಲದ ಲಿಂಗವ ತಾನೆ [2]ಅನುಗ್ರಹಿಸಿ[2] ಕೊಳಲು, ಆ ಗುರು ನಿರವಯವ ನೆಯ್ದಲು, ಅಸ್ತಿ-ಚರ್ಮಂಗಳೂ, ಸಂದುಗಳೂ ಸಂಚ ತಪ್ಪಿ ನೆಲಕ್ಕೆ ಉದುರಲು, ಗುರು-ದ್ರೋಹ ಸಂಬಂಧಿಸಿತ್ತೆಂದು ಅನುತಾಪಂಬಟ್ಟ ಪ್ರಸ್ತಾವದ ವಚನ:

ಆಣವಮಲ-ಮಾಯಾಮಲ-ಕಾರ್ಮಿಕಮಲಂಗಳೆಂಬ ಮಲತ್ರಯಂಗಳಳಿದು ನಿರ್ಮಲವಾದ ಶಿಷ್ಯನು, ಕಾಯದ ಜೀವದ ಭ್ರಾಂತು ಸೂತಕವ ಹಿಂಗಿ ನಿಶ್ಶಂಕನಾದ ಗುರು-ಈ ಉಭಯ ಭಾವದೊಳಗೆ ಆವುದು ಮುಂದು, ಆವುದು ಹಿಂದೆಂದಱಿಯ

[1] (ಶಿ) ಅಭೇದವೆಂದಱಿದ (ದೇಹಗೂ). [2] (ಶಿದೇಹ) ಅವಗ್ರಹಿಸಿ ಕೊಳಲು (ಗೂ).

ಬಪ್ಪುದು? ಕರಸ್ಥಲಕ್ಕೆ ಕಾರುಣ್ಯವ ಮಾಡಿದಡೆ, ಮನಸ್ಥಲಕ್ಕೆ ಹಂಗಿಲ್ಲ. ಮನಸ್ಥಲದಲ್ಲಿ ಸೆಱಗೊಡ್ಡಿ ಬೇಡಿದಡೆ ಕರಸ್ಥಲದ ಲಿಂಗ ಕೈ ಸಾರಿತ್ತು. [1]ಗುರುಸ್ಥಲದ ನಿಲವು ಪರಸ್ಥಲದಡಗಿದರೆ ಭಾವ ಬಳಲಿ ಬಯಲಾಯಿತ್ತಿದೇನೊ[1] ಗೊಗೇಶ್ವರ! ೪೩-೪೩-1-41

ಮತ್ತಂ ಅನುತಾಪ :

ನಿರ್ಣಯವನಱಿಯದ ಮನವೆ! ದುಗುಡವನಾಹಾರಗೊಂಡೆಯಲ್ಲಾ! ಮಾಯಾಸೂತ್ರವಿದೇನೊ? ಕಂಗಳೊಳಗಣ ಕತ್ತಲೆ ತಿಳಿಯದಲ್ಲಾ! ಬೆಳಗಿನೊಳಗಣ ಶೃಂಗಾರ ಬಳಲುತ್ತಿದೆ ಗೊಗೇಶ್ವರ. ೪೪-೪೪-1-42.

ಇಂತು ಅನಿಮಿಷದೇವರು ನಿಜವನೆಯ್ದಲು ಅನುತಾಪಿಸುತ್ತಿರ್ದ ಪ್ರಭುದೇವರು ತನ್ನ ತಾನು ಸಂತೈಸಿಕೊಂಡು ತಿಳಿದು ನೋಡಿ, ಆ ಗುರುವಿನ ಚೈತನ್ಯ ಆ ಲಿಂಗದಲ್ಲಿ ಅಡಗಿತ್ತು. ಆ ಲಿಂಗವೆನ್ನ ಕರಸ್ಥಲಕ್ಕೆ ಬಂದಿತ್ತು. ಅದು ಕಾರಣ, ಆ ಶ್ರೀಗುರುವೆನ್ನ ಕರಸ್ಥಳದಲ್ಲಿ, [2]ಮನಸ್ಥಳದಲ್ಲಿ[2], ಸಂಪೂರ್ಣವಾಗಿ ನೆಲೆಗೊಂಡನಲ್ಲದೆ ಅನ್ಯಭಾವ ವಿಷಯದಿಂದ ಅಳಿದುದಿಲ್ಲವೆಂದು ಮನವ ನಿಶ್ಚೈಸಿಕೊಂಡ ಪ್ರಸ್ತಾವದ ವಚನ :

ಆಹಾ ಮನವೇ, ಮಱೆದೆಯಲ್ಲಾ ನಿನ್ನ ಪೂರ್ವಾ ಪರವ! ಘನ ಮನದೊಳಡಗಿ ಆ ಮನ ಲಿಂಗದೊಳಡಗಿ, ಆ ಲಿಂಗವೆನ್ನ ಕರಸ್ಥಲಕ್ಕೆ ಬಂದ ಬಳಿಕ, ಅಳಿಯಿತ್ತು ಅಗಲಿತ್ತು ಎಂಬ ಭಾವಭ್ರಾಂತಿ ಇದೇನೊ? ಜನನವಿಲ್ಲದ ಘನಕ್ಕೆ ಮರಣ ಉಂಟೆ? ತೆಱಹಿಲ್ಲದ ನಿಜವು ತನ್ನಲ್ಲಿ ತಾನು ವೇದ್ಯವಾಗಿಪ್ಪುದಲ್ಲದೆ ಇದಿರಿಟ್ಟು ತೋಱದೆಂಬ ಅಜ್ಞಾನವಿದೇನೊ? ನೀ ನಾನೆಂಬುದು ಮಾದು ತಾನೆಯಾಗಿ ಸಾಧ್ಯವಾಯಿತ್ತು. ಇದನೇನೆಂದೆಂಬೆ ಗೊಗೇಶ್ವರ. ೪೫-೪೫-1-43. ಮತ್ತಂ :

ಕಾಣದುದನಱಸುವರಲ್ಲದೆ ಕಂಡುದನಱಸುವರೆ? ಘನಕ್ಕೆ ಘನವಾದ ವಸ್ತು ತಾನೆ ಗುರುವಾದ, ತಾನೆ ಲಿಂಗವಾದ, ತಾನೆ ಜಂಗಮವಾದ, ತಾನೆ ಪ್ರಸಾದ[3]ವಾದ[3], ತಾನೆ ಮಂತ್ರ[4]ವಾದ[4], ತಾನೆ ಸಕಲ ವಿದ್ಯಾರೂಪನಾದ. ಇಂತಿವೆಲ್ಲವನೊಳಕೊಂಡು ಎನ್ನ ಕರಸ್ಥಲಕ್ಕೆ ಬಂದನು. ಇನ್ನು ನಿರ್ವಿಕಾರ ಕಾಣ ಗೊಗೇಶ್ವರ. ೪೬-೪೬-1-44.

ಇಂತು ಅನುತಾಪ ಸಂತಾಪಂಗಳೆರಡನೂ ಮಱೆದು, ಶ್ರೀಗುರುವನು ನಿತ್ಯನೆಂದಱಿದ ಪ್ರಭುದೇವರು ಆ ಶ್ರೀಗುರುಮೂರ್ತಿಯನು ತನ್ನ ಹೃದಯಕಮಲ ಮಧ್ಯದಲ್ಲಿ ಕಂಡು ಮನೋಪುಷ್ಪದಿಂ ಪೂಜಿಸಿ ಪರಮಹರುಷಿತನಾದ ಪ್ರಸ್ತಾವದ ವಚನ :

ಕಸ್ತೂರಿಯ ಮೃಗ ಬಂದು ಸುಳಿಯಿತ್ತಯ್ಯ. ಸಕಲ ವಿಸ್ತಾರದ ರೂಹು ಬಂದು

[1] (ಶಿ) ಗುರುಸ್ಥಲದ ನಿಲವು ಪರಸ್ಥಲದಲಡಗಿದರೆ ಭಾವ ಬಳಲಿತ್ತಿದೇನೊ (ದೇಗೂ) ಆ ಗುರುಮೂರ್ತಿಯ ಇರವು ಪರಸ್ಥಳದೊಳಡಗಿ ಆ ಪರಸ್ಥಲದ ಲಿಂಗ ಕರಸ್ಥಲದೊಳಡಗಿವಡೆ ಭಾವ ಬಳಲುತ್ತಿದೆ (ಹ). [2] (ದೇಗೂ) ಮನಸ್ಥಳದಲ್ಲಿ ತನುಸ್ಥಳದಲ್ಲಿ (ಶಿ) ಮನಸ್ಥಲದಲ್ಲಿ ಪ್ರಾಣಸ್ಥಲದಲ್ಲಿ (ಹ). [3] (ಶಿ) ವಾದ ಪಾದೋದಕವಾದ (ಹ). [4] (ಶಿ) ವಾದ ತಾನೆ ಯಂತ್ರವಾದ (ದೇಹಗೂ).

ಮುಂದೆ ನಿಂದಿತ್ತಯ್ಯ. ಆವ ಗ್ರಹ ಸೋಂಕಿತೆಂದಱಿಯೆನು. ಹೃದಯಕಮಲ ಮಧ್ಯದಲ್ಲಿ ಗುರುವನಱಿದು ಪೂಜಿಸಿ ಗುರು ವಿಖ್ಯಾತನೆಂಬುದನಱಿದೆ ನೋಡಾ! ಗೊಗೇಶ್ವರ ಲಿಂಗದಲ್ಲಿ ಹಿಂದಣ ಹುಟ್ಟಱತು ಹೋದುದ ಕಂಡೆನು. ೪೭-೪೭-1-46.

ಇಂತು ಶ್ರೀಗುರುಪೂಜೆಯ ಮಾಡಿ ಆ ಗುರುವಿನಲ್ಲಿ ಪರವಶನಾದ ಪ್ರಸ್ತಾವದ ವಚನ :

ಎನ್ನ ಮನದ ಕೊಸೆಯ ಮೊನೆಯ ಮೇಲೆ ಅಂಗವಿಲ್ಲದ ರೂಪನ ಕಂಡು ಬೆಱಗಾದೆ. [1]ಆತನ ಕಂಡು ಬೆಱಗಾದೆ[1]. ಅಂತರಂಗದ ಆತುಮದೊಳಗೆ ಅನಿಮಿಷನಿಜೈಕ್ಯ [2]ಗೊಗೇಶ್ವರನ[2] ಕಂಡು ಬೆಱಗಾದೆನು. ೪೮-೪೮-1-47.

ಆ ಗುರುವಿನಲ್ಲಿ ತನ್ನಲ್ಲಿ ಏಕೋ ಭಾವವನೈದಿದ. ವಚನ:

ಗುರು-ಶಿಷ್ಯ ಸಂಬಂಧವನಱಿಸಲೆಂದು ಹೋದರೆ [3]ತಾನೆ ಗುರುವಾದ, ತಾನೆ ಶಿಷ್ಯನಾದ, ತಾನೆ ಲಿಂಗವಾದ[3]. ಗೊಗೇಶ್ವರ ನಿಮ್ಮ ಶರಣನ ಕೈಯಲ್ಲಿ ಲಿಂಗವ ಕೊಟ್ಟಡೆ ಭಾವ ಬತ್ತಲೆಯಾಯಿತ್ತು. ೪೯-೪೯-1-49.

[4]ಇಂತು ಗುರುವಿನಲ್ಲಿ ತನ್ನಲ್ಲಿ ಸಮರಸ ಭಾವವನೆಯ್ದಿದ ಪ್ರಭುದೇವರು ತಮ್ಮ ಕರಸ್ಥಳದ ಲಿಂಗವ ನೋಡಿ ಆ ಲಿಂಗಭಾವ ಆಲಿಂಗವಾಗಿ, ದೃಷ್ಟಿನಟ್ಟು, ಮನಂಮುಟ್ಟಿ ಹಾರೈಸಿ ತನಗೆ ತಾನಾಶ್ಚರ್ಯಂ ಬಡುತ್ತಿರ್ದ ಪ್ರಸ್ತಾವದ ವಚನ[4] :

[5]ಮುನ್ನಿನ ಪರಿ ಇಂತುಟಲ್ಲ. ಆದಡಿಂತಹುದೆ ? A ಅಲ್ಲದಡಿಂತಹುದೆ ?A ಹಲವು ದೆಸೆಯ ಬಯಕೆ ತಾರ್ಕಣೆ ಗಂಡಂತೆ ಗೊಗೇಶ್ವರ ಲಿಂಗವು ತನುವ ತನ್ನತ್ತಲೊಯ್ದನು[5]. ೫೦-೫೦-1-51.

ಎತ್ತಣ ಮಾಮರನೆತ್ತಣ ಕೋಗಿಲೆ? ಎತ್ತಣಿಂದೆತ್ತ ಸಂಬಂಧವಯ್ಯ ? ಬೆಟ್ಟದ ನೆಲ್ಲಿಯಕಾಯಿ ಸಮುದ್ರದೊಳಗಣ ಉಪ್ಪು ಎತ್ತಣಿಂದೆತ್ತ ಸಂಬಂಧವಯ್ಯ? ಗೊಗೇಶ್ವರ [6]ಲಿಂಗಕ್ಕೂ[6] ಎನಗೂ ಎತ್ತಣಿಂದೆತ್ತ ಸಂಬಂಧ ? ೫೧-೫೧-1-52

ಆ [7]ಲಿಂಗದ[7] ಮಹಾತ್ಮೆಯ ನೋಡಿ ಶಬ್ದಮುಗ್ಧವಾದ ಪ್ರಸ್ತಾವದ ವಚನ :

---

[1] (ಶಿ) ಎನ್ನ ಪರಮ ಗುರುವ ಕಂಡು ಬೆಱಗಾದೆನು (ಹ) × (ದೇ ಗೂ). [2] (ಶಿಹ) ಗೊಗೇಶ್ವರಲ್ಲಯ್ಯನ (ದೇಗೂ). [3] (ಶಿದೇಗೂ) ತಾನೆ ಗ:ರು ತಾನೆ ಶಿಷ್ಯ ತಾನೆ ಲಿಂಗ ತಾನೆ ಜಂಗಮವಾದ (ಹ). [4] ಇಂತು ಶ್ರೀಗುರುಲಿಂಗ ಜಂಗಮದಲ್ಲಿ ತನ್ನಲ್ಲಿ ಸಮರಸ ಭಾವವನೈದಿದ ಪ್ರಭುದೇವರು ತಮ್ಮ ಕರಸ್ಥಲದ ಲಿಂಗದಲ್ಲಿ ಶರಣರ ಕಂಡು ನೋಡಿ ನೋಡಿ ಆ ಶರಣಲಿಂಗ ಭಾವ ಆಲಿಂಗನವಾಗಿ ದೃಷ್ಟಿನಟ್ಟು ಮನಂಮುಟ್ಟಿ ಹಾರೈಸಿ ಶರಣರತ್ತಲಭಿಮುಖವಾದುದಂ ಕಂಡು ತನ್ನೊಳಗೆ ತಾನಾಶ್ಚರ್ಯಂ ಬಡುತ್ತಿರ್ದ ಪ್ರಸ್ತಾವದ ವಚನ (ಹ). [5] (ಶಿ) ಮುನ್ನಿನ ಪರಿ ಎಂತುಟಲ್ಲ. ಶರಣರತ್ತಲಭಿಮುಖವಾಗುತ್ತೈದಾನೆ ಆದಡವರಂತಹುದು ಅಲ್ಲದಡಿಂತಹುದೆ? ಹಲವು ದೆಸೆಯ ಬಯಕೆ ತನ್ನ ತಾನೆ ತಾರ್ಕಣೆ ಕಂಡಂತೆ ಗೊಗೇಶ್ವರ ಲಿಂಗವು ಎನ್ನನು ತನ್ನವರತ್ತಲೊಯ್ದನು. (ಹ). A (ಶಿ) (ದೇ) ಆಗದಡಿಂತಾಯಿತ್ತು (ಗೂ). [6] (ಶಿದೇಗೂ) ಲಿಂಗ ಶರಣರಿಗೂ (ಹ) [7] ಲಿಂಗದ ಶರಣರ (ಹ).

ಕಾಣಬಾರದ [1]ಲಿಂಗವೆನ್ನ[1] ಕರಸ್ಥಳಕ್ಕೆ ಬಂದರೆ ಹೇಳಲಮ್ಮೆ, ಕೇಳಲಮ್ಮೆ. ಎನಗಿದು ಚೋದ್ಯ! ಗೊಗೇಶ್ವರನೆಂಬ ನಿರಾಕಾರ ಬಯಲು [2]ಸಾಕಾರವಾಗಿ[2] ಎನ್ನ ಕರಸ್ಥಳಕ್ಕೆ ಬಂದರೆ ಹೇಳಲಮ್ಮೆ. ಕೇಳಲಮ್ಮೆ ೫೨-೫೨-1-53.

ಆ ಲಿಂಗದಲ್ಲಿ ಪರವಶನಾಗಿರ್ದ ವಚನ:

ತನು ತರತರಂಬೋಗಿ ಮನವು ನಿಮ್ಮಲ್ಲಿ ಸಿಲುಕಿತಯ್ಯ. ನೋಟವೆ ಪ್ರಾಣವಾಗಿ ಆಪ್ಯಾಯನ ನಿಮ್ಮಲ್ಲಿ ಅಱತುದಯ್ಯ. ಸಿಲುಕಿತ್ತು [3]ಶೂನ್ಯದೊಳಗೆ ಗೊಗೇಶ್ವರ ನಿರಾಳ[3]! ೫೩-೫೩-1-54. ಮತ್ತಂ:

ನಿಮ್ಮ ನೋಡುವ ಸುಖ ಉಳ್ಳನ್ನಕ್ಕರ ಬೆರಸಲೆಲ್ಲಿಯದಯ್ಯ? ನಿಮ್ಮ ಬೆರಸುವ ತವಕ ಉಳ್ಳನ್ನಕ್ಕರ ನೋಟ ಹಿಂಗದು. ನೋಡಿ ಕೂಡಿ ಸೈವೆಱಗಾದ ಸುಖವನೇ ನೆಂದುಪಮಿಸುವೆನು ಗೊಗೇಶ್ವರ. ೫೪-೫೪-1-55.

ಇಷ್ಟಲಿಂಗದಲ್ಲಿ ವಿಶ್ವಾಸ ಬಲಿದಲ್ಲಿ ಆಯತಲಿಂಗ. ಆ ಇಷ್ಟಲಿಂಗದ ಭಾವ ಮನೋವೇದ್ಯವಾದಲ್ಲಿ ಸ್ವಾಯತಲಿಂಗ. ಆ ಇಷ್ಟಲಿಂಗದ ಭಾವ ಮನೋವೇದ್ಯ ಸುಖವು ಭಿನ್ನವಾಗಿ ತೋಱದೆ ಅನುಪಮ ಪರಿಣಾಮ ಪೂರಿತವಾದಲ್ಲಿ ಸನ್ನಿಹಿತಲಿಂಗ. ಇಂತು ಇಷ್ಟಲಿಂಗ, [4]ದೃಷ್ಟಿಲಿಂಗ[4] ತೃಪ್ತಿಲಿಂಗವೆಂಬ ಲಿಂಗತ್ರಯಂಗಳ ಮೇಲೆ ಆಯತ-ಸ್ವಾಯತ-ಸನ್ನಿಹಿತನಾದ ಶರಣನ ಪಂಚ ಭೌತಿಕಂಗಳಳಿದು ಲಿಂಗತತ್ವಂಗಳಾಗಿ ಆತ್ಮನ ಜೀವಭಾವವಳಿದು ಪರಮಾತ್ಮನೆನಿಸಿದಲ್ಲಿ ಷಡಂಗ ಯೋಗವಾದುದಾಗಿ ಷಡುಸ್ಥಳಂಗಳೆಂಬ ಬಗೆ ಸಂಭವಿಸಿದವು.* ಅದೆಂತೆಂದಡೆ: ಪ್ರಥಮದಲ್ಲಿ ಭಕ್ತಿಸ್ಥಲ:

## ಭಕ್ತಿಸ್ಥಲ

ಪ್ರಣಿತೆಯೂ ಇದೆ, ಬತ್ತಿಯೂ ಇದೆ; ಜ್ಯೋತಿಯ ಬೆಳಗುವಡೆ ತೈಲವಿಲ್ಲದೆ ಎಂತಪ್ಪುದಯ್ಯ? ಗುರುವೂ ಇದೇ, [5]ಲಿಂಗವೂ ಇದೆ;[5] ಶಿಷ್ಯಂಗೆ ಜ್ಞಾನೋದಯ ವಾಗದನ್ನಕ್ಕರ ಭಕ್ತಿ ಎಂತಳವಡುವದಯ್ಯ? ಸೋಹಂ ಎಂಬುದ ಕೇಳಿ ದಾಸೋಹ ಮಾಡದಿದ್ದಡೆ ಅತಿಗಳೆದೆನು ನಾನು ಗೊಗೇಶ್ವರ. ೫೫-ಪು. 42-1-56. ಮತ್ತಂ:

ಮುಂದು ಜಾವದಲೆದ್ದು, ಲಿಂಗದಂಘ್ರಿಯ ಮುಟ್ಟಿ, ಸುಪ್ರಭಾತದಲ್ಲಿ ಎದ್ದು ಶಿವ ಭಕ್ತರ ಮುಖವ ನೋಡುವುದು ಹುಟ್ಟಿದುದಕ್ಕೆ ಸಫಲ ನೋಡಾ! ಇವಿಲ್ಲದವರನೊಲ್ಲೆ ಗೊಗೇಶ್ವರ. ೫೬-ಪು. 42-1-58. ಮತ್ತಂ:

ಅನ್ಯರಜವ ಬೆರಸದೆ, ತನ್ನ ರಜವ ಬಾಧಿಸದೆ, ರವಿಯ ಬೆಳಸ ಬಳಸದೆ, ಲಿಂಗದ

[1] (ಶಿದೇಗೂ) ಶರಣರನೊಳ ಕೊಂಡು ಲಿಂಗವೆನ್ನ (ಹ). [2] (ಶಿದೇಗೂ) ಸಾಕಾರವಾಗಿ ಶರಣರನೊಳಕೊಂಡು (ಹ). [3] (ಶಿದೇಗೂ) ಶರಣರೊಳಗೆಶೂನ್ಯಲಿಂಗ ನಿರಾಳ ಗೊಗೇಶ್ವರನು (ಹ). [4] (ಶಿ) ಪ್ರಾಣಲಿಂಗ (ದೇ). * ಈ ಷಟ್‌ಸ್ಥಲದ ಪ್ರಸ್ತಾಪ ಮತ್ತು ಆ ಸಂಬಂಧವಾದ ವಚನ ವಿಭಾಗ ಹಲಗೆಯ ಶೂನ್ಯಸಂಪಾದನೆಯಲ್ಲಿ ಸಿದ್ಧರಾಮಯ್ಯಗಳ ಸಂಪಾದನೆಯ ವಿಭಾಗದಲ್ಲಿ ಬರುವುದು. [5] (ಹ) (ಗೂ) ಶಿಷ್ಯನೂ ಐದಾನೆ (ಶಿ ದೇ).

ಬೆಳಸ ತಂದು ಜಂಗಮದಲ್ಲಿ ಸವೆಸುತ್ತಿಪ್ಪನು: ಆ ಭಕ್ತನಲ್ಲಿ ಗೊಗೇಶ್ವರನಿಪ್ಪನು. ೫೭-ಪು. 43-1-57.

ಇಂತು ವಿಶ್ವಾಸವೆ ಪ್ರಾಣವಾಗಿಪ್ಪ ಭಕ್ತನ ಆ ವಿಶ್ವಾಸದೊಳಗಣ ಏಕೋನಿಷ್ಠೆ ಎಂತಿರ್ದುದೆಂದಡೆ ಮುಂದೆ ಮಾಹೇಶ್ವರ ಸ್ಥಲವಾದುದು:

## ಮಾಹೇಶ್ವರಸ್ಥಲ

ಕೊಟ್ಟ ಕುದುರೆಯನೇಱಲಱಿಯದೆ ಮತ್ತೊಂದು ಕುದುರೆಯ ಬಯಸುವವರು ವೀರರೂ ಅಲ್ಲ, ಧೀರರೂ ಅಲ್ಲ. ಇದು ಕಾರಣ, ಮೂಱು ಲೋಕವೆಲ್ಲವೂ ಹಲ್ಲಣವ ಹೊತ್ತುಕೊಂಡು ಬಳಲುತ್ತೈದಾರೆ ಗೊಗೇಶ್ವರ. ೫೮-ಪು. 43-1-59.

ಭಕ್ತನೆಂಬರು! ಪೃಥ್ವಿಯ ಪೂರ್ವಾಶ್ರಯವ ಕಳೆಯದನ್ನಕ್ಕರ, ಅಪ್ಪುವಿನ ಪೂರ್ವಾಶ್ರಯವ ಕಳೆಯದನ್ನಕ್ಕರ, ತೇಜದ ಪೂರ್ವಾಶ್ರಯವ ಕಳೆಯದನ್ನಕ್ಕರ, ವಾಯುವಿನ ಪೂರ್ವಾಶ್ರಯವ ಕಳೆಯದನ್ನಕ್ಕರ, ಆಕಾಶದ ಪೂರ್ವಾಶ್ರಯವ ಕಳೆಯದನ್ನಕ್ಕರ ಸೋಮಸೂರ್ಯರ ಪೂರ್ವಾಶ್ರಯವ ಕಳೆಯದನ್ನಕ್ಕರ, ಆತ್ಮನ ಪೂರ್ವಾಶ್ರಯವ ಕಳೆಯದನ್ನಕ್ಕರ, ಭಕ್ತರೆಂದು ಲಿಂಗವ ಪೂಜಿಸುವರ ಕಂಡು ಬೆಱಗಾದೆ ಗೊಗೇಶ್ವರ. ೫೯-ಪು. 43-1-60.

ಹರಿದು ಹತ್ತಿ ಮುಟ್ಟಿ ಹಿಡಿದಹೆವೆಂದು ಜಾಱಿ ಉರುಳಿಬಿದ್ದರು ಅನಂತರು. ಹಿಡಿದಹೆವೆಂಬವರೆಲ್ಲರೂ [1]ಹವಣಸೆ[1] ಉಂಡು ಹೋದರು. ನಾನು ಹಿಡಿದ ಬಂದಿ ಒಡ ಬಂದಿಯಾಯಿತ್ತು ಗೊಗೇಶ್ವರ. ೬೦- × -1-61. ಮತ್ತಂ:

ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ನಾನು ನಿಮಗೆ ಹಂಗು-ಹಱಿಯಿಲ್ಲದೆ ಮಾಡುವೆನು. ನಾನು ಮಾಡುವ [2]ಕ್ರೀಗಳೆಲ್ಲವು[2] ನೀನೆಯಾದ ಕಾರಣ ಗೊಗೇಶ್ವರ ನಿಮ್ಮಲ್ಲಿ ತದ್ಗತವಾದೆನು. ೬೧-ಪು. 43-1-62.

ಇಂತು ವಿಶ್ವಾಸದಿಂ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಾಹೇಶ್ವರನಾಗಿ, ಆ ನಿಷ್ಠೆಯೊಳಗೆ ಅತ್ತಿತ್ತಲೋಸರಿಸದೆ ಸಾವಧಾನಿಯಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಪ್ರಸಾದಿ ಸ್ಥಲವಾದುದು:

## ಪ್ರಸಾದಿಸ್ಥಲ

ತ್ರಿವಿಧದ ನಿತ್ಯ ತ್ರಿವಿಧದ ಅನಿತ್ಯವನು ಆರು ಬಲ್ಲರಯ್ಯ? ತ್ರಿವಿಧಕ್ಕೆ ತ್ರಿವಿಧವ ನಿತ್ತು, ತ್ರಿವಿಧ ಪ್ರಸಾದವ ಕೊಳಬಲ್ಲರೆ ಆತನ ತ್ರಿವಿಧನಾಥನೆಂಬೆನು. ಆತನ ವೀರನೆಂಬೆನು, ಧೀರನೆಂಬೆನು, ಗೊಗೇಶ್ವರ ಲಿಂಗದಲ್ಲಿ ಪ್ರಸಾದಿಯೆಂಬೆನು. ೬೨-ಪು. 43-1-63.

[1] (ವೇ) ಹವಣೆ (ಶಿ) ಹೆಣಸ (ಗೂ). [2] (ವೇ ಹ ಗೂ) ಯುಕ್ತಿಗಳೆಲ್ಲವು (ಶಿ).

ಅರ್ಪಿತ-ಅನರ್ಪಿತವನಾರು ಬಲ್ಲರಯ್ಯ ? ಅರ್ಪಿಸಿಕೊಂಬುದು ಅನರ್ಪಿತ. ಅರ್ಪಿಸದೆ ಕೊಂಬುದು ಅನರ್ಪಿತ. ಅರ್ಪಿಸಿ ಅರ್ಪಿಸದೆ ಪ್ರಸಾದವ ಕೊಳಬಲ್ಲ ಗೊಗೇಶ್ವರ ನಿಮ್ಮ ಪ್ರಸಾದಿ. ೬೩-ಪು. 43-1-64. ವುತ್ತಂ:

ತನುವ ತಾಗದ ಮುನ್ನ, ಮನವ ತಾಗದ ಮುನ್ನ, ಆಪ್ಯಾಯನ ಬಂದು ಎಡೆಗೊಳ್ಳದ ಮುನ್ನ, ಅರ್ಪಿತವ ಮಾಡಬೇಕು. ಗುರುವಿನ ಕೈಯಲ್ಲಿ [1]ಎಳತಟ[1]ವಾಗದ ಮುನ್ನ ಅರ್ಪಿತವ ಮಾಡಬೇಕು. ಎಡದ ಕೈಯಲ್ಲಿ ಕಿಚ್ಚು, ಬಲದ ಕೈಯಲ್ಲಿ ಹುಲ್ಲು, ಉರಿ ಹತ್ತಿತ್ತು ಗೊಗೇಶ್ವರ ನಿಮ್ಮ ಪ್ರಸಾದಿಯ ೬೪-ಪು. 43-1-65.

ಇಂತು ವಿಶ್ವಾಸದಿಂದ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಾಹೇಶ್ವರನಾಗಿ, ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ, ಆ ಸಾವಧಾನದೊಳಗಣ ಸ್ವಾನುಭಾವ ವಿವೇಕದಿಂ ಪ್ರಾಣಲಿಂಗಿಯಾಗಿರ್ದ ಲಿಂಗಪ್ರಾಣಿಯ ವರ್ತನವೆಂತಿದ್ದುದೆಂದಡೆ ಮುಂದೆ ಪ್ರಾಣಲಿಂಗಿ ಸ್ಥಲವಾದುದು :

## ಪ್ರಾಣಲಿಂಗಿಸ್ಥಲ

ಉದಕ ಮೂರುತಿಯಾಗಿ ಉದಯವಾಯಿತ್ತು [2]ಪೀಠಿಗೆ[2]. ಅಲ್ಲಿಯೆ ಮೂಲಸ್ಥಾನ ಸ್ಥಾಪ್ಯವಾಯಿತ್ತು. ಸ್ವದೇಹ ಶಿವಪುರದಲ್ಲಿ ವಾಯು ಪೂಜಾರಿಯಾಗಿ ಪರಿಮಳ ದಿಂಡೆಯ ಕಟ್ಟಿ ಪೂಜಿಸುತ್ತಿದ್ದಿತ್ತು. ನವದ್ವಾರದ ಶಿವಾಲಯದ ಆದಿಮಧ್ಯ ಸ್ಥಾನದಲ್ಲಿ. ಗೊಗೇಶ್ವರನೆಂಬ ಲಿಂಗವು ಅಲ್ಲಿಯೆ ನಿಂದಿತ್ತು. ೬೫-ಪು. 43-1-66. ವುತ್ತಂ

ಕಂಗಳ ಬೆಳಗ ಕಲ್ಪಿಸಬಾರದು. ಕರ್ಣದ ನಾದವ ವರ್ಣಿಸಬಾರದು. ಜಿಹ್ವೆಯ [3]ರುಚಿಗೆ[3] ಪ್ರತಿ ಇಲ್ಲವೆಂದಿತ್ತು. ಸುಷುಮ್ನನಾಳದ ಸುಯಿಧಾನವ ಪ್ರಮಾಣಿಡಬಾರದು. ಅಣುರೇಣು ತೃಣಕಾಷ್ಠದೊಳಗೆ ಸೂಕ್ಷ್ಮನಕ್ಷಯ [4]ನಿಂದನು ನಿರಾಳ ಗೊಗೇಶ್ವರನು.[4] ೬೬-ಪು. 43-1-67. ವುತ್ತಂ :

ಕಂಗಳಾಲಿಯ ಕರಿಯ ನಾಳದಲ್ಲಿ ಈರೇಳು ಭುವನವಡಗಿದವು. [5]ನಾಟಕ ನಾಟಕವ ನಟಿಸುತ್ತ ಆಡುವ ಸೂತ್ರದ ಫಳಿ [ಫಣಿ OR ಪಳಿ ?]ಯ[5] ನೋಡಾ. ಗೊಗೇಶ್ವರ ನಿರಾಳಚೈತನ್ಯನು. ೬೭-ಪು. 44-1-68.

ಇಂತು ವಿಶ್ವಾಸದಿಂ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಾಹೇಶ್ವರನಾಗಿ, ಆ ನಿಷ್ಠೆಯೊಳಗಣ ನಿರಂತರ ಸಾವಧಾನಾರ್ಪಿತದಿಂ ಪ್ರಸಾದಿಯಾಗಿ, ಆ ಸ್ವಾನುಭಾವಾರ್ಪಿತದೊಳಗಣ ಸ್ವಾನುಭಾವ ವಿವೇಕದಿಂ ಪ್ರಾಣಲಿಂಗಿಯಾಗಿ, ಆ

---

[1] (ಶಿ ಹ ಗೂ) ಎಳತ (ದೇ). [2] (ಹ) ಪೃಥ್ವಿಗೆ (ಶಿ ದೇ) ಪಿಂಡಿಗೆ (ಗೂ) (ಉ). [3] (ದೇ ಹ ಗೂ) ರುಚಿ ಮತಿಗೆಟ್ಟು (ಹ). [4] (ಶಿ ದೇ ಗೂ) ನಿರಾಳ ಗೊಗೇಶ್ವರನಿಪ್ಪನು (ಹ). [5] (ಶಿ) ನಾಟಕ ನಾಟಕವ ನಟಿಸುತ್ತ ಆಡುವ ಸೂತ್ರದ ಪರಿಯ (ಹ) ನಟ ನಾಟಕ ನಟಿಸಿತ್ತು ಆಡುವ ಸೂತ್ರದ ಪರಿಯ (ದೇ) ನಾಟಕ ನಾಟಕ ನಟಿಸಿತ್ತು ಆಡುವ ಸೂತ್ರದ ಪರಿಯ (ಗೂ) (ಉ).

ಸ್ವಾನುಭಾವ ವಿವೇಕದೊಳಗಣ ಅಱಿವಿನಿಂ ಶರಣನಾದ ಭೇದವೆಂತಿರ್ದುದೆಂದೊಡೆ ಮುಂದೆ ಶರಣಸ್ಥಲವಾದುದು :

## ಶರಣಸ್ಥಲ

ನೆಳಲು ಸತ್ತಿತ್ತು. ಭ್ರಾಂತು ಬೆಂದಿತ್ತು. ಅಱಿವು ಮಱೆಯಿತ್ತು. ಕುಱುಹು ಗೆಟ್ಟಿತ್ತು. ಅಲ್ಲಿ ಗತಿಯನಱಿಸಲುಂಟೆ? ಮತಿಯನಱಿಸಲುಂಟೆ? ಅಂಗವೆಲ್ಲಾ ನಷ್ಟವಾಗಿ, ಲಿಂಗಲೀಯವಾಗಿ, ಕಂಗಳಂಗದ ಕಳೆಯು ಬೆಳಗಿನ [1]ಭಂಗವಳಿಯಿತ್ತು[1] ಗೊಗೇಶ್ವರ. ೬೮-ಪು. 44-1-69. ಮತ್ತಂ :

ಉಪಾಧಿಕ ಮನವು, ಉಪಾಧಿರಹಿತ ಮನವು ನಿಂದಿದ್ದಲ್ಲಿ ನಿವಾತವಾಯಿತ್ತು. ಆನಂದ ಭಾವವು [2]ಬಿಂದುನಾಳ ನಿಂದಲ್ಲಿ ನಿವಾತವಾಯಿತ್ತು.[2] ಲಿಂಗದ ಬೆಳಗು ಪ್ರಜ್ವಲಿಸುವುದ ಕಂಡೆ ಗೊಗೇಶ್ವರ. ೬೯-ಪು. 44-1-70.

ತಲೆಯ ಮೇಲೊಂದು ತಲೆ ಇದ್ದಿತ್ತು. ತಲೆಯ ತಲೆ ಆ ತಲೆಯ ನುಂಗಿತ್ತು. ಸತ್ತ ಹಾಲ ಸವಿಯ ಬಲ್ಲಡೆ, ರಥದ ಕೀಲ ಬಲ್ಲಡೆ ಹೇಳಿರೆ. ಶಿಶು ಕಂಡ ಕನಸಿನ ತೃಪ್ತಿಯ ನಿಮ್ಮಲ್ಲಿ ಕಂಡೆನು ಗೊಗೇಶ್ವರ ೭೦-ಪು. 44-1-71.

ಇಂತು, ವಿಶ್ವಾಸದಿಂ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಾಹೇಶ್ವರನಾಗಿ, ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ, ಆ ಸ್ವಾನುಭಾವದೊಳಗಣ ಸ್ವಾನುಭಾವ ವಿವೇಕದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭಾವ ವಿವೇಕದೊಳಗಣ ಅಱಿವಿಂ ಶರಣನಾಗಿ, ಆ ಅಱಿವು ನಿಜದಲ್ಲಿ ಸಮರಸಜ್ಞಾನವನೆಯ್ದಿ ನಿರ್ಭಾವಪದದೊಳುನಿಂದ ಭೇದವೆಂತಿದ್ದುದೆಂದಡೆ ಮುಂದೆ ಐಕ್ಯಸ್ಥಲವಾದುದು :

## ಐಕ್ಯಸ್ಥಲ

ಭಾವಕ್ಕೆ ಇಂಬಿಲ್ಲ. ಶಬ್ದ ಮಾಸಲು ನೋಡಾ! ನುಡಿಗೆಡೆಯಿಲ್ಲ, ಎಡೆಗೆ ಕಡೆಯಿಲ್ಲ, ಗೊಗೇಶ್ವರನೆಂಬ [3]ಶಬ್ದ[3]ವೇದಿಸಲೊಡನೆ. ೭೧-ಪು. 44-1-72. ಮತ್ತಂ:

ನಿರ್ವಿಕಲ್ಪವೆಂಬ ನಿಜದೊಳಗಯ್ಯ! ನಿರಹಂಭಾವದಲ್ಲಿ ನಾನು ಇದ್ದೆನು. ನೋಡಿಹೆನೆಂದರೆ ನೋಡಲಿಲ್ಲ. ಕೇಳಿಹೆನೆಂದರೆ ಕೇಳಲಿಲ್ಲ. ಘನನಿರಂಜನದ ಬೆಳಗು ಇಂಬಾದುದನೇನೆಂಬೆ ಗೊಗೇಶ್ವರ ೭೨-ಪು. 44-1-73. ಮತ್ತಂ :

ನಿಜವನಱಿದ ನಿಶ್ಚಿಂತನೆ, ಮರಣವ [4]ನಿಲಿಸಿದ[4] ಮಹಂತನೆ, ಘನವನೊಳಕೊಂಡ ಮಹಿಮನೆ, ಪರವನೊಳಕೊಂಡ ಪರಿಣಾಮಿಯೆ, ಬಯಲೊಳೊದಗಿದ ಭರಿತನೆ, ಗೊಗೇಶ್ವರಲಿಂಗ ನಿರಾಳವನೊಳಕೊಂಡ ಸಹಜನೆ! ೭೩-ಪು. 44-1-74.

[1] (ಹ) ಭಂಗ ಹಿಂಗಿತ್ತು (ಗೂ) ಭಂಗ ಉಳಿಯಿತ್ತು (ದೇ ಶಿ). [2] (ಶಿ ದೇ) ಬಿಂದು ತಾನಳಿದು ಸಿಂದಲ್ಲಿ ನಿವಾತವಾಯಿತು (ಹ) ಬಿಂದು ತಾನಳಿದು ನಿಂದಲ್ಲಿ ನಿವಾಸವಾಯಿತ್ತು (ಗೂ ಉ). [3] (ದೇ ಹ ಗೂ) ಲಿಂಗ (ಶಿ). [4] (ಶಿ ದೇ ಹ) ಗೆಲಿದ (ಗೂ).

ಇಂತು ಷಡುಸ್ಥಲವು ಷಡಂಗದಲ್ಲಿ ಸಮರಸವನೆಯ್ದಿ ಸರ್ವಾಚಾರಸಂಪತ್ತು ನಿಷ್ಪತ್ತಿಯಾಗಿ, ಮಹಾಜ್ಞಾನವೆ ತಾನಾಗಿ ನಿಂದ ನಿಜಪದಸ್ಥಲವೆ ಸ್ಥಲವಾಗಿ, ಅಲ್ಲಿ ಅಗಮ್ಯವೆ ಗಮನವಾಗಿ,ಪರವೆಂಬುದೆ ನಾಮವಾಗಿ,ನಿರಾಶಾಭರಿತವೆಂಬ ಜಂಗಮಸ್ಥಳವ ನೆಳವಡಿಸಿ, ನಿಶ್ಶಬ್ದವೆಂಬ ವಚನಾನುಭಾವವಮಂ ತನ್ನನಾಶ್ರಯಿಸಿದ ಮಹಾನುಭಾವಿ ಗಳಿಗೆ ನಿರೂಪಿಸಲೆಳಸಿ ಕಾಯವೆಂಬ ಕಂಥೆಯ [1]ಕಳೆದಿರಿಸಿ[1] ನಿಂದಲ್ಲಿ ನೆಳಲಿಲ್ಲದೆ, ಸುಳಿ ದಲ್ಲಿ ಹಜ್ಜೆಯಿಲ್ಲದೆ ಸುಳಿವ ಅಲ್ಲಮಪ್ರಭುರಾಯನ ಜಂಗಮಸ್ಥಳದ ನಿಲುಕಡೆ ಎಂತಿರ್ದು ದೆಂದರೆ ಆ ಪ್ರಸ್ತಾವದ ವಚನ:

ಪರಮತತ್ವ ಪರಮಾರ್ಥ ಪರಾಪರ ವಾಙ್ಮನಕ್ಕಗೋಚರ, ಶಬ್ದಗಂಭೀರ, ಉಪ ಮಾತೀತ, ಉನ್ನತ ಪರಶಿವ ಜ್ಞಾನಜ್ಯೋತಿ ಸುಜ್ಞಾನ ಪ್ರಭೆಯ ಬೆಳಗಿನೊಳಗೆ ಸುಳಿದಾಡುವ ಮಹಾಮಹಿಮಂಗೆ ಜ್ಞಾನವೆ ಶೃಂಗಾರ, ಮಹಾಬೆಳಗೆ ವಿಭೂತಿ, ಪಂಚ ಬ್ರಹ್ಮವೆ ದರ್ಶನ, ಗಗನಸ್ಥಾನವೆ ಕಂಥೆ, ಆಕಾಶವೆ ಕೊಪ್ಪರ, ಅಜಾಂಡ-ಬ್ರಹ್ಮಾಂಡ ಗಳೆ ಕರ್ಣಕುಂಡಲ, ಆದಿಯಾಧಾರವೆ ಕಕ್ಷಪಾಳ, ಅನಾಹತವೆ ಒಡ್ಯಾಣ, ಅನ್ವಯವೆ ಯೋಗವಟ್ಟಗೆ, ಅಗಮ್ಯವೆ ಯೋಗವಾವುಗೆ, ಅಚಲಿತವೆ ಖರ್ಪರ, ಅಪ್ರಮಾಣವೆ ಲಾಕುಳ, ಅವಿಚಾರವೆ ಸುಳುಹು, ಅಕಲ್ಪಿತವೆ ಭಿಕ್ಷ, ಕೊಂಡುದೆ ಗಮನ, ನಿಂದುದೆ ನಿವಾಸ, ನಿಶ್ಚಿಂತವೆಂಬ ಆಶ್ರಮದೊಳಗೆ ನಿರಾಕುಳವೆಂಬ ಸಿಂಹಾಸನವನಿಕ್ಕಿ, ಗಗನ ಗಂಭೀರದ ಬಾವಿಯೊಳಗೆ ಅಗೋಚರದ ಅಗ್ಘವಣಿಯಂತಂದು ಮಹಾಘನಪ್ರಾಣ ಲಿಂಗಕ್ಕೆ ಮಂಗಳದ ಬೆಳಗೆ ಮಜ್ಜನ, ಬಿಂದ್ವಾಕಾಶವೆ ಗಂಧ, ಮಹದಾಕಾಶವೆ ಅಕ್ಷತೆ, ಪರಾಪರವೆ ಪತ್ರೆ-ಪುಷ್ಪ, ನಿರ್ಮಳವೆ ಲಿಂಗಾರ್ಚನೆ, ಮಹಾಪ್ರಕಾಶವೆ ಪೂಜೆ, ನಿತ್ಯ ನಿರಂಜನವೆ ಧೂಪಾರತಿ, ಸಕಲಭುವನಾದಿ ಭುವನಂಗಳೆ ಸಯಧಾನ, ಆಚಾರವೆ ಅರ್ಪಿತ, ಮಹಾಸ್ಥಳವೆ [2]ಸೀತಾಳ,[2] ಅಖಂಡಿತವೆ ಅಡಕೆ, ಏಕೋಭಾವವೆ ಎಲೆ, ಶುದ್ಧ ಶಿವಾಚಾರವೆ ಸುಣ್ಣ, ವಿವೇಕವಿಚಾರದಿಂ ತಾಂಬೂಲವುಂ ಸ್ವೀಕರಿಸಿ ಮಹಾಲಿಂಗದ ಪರಿಣಾಮವೆ ಪ್ರಸಾದ, ಸಮ್ಯಗ್‌ಜ್ಞಾನವೆ ಸಂತೋಷ, ಸಹಜ ನಿರಾಭಾರಿ[3]ಗಳ[3] ಮೇಳದಿಂ ನಿಸ್ಸೀಮದ ಸಿಭ್ರಾಂತಿನ ಸಂಗದಲ್ಲಿ, ನಿರಾಶಾಸ್ಪದವೆ ಅನುಕೂಲ, ನಿಶ್ಶಬ್ದಾನು ಭಾವದ ಅನುಪಮದ ನಿಶ್ಶೂನ್ಯವೆ ವಿಶ್ರಾಮ, ನಿರಾಕಾರವೆ ಗಮನ, ನಿರಂತರ ಪಾತಾಳೋರ್ಧ್ವಪವನ ತ್ರಿಭುವನಗಿರಿಯೆಂಬ ಪರ್ವತವನೇಱಿ, ಕಾಯವೆಂಬ ಕದಳಿಯ ಗೆಲಿದು ಹೊಕ್ಕು ಸುಳಿದಾಡುವ ಮಹಾಮಹಿಮಂಗೆ ಇಹಲೋಕವೇನು? ಪರಲೋಕ ವೇನು? ಅಲ್ಲಿಂಪತ್ತತ್ತ ಅಗಮ್ಯನಿರಾಳ, ಪರಮಜ್ಞಾನ ಸಿದ್ಧಿ, ಮಹಾಲಿಂಗದ ಬೆಳಗು! ಗೊಗೇಶ್ವರ, ನಿಮ್ಮ ನಿಜವನಱಿದ ಮಹಾಮಹಿಮಂಗೆ ನಮೋ ನಮೋ ಎಂಬೆನು. ೭೪-೫೫-1-75.

ಇಂತಪ್ಪ ಜಂಗಮಸ್ಥಳವನಿಂಬುಗೊಂಡು ಸಕಲ ಪುರಾತನ ಗಣಂಗಳುಂ ಕೃತಾರ್ಥರಂ

[1] (ಶಿ ಹ) ಧರಿಸಿ (ದೇ ಗೂ). [2] (ಶಿ) ಶೀತಾಳ [= ಶ್ರೀತಾಳ] (ದೇ ಹ) ಸೀತಾಳ (ಗೂ.)
[3] (ಶಿ ದೇ ಗೂ) ಗಣ (ಹ).

ಮಾಡಲೋಸುಗರ ಸುಳಿದಾಡುತ್ತಿರ್ದ ಪ್ರಸ್ತಾವದ ವಚನ:

ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕು, ಬಾಯಿಲ್ಲದ ರುಚಿ; ಭಾವವೆ ಖರ್ಪರವಾಗಿ, "ಪರಮ ದೇಹಿ" ಎಂದು ಬೇಡುವ ಪರಮನ ತೋಱಾ ಗೊಗೇಶ್ವರ! ೭೫–೫೬–1–76.

ಮತ್ತಂ:

ಕಣ್ಣೆ ಕಟ್ಟಿಗೆಯಾಗಿ, ಕೈಯೆ ಖರ್ಪರವಾಗಿ, [1]ಬಾಯೆ[1] ಸಕಲ ಪುರಾತರ ಕಾರುಣ್ಯವೆನುತ್ತ, ಮನದ ಭಿಕ್ಷವನುಂಡು, ತನು ಪರಿಣಾಮವನೆಯ್ದಿಪ್ಪ ಘನಮಹಿಮರ ತೋಱಾ ಗೊಗೇಶ್ವರ! ೭೬–೫೭–1–77. ಮತ್ತಂ.

ಕಂಡುದೆಲ್ಲವು ಪಾವನ. ಕೇಳಿತ್ತೆಲ್ಲ ಪರಮಬೋಧೆ, ಮುಟ್ಟಿತ್ತೆಲ್ಲವು ಪರುಷದ ಸೋಂಕು. ಒಡನೆ ನುಡಿದವರೆಲ್ಲರೂ ಸದ್ಯೋಮುಕ್ತರು. ಸುಳಿದ ಸುಳಿಹೆಲ್ಲವು ಜಗತ್ಪಾವನ. ಮೆಟ್ಟಿದ ಧರೆಯೆಲ್ಲವು ಅವಿಮುಕ್ತಿ ಕ್ಷೇತ್ರ ಸೋಂಕಿದ ಜಲವೆಲ್ಲವು ಪುಣ್ಯತೀರ್ಥಂಗಳು. ಶರಣೆಂದು ಭಕ್ತಿ ಮಾಡಿದವರೆಲ್ಲರು ಸಾಯುಜ್ಯರು. ಗೊಗೇಶ್ವರ, ನಿಮ್ಮ ಸುಳುಹಿನ ಸೊಗಸನುಪಮಿಸಬಾರದು! ೭೭–೫೮–1–78.

---

[1] (ಶಿ ದೇ) ಕಿವಿಯ (ಹ ಗೊ).

ಇಂತು ಮರ್ತ್ಯಲೋಕವನೆಯ್ದಿ ಪಾವನವ ಮಾಡುತ್ತ, ಸತ್ಯ ಸದಾಚಾರವಂತರಪ್ಪ ಶಿವಲಿಂಗೈಕ್ಯರಂ ತನ್ನಂತೆ ಮಾಡುತ್ತಂ, ಶ್ರೀವೀರಶಿವಾಚಾರದ ಘನಮಂ ಕರತಳಾಮಳಕವಾಗಿ ಸಮಸ್ತರೊಳು ಬೆಳಗಿ ತೋಱುತ್ತ, ಶಿವಾದ್ವೈತತತ್ವಭೇದಂಗಳನು ಶಿವಸುಖಿಗಳೊಳು ಕೃಪೆಯಿಂ ನಿರೂಪಿಸುತ್ತ, ಸ್ವಾನುಭಾವಗವ್ಯರೊಳು ಸಮೇಳಂಗೆಯ್ವುತ್ತ, ಸಮ್ಯಕ್ ಶರಣರೊಳು ಸಮರಸಮಂ [1]ಕೈಮಾಡುತ್ತ[1] ಪರಸ್ಥಳದ ಲಿಂಗಮಂ ಕರಸ್ಥಳದೊಳು ಸ್ಥೈತಿಟ್ಟು, [2]ಪಿರಿದು[2] ನೋಟವೆ ಪ್ರಾಣವಾಗಿ, ಭಾವವೆ ನಿಬ್ಬೆಱಗಿನ ನಿಲವಾಗಿ, ಜ್ಞಾನವೆ ಸರ್ವಾಂಗಲಿಂಗವಾಗಿ, ಮನವೆ ಕರಸ್ಥಳದೊಳು ಲಯವಾಗಿ, [3]ಅಕಾಯವೆ[3] ಕಾಯವಾಗಿ, ಬಲದ ಹಸ್ತದೊಳು ವೀಣಾದಂಡಮಂ ಪಿಡಿದು, ಪರಮಾನಂದ ರಸ ಒಸರಲು, ಪಾಡುವ ಸ್ವರವೆ ನಾದಬ್ರಹ್ಮದೊಳು ತರಹರವಾಗಿ, ದಿವ್ಯ ವಚನಾಮೃತಂಗಳಂ ಪಾಡುತ್ತ, ಲೋಕದ ಲಜ್ಜಾಭಿಮಾನಂಗಳನಱಿಯದೆ ದಿಗಂಬರ ವೇಷದಿಂದೆ ಇತರೇತರಂಗಳಂ ಮಱೆದು, ತನ್ನೊಳು ತನ್ನ [4]ನಿಜವನೆ[4] ನೋಡುತ್ತ ಲಿಂತನಂತ ದೇಶಂಗಳಂ ಸುಳಿದು, ದೇಶಾಂತರಮಂ ನಟಿಸಿ ತೋಱುತ್ತ ಬರಲು ಮುಂದೆ ಅಜಗಣ್ಣತಂದೆಗಳು ನಿರವಯಪದದೊಳು ನಿಜವನೆಯ್ದಿರಲು ಅಲ್ಲಿ ಮುಕ್ತಾಕ್ಕಗಳು ಅಜಗಣ್ಣನನಗಲ್ದು ವಿಯೋಗಾವಸ್ಥೆಯಿಂ ಪ್ರಲಾಪಿಸುತ್ತಿರಲು ಆ ಪ್ರಲಾಪಮಂ ಕಂಡು, ಈಕೆ ಮಹಾಜ್ಞಾನಿಯೆಂದಱಿದು ನಿಂದು ನೋಡುತ್ತಿಪ್ಪ ಪ್ರಸ್ತಾವದೊಳು ಆ ಮುಕ್ತಾಯಿ ಅಕ್ಕಗಳು ಬಿನ್ನೈಸುತ್ತಿದ್ದ ಪ್ರಸ್ತಾವದ ವಚನ:

ಅಱಿವನಣಲೊಳಗಿಕ್ಕಿ ಅಗಿವುತ್ತಿದೆ [5]ಮರ್ತ್ಯವೆಲ್ಲವು. ಅಳಿವುದನಱಿಯದೆ[5] ಕೆಟ್ಟಿತ್ತೀ ಲೋಕವೆಲ್ಲವು. ನಾನೆಂತು ಬದುಕುವೆನಣ್ಣ ! ಕತ್ತಲೆ-ಬೆಳಗ [6]ಕಾಣದ[6] ಸಂದೇಹಿ ನಾನೊಬ್ಬಳು. ಎನ್ನ ಕಣ್ಣ ಕಟ್ಟಿ, ಕನ್ನಡಿಯ ತೋಱಿತ್ತೊ, ಅಜಗಣ್ಣ, ನಿನ್ನ [7]ವಿಯೋಗ![7] ೭೮-೫೯-2-1. ಮತ್ತಂ:

ಸ್ಫಟಿಕ ಪ್ರಜ್ವಲಜ್ಯೋತಿ ಘಟದೊಳಗೆ ತೋಱುತ್ತಿರೆ ದಿಟಪುಟವನತಿಗಳೆದು ಸಟೆಯ ಬಳಸುವರೆ ? ಅಂತರಂಗದ ಶು[= ಸು]ದ್ಧಿ[= ದ್ದಿ]ಯ ಬಹಿರಂಗಕ್ಕೆ ತಂದು ಸಂತೈಸಲಱಿಯದೆ ಮರುಳಾದಿರಣ್ಣ. ಜಂತ್ರದ ಕೀಲು ಕೂಟದ ಸಂಚದ ಭೇದವು ತಪ್ಪಿ, ಮಂತ್ರಭಿನ್ನವಾಗಿ ನುಡಿವರೆ ಅಜಗಣ್ಣ ? ೭೯-೬೦-2-4.

---

[1] (ಶಿದೇ) ಕೈಗೂಡುತ್ತ (ಹಗೂ). [2] (ದೇಗೂ) ಪಿಡಿದು (ಹ) ಪರಿದು (ಶಿ). [3] (ದೇಗೂ) ಆಕಾಶ (ಶಿಹ). [4] (ಶಿಹ) ನಿಜದ ನಿಲವ (ದೇಗೂ). [5] (ಶಿ) ಮರ್ತ್ಯಲೋಕವೆಲ್ಲವು ಅಱಿವು ಉಳಿವುದನಱಿಯದೆ (ಹ) ಮರ್ತ್ಯಲೋಕವೆಲ್ಲವು ಅಱಿವಿನ ಇರವನಱಿಯದೆ (ದೇ) ಮರ್ತ್ಯಲೋಕವೆಲ್ಲವು ಅಱಿವು ಉಳಿಯಲಱಿಯದೆ [6] (ದೇ) ಕಾಬ (ಶಿ ಹಗೂ). [7] (ದೇ) ಯೋಗ (ಶಿಹಗೂ).

ಅಂಧಕನ ಕೈಯ ಅಂಧಕ ಹಿಡಿದಂತೆ, ಮೂಗನ ಕೈಯಲ್ಲಿ ಕಾವ್ಯವ ಕೇಳಿದಂತೆ ಇರಬೇಕು. ದರ್ಪಣದೊಳಗಣ ಪ್ರತಿಬಿಂಬದಂತೆ ಹಿಡಿವರಿಗಳವಲ್ಲದಿರಬೇಕು. ಅಣ್ಣ, ಕೂರ್ಮನ ಶಿಶುವಿನ ಸ್ನೇಹದಂತಿರಲೊಲ್ಲದೆ ಆರೂಢಿಗೆಟ್ಟೆರಿ ಅಜಗಣ್ಣ. ೭೦-೬೧-2-2. ವುತ್ತಂ:

ರವಿಯೊಳಡಗಿದ ಪ್ರತಿಬಿಂಬದಂತೆ, ಹಿಡಿವರಿಗಳವಲ್ಲದಿರಬೇಕು. ಅಣ್ಣ, ನಿನ್ನೊಳಡಗಿದ ಭೇದವ ಭಿನ್ನವ ಮಾಡುವರೆ? ಅಣ್ಣ, ನಿಮ್ಮ ನುಡಿಗಳೆಲ್ಲವು ಪ್ರತಿಬಿಂಬಂಗಳಾದವೆ? ಅಣ್ಣ, ಕೊಡನೊಳಗಣ ಜ್ಯೋತಿ ಅಡಗಲಱಿಯದೆ ಮಿಗೆವರಿದಂತಾದೆಯೊ ಅಜಗಣ್ಣ! ೭೧-೬೨-2-3.

ಇಂತು, ತನ್ನ ಅಱಿವಿನ ಮುಂದೆ ಇದಿರಿಟ್ಟು ತೋಱುವ ಪರವಸ್ತುವಿನಲ್ಲಿ ವಿಕಳಾವಸ್ಥೆಯನೆಯ್ದಿ ನೆರೆವ ಭರದಿಂದಿಪ್ಪ ಮುಕ್ತಾಯಿಗಳನು ಪ್ರಭುದೇವರು ನುಡಿಸುವ ಪ್ರಸ್ತಾವದ ವಚನ:

ಅಂಗಯ್ಯ ಒಳಗೊಂದು [1]ಅಳ್ದ[1] ತಲೆಯ ಹಿಡಿದುಕೊಂಡು, ಕಂಗಳ ಮುತ್ತ ಪವಣಿಸುವಾಕೆ ನೀನಾರು ಹೇಳಾ? ಸಂದ ಸಂಪಗೆಯರಳ ತುಂಬಿ [2]ಬಂಡುಂಡ[2] ಭೇದವನಱಿಯದೆ ಹಂಬಲಿಸುವ ಪರಿತಾಪವೇನು ಹೇಳಾ? ಒಂದೆಂಬೆನೆ, ಎರಡಾಗಿದೆ. ಎರಡೆಂಬೆನೆ ಒಂದಾಗಿದೆ. ಅಱಿವಿನೊಳಗಣ ಮಱಹಿದೇನು ಹೇಳಾ? ದುಃಖವಿಲ್ಲದ ಅಕ್ಕೆ, ಅಕ್ಕೆ ಇಲ್ಲದ ಅನುತಾಪ, ನಮ್ಮ ಗೊಗೇಶ್ವರಲಿಂಗದಲ್ಲಿ ತೋಱುತ್ತಿದೆ ನೀನಾರೆಂದು ಹೇಳಾ ಎಲೆ ಅವ್ವ? ೭೨-೬೩-2-5.

ಹೀಂಗೆಂದು ಪ್ರಭುದೇವರು ಬೆಸಗೊಳಲು ತನ್ನ ಕುಱುಹ ಹೇಳಿದ ಪ್ರಸ್ತಾವದ ವಚನ:

ಆರೆಂದು ಕುಱುಹ ಬೆಸಗೊಳಲು ಏನ ಹೇಳುವೆನಯ್ಯ? ಕಾಯದೊಳಗೆ ಮಾಯವಿಲ್ಲ; ಭಾವದೊಳಗೆ ಭ್ರಮೆಯಿಲ್ಲ. ಕರೆದು ಬೆಸಗೊಂಬಡೆ ಕುಱುಹಿಲ್ಲ. ಒಬ್ಬರಿಗೂ ಹುಟ್ಟದೆ, ಅಯೋನಿಯಲಿ ಬಂದು [3]ನಿರ್ಬುದ್ಧಿ[3]ಯಾದವಳನೇನೆಂಬೆಯಣ್ಣ! ತಲೆಯಳಿದು, ನೆಲೆಗೆಟ್ಟು, ಬೆಳಗುವ ಜ್ಯೋತಿ ಎನ್ನ ಅಜಗಣ್ಣತಂದೆಯ ಬೆನ್ನ ಬಳಿಯವಳಾನಯ್ಯ. ೭೩-೬೪-2-6.

ಹಿಂಗೆಂದು ಮುಕ್ತಾಯಿ ಅಕ್ಕಗಳು ತಮ್ಮ ಕುಱುಹ ಹೇಳಲು, ಆ ಪ್ರಭುದೇವರು ಕೇಳಿ ಹರುಷಿತರಾದ ಪ್ರಸ್ತಾವದ ವಚನ:

ಕಾಣದುದ ಕಂಡೆ; ಕೇಳದುದ ಕೇಳಿದೆ. ಮುಟ್ಟ ಬಾರದುದ ಮುಟ್ಟಿದೆ; ಅಸಾಧ್ಯವ ಸಾಧಿಸಿದೆ. ತಲೆಗೆಟ್ಟುದ ತಲೆವಿಡಿದೆ; ನೆಲೆಗೆಟ್ಟುದ ನಿರ್ಧರಿಸಿದೆ. ಗೊಗೇಶ್ವರ, ನಿಮ್ಮ ಶರಣ ಅಜಗಣ್ಣಂಗೆ ಶರಣೆಂದು ಬದುಕಿದೆನು. ೭೪-೬೫-2-7.

---

[1] (ಶಿ) ಅರಳ್ದ (ದೇಹಗೂ). [2] (ಶಿ) ಬಂಡುಂಬ (ದೇಹ) ಬಂದುಂಬ (ಗೂ). [3] (ಶಿ ದೇಹ) ದುರ್ಬುದ್ಧಿ (ಗೂಉ).

ಆಕೆಗೆ ಪ್ರಭುದೇವರು ತಮ್ಮ ಕುಱುಹ ಹೇಳುವ ಪ್ರಸ್ತಾವದ ವಚನ:

ಶರಣು ಶರಣಾರ್ಥಿ ಎಲೆ ತಾಯೆ. ಧರೆಯಾಕಾಶ ಮನೆಗಟ್ಟದಂದು, ಹರಿವ ಅನಿಲ ಅಗ್ನಿ ಜಲ ಮೊಳೆದೋಱದಂದು ಹುಟ್ಟಿದಳೆಮ್ಮವ್ವೆ. ಅದಕೆ ಮುನ್ನವೆ ಹುಟ್ಟದೆ ಬೆಳೆದನೆಮ್ಮಯ್ಯ. ಇವರಿಬ್ಬರ ಬಸಿಱಲ್ಲಿ ಬಂದೆ ನಾನು. ಎಮ್ಮ ತಂಗಿಯರೈವರು ಮೊ[+೯?]ಱಿಗೆಟ್ಟ ಹೆಂಡಿರಾದರೆನಗೆ. ಕಾಮಬಾಣ ತಾಗದೆ ಅವರ ಸಂಗವ ಮಾಡಿದೆನು. ನಾ ನಿಮ್ಮ ಭಾವನಲ್ಲಯ್ಯನು; ನೀನೆನಗೆ ನಗೆವೆಣ್ಣು. ನಮ್ಮ ಗೊಗ್ಗೇಶ್ವರನ ಕೈವಿಡಿದು ಪರಮಸುಖಿಯಾಗಿ ಕಳವಳದ ಕಂದೆಱವೆ ಏನು ಹೇಳಾ? ೮೫-೬೭-2-9.

ಹೀಂಗೆಂದು ಪ್ರಭುದೇವರು ತಮ್ಮ ಪೂರ್ವಾಪರ ಸಂಬಂಧಮಂ ನಿರೂಪಿಸಲು ಆ ಮುಕ್ತಾಯಕ್ಕಗಳು ಕೇಳಿ, ಹರುಷಿತೆಯಾದ ಪ್ರಸ್ತಾವದ ವಚನ:

ದೇವ ದೇವ ಶರಣಾರ್ತಿ ಅವಧರಿಸಿ ಕೇಳಯ್ಯ. ಕೇಳಿದ ಸುಖ ಕಿವಿಗೆ ಬೇಟವಾಯಿತ್ತು. ಕಿವಿಗಳ ಬೇಟ ಕಂಗಳ ಮುಂದೆ ಮೂರ್ತಿಯಾಯಿತ್ತು. ಕಂಗಳ ಮುಂದೆ ಕಂಡ ಸುಖ ಮನಕ್ಕೆ ವೇದ್ಯವಾಯಿತ್ತು. ಶಿವಶರಣರ ದರುಶನದ ಸುಖವನೇನೆಂದೆನಬಹುದು! ಮರಣವಳಿದು ಮಹವನೊಡಗೂಡಿದ ಎನ್ನ ಅಜಗಣ್ಣನನಗಲಿದ ದುಃಖ ನಿಮ್ಮ ಸಂಗದಲ್ಲಿ ಸಯವಾಯಿತ್ತು ಪ್ರಭುವೆ. ೮೬-೬೮-2-10.

ಇಂತು ಮುಕ್ತಾಯಕ್ಕಗಳು ನಿಮ್ಮ ದರುಶನದಿಂದ ಕೃತಾರ್ಥೆಯಾದೆನೆಂದು ಬಿನ್ನಪಂಗೆಯ್ಯಲು, ಆ ಪ್ರಭುದೇವರು, ಆಕೆಯ ಅನುತಾಪಮಂ ಸಂತೈಸಿ ನಿಲಿಸುವ ವಚನ:

ಅಱಿವಱಿತು ಕುಱುಹುಗೆಟ್ಟು, ತನ್ನಲ್ಲಿ ತಾನು ಸನ್ನಹಿತನಾದಾತಂಗೆ ದುಃಖಿಸುವರಿ ಹೇಳಾ! ಒಡಲಿಲ್ಲದಾತಂಗೆ ಎಡೆಯಲೊಂದು ಅಳಿವುಂಟೆಂದು ನುಡಿದು ಹೇಳುವ ಮಾತು ಭ್ರಾಂತು ನೋಡಾ! ಎರಡಿಲ್ಲದ ಐಕ್ಯಂಗೆ ಒಳಹೊಱಗಿಲ್ಲ ನೋಡಾ— ಗೊಗ್ಗೇಶ್ವರನ ಶರಣ ಅಜಗಣ್ಣಂಗೆ ೮೭-೬೯-2-11.

ಹೀಂಗೆಂದು ಪ್ರಭುದೇವರು ನಿರೂಪಿಸಲು ಅಜಗಣ್ಣನು ಪರಮಯೋಗಿಶ್ವರನು, ಸುಜ್ಞಾನ ಪರಿಪೂರ್ಣನು, ಅಂತರಂಗದಲ್ಲಿ ಅವಿರಳಲಿಂಗೈಕ್ಯನು, ಬಹಿರಂಗದ ವ್ಯವಹಾರ ದೂರಸ್ಥನು, ಸರ್ವಕರಣ ನಿರ್ಮುಕ್ತನು, ಸರ್ವಾಂಗರಹಿತನು, ನಿತ್ಯನಿಜತತ್ವದಲ್ಲಿ ಮನೋವೇದ್ಯನು, ಸಚ್ಚಿದಾನಂದ ರಸಾರ್ಣವನು, ಸದ್ಯೋಮುಕ್ತನು ಸರ್ವಕ್ರಿಯಾತೀತನು, ನಿಶ್ಶಬ್ದ ಗಂಬೀರನು, ನಿರುಪಮ ಚರಿತ್ರನು, ನಿಸ್ಸಂಸಾರನು, ಸಕಲತತ್ವ ಶಿರೋರತ್ನನು, ಶರೀರವಿಡಿದು ಸಂಗರಹಿತನು, ಇಂದ್ರಿಯಂಗಳು ವಿಡಿದು ನಿಷ್ಕಾಮನು, ಗಮನವಿಡಿದು ಅಗಮ್ಯನು, ವಿವೇಕವಿಡಿದು ನಿರ್ವಿಚಾರನು, ಅಱಿವುವಿಡಿದು ತ್ರಿಪುಟಿ ರಹಿತನು, ನೆನಹಿನಲ್ಲಿ ನಿಸ್ಸಂಚಲನು, ನುಡಿಯಲ್ಲಿ ಪರವಶನು, ಗತಿಯಲ್ಲಿ ಇಹಪರವೆಂಬೆರಡನೂ ಹೊದ್ದದ ನಿರಾಶಾಭರಿತನು, ಸ್ಥಿತಿಯಲ್ಲಿ ನಿಸ್ಥಿತನು, ಇರವಿನಲ್ಲಿ ಪರಶಿವನು, ಇಂತಪ್ಪ ಮಹಾಮಹಿಮನನಗಲಿ ನಾನೆಂತು ಜೀವಿಸುವೆನೆಂದು ಆ ಮುಕ್ತಾಯಿಗಳು ಬಿನ್ನೈಸುತ್ತಿದ್ದ ಪ್ರಸ್ತಾವದ ವಚನ:

ಅಂಬರವಲಾಡುವ ತುಂಬಿಯ ಬಿಂಬವ, ಕಂಬನಿಯೊಳಗಣ ರತ್ನದ [1]ಬಯಕೆಯು-ನಾರತವಹಸೇನೆಂಬೆನಯ್ಯ[1] ? ವೇದಶಾಸ್ತ್ರ ಶ್ರುತಿ ಸ್ಮೃತಿಗಳು ಸ್ತುತಿಯಿಸಲಱಿಯವು. ನಾದವಲ್ಲ, ಸುನಾದದ ನಿಲವಲ್ಲ! ಭೇದಿಸುವರೆ ಅಗಮ್ಯ ನೋಡಯ್ಯ! ಸೊಲ್ಲಿಲ್ಲದ, ಸೊಮ್ಮಿಲ್ಲದ ನಿಜವನೇನೆಂಬೆನು? ಎಂತು ಮಱೆ[3]ವೆನಯ್ಯ, ಎನ್ನ ಅಜಗಣ್ಣತಂದೆಯನು ?! ೮೮-೭೦-2-12.

ಹೀಗೆಂಬ ಮುಕ್ತಾಯಿಗಳಿಗೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ:

ಕಂಡೆನೆಂಬುದು ಕಣ್ಣ ಮಱವೆ, ಕಾಣೆನೆಂಬುದು ಮನದ ಮಱವೆ. ಕೂಡಿದೆನೆಂಬುದು ಅಱಿವನ ಮಱವೆ, ಅಗಲಿದೆನೆಂಬುದು ಮಱಹಿನ ಮಱವೆ. ಇಂತು ಕೂಡಿದೆ-ನಗಲಿದೆನೆಂಬ ಭ್ರಾಂತುಸೂತಕವಳಿದು ನೋಡಲು ಗೊಗೇಶ್ವರಲಿಂಗವನಗಲಲೆಡೆಯಿಲ್ಲ ಕೇಳಾ. ೮೯-೭೧-3-13.

ಇದಕ್ಕೆ ಮುಕ್ತಾಯಕ್ಕಗಳು ಬಿನ್ನೈಸಿದ ಪ್ರತ್ಯುತ್ತರ:

ನೀರ ಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ, ಬಯಲ ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿದ್ದನಯ್ಯ. ಕರ್ಪುರದ ಪುತ್ಥಳಿಗೆ ಅಗ್ನಿಯ ಸಿಂಹಾಸನವನಿಕ್ಕಿ, ಅಗ್ನಿ ಕರಗಿ ಕರ್ಪುರ ಉಳಿದುದಕ್ಕೆ ಬೆಱಗಾದೆನಯ್ಯ, ಎನ್ನ ಅಜಗಣ್ಣನ ಯೋಗಕ್ಕೆ. ೯೦-೭೨-2-15.

ತಾನೆಂಬ ಸ್ವರೂಪವನು ಶಿವತತ್ವಸ್ವರೂಪದಲ್ಲಿ ನಿರ್ವಹಿಸಿ ತನ್ನ ತಪ್ಪಿಸಿಕೊಂಡು ಹೋದನೆಂದು ಮುಕ್ತಾಯಿಗಳು ಬಿನ್ನೈಸುತ್ತಿರಲು ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ:

ಅಳಿವನಲ್ಲ, ಉಳಿವನಲ್ಲ, ಘನಕ್ಕೆ ಗಮನನಲ್ಲ, ಮನಕ್ಕೆ ಸಾಧ್ಯನಲ್ಲ ತನ್ನ ತಪ್ಪಿಸಿ, ಇದಿರನೊಪ್ಪಿಸಿಹೆನೆಂಬ ಭಿನ್ನಭಾವಿಯಲ್ಲ. ಗೊಗೇಶ್ವರನ ಶರಣನ ಅಂತಿಂತೆನಬಾರದು ಕೇಳಾ. ೯೧-೭೩-2-16.

ಹೀಂಗೆಂದು ಪ್ರಭುದೇವರಿಗೆ ಮುಕ್ತಾಯಕ್ಕಗಳು ಬಿನ್ನೈಸಿದ ಪ್ರತ್ಯುತ್ತರ:

ತನುವಿಡಿದೆನಾಗಿ ಅನುವನಱಿಯದೆ ಕೆಟ್ಟೆನು. ಮನವಿಡಿದೆನಾಗಿ [2]ಅಱಿವನಱಿಯದೆ[2] ಕೆಟ್ಟೆನು. ಭಾವದ ಬಳಲಿಕೆ ಹಿಂಗದಾಗಿ ವಿಯೋಗಿಯಾಗಿ ಕೆಟ್ಟೆನು. ಅಱಿವ ನುಡಿದು ಮಱಹಿಂಗೊಳಗಾದೆನು. ಎನ್ನ ಕಾಣದೆ ಭಿನ್ನಜ್ಞಾನಿಯಾದೆನು. ಅಜಗಣ್ಣನೆಂಬ ಮಹಿಮನು ಘನವೇದ್ಯನಾಗಿ ಎನ್ನ ಮತಿಗೆ ಮಱೆಯ ಮಾಡಿ ಹೋದನು. ೯೨-೭೪-2-17.

ಹೀಗೆಂದ ಮುಕ್ತಾಯಿಗಳಿಗೆ ಪ್ರಭುದೇವರು ನಿರೂಪಿಸಿದ ವಚನ:

ತನು ಉಂಟೆಂದರೆ ಪಾಶಬದ್ಧ, ಮನ ಉಂಟೆಂದರೆ ಭವಕ್ಕೆ ಬೀಜ. ಅಱಿವ

---

[1] (ದೇ) ಬಯಕೆಯುಯನಾರಂತಹನೆಂಬೆನಯ್ಯ (ಶಿ) ಬೈಕೆಯಸಾರು ತಹನೆಂಬೆನಯ್ಯ (ಹ) ಬಯಕೆಯನಾಸ್ಯಂತವಹಸೇನೆಂಬೆನಯ್ಯ ? (ಗೂ) (ಉ). [2] (ಹ) ಅಱಿವು ಉಳಿಸುವೆ (ಶಿ ದೇ ಗೂ).

ನುಡಿದು ಕೆಟ್ಟೆನೆಂದರೆ ಅಜ್ಞಾನ. ಭಾವದಲ್ಲಿ ಸಿಲುಕಿದೆನೆಂಬ ಮಾತು ಬಯಲ ಭ್ರಮೆ ನೋಡಾ! ಒಮ್ಮೆ ಕಂಡೆ, ಒಮ್ಮೆ ಕಾಣೆ; ಒಮ್ಮೆ ಕೂಡಿದೆ, ಒಮ್ಮೆ ಅಗಲಿದೆನೆಂದರೆ ಕರ್ಮ ಬೆಂಬತ್ತಿ ಬಿಡದು. ನಿನ್ನೊಳಗೆ ನಿನ್ನ ತಿಳಿದು ನೋಡಲು ಭಿನ್ನ ಉಂಟೆ ಗೊಗೇಶ್ವರಲಿಂಗವನಱಿವಡೆ ನೀನೆಂದೆ ತಿಳಿದು ನೋಡಾ ಮರುಳೆ. ೯೩-೭೫-2-18.

ಪರತತ್ವವೆಂಬುದು ಬೇಱಿಲ್ಲ, ನೀನೆಂದೆ ತಿಳಿದು ನೋಡೆನಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ:

* ಹಿಡಿದಾಚಾರವ ಬಿಡದನ್ನಕ್ಕರ, ಎನ್ನ ಅಱಿವು ಮಱೆಯದನ್ನಕ್ಕರ, ಎನ್ನ ಮನವ ಸುಡದನ್ನಕ್ಕರ, ಬೆಡಗಿನ ಗುರುವ ತೊಱೆಯದನ್ನಕ್ಕರ ಸುಸರವೆಂತಪ್ಪುದಯ್ಯ? ಹೋಹ ಬಟ್ಟೆಯನಱಿಯದನ್ನಕ್ಕರ ತಾನಾಗ ಬಾರದು ಕಾಣಾ ಎನ್ನ ಅಜಗಣ್ಣ ತಂದೆಯಂತೆ! [ಗ್ರಂಥಪಾತ] ೯೪-೭೬-2-19.

* ದೇಹೇಂದ್ರಿಯ ಮನ ಪ್ರಾಣಾದಿ ಸೂತಕಂಗಳು ಹಿಂಗದನ್ನಕ್ಕರ, ಉತ್ಪತ್ತಿ ಸ್ಥಿತಿ ಲಯಂಗಳ ಭೇದವ ತಿಳಿಯದನ್ನಕ್ಕರ, ಲಿಂಗದಲ್ಲಿ ಇದಿರಿಟ್ಟು ಮಾಡುವ ಕ್ರಿಯಾ ಸೂತಕ ಹಿಂಗದನ್ನಕ್ಕರ [1]ತಾನೆ[1] ಶಿವನಾಗಬಾರದೆಂದು ಮುಕ್ತಾಯಕ್ಕಗಳು ಬಿನ್ನೈಸಲು ಅದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ಇಲ್ಲದ ಶಂಕೆಯನುಂಟೆಂದು ಭಾವಿಸಿದರೆ, ಅದು ಕಣ್ಣ ಮುಂದೆ ರೂಪಾಗಿ ಕಾಡುತ್ತಿಪ್ಪುದು. ಇಲ್ಲದ ತನುವನುಂಟೆಂಬನ್ನಕ್ಕರ ಅದೇ ಮಾಯೆಯಾಗಿ ಕಾಡುತ್ತಿಪ್ಪುದು. [2]ನಿಃಕ್ರಿಯಾಲಿಂಗಕ್ಕೆ ಕ್ರೀಯಱತಲ್ಲದೆ[2] ಆಗದೆಂಬ ಸಂದು-ಸಂಶಯ ಮುಂದುಗೆಡಿಸುತ್ತಿಪ್ಪುದು. ಕೇಳಾ, ಮನವ ಮನೆಯ ಮಾಡಿಕೊಂಡಿಪ್ಪ ಲಿಂಗದ ಅನುವಱಿಯಬಲ್ಲಡೆ ಗೊಗೇಶ್ವರನೆಂಬ ಲಿಂಗವು ದೂರವಲ್ಲ ಕೇಳಾ ಮರುಳೆ! ೯೫-೭೭-2-20.

ಹೀಗೆಂದು ಪ್ರಭುದೇವರು ನಿರೂಪಿಸಲು ಮುಕ್ತಾಯಿ ಅಕ್ಕಗಳು ಕೊಟ್ಟ ಪ್ರತ್ಯುತ್ತರ:

ತನುವಿನೊಳಗೆ ತನುವಾಗಿ, ಮನದೊಳಗೆ ಮನವಾಗಿ, ಪ್ರಾಣದೊಳಗೆ ಪ್ರಾಣವಾಗಿಪ್ಪುದೆಂದರೆ ಕೆಲಬರಿಗೆ ಅಱಿಯ ಬಪ್ಪುದೇ? ಅಂತರಂಗದಲ್ಲಿ ಅದೆ ಎಂದರೇನು ಹೇಳಾ? ಮನಮುಟ್ಟಿ ಕಾಣಬಾರದು. ಬಹಿರಂಗದಲ್ಲಿ ಅದೆ ಎಂದರೆ [+ ಏನು ಹೇಳಾ?] ಪೂಜಿಸುವನ್ನಕ್ಕರ ಕಾಣಬಾರದು. ಆಕಾರವಲ್ಲದ ನಿರಾಕಾರಲಿಂಗವು ವ್ಯಾಕುಳ ಉಳ್ಳನ್ನಕ್ಕರ ಸಾಧ್ಯವಾಗದು. ಎನ್ನ ಮನದೊಳಗೆ ಘನವನನುಗೊಳಿಸಿ ತೋಱುವರಿಲ್ಲದ ಕಾರಣ— ಎನ್ನ ಅಜಗಣ್ಣ ನಿಕ್ಕಿದ ಸರಿದೊಡಕಿಂಗೆ ಬೆಱಗಾದೆ ನಾನು. ೯೬-೭೭-2-21

ಈ ಉತ್ತರಕ್ಕೆ ಪ್ರಭುದೇವರು ಪ್ರತ್ಯುತ್ತರವ ಕೊಟ್ಟ ಪ್ರಸ್ತಾವದ ವಚನ:

ತೆಱಹಿಲ್ಲದ ಘನವು ಕುಱುಹಿಂಗೆ ಬಾರದ ಮುನ್ನ, ತೋಱಿದವರಾರು ಹೇಳಾ

* "ಶಿ"ಯಲ್ಲಿಲ್ಲದ ಈ ಭಾಗವನ್ನು "ದೇ" ಪ್ರತಿಯಿಂದ ಉಲ್ಲೇಖಿಸಿಕೊಂಡು ಮಿಕ್ಕ ಪ್ರತಿಗಳೊಡನೆ ಹೋಲಿಸಿದೆ. [1] (ದೇ) ತಾನು (ಹ). [2] (ಶಿ) (ದೇ) (ಹ) ನಿಃಕ್ರಿಯಾಲಿಂಗಕ್ಕೆ ಕ್ರಿಯಾಂತಲ್ಲದೆ (ಉ)(ಗೂ).

ಮಹಾಘನಲಿಂಗೈಕ್ಯವನು? ಆರೂಢಿಯ ಕೂಟದಲ್ಲಿ ನಾನಾರನೂ ಸಾಕ್ಷಿಯ ಕಾಣೆ! ಬೇಱುಮಾಡಿ ನುಡಿಯ ಬಹುದೇ ಪ್ರಾಣಲಿಂಗವನು? ಅಱಿವು ಸಯವಾಗಿ, ಮಱಹು ನಷ್ಟವಾದರೆ ಗೊಗೇಶ್ವರನೆಂಬ ಲಿಂಗ ತಾನೆ ನೋಡಾ! ೯೭-೭೯-2-22.

ಇಂತು ಉಪದೇಶದಿಂದ ಮುನ್ನವೆ, ಸಂಸಾರಾವಸ್ಥೆಯ ತೊಲಗಿಸಿ, ತನಗೆ ತಾನೇ ಲಿಂಗದಲ್ಲಿ ಲೀಯವಾಗಬೇಕೆಂಬ ಬುದ್ಧಿ ಹುಟ್ಟಿದ ಬಳಿಕ, ಬಂದು ಗುರೂಪಾಸ್ತಿಯ ಮಾಡಿದ ಶರಣನು ತನ್ನಿಂದ ತಾನೆ ತಿಳಿದು ತನ್ನ ತಾನೆ ಶಿವನೆಂದಱಿಯಬೇಕಲ್ಲದೆ ಭಿನ್ನ ವಾಗಿ ಅಱಿಸಲಾಗದೆಂದು ಪ್ರಭುದೇವರು ನಿರೂಪಿಸಲು ಮುಕ್ತಾಯಕ್ಕಗಳು ಕೊಟ್ಟ ಪ್ರಸ್ತಾವದ ವಚನ:

ಗುರುವಚನದಿಂದಲ್ಲದೆ ಲಿಂಗವನಱಿಯಬಾರದು. ಗುರುವಚನದಿಂದಲ್ಲದೆ ಪ್ರಸಾದವ ನಱಿಯಬಾರದು. ಗುರುವಚನದಿಂದಲ್ಲದೆ ತನ್ನ ತಾನಱಿಯಬಾರದು. ಹಿಂದಣ ಜನ್ಮ ದಲ್ಲಿ ಗುರುವ ಪೂಜಿಸಿ,ಇನ್ನು ಜ್ಞಾನೋದಯವಾದರೆ,ಗುರುವಿಲ್ಲದ ಮುನ್ನವೆ ಆಯಿತ್ತೆನ್ನ ಬಹುದೇ? ತನ್ನಲ್ಲಿ ತಾನು ಸನ್ನಿಹಿತನಾದಹೆನೆಂದರೆ ಗುರುವಿಲ್ಲದೆ ಆಗದು ಕೇಳಾ! ಎನ್ನ ಅಜಗಣ್ಣನೆಂಬಗುರುವಿಂಗಲ್ಲದೆ ಆರೂಢಿಯ ಕೂಟ ಸಮನಿಸದು ಕೇಳಾ. ೯ಲ-೮೦-2-23.

ಇಂತು ಗುರುವಿಂದಲ್ಲದೆ ತನ್ನಿಂದ ತಾನಾಗದೆಂದು ಮುಕ್ತಾಯಕ್ಕಗಳು ಬಿನ್ನೈಸಲು ಅದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ಗುರುವಿಂಗೂ ಶಿಷ್ಯಂಗೂ ಆವುದು ದೂರ, ಆವುದು ಸಾರೆ—ಎಂಬುದನಾರುಬಲ್ಲರಯ್ಯ! ಗುರುವೇ ಶಿಷ್ಯನಾದ ತನ್ನ ವಿನೋದಕ್ಕೆ! ಆ ಶಿಷ್ಯನೆ ಗುರುವಾದ ತನ್ನ ವಿನೋದಕ್ಕೆ. ಕರ್ಮವೆಂಬ ಕೌಟಲ್ಯವೆಡೆವೊಕ್ಕ ಕಾರಣ ಭಿನ್ನವಾಗಿ ಇದ್ದಿತ್ತೆಂದರೆ ಅದು ನಿಶ್ಚಯವ ಹುದೆ?[1] ಆದಿ ಇಲ್ಲದ ಅನಾದಿಯಿಲ್ಲದ[1] ತತ್ವವಂ ತಿಳಿದುನೋಡಲು, ನೀನೆ ಸ್ವಯಂ ಜ್ಯೋತಿಪ್ರಕಾಶನೆಂದಱಿಯಲು ನಿನಗೆ ನೀನೇ ಗುರುವಲ್ಲದೆ ನಿನ್ನಿಂದಧಿಕವಪ್ಪ ಗುರು ಉಂಟೆ? ಇದು ಕಾರಣ, ಗೊಗೇಶ್ವರನೆಂಬ ಲಿಂಗವು ತಾನೆ ಎಂಬುದನೂ ತನ್ನಿಂದ ತಾನೆ ಅಱಿಯಬೇಕು ನೋಡಾ! ೯೯-೮೧-2-24.

ಇಂತು, ಅನಾದಿಯಲ್ಲಿ ನೀನೆ ಪರಶಿವನಾಗಿಪ್ಪಲ್ಲಿ ನಿನಗಾರೂ ಗುರುವಿಲ್ಲ; ಮಧ್ಯದಲ್ಲಿ ಕರ್ಮವೆಂಬ ಕಣ್ಣಡ ಕಟ್ಟಿದಲ್ಲಿಯೂ ನಿನ್ನ ಜ್ಞಾನೋದಯದಿಂದವೆ ನಿನ್ನ ತಿಳಿದೆಯಲ್ಲದೆ ಅನ್ಯರ ಕೈಯಲ್ಲಿ ಆಗದು. ಅದು ಕಾರಣ ನೀನೆ ಪರತತ್ವವೆಂದು ತಿಳಿದು ನೋಡೆಂದು ಪ್ರಭುದೇವರು ನಿರೂಪಿಸಲು ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ:

ತನ್ನ ತಾನಱಿದವಂಗೆ ಅಱಿವೆ ಗುರು. ಅಱಿವಱಿತು ಮಱಹು ನಷ್ಟವಾದಲ್ಲಿ ದೃಷ್ಟ ನಷ್ಟವೆ ಗುರು, ದೃಷ್ಟ-ನಷ್ಟಗುರು ತಾನಾದಲ್ಲಿ, ಮುಟ್ಟಿ ತೋಱಿದವರಿಲ್ಲವದೇನು? ಸಹಜವ ನೆಲೆಗೊಳಿಸುವ ನಿರ್ಣಯ ನಿಷ್ಪತ್ತಿಯೇ ಗುರು ನೋಡಾ! ಗುರು ತಾನಾದರೂ

[1] (ಶಿ) ಆದಿ ಅನಾದಿಯಿಂದತ್ತತ್ತ ಮುನ್ನಲಾದ (ದೇಗೂ).

ಗುರುವಿಡಿದಿರಬೇಕು ಎನ್ನ ಅಜಗಣ್ಣನಂತೆ! ೧೦೦–೮೨–2–25.

ಇಂತು, ಆವ ತೆಱದಲ್ಲಿಯೂ ಗುರುವಿಲ್ಲದೆ ಆಗದೆಂದರೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ಅಱಿವನಱಿದೆನೆಂಬುದೂ ಮಱವೆ. ಮಱಹ ಮಱದೆನೆಂಬುದೂ ಮಱವೆ. ಸಾಕಾರ ನಷ್ಟ, ನಿರಾಕಾರ ದೃಷ್ಟವೆಂಬುದು ಭಾವದ ಬಳಲಿಕೆ. ಗುರುವೆಂಬುದು ಶಿಷ್ಯನೆಂದಲ್ಲಿಯೆ ಹೋಯಿತ್ತು, ಶಿಷ್ಯನೆಂಬುದು ಗುರುವೆಂದಲ್ಲಿಯೆ ಹೋಯಿತ್ತು. ನಿರ್ಣಯದಲ್ಲಿ ನಿಜೈಕ್ಯ ವಾದೆನೆಂದರೆ ಎಚ್ಚಱಕೆಯಲ್ಲಿ ತಪ್ಪಿತ್ತು, ಸಹಜಸಂಬಂಧಕ್ಕೆ ಗುರುವಲ್ಲದೆ, ಅಸಹಜಕ್ಕೆ ಗುರು ಉಂಟೆ? ಗೊಗೇಶ್ವರ ಲಿಂಗದಲ್ಲಿ ಪರವೆಂದಲ್ಲಿ ಗುರು ಉಂಟಲ್ಲದೆ ಸ್ವಯವೆಂದಲ್ಲಿ ನುಡಿಯಲಿಲ್ಲ. ೧೦೧–೮೩–2–26.

ಇಂತು, ತಾನು ಲಿಂಗವಾದಹೆನೆಂದು ನುಡಿವನ್ನಕ್ಕರ ಗುರು ಉಂಟಲ್ಲದೆ, ತಾನು ತಾನೆ ಯಾದ ಬಳಿಕ, ಗುರು ತಾನೇಕೆಂದು ಪ್ರಭುದೇವರು ನಿರೂಪಿಸಲು, ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ:

ಅದ್ವೈತವ ನೆಲೆಗೊಳಿಸಿ ಎರಡಳಿನೆಂಬರು! ಶಿಶು ಕಂಡ ಕನಸಿನಂತಿರಬೇಕಲ್ಲದೆ–ನುಡಿದು ಹೇಳುವನ್ನಕ್ಕರ ಭಿನ್ನವಲ್ಲದೇನು ಹೇಳಾ!? ಅಱವಱತು ಮಱಹು ನಷ್ಟವಾಗಿ ಗುರುವ ತೋಱದೆನೆಂಬವರು ಇದಿರಿಂಗೆ ಕರುಳ ಕಲೆಯನಱುಹುವ ಪರಿಯೆಂತು ಹೇಳಾ? ಮನದ ಕೊನೆಯ ಮೊನೆಯ ಮೇಲಣ ಅಱವಿನ ಕಣ್ಣ ಮುಂದೆ, ಸ್ವಯಂ ಜ್ಯೋತಿ ಪ್ರಕಾಶ ತೋಱುತ್ತಿದ್ದರೆ–ಅದು ತಾನಾಗ ಬಲ್ಲನೆ? ನೆಱೆಯಱತು ಮಱೆಯ ಬಲ್ಲಡೆ, ಎನ್ನ ಅಜಗಣ್ಣನಂತೆ ಶಬ್ದಮುಗ್ಧನಾಗಿರಬೇಕಲ್ಲದೆ, ಶಬ್ದಸಂದಣಿಯ ಮಾತು ಸಯವಲ್ಲ ನೋಡಯ್ಯ. ೧೦೨–೮೪–2–27.

ನಿನ್ನ ನೀನಱತು ಪರಬ್ರಹ್ಮವಾದೆನೆಂದರೆ ನಿಶ್ಶಬ್ದವೇದ್ಯವಾಗಿರಬೇಕಲ್ಲದೆ ಶಬ್ದಸಂದಣಿ ಹಿಂಗದೆಂದರೆ, ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ಮಾತೆಂಬುದು ಜ್ಯೋತಿರ್ಲಿಂಗ, ಸ್ವರವೆಂಬುದೆ ಪರತತ್ವ. ತಾಳೋಷ್ಟ್ರ[=ಷ್ಠ?] ಸಂಪುಟವೆಂಬುದೆ ನಾದ–ಬಿಂದು–ಕಳಾತೀತ. ಗೊಗೇಶ್ವರನ ಶರಣರು ನುಡಿದು ಸೂತಕಿ ಗಳಲ್ಲ, ಕೇಳಾ ಮರುಳೆ. ೧೦೩–೮೫–2–28.

ಶಿವಶರಣರು ಶಬ್ದ ಸೂತಕಿಗಳಲ್ಲವೆಂದರೆ, ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ:

ನಡೆದು ನಡೆದು ಕಡೆಯ ಕಂಡವರು, ನುಡಿದು ನುಡಿದು ಹೇಳುತ್ತಿಹರೆ? ನುಡಿದು ನುಡಿದು ಹೇಳುವನ್ನಕ್ಕರ ನಡೆದುದೆಲ್ಲಾ ಹುಸಿಯೆಂಬೆನು. ಮಾತಿನ ಮಥನ ಅಱವು ಕಾರಣದಿಂದಾವಲ್ಲದೆ, ಅನುಪಮಸ್ವರಭೇದವಾದ ಪರಿಯೆಂತು ಹೇಳಾ! ಇದಿರ ಗೆಲ ಬೇಕೆಂದು ನುಡಿದುಕೊಂಡರೇನು? ಮನಕ್ಕೆ ಮನವೆ ಸಾಕ್ಷಿಯಾಗಿ, ನಿಷ್ಪತ್ತಿಯಲ್ಲ ನೋಡಾ! ಎನ್ನ ಅಜಗಣ್ಣತಂದೆ ಶಬುದಕ್ಕೆ ಹೇಸಿ ಮುಗುದನಾದನು. ೧೦೪–೮೬–2–29.

[1]ಇದಿರ ಗೆಲಬೇಕೆಂದು ನುಡಿವ ನುಡಿ ಅಱಿವಲ್ಲದೆ[1] ಸಹಜಜ್ಞಾನ ನಿನಗಿಲ್ಲವೆಂದು ಮುಕ್ತಾಯಕ್ಕಗಳು ಬಿನ್ನೈಸಲು ಅದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ತನ್ನ ತಾನಱಿದಡೆ ನುಡಿ ಎಲ್ಲಾ ತತ್ವ ನೋಡಾ! ತನ್ನ ತಾ ಮಱೆದರೆ ನುಡಿಯೆಲ್ಲಾ [2]ಮಾಯೆ[2] ನೋಡಾ! ಅಱಿದು ಮಱೆ[3]ದು ಶಿವಯೋಗಿಯ ಶಬುದವೆಲ್ಲಾ ಉಪದೇಶ ವಲ್ಲದೆ ಭಿನ್ನ ಉಂಟೆ? ನಿನ್ನ ಮನದ ಕಳವಳವ ತಿಳುಹಲೆಂದು ಮಾತನಾಡಿಸಿ ನೋಡಿದರೆ ಎನ್ನ ಮನದೊಳಗೆ [3]ಕಲೆ[3]ಯೆಂಬುದಿಲ್ಲ ನೋಡಾ! ನಮ್ಮ ಗೊಗೇಶ್ವರ ಲಿಂಗಕ್ಕೆ ನೀನು ಕರುಣದ ಶಿಶುವಾದ ಕಾರಣ ಬಾಯ್ದೆಱೆದೆನಲ್ಲದೆ ಭಿನ್ನ ಉಂಟೇ ಹೇಳಾ ಮರುಳೆ! ೧೦೫–೮೭–2–30.

[4]ಇದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ:[4]

ನುಡಿಯ ಹಂಗಿನ್ನೂ ನಿಮಗೆ ಹಿಂಗದು! ನಡೆಯನೆಂತು ಪರರಿಗೆ ಹೇಳುವಿರಿ? ಒಡಲ ಹಂಗಿನ ಸುಳುಹು ಬಿಡದು. ಎನ್ನೊಡನೆ ಮತ್ತೇತಱ ಅನುಭಾವವಣ್ಣಾ? ತಾನಾದಲ್ಲದೆ ಇದಿರಿಂಗೆ [5]ಹೇಳಬಹುದೆ[5]? ಅಱಿವ ತೋಱಬಲ್ಲರೆ ತನ್ನ ನಱುಹದೆ ಅಱುಹುವನು ಕಾಣಾ ಎನ್ನ ಅಜಗಣ್ಣದೇವರು. ೧೦೬–೮೮–2–31.

ನಿನಗಿನ್ನೂ ಒಡಲ ಹಂಗು ಹಿಂಗದು, ಮಾತಿನ ಮಥನ ಹಿಂಗದು, ಎನಗೇತಱ ಅಱಿವ ಹೇಳಿಹೆ ಹೋಗೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ಅಂಗದ ಕಳೆ ಲಿಂಗದಲ್ಲಿ ಅಱತ ಬಳಿಕ, ಅಂಗನೆಂಬ ಶಂಕೆಯಿಲ್ಲ ನೋಡಾ ಶರಣಂಗೆ! ಪ್ರಾಣದ ಕಳೆ ಅಱಿವಿನಲ್ಲಿ ಅಱತ ಬಳಿಕ, ಶಬ್ದಸಂದಣಿಗೆ ಹಂಗಿಗನಲ್ಲಿ ನೋಡಾ! ಶರಣನು ನಡೆದಡೆ ನಿರ್ಗಮನಿ, ನುಡಿದಡೆ ನಿಶ್ಶಬ್ದಿ: ಗೊಗೇಶ್ವರನ ಶರಣಂಗೆ ಕುಱುಹಿಲ್ಲ ಹೇಳಾ ಎಲೆಯವ್ವ. ೧೦೭–೮೯–2–32.

[6]ಹೀಗೆಂದು ನಿರೂಪವ ಕೊಟ್ಟ ಪ್ರಭುದೇವರ ವಚನಕ್ಕೆ ಮುಕ್ತಾಯಕ್ಕಗಳು ಬಿನ್ನೈಸಿದ ಪ್ರಸ್ತಾವದ ವಚನ[6]:

ಕೈಯದು ಕುಱುಹು, ಬಾಯದು ಬೊಬ್ಬೆ; ಉಲಿಯದಿರೋ ಭಾವ! [7]ಆಲಿ[7]ಕಲ್ಲ ಕೊಡನಲ್ಲಿ ಮುತ್ತು ಮಾಣಿಕವ ತುಂಬಿ ಎತ್ತುವರಿಲ್ಲದೆ ಸಖಿಯನಱಸುತ್ತಿಪ್ಪೆ. ಮನದ ತನುವಿನಲ್ಲಿ, ಆ ತನುವಿನ ಮನದಲ್ಲಿ ತನಗೆ ತಾನೆತ್ತಿಕೊಂಡರೆ ಮನವೇರಿದಪ್ಪಿ ಕರಗಿ

[1] (ಶಿ) ಇದಿರ ಗೆಲ್ಲುವ ನುಡಿವ ನುಡಿಗಳಿವಲ್ಲದೆ (ದೇ) ಇದಿರ ಗೆಲಬೇಕೆಂದು ನುಡಿವ ನುಡಿಗಳಿವಲ್ಲದೆ (ಗೂ). [2] (ಶಿಹ) (ಗೂ) ಮಾಯ (ದೇ). [3] (ಶಿದೇಹ) ಕಂದು ಕಲೆ (ಗೂ). [4] (ಶಿ) ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ (ಗೂ ದೇ) ಹೀಗೆಂದು ಪ್ರಭುದೇವರು ನುಡಿದ ವಾಕ್ಯಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರವ ವಚನ (ಹ). [5] (ಶಿಹ) (ಗೂ) ಪರವ ಬೋಧಿಸಬಹುದೇ (ದೇ). [6] ಈ ಹೀಗೆಂದು ಪ್ರಭುದೇವರು ನಿರೂಪಿಸಲು ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ (ದೇಗೂ). [7] (ಶಿ) ವಾರಿ (ಹ) (ಗೂ) ಕಾರಿ (ದೇ).

ಉಕ್ಕಿತ್ತು ನಮ್ಮ ಅಜಗಣ್ಣನ ಯೋಗ. ೧೦೮-೯೦-2-33.

ಇಂತು ಜಲಬಿಂದು ಸ್ವರೂಪವಪ್ಪ ನಿನ್ನ ತನುವೆಂಬ ಘಟದಲ್ಲಿ ಜ್ಞಾನವೆಂಬ ರತ್ನವ ತುಂಬಿ ನಿನಗೆ ನೀನೆ ಧರಿಸಲಱಿಯದೆ ಇನ್ನು [1]ಸಖಿಯನಱಿಸುತಿಪ್ಪ[1] ನಿನ್ನ ಅಱಿವೇತಱಿದೆಂದು ಮುಕ್ತಾಯಕ್ಕಗಳು ಬಿನ್ನೈಸಲು ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ಅಱಿವುಗೆಟ್ಟು, ಕುಱುಹಳಿದು, ಭಾವಭ್ರಾಂತಿ ನಿಭ್ರಾಂತಿಯಾದವರ ಕುಱುಹನಱಿಸುವರೆ ಹೇಳಾ. ತಾನಳಿದು [2]ತಾನುಳಿದು[2] ತಾನು ತಾನಾದ ನಿಜ ಶರಣಂಗೆ ಅಂತರಂಗದಲ್ಲಿ ಒಂದು ಅಱಿವುಂಟೆ ? ಗೊಗೇಶ್ವರನ ಶರಣರ ನಿಲವು ಕಾಯಗೊಂಡವರ ಕಣ್ಣಿಂಗೆ ಸಂದೇಹವಾಗಿಪ್ಪುದು. ನಿಸ್ಸಂದೇಹಿಗೆ ನಿಜವಾಗಿಪ್ಪುದು ನೋಡಾ! ೧೦೯-೯೧-2-34.

ಈ ಉತ್ತರಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ:

ನುಡಿಯೆನೆಂಬಲ್ಲಿ ನುಡಿಯದೆ, ನಡೆಯೆನೆಂಬಲ್ಲಿ ನಡೆಯದೆ, ಭಾವಿಸಿಹೆನೆಂಬಲ್ಲಿ ಭಾವವದೆ, ಅಱಿವ ಮಱೆದೆನೆಂಬಲ್ಲಿಯೆ ಅಱಿವು ಮಱವೆಯದೆ. ಅಂಗದಲ್ಲಿ ಲಿಂಗಲೀಯವಾಯಿತ್ತೆಂದರೆ ಅಲ್ಲಿಯೇ ಅಂಗವದೆ.ಅನಂಗ ಸಂಗಿಯಾದೆನೆಂಬಲ್ಲಿ ವಿಷಯ ಸೂತಕವದೆ. ನಾನೇ ನಾನಾದೆನೆಂಬಲ್ಲಿ ನೀನೆಂಬುದದೆ. ಅಱಿದು ಮಱೆದ ಪರಿಯೆಂತು ಹೇಳಾ !? ಅಱಿವು ನಷ್ಟವಾಗಿ, ಮಱಹು ಲಯವಾಗಿಪ್ಪಡೆ, ಎನ್ನ ಅಜಗಣ್ಣ ತಂದೆಯಲ್ಲದೆ ಮತ್ತಾರನೂ ಕಾಣೆ. ೧೧೦-೯೨-2-35.

ಇದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ಅಂಗ ಅನಂಗವೆಂಬೆರಡೂ ಆಳಿದು, ನಿಜದಲ್ಲಿ ನಿಂದ ನಿಜೈಕ್ಯನ ಅಂಗದ ಮೇಲುಳ್ಳ ಕ್ರೀಗಳೆಲ್ಲವೂ ಲಿಂಗಕ್ರೀಗಳು ನೋಡಾ. ಮನೋಲಯವಾಗಿಪ್ಪ ನಿಜಲಿಂಗೈಕ್ಯನ ಅನುಭಾವವೆಲ್ಲವೂ ಜ್ಞಾನ-ನಷ್ಟಶಬ್ದ ನೋಡಾ. ತನ್ನಲ್ಲಿ ತಾನು ತದುಗತವಾಗಿಪ್ಪ ಶಿವಯೋಗಿಗೆ ಭಿನ್ನವಿಲ್ಲ ನೋಡಾ ! ಗೊಗೇಶ್ವರ ಸಾಕ್ಷಿಯಾಗಿ. ೧೧೧-೯೩-2-36.

ಹೀಗೆಂದು ಪ್ರಭುದೇವರು ನಿರೂಪಿಸಲು ಅದಕ್ಕೆ ಮುಕ್ತಾಯಿಗಳು ಕೊಟ್ಟಪ್ರತ್ಯುತ್ತರ:

ಸಿಡಿಲು ಹೊಯ್ದ ಬಾವಿಗೆ ಸೋಪಾನವೇಕೋ ? ನೆಱೆಯಱಿದ ಬಳಿಕ ಮತ್ತೆ ಮತಿ ಹುಟ್ಟಲುಂಟೆ? ಸೊಡರುಳ್ಳ ಮನೆಗೆ ತಮಂಧವೆಂಬುದೇನೋ ? ತನ್ನಲ್ಲಿ ತಾನು ತದುಗತವಾದ ಬಳಿಕ, ಬೊಮ್ಮ-ಪರಬೊಮ್ಮವಾನೆಂಬುದಿಲ್ಲ ನೋಡಾ ಎನ್ನ ಅಜಗಣ್ಣ ತಂದೆಗೆ! ೧೧೨-೯೪-2-37.

ಹೀಗೆಂದು ಮುಕ್ತಾಯಕ್ಕಗಳು ಬಿನ್ನೈಸಲು ಇದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ನುಡಿಯಿಂದ ನಡೆಗೆಟ್ಟಿತ್ತು. ನಡೆಯಿಂದ ನುಡಿಗೆಟ್ಟಿತ್ತು. ಭಾವದ ಗುಸುಟು ತಾನೆ ನಾಚಿ ಮಾದುದು ನೋಡಾ! ಗೊಗೇಶ್ವರನೆಂಬ ಅಱಿವು ಸಿನೆಬಂಜೆಯಾದುದು ನೋಡಾ! ೧೧೩-೯೫-2-38.

ಹೀಗೆಂದು, ಪ್ರಭುದೇವರು ತಮ್ಮ ನಿಜಪದದ ನಿಲವಂ ನಿರೂಪಿಸಲು, ಇದಕ್ಕೆ

[1] ಶರಣಸಹಾಯವನಱಿಸುತ್ತಲಿಪ್ಪ (ಹ). [2] (ಶಿದೇ) ನಿಜವುಳಿದು (ಹ).

ಮುಕ್ತಾಯಕ್ಕಗಳು ಪರಾಮರಿಸಿದ ಪ್ರಸ್ತಾವದ ವಚನ:

ಅಹುದಹುದು ಶಿವಶರಣರ ಮಹಿಮೆ ಆರಿಗೆ ಕಾಣಬಹುದು !? ಕಬ್ಬುನ ಉಂಡ ನೀರಿನಂತೆ, [1]ಕಬ್ಬಿಸಿಲುಂಡ[1] ಅರಿಸಿನದಂತೆ, ಉರಿಯೊಳಡಗಿದ ಕರ್ಪುರದಂತೆ, ಬಯಲನಪ್ಪಿದ ವಾಯುವಿನಂತೆ ಇಪ್ಪ ನಿಲವು-ನುಡಿದು ಹೇಳಿಹೆನೆಂಬ ಮಾತಿಂಗೆ ಅಳವಡುವುದೆ? ಅಱಿವಡೆ ಮತಿಯಿಲ್ಲ. ನೆನೆವಡೆ ಮನವಿಲ್ಲ. ಎನ್ನ ಅಜಗಣ್ಣತಂದೆಯನೊಳಗೊಂಡಿಪ್ಪ ನಿಮ್ಮ ಮಹಿಮೆಗೆ ನಮೋ ನಮೋ ಎನುತಿದ್ದೆನು. ೧೧೪-೯೬-2-39.

ಹೀಗೆಂದು ಬಿನ್ನಪಂಗೆಯ್ವ ಮುಕ್ತಾಯಿಗೆ ಪ್ರಭುದೇವರು ನಿರವಯಲ ಸಮಾಧಿಯ ಭೇದವಂ ನಿರೂಪಿಸಿದ ಪ್ರಸ್ತಾವದ ವಚನ:

ಮುಕ್ತಿಗೆ ಮುಖವಾಗಿ, ಯುಕ್ತಿಗೆ ಹೊಱಗಾಗಿ, ಅಱಿವಿಂಗೆ ಅಱಿವಾಗಿ ಇಪ್ಪ ಭೇದ ಕಾಣ ಬಂದಿತ್ತು ನೋಡಾ! ಅಱಿವಱಿತು ಮಱಹು ನಷ್ಟವಾಗಿ ಇಪ್ಪುದು ನಿಮ್ಮಲ್ಲಿ ಸನ್ನಿಹಿತವಾಯತ್ತು. ಗೊಗೇಶ್ವರನ ಶರಣ ಅಜಗಣ್ಣನ ನಿಲವು ಬಯಲ ಬೆರಸಿದ [2]ಮರೀಚಿ[2]ಯಂತಾಯಿತ್ತು. ಬೆರಸಿ ನೋಡಾ ಬೇಱಿಲ್ಲದೆ. ೧೧೫-೯೭-2-40.

ಇಂತು ಪ್ರಭುದೇವರು ಮಹಾಲಿಂಗೈಕ್ಯದ ಭೇದವಂ ನಿರೂಪಿಸಲು, ಮುಕ್ತಾಯಕ್ಕಗಳು ಆ ಉಪದೇಶವಂ ಮನೋಲಯಸ್ಥಾನದೊಳು ಧರಿಸಿ, ನಿತ್ಯನಿರವಯ ಸಮಾಧಿಯೊಳು ನಿಜವನೆಯ್ದಿದ ಪ್ರಸ್ತಾವದ ವಚನ:

ಘನಮಹಿಮ ಶರಣರ ಸಂಗದಿಂದ ಘನಕ್ಕೆ ಘನವೇದ್ಯವಾದ ಬಳಿಕ-ಅಱಿಯಲಿಲ್ಲ, ಮಱೆಯಲಿಲ್ಲ; ಕೂಡಲಿಲ್ಲ, ಅಗಲಲಿಲ್ಲ; ಮನ ಮೇರೆದಪ್ಪಿ ನಿರವಯಲಾದ ಸುಖವ ಶೂನ್ಯ-ನಿಶ್ಶೂನ್ಯವೆಂದು ನುಡಿಯಲುಂಟೆ? ಶಬ್ದ ಮುಗ್ಧನಾಗಿ ಎನ್ನ ಅಜಗಣ್ಣ ತಂದೆಯ ಬೆರಸಿದ ಬಳಿಕ ಉರಿಯುಂಡ ಕರ್ಪುರದಂತಾದೆನಯ್ಯ. ೧೧೬-೯೮-2-41.

1 (ಶಿಹ) ಬಿಸಿಲುಂಡ (ದೇ). 2 (ದೇ ಹ) ಪರಿ (ಶಿ).

ಇಂತು, ಮುಕ್ತಾಯಕ್ತಗಳ ಪ್ರಳಾಪವನುಂ ನಿಲಿಸಿ, ಮಹಾನುಭಾವವನುಂ ಬೋಧಿಸಿ, ಅಜಗಣ್ಣ ದೇವರ ನಿಲವನು ಆಕೆಯ ಸರ್ವಾಂಗದೊಳ್ ಪ್ರತಿಷ್ಠಿಸಿ ತೋಱಿ, ನಿರವಯ ಸಮಾಧಿಯೊಳು ನಿಲಿಸಿದ ಪ್ರಭುದೇವರು-ಅಲ್ಲಿಂದ ಸಿದ್ಧರಾಮಯ್ಯ ದೇವರ ದರುಶನ ವಾಗಬೇಕೆಂಬ ಕೃಪೆಯಿಂ ಸೊನ್ನಲಿಗೆಯ ಪುರಕ್ಕೆ ಬಿಜಯಂಗೆಯ್ದಲ್ಲಿ,ಆ ಪುರದ ಜನಪದ-ನೆರವಿಯಂ ಕಂಡು ವಿಡಂಬಿಸುವ ಪ್ರಸ್ತಾವದ ವಚನ:

ಧರೆಯ ಮೇಲೊಂದು ಹಿರಿದಪ್ಪ ಸಂತೆಯ ನೆರವಿಗೆ ಬಂದವರನೇನೆಂಬೆನು. ಪರಿ ಪರಿಯ ಭಂಡದ ವ್ಯವಹಾರದೊಳಗೆ ಕೊಡಲಿಲ್ಲ ಕೊಳಲಿಲ್ಲ— ವೃಥಾವಿಳಾಸವಿದೇನೋ ! ಅಱಿಮರುಳೆಂಬ ಶಿವನು ನೆಱೆಮರುಳೆಂಬ ಜಗವ ಹುಟ್ಟಿಸಿದ ಪರಿಯ ಕಂಡು ಬೆಱಗಾದೆನು— ಗೊಗ್ಗೇಶ್ವರ. ೧೧೭-೯೯-3-1. ಮತ್ತಂ:

ಸಾಗರದೊಳಗಿಪ್ಪ ಪ್ರಾಣಿಗಳು ಬೇಱೆ ಮತ್ತೊಂದೆಡೆಯಲ್ಲಿ ಇರಬಲ್ಲವೆ ? ಭವಸಾಗರ ದೊಳಗಿಪ್ಪ ಜೀವಿಗಳಿಗೆ ಅದೇ ಗತಿಯಲ್ಲದೆ, ಬೇಱೆ ಮತ್ತೆ ಎಡೆಯುಂಟೆ ? ಗೊಗ್ಗೇಶ್ವರನ ಲೀಲೆ ಜಗನ್ಮಯವಾದಡೆ ನಾನು ಬೆಱಗಾದೆನು. ೧೧೮-೧೦೦-3-2.

ಇಂತು ಪುರಜನಂಗಳಂ ನೋಡಿ ವಿಡಂಬಿಸುತ್ತ ಬರಲು ಮುಂದೆ ಲಕ್ಷದ ಮೇಲೆ ತೊಂಬತ್ತಾಱು ಸಾವಿರ ಶಿವಾಲಯಂಗಳಂ ಮಾಡುತ್ತಿಪ್ಪವರ ಕಂಡು ವಿಡಂಬಿಸುವ ವಚನ :

ಕಲ್ಲ ಮನೆಯ ಮಾಡಿ, ಕಲ್ಲ ದೇವರ ಮಾಡಿ, ಆ ಕಲ್ಲು ಮೇಲೆ ಕೆಡೆದರೆ ದೇವರೆತ್ತ ಹೋದರೋ ! ಲಿಂಗಪ್ರತಿಷ್ಠೆಯ ಮಾಡಿದವರಿಗೆ ನಾಯಕ ನರಕ, ಗೊಗ್ಗೇಶ್ವರ. ೧೧೯-೧೦೧-3-3

ದೇಹದೊಳಗೆ ದೇಗುಲವಿರಲು ಬೇಱೆ ಮತ್ತೆ ದೇವಾಲಯವೇಕಯ್ಯ ? ಹೇಳ ಲಿಲ್ಲ, ಕೇಳಲಿಲ್ಲ ! ಗೊಗ್ಗೇಶ್ವರ, ನೀನು ಕಲ್ಲಾದರೆ ನಾನೇನಪ್ಪೆನು ? ೧೨೦-೧೦೨-3-4.

ಇಂತು ಶಿವಾಲಯಪ್ರತಿಷ್ಠೆಯ ನೋಡಿ ಹಾಸ್ಯಂ ಮಾಡುತ್ತ ಬರಲು, ಮುಂದೆ ಕೆಱೆಯ ಕಟ್ಟಿಸುತ್ತಿಪ್ಪವರ ಕಂಡು ವಿಡಂಬಿಸುವ ಪ್ರಸ್ತಾವದ ವಚನ:

ಅನ್ನವನಿಕ್ಕಿ, ನನ್ನಿಯ, ನುಡಿದು, ಅಱವಟ್ಟಿಗೆಯನಿಕ್ಕಿ, ಕೆಱೆಯ ಕಟ್ಟಿಸಿ, ಮರಣ ದಿಂದ ಮೇಲೆ ಸ್ವರ್ಗ ಉಂಟಲ್ಲದೆ ಶಿವನ ನಿಜವು ಸಾಧ್ಯವಾಗದು. ಗೊಗ್ಗೇಶ್ವರನನಱಿದ ಶರಣಂಗೆ ಆವ ಫಲವೂ ಇಲ್ಲ. ೧೨೧-೧೦೩-3-5.

ಮತ್ತಂ, ಸಿದ್ಧರಾಮಯ್ಯದೇವರು ಕೆಱೆಯ ಕಟ್ಟಿಸುವುದನು ವಿಡಂಬಿಸಿ ತಾನೊಂದು ಕೆಱೆಯ ಕಟ್ಟಿಸಿದೆನೆಂದು ಪರಮಾರ್ಥಸೂಚಕವಾಗಿ ನಿರೂಪಿಸಿದ ವಚನ:

ತನುವೆಂಬ ಏರಿಗೆ ಮನವೆಂಬ ಕಟ್ಟೆ, ಆಚಾರವೆಂಬ ಸೋಪಾನ, ಪರಮಾನಂದವೆಂಬ

ಜಲವ ತುಂಬಿ, ಕೆಱೆಯ ಕಟ್ಟಿ ಬಲ್ಲವರನಾರನೂ ಕಾಣೆನು. ನಾನು ಕಟ್ಟಿದ ಕೆಱೆ ಸ್ಥಿರವಾಯಿತ್ತು- ಗೊಗ್ಗೇಶ್ವರ, ನಿಮ್ಮಾಣೆ. ೧೨೨-೧೦೪-3-6.

ಮತ್ತಂ ವಿಡಂಬನ :

ಕೆಱೆಯ ಕಟ್ಟಿಸುವ ಒಡ್ಡನ ಪ್ರತಾಪವನೇನೆಂಬೆನಯ್ಯ ! ನೆಲನನಗೆದು, ಜಲವ ಮೊಗೆದೆನೆಂಬ ಬಳಲಿಕೆಯ ನೋಡಾ ! ಒಂದು ಕಲ್ಲ ಕಡಿದು ಮತ್ತೊಂದು ಕಲ್ಲಿಂಗೆ ಭೋಗವ ಕೊಟ್ಟೆನೆಂಬ ಅಜ್ಞಾನವಿದೇನೋ ? ಗೊಗ್ಗೇಶ್ವರ, ಇವನ ಇರವಿನ ಪರಿಗೆ ಬೆಱಗಾದೆನು. ೧೨೩-೧೦೫-3-7.

ಇಂತು ಕೆಱೆಯ ಕಟ್ಟಿಸುವುದಂ ವಿಡಂಬಿಸುತ್ತ,ಆ ಕೆಱೆಯ ಕಟ್ಟುವ ಗುಡ್ಡಗಳೊಡನೆ ಒಡ್ಡರಾಮಯ್ಯನಿದ್ದಹನೇ ಎಂದು ಬೆಸಗೊಂಬ ಪ್ರಸ್ತಾವದ ವಚನ :

ಒಳಗ ತೊಳೆದು, ಜಲವ ತುಂಬಲಱಿಯದ ಅಱಿವುರುಳನೇನಾದ ಹೇಳಿರೇ ! ಜಲದ ಸಂಗವ ತೊಱೆಯಲಱಿಯದೆ ಜಲವ ಬಯಸುವನೆಂತಿದ್ದಹ ಹೇಳಿರೇ ? ನೆಲನ [1]ಶೋಧಿಸಲಱಿಯದೆ[1] ಕೆಱೆಯ ಕಟ್ಟಿಸುವ ಒಡ್ಡನ ಇರವೆಂತು ಹೇಳಿರೇ ! ನಮ್ಮ ಗೊಗ್ಗೇಶ್ವರನ ನಿಲವನಱಿಯದ ಮರುಳು ಸಿದ್ಧರಾಮನೆಂತಿದ್ದಹ ಹೇಳಿರಯ್ಯ ? ೧೨೪-೧೦೬-3-8.

ಇಂತು,ಒಡ್ಡರಾಮಯ್ಯನೇನಾಗಿದ್ದಹನೆಂದು ಪ್ರಭುದೇವರು ಕೆಱೆಯ ಕಟ್ಟುವಂತಹ ಗುಡ್ಡಗಳ ಬೆಸಗೊಳಲು, ಅವರೆಲ್ಲರೂ ಗುರುನಿಂದೆಯ ಕೇಳಿ ಸುಮ್ಮನೆ ಇರಬಾರದೆಂದು ಕಲ್ಲು-ಗುಂಡು-ಬಡಿಗೆಗಳಿಂದಿಟ್ಟು ನೋಯಿಸಲು,ಆ ಪ್ರಭುದೇವರ ತಾಗಿದಂತಹ ಗಾಯಂಗಳೆಲ್ಲ ಮರಳಿ ಆ ಗುಡ್ಡಗಳನೆ ತಾಗಲು ಆ ಪ್ರಸ್ತಾವಕ್ಕೆ ಪ್ರಭುದೇವರು ಹೇಳಿದ ವಚನ:

ಗುರುವೆಂದಱಿಯರು. ಹಿರಿಯರೆಂದಱಿಯರು. ದೇವರೆಂದಱಿಯರು. ಭಕ್ತರೆಂದಱಿಯರು. ಲಿಂಗವೆಂದಱಿಯರು. ಜಂಗಮವೆಂದಱಿಯರು. ಬಂದಬರವನಱಿಯರು, ನಿಂದ ನಿಲವನಱಿಯರು. ಶಿವಶರಣರ ನೋಯಿಸುವ ಪಾತಕರನೇನೆಂಬೆ ! ಗೊಗ್ಗೇಶ್ವರ, ನಿಮ್ಮ ಮನನೊಂದ ನೋವು ಬಱಿದೆ ಹೋಗದು. ೧೨೫-೧೦೭-3-9. ಮತ್ತಂ :

ಸಹಜವ ನುಡಿದರೆ ಸೇರುವರಿಲ್ಲ ಕಾಣಿರಣ್ಣ. ಅಸಹಜಕ್ಕಲ್ಲದೆ ಲೋಕ ಭಜಿಸದು. ಕೆಱೆಯ ಕಟ್ಟುವನ ಕಂಡು ಒಡ್ಡರಾಮಯ್ಯನೆಂದರೆ, ಮುಳಿಸಿಂದ ಲಿಂಗತನುವ ನೋಯಿಸುವರೆ? ನಮ್ಮ ಗೊಗ್ಗೇಶ್ವರ ಲಿಂಗವು ಜಗದೊಳಗೆ ಪರಿಪೂರ್ಣವಾದ ಕಾರಣ ಶರಣರ ನೋವು ಮರಳಿ ಪಾತಕರ ತಾಗಿದರೆ ಅಲ್ಲಯ್ಯ ನೋಡಿ ನಗುತ್ತಿದ್ದನು. ೧೨೬-೧೦೮-3-10.

ತಾಯಿಗಾದ ಸುಖದುಃಖಂಗಳು ಬಸಿಱ ಶಿಶುವಿಂಗೆ ನೋಡಯ್ಯ. ಶಿವಶರಣರಿಗೆ ಮಾಡಿದ ಸುಖದುಃಖಂಗಳು ಶಿವನ ತಾಗುವವು. ಕರಣಉಳ್ಳವರು ಮರಣವಿಲ್ಲದವಂಗೆ ಮುನಿದರೆ, ತನು ಉಳ್ಳವರ ಮುಟ್ಟುವುದಲ್ಲದೆ, ಒಡಲಿಲ್ಲದಾತನ [2]ಮುತ್ತ[2]ಬಲ್ಲುದೆ ? ಗೊಗ್ಗೇಶ್ವರ, ಕೆಂಡವನೊಱಲೆ ಮುತ್ತ ಬಲ್ಲುದೆ ? ೧೨೭-೧೦೯-3-11.

---

[1] (ಶಿಹ) ಶೋಧಿಸಿ ನೆಲೆಯನಱಿಯದೆ (ದೇ) (ಗೂ). [2] (ಶಿ) ಮುಟ್ಟ (ದೇಹಗೂ).

ಇಂತಪ್ಪ ಅಜ್ಞಾನಿಗಳಿಗೆ ಉಪದೇಶವ ಮಾಡಿದ ಸಿದ್ಧರಾಮಯ್ಯನನು—ಆ ಶಿಷ್ಯರು ಮಾಡಿದ ಪಾಪ ತಾಗುವುದೆಂದು ನಿರೂಪಿಸಿದ ಪ್ರಸ್ತಾವದ ವಚನ :

ಜಗದ ಜನವ ಹಿಡಿದುಕೊಂಡು ಬಂದು, ಉಪದೇಶವ ಮಾಡಿದ ಗುರುವಿಂಗೆ, ಆ ಉಪದೇಶ ಕೊಂಡು ಕೊಟ್ಟಮಾಱಿಂಗೆ ಹೋಹುದಲ್ಲದೆ, ಅಲ್ಲಿ ನಿಜವಳವಡುವುದೆ? ತೆಱನನಱಿಯದ ಸಂಸಾರಿಜೀವಿಗಳು ಮಾಡಿದ ದೋಷ ತಮ್ಮ ನುಂಗಿ ಆ ಗುರುವಿಂಗೆ ಉಪಹತಿಯ ಮಾಡುವುದು ನೋಡಾ ! ಗೊಗೇಶ್ವರ,ತಾನಿಟ್ಟ ಬೇತಾಳ ತನ್ನನೇ ತಿಂದರೆ ಬೇಕು ಬೇಡೆನಲುಂಟೆ ? ೧೨೮–೧೧೦–3–12.

ಇಂತು ಪ್ರಭುದೇವರ ನೋಯಿಸಿದ ನೋವು ಆ ಗುಡ್ಡಗಳನೆ ಮರಳಿ ತಾಗಲು ಆ ಗಾಯಂಗಳ ನಿಘಾತಿಯಿಂ ಗೋಳಿಡುತ್ತಲೋಡಿ ಬಂದು, ಸಿದ್ಧರಾಮಯ್ಯದೇವರಿಗೆ ಮೊಱೆಯನಿಟ್ಟು ದೂಱಿ—ದೇವಾ, ಆವನೊಬ್ಬ ಇಂದ್ರಜಾಲಿಗನು ನಿಮ್ಮನು ಬಾಯಿಗೆ ಬಂದಂತೆ ನಿಂದಿಸುತ್ತಿರಲು, ನಾವೆಲ್ಲರೂ ಗುರುನಿಂದೆಯ ಕೇಳಿ ಸುಮ್ಮನಿರ ಬಾರದೆಂದು,ಕಲ್ಲು-ಗುಂಡುಗಳಿಂದಿಟ್ಟು ನೋಯಿಸಲು, ಆತನ ತಾಗಿದಂತಹ ಗಾಯಂಗಳೆಲ್ಲವೂ ನಮ್ಮನೇ ಮರಳಿ ತಾಗಿದ ದೆಸೆಯಿಂದೆಲ್ಲರೂ ನೊಂದು ಘಾಸಿಯಾದೆವೆಂದು ಬಿನ್ನೈಸಲು, ಸಿದ್ಧರಾಮತಂದೆಗಳು-ಬಂದಾತನು ಪ್ರಭುದೇವರೆಂಬುದನು ವಿಚಾರಿಸಿ ನೋಡದೆ, ಕ್ರೋಧಕ್ಕೆ ಮನವನೆಡೆಗೊಟ್ಟು, ಆ ಗುಡ್ಡಗಳ ನೋವೆ ತನ್ನ ನೋವಾಗಿ ಕೈಕೊಂಡು ನುಡಿದ ಪ್ರಸ್ತಾವದ ವಚನ :

ಎಲೆಯಯ್ಯ, ನಿಮ್ಮವರ ನೋವು ಎನ್ನ ನೋವು ನೋಡಾ ! ಕಂಡು ಕಂಡು ಸೈರಿಸಲಾಱೆನು ನೋಡಯ್ಯ ! ನಿಮ್ಮವರೊಡನೆ ಬರಸೊರಸಾಗಿಪ್ಪವರ ಕಂಡಡೆ ನಾನವರಿಗೆ ಮುನಿವೆ ನೋಡಾ ! ಕಪಿಲಸಿದ್ಧಮಲ್ಲಿನಾಥ, ನೀನವರಲ್ಲಿ ಇಪ್ಪೆಯಾಗಿ. ೧೨೯–೧೧೧–3–13.

ಇಂತು ಕ್ರೋಧಿಸಿ, ಸಿದ್ಧರಾಮಯ್ಯದೇವರು ಮುನಿದು, ನೊಸಲ ಕಣ್ಣ ತೆಗೆದ ಪ್ರಸ್ತಾವದ ವಚನ :

ಎಕ್ಕೆವಿಂಡುಗಳೆಂಬವರು, ಮುಕ್ಕಣ್ಣ, ನಿಮ್ಮ ಗಣಂಗಳು. [1]ಬತ್ತಿದಕೆಱೆ ಬಾಯ ಬಿಟ್ಟಂತೆ[1] ಮೊಱೆಯಿಟ್ಟುಬರಲು, ಹೊತ್ತಿದ ಅಂಗಾಲ ಕಿಚ್ಚು ನೆತ್ತಿಯ ಮುಟ್ಟಿದರೆ, [2]ಕೆಚ್ಚನೆ[2], ಕಪಿಲಸಿದ್ಧಮಲ್ಲಿನಾಥನು, ನೊಸಲ ಕಣ್ಣ ತೆಗೆದನು. ೧೩೦–೧೧೨–3–14.

ಇಂತು ನೊಸಲ ಕಣ್ಣ ತೆಗೆದ ಸಿದ್ಧರಾಮಯ್ಯದೇವರು ಆ ನೊಸಲ ಕಣ್ಣಿಂಗೆ ಬೆಸನನಿತ್ತ ಪ್ರಸ್ತಾವದ ವಚನ :

ಬ್ರಹ್ಮನಾದಡಾಗಲಿ, ವಿಷ್ಣುವಾದಡಾಗಲಿ ; ಇಂದ್ರನಾದಡಾಗಲಿ, ಚಂದ್ರನಾದಡಾಗಲಿ, ಎಮ್ಮ ಶಿವಶರಣರ ನೋವು ಎನ್ನ ನೋವು ನೋಡಾ ! ಅವರನೊರಸುವೆನುರು

[1] (ದೇ) ಬತ್ತಿದ ಕೆಱೆಬಾವಿಯ ಬಿಟ್ಟಂತೆ (ಶಿ) ಬತ್ತಿದ ಕೆಱೆಗೆ ಬಾಯ ಬಿಟ್ಟಂತೆ (ಹ)
[2] (ದೇ) ಚಕ್ಕನೆ (ಶಿಹಗೂ).

ಹುವೆನೆಂದು ಕಪಿಲಸಿದ್ಧಮಲ್ಲಿಕಾರ್ಜುನ ತನ್ನ ನೊಸಲ ಕಣ್ಣಿಂಗೆ ಬೆಸನನಿತ್ತಡೆ, ನಿಲಬಲ್ಲ ಗರುವರನಾರನು ಕಾಣೆ. ೧೩೧-೧೧೩-3-15.

ಇಂತು ನೊಸಲ ಕಣ್ಣ ಕಿಚ್ಚಿಂಗೆ ಬೆಸನನಿತ್ತ ಸಿದ್ಧರಾಮಯ್ಯದೇವರು, ಆ ನೊಸಲ ಕಣ್ಣಿನ ಮಹಾಜ್ವಾಲೆಯ ನೋಡಿ ನೋಡಿ, ಅಚ್ಚರಿಬಡುತ್ತಿದ್ದ ಪ್ರಸ್ತಾವದ ವಚನ :

ಅಯ್ಯ, ನಿಮ್ಮ ಮೂರ್ತಿಯ··ನೋಡಿಹೆನೆಂದರೆ ದೃಷ್ಟಿಯಾನವು. ನಿಮ್ಮ ತೇಜವ ನಾರು ನೋಡಲಮ್ಮುವರಯ್ಯ !? ನಿಮ್ಮ ತೇಜವನೊಬ್ಬರಿಗೆ ಉಪಮಿಸಬಾರದು. ನೀವು ಮುನಿದು ನೊಸಲ ಕಣ್ಣ ತೆಗೆದರೆ, ಅದಕ್ಕೆ ಇದಿರಪ್ಪರಿನ್ನಾರು ಹೇಳಯ್ಯ ? ಕಪಿಲ ಸಿದ್ಧಮಲ್ಲಿಕಾರ್ಜುನ, ನಿಮ್ಮ ತೇಜ ಮೂಱುಲೋಕವ ನುಂಗಿದರೆ, ನಾನು ನೋಡಿ ಕಣ್ಣ ಮುಚ್ಚುತ್ತಿದ್ದೆನು. ೧೩೨-೧೧೪-3-16.

ಇಂತು,ಸಿದ್ಧರಾಮಯ್ಯದೇವರ ನೊಸಲ ಕಣ್ಣಿನ ಮಹಾಜ್ವಾಲೆಯ ಧಾಳಿ ಬ್ರಹ್ಮಾಂಡ ಮಂಡಲಮಂ ಮುಸುಂಕುತ್ತ ಬಪ್ಪುದ ಕಂಡು, ಅಲ್ಲಮಪ್ರಭುದೇವರು ಆ ಪ್ರಸ್ತಾವಕ್ಕೆ ನಿರೂಪಿಸಿದ ವಚನ :

ಕಾಡುಗಿಚ್ಚೆದ್ದರೆ ಅಡವಿಯೇ ಗುಱಿ, ನೀರುಗಿಚ್ಚೆದ್ದರೆ ಸಮುದ್ರವೇ ಗುಱಿ, ಒಡಲ ಕಿಚ್ಚೆದ್ದರೆ ಆ ತನುವೇ ಗುಱಿ, ಕಾಲಾಗ್ನಿಯೆದ್ದರೆ ಲೋಕಂಗಳೆ ಗುಱಿ. ಶಿವಶರಣರ ಮನದಲ್ಲಿ ಕೋಪಾಗ್ನಿ ಎದ್ದರೆ, ನಿಂದಕರೆ ಗುಱಿ. ಗೊಗೇಶ್ವರ, ನಿಮ್ಮ ಮಾಯದ ಹೊಡೆಗಿಚ್ಚಿಂಗೆ ನಾನು ಗುಱಿಯಲ್ಲ ಕೇಳಾ! ೧೩೩-೧೧೫-3-17.

ಇಂತು ಭೂಮಿಯಾಕಾಶಮಂ ತುಡುಕುತ್ತ ಬಪ್ಪ ಮಹಾಜ್ವಾಲೆಯು—ಇದೆಲ್ಲಿಂದ ಹುಟ್ಟಿತೆಂದು ತಿಳಿದು ನೋಡಿ, ಸಿದ್ಧರಾಮಯ್ಯದೇವರ ನೊಸಲ ಕಣ್ಣ ಕಿಚ್ಚಿಂದಱಿದ ಪ್ರಸ್ತಾವದ ವಚನ :

ಕಾಯಗುಣವಳಿದು, ಮಾಯಾಮದ ಮುಱಿದು, ಕಾಮಕ್ರೋಧಂಗಳೆಲ್ಲವೂ ಹೆಱಿಂಗಿ, ಹೋದವು. ಅಂಗವೆಲ್ಲವೂ ಲಿಂಗಲೀಯವಾಗಿ, ಕಂಗಳ ಕಳೆಯ ಬೆಳಗಳಿದು,ಗೊಗೇಶ್ವರನ ವಿರಹದುರಿಯೊಳಗೆ ಬೆಂದವರ ಮರಳಿ ಸುಟ್ಟಹೆನೆಂಬ ಸಿದ್ಧರಾಮಯ್ಯ ಮರುಳು ನೋಡಾ ! ೧೩೪-೧೧೬-3-18. ಮತ್ತಂ :

ತಾಪತ್ರಯದಲ್ಲಿ ಬೇವ ಒಡಲ ಹಿಡಿದು ತಂದು, ಜ್ಞಾನವೆಂಬ ಉರಿಗೆ ಆಹುತಿಯ ಕೊಟ್ಟವನ, ಜ್ಞಾನವೆಂಬ ಕಾಯುವ ಹಿಡಿದು ನಿಶ್ಶೂನ್ಯವೆಂಬ ತೇಜದಲ್ಲಿ ಸುಟ್ಟವನ, ನಿಶ್ಶೂನ್ಯವೆಂಬ ಶಬ್ದವ ಸುಟ್ಟು ಭಸ್ಮವ ಧರಿಸಿದ ಲಿಂಗೈಕ್ಯನ, ಲೋಕದ ಸ್ಥಿತಿ-ಗತಿಯ ಮಱಿದು ನಿರ್ವಾಣದಲ್ಲಿ ನಿಂದವನ, ಗೊಗೇಶ್ವರ ಲಿಂಗದಲ್ಲಿ ತನ್ನ ಮಱಿದ ಅಲ್ಲಯ್ಯನ ಕೋಪದ ಕಿಚ್ಚಿನಲ್ಲಿ ಸುಟ್ಟಹೆನೆಂಬ ಸಿದ್ಧರಾಮಯ್ಯನನೇನೆಂಬೆನು! ೧೩೫-೧೧೭-3-19.

ಇಂತು, ತನ್ನ ಮಹಾತ್ಮೆಯನು ನಿರೂಪಿಸುತ್ತಿದ್ದ ಪ್ರಭುದೇವರು—ಸಿದ್ಧರಾಮಯ್ಯ ದೇವರ ಗರ್ವವ ಮುಱಿದು, ಆ ನೊಸಲ ಕಣ್ಣಿನ ಜ್ವಾಲೆಯ ತಮ್ಮ ಶ್ರೀಪಾದದೊಳಗೆ ಅಡಗಿಸಿಕೊಂಡ ಪ್ರಸ್ತಾವದ ವಚನ :

ನಿಮ್ಮ ಶಕ್ತಿ ಜಗದೊಳಗಿಪ್ಪುದು, ಜಗದ ಶಕ್ತಿ ನಿಮ್ಮೊಳಗಿಪ್ಪುದು. ಜಗಕ್ಕೆ-ನಿನಗೆ ಭೇದ

ವಾದುದಕ್ಕೆ ಬೆಱಗಾದೆನು. ಅಂದೊಮ್ಮೆ ತ್ರಿಪುರವ ಸುಟ್ಟರೆ, ನಾಚಿತೆನ್ನ ಮನ. ಕಾಮನ ನುರುಹಿ ಕಾಮಹರನೆನಿಸಿಕೊಂಡರೆ, ನಿನ್ನಹಂಕಾರವ ನೋಡಿ ಹೇಸಿತೆನ್ನ ಮನ. ಕಾಲನ ಸುಟ್ಟು ಬೊಟ್ಟನಿಟ್ಟಡೆ, ಎನಗೆ ನಗೆಗೆಡೆಯಾಯಿತ್ತು— ನಿಮ್ಮ ಘನವೆನಗೆ. ಗೊಗೇಶ್ವರ, ನೀ ಮುನಿದು ನೊಸಲ ಕಣ್ಣ ತೆಗೆದರೆ, ಎನ್ನ ಅಂಗಾಲೊಳಡಗಿತಯ್ಯ ನಿನ್ನ ಕೋಪ. ೧೩೬-೧೧೮-3-20.

ಇಂತು, ಸಿದ್ಧರಾಮಯ್ಯ ದೇವರ ನೊಸಲ ಕಣ್ಣಿನ ಮಹಾಜ್ವಾಲೆಯನು ಪ್ರಭುದೇವರು ತಮ್ಮ ಅಂಗಾಲೊಳಡಗಿಸಿಕೊಂಡು, ಸಿದ್ಧರಾಮಯ್ಯದೇವರ ಶಕ್ತಿಯ ನೋಡಬೇಕೆಂದು, ತಾವು ತಮ್ಮ ಅಂಗಾಲೊಳಗೆ ಉರಿಗಣ್ಣ ತೆಱೆದಹೆನೆಂದು ಉದ್ಯೋಗಿಸಿದ ವಚನ:

ಹರನ ಕರುಣವ ಹಡೆದ ಸಾಮರ್ಥ್ಯದ ಬಲುಹಿಂದ ಶಿವಶರಣರೊಡನೆ ಸೆಣಸಿದರೆ ಲೇಸುಂಟೆ? [1]ಅಘಟಿತ ಘಟಿತರಿಗೆ ಅಘಟಿತ ಘಟಿತರುಂಟು[1] ನೋಡಾ! ನೊಸಲಲೊಬ್ಬ ಕಣ್ಣ ತೆಗೆದರೆ, ಅಂಗಾಲ ಕಣ್ಣ ತೆಗೆವರು ಗೊಗೇಶ್ವರನ ಶರಣರು, ಉಪಮಾತೀತರು. ೧೩೭-೧೧೯-3-21.

ಹೀಗೆಂದು ಪ್ರಭುದೇವರು ಅಂಗಾಲ ಕಣ್ಣ ತೆಗೆದ ಪ್ರಸ್ತಾವದ ವಚನ:

ಎರಡು ಕಣ್ಣುಳ್ಳಡೆ ಚತುರ್ಭುಜನೆಂಬೆನು. ಮೂಱು ಕಣ್ಣುಳ್ಳಡೆ ಮಹೇಶ್ವರನೆಂದೆಂಬೆನು. ಮೈಯೆಲ್ಲ ಕಣ್ಣಾದರೆ ಸದಾಶಿವನೆಂಬೆನು. ಗೊಗೇಶ್ವರ, ನಿಮ್ಮ ಶರಣಂಗೆ ಅಂಗಾಲ ಕಣ್ಣು ಮೂಡಿದಡೆ, ನಿರುಪಮ ಮಹಿಮ ಅಲ್ಲಯ್ಯನೆಂಬೆನು. ೧೩೮-೧೨೦-3-22.

ಇಂತು ತಮ್ಮ ಅಂಗಾಲೊಳಗೆ ಮೂಡಿಸಿದ ಕಂಗಳ ತೇಜವ ನೋಡಿ ನೋಡಿ, ಆ ಪ್ರಭುದೇವರು ಕೊಂಡಾಡುತ್ತಿದ್ದ ಪ್ರಸ್ತಾವದ ವಚನ:

ನಿಮ್ಮ ತೇಜವ ನೋಡಲೆಂದು ಹಱಸಾರಿ ನೋಡುತ್ತಿರಲು, ಶತಕೋಟಿ ಸೂರ್ಯರು ಮೂಡಿದಂತಿದ್ದರಯ್ಯ. ಮಿಂಚಿನ ಬಳ್ಳಿಯ ಸಂಚವ ಕಂಡೆ! ಎನಗಿದು ಸೋಜಿಗ ವಾಯಿತ್ತು! ಗೊಗೇಶ್ವರ, ನೀನು ಜ್ಯೋತಿರ್ಲಿಂಗವಾದರೆ ಉಪಮಿಸಿ ನೋಡ ಬಲ್ಲವ ರಿಲ್ಲಯ್ಯ. ೧೩೯-೧೨೧-3-23.

ಇಂತಪ್ಪ ಅಂಗಾಲ ಕಣ್ಣಿನ ಮಹಾಜ್ವಾಲೆಯನು ಪ್ರಭುದೇವರು-ಸಿದ್ಧರಾಮಯ್ಯ ದೇವರ ಬಳಿಗೆ ಹೋಗೆಂದು ಬೆಸಸಿ ಕಳುಹಿದ ಪ್ರಸ್ತಾವದ ವಚನ:

ಕಾಲಾಗ್ನಿಯೆಂಬ ಕಾಡುಗಿಚ್ಚೆದ್ದರೆ, ಲೋಕವ ಸುಟ್ಟತ್ತೆಂದರೆ, ಶಿವಶರಣರಂಜರು. ಶಶಿಧರ ಮುನಿದು ಬಿಸಿಗಣ್ಣ ತೆಗೆದರೆ, ಶಿವಭಕ್ತರದ ಮನಕ್ಕೆ ತಾರರು. ಅಸಮಾಕ್ಷ ಲಿಂಗವ ತಮ್ಮ ವಶಕ್ಕೆ ತಂದ ಶರಣರು— ಮುನಿದು ಉರಿಗಣ್ಣ ತೆಱೆದರೆ, ಚತುರ್ದಶ ಭುವನದೊಳಗೆ ಆರೂ ಗುಱಿಯಲ್ಲ! ಗೊಗೇಶ್ವರ, ನಿಮ್ಮ ಅಱಿವಿನ ಬೆಳಗು ಬಿಸಿಯಾದರೆ ಸಿದ್ಧರಾಮನೆಂಬ ಶಿವಯೋಗಿಯ ಹೃದಯವೇ ಗುಱಿಯೆಂದು ಬೆಸಸಿದಾತನಲ್ಲಯ್ಯನು. ೧೪೦-೧೨೨-3-24.

ಇಂತು, ತೇಜೋಮಯವಾಗಿ, ಅಷ್ಟದಿಕ್ಕುಗಳನಾಲಿಂಗಿಸುತ್ತ, ಧರೆಯಾಕಾಶವ

[1] (ದೇ) (ಗೂ) ಅಘಟಿತರಿಗೆ ಅಘಟಿತರುಂಟು (ಶಿಹ).

ನಾಗುೞಿಸಿ ನುಂಗುತ್ತ, ಸಚರಾಚರಂಗಳನುೞಿಪೆಂದೂದುತ್ತ, ಸಪ್ತಸಮುದ್ರಗಳಂ ನಾಪ್ರೋಶನಂಗೊಳುತ್ತ, ಭುಗಿರ್ ಭುಗಿಲೆಂಬ ಮಹಾರಭಸಕ್ಕೆ [1]ಬ್ರಹ್ಮಾಂಡ ಕಟಾಹಂ ಬಿರಿವುತ್ತ, ಚತುರ್ದಶ ಭುವನಂಗಳೆಲ್ಲವೂ ಪ್ರಳಯ ಕಾಲ ತುಂಬದ[1] ಮುನ್ನವೆ ಮಹಾ ಪ್ರಳಯ ಬಂದಿತ್ತೆಂದು ಜಗ್ಗನೆ ಜರಿವುತ್ತ, ಹರಿವಿರಿಂಚಿ ಮೊದಲಾದ ಸಮಸ್ತ ದೇವರ್ಕಳೆಲ್ಲರೂ ಶಿವಧೋ ಎಂದು ಕೈಲಾಸದತ್ತ ನಿಮಿರಲನಂತ ಮುಖ ಒಂದೆ ಮುಖವಾಗಿ, ಒಂದು ಮುಖವನಂತ ಮುಖವಾಗಿ, ಬಪ್ಪ ಮಹಾತೇಜೋರಾಶಿಯಂ ಕಂಡು, ಸಿದ್ಧರಾಮಯ್ಯ ತಂದೆಗಳು—ಇದೆಲ್ಲಿಯದು ಮಹಾಜ್ವಾಲೆಯೆಂದು ವಿವೇಕದಿಂ ತಿಳಿದು ನೋಡಿ, ಈತನು ಶಿವನಲಾ ಎಂದಱಿದು ಅನುತಾಪಿಸುತ್ತಿರ್ದ ಪ್ರಸ್ತಾವದ ವಚನ:

ಯುಗುಜುಗ ಮಡಿವಂದು ಧಗಿಲುಭುಗಿಲೆಂದು ಮುಸಿಕಿದ ಮಹಾಜ್ವಾಲೆಯಿದೇನೋ! ಇಂದೆನ್ನ ಕಂಗೆ ಗೋಚರವಾಯಿತ್ತು ಎಲೆಯಯ್ಯ! ಅಯ್ಯ, ನೀವೆಂದಱಿಯೆನಯ್ಯ! ನಾನೆನ್ನ ಕಾಯದ ಕಳವಳದಲ್ಲಿ ಇದ್ದೆನಲ್ಲದೆ ನೀವೆಂಬ ಬಗೆದೋಱದೆ ಕೆಟ್ಟೆನೆಲೆ ಅಯ್ಯ! ಆಳ್ದನೊಡನೆ ಆಳು ಮುನಿದರೆ, ಆರು ಕೆಡುವರು ಹೇಳಾ, ಕಪಿಲಸಿದ್ಧ ಮಲ್ಲಿಕಾರ್ಜುನ? ೧೪೧–೧೨೩–3–25. ಮತ್ತಂ:

ಅಱಿಯಬಾರದ ಘನವನಱಿದು ಸಾಧಿಸಿ ಗೆದ್ದ ಘನಮಹಿಮ ಶರಣರ ಮುಂದೆ, ಎನ್ನ ಪ್ರತಾಪ ನಿಲುವುದೆ? ಅವರಿಪ್ಪರು ಲಿಂಗದ ಪ್ರಭೆಯೊಳಗೆ! ನಾನಿಪ್ಪೆನು ಅಹಂಕಾರದ ಪಂಜರದೊಳಗೆ! ಎನ್ನ ನೊಸಲ ಕಣ್ಣಿನ ಕಿಚ್ಚುಡುಗಿ ಲಜ್ಜಿತವಾಗಿ ಮರಳಿ ಬಂದೆನ್ನ ಸುತ್ತಿ ಮುತ್ತಿತ್ತು. ನಾನು ಶರಣೆಂಬ ಗುರುಚರಣವಿದಿರೆದ್ದು ಕೊಲುವರೆ, ಕಪಿಲಸಿದ್ಧ ಮಲ್ಲಿನಾಥನೊಳಗೆ ಅಳಿವೆನಲ್ಲದೆ ಉಳಿವೆನಲ್ಲ. ೧೪೨–೧೨೪–3–26.

ಮತ್ತಂ ಅನುತಾಪ ಪ್ರಸ್ತಾಪ:

ಕಾಲವೇಕೆ ಬಾರದಯ್ಯ ಇಂದಿನ ಅವಸ್ಥೆಗೆ? ಲಿಖಿತವೇಕೆ ತೊಡೆಯದಯ್ಯ ಇಂದಿನ ಅವಸ್ಥೆಗೆ? ಇಂದಿನಿಸು ಬಾರವೇಕಯ್ಯ, ಎನ್ನ ದೇವ ಕಪಿಲಸಿದ್ಧ[2]ಮಲ್ಲಿಕಾರ್ಜುನ, ನಿಮಗೆ ಕೂರ್ತ ಅವಸ್ಥೆಯೊಳಗೆ ಲಿಖಿತ ತೊಡೆಯದು, ಪ್ರಾಣ ಬಿಡದು, ಇಂತಿರಿಸಿದಿರಾ ಎನ್ನ ದೇವರ ದೇವ[2]? ೧೪೩– × –3–27. ಮತ್ತಂ:

ಕಳವಳದ ಕಂದೆಱವೆಗೊಳಗು ಮಾಡಿದೆ ಹಾ ಎಲೆಯಯ್ಯ! ಎನ್ನ ವಿಕಾರದಲ್ಲಿ ಗುಱಿಮಾಡಿದಿರಯ್ಯ ಕೋಪದ[= ದೆ?]. ಕಾಡುಗಿಚ್ಚಿಂಗೆ ಅಡವಿಯು [3]ಗುಱಿಮಾಡಿದಿರಿ, ಎನ್ನ ಕಪಿಲಸಿದ್ಧಮಲ್ಲಿಕಾರ್ಜುನ. ೧೪೪–೧೨೫–3–28.

---

[1] (ಶಿ) (ಉ) ಬಹ್ಮಾಂಡವು ಛಟ ಚೀಟ ಪಟ ಧಳಧಳವೆಂಬ ಶಬ್ದಗೊಡುತ್ತ ಬಿರಿವುತ್ತ ಜರ್ಝರಿತವಾಗುತ್ತ (ದೇ) ಬ್ರಹ್ಮಾಂಡ ಕಟಾಹಂ ಬಿರಿವುತ್ತ ಚತುರ್ದಶಭುವನವೆಲ್ಲಂ ಪ್ರಳಯ ಕಾಲ ತುಂಬಿದ (ಗೂ). [2] (ಉ) (ಗೂ) ಮಲ್ಲಿನಾಥ ನಿಮಗೆ ಕೂಡುವ ಅವಸ್ಥೆಯೊಳಗೆ ಲಿಖಿತ ಬಾರದು ಪ್ರಾಣಬಾರದು ಇಂತಿರಿಸಿದೆಯಾ ಎನ್ನ ದೇವಯ್ಯ (ದೇ) ಮಲ್ಲಿನಾಥ ನಿಮಗೆ ಕೂಡುವ ಅವಸ್ಥೆಯೊಳಗೆ ಲಿಖಿತ ಬಾರದು ಪ್ರಾಣ ಬಿಡದು ಇಂತಿರಿಸಿದಾ ಎನ್ನ ದೇವಯ್ಯ (ಶಿ). [3] (ಹ) (ಶಿ) (ದೇ) (ಗೂ ಉ). ಗುರಿ ಮಾಡಿದಂತೆ ಈ ಕೋಪವೆಂಬ ದಳ್ಳುರಿಗೆ ಎನ್ನ ಗುರಿ ಮಾಡಿದಿರಿ.

ಇಂತು ಅನುತಾಪಮಂ ಸಂತೈಸಿಕೊಂಡು, ಪ್ರಭುದೇವರ ಶ್ರೀಪಾದವಿದ್ದಲ್ಲಿಗೆ ಅಱಸಿ ಕೊಂಡು ಬರುತ್ತಿಪ್ಪ ಪ್ರಸ್ತಾವ:

ನಟ್ಟಡವಿಯೊಳಗೆ ಇರುಳು ಹಗಲೆನ್ನದೆ, ನಾನು—ಅಪ್ಪಾ ಅಯ್ಯಾ ಎಂದು ಅಱಸುತ್ತ ಹೋದರೆ, ನಾನಿದೇನೆ ಬಾ ಮಗನೆ, ಎಂದು ಕರೆದೆನ್ನ ಕಂಬನಿಯ ತೊಡೆದು, ತನ್ನ ನಿಜವ ತೋಱಿದ ದೇವನ ಪಾದವಿಂದೆನ್ನಲ್ಲಿಗೆ ನಡೆದು ಬಂದರೆ, ನಾನಱಿಯದೆ ಮರುಳುಗೊಂಡೆನೆಂದು, ಎನ್ನ ಮನದೊಳಗೆಚ್ಚಱ ಮಾಡಿದ. ಆತನನಱಸಿಕೊಂಡು ಬಂದೆನ್ನ ಹೃದಯದಲ್ಲಿ ಇಂಬಿಟ್ಟುಕೊಂಬೆನೆನ್ನ ಕಪಿಲಸಿದ್ಧ ಮಲ್ಲಿನಾಥಯ್ಯನ. ೧೪೫-೧೨೬-3-29. ಮತ್ತಂ:

ತನ್ನನಱಸಿ ಬಪ್ಪವರ ತಾನಱಸಿ ಬಪ್ಪ ನೋಡಾ ! ಎನ್ನ ದೇವನೆಲ್ಲಿದ್ದನಲ್ಲಿಗೆ ಹೋಗಿ, ಬಾರಾ ಬಾರಾ ಎಂದು, ಮನದೊಳಗೆ ಅಚ್ಚೊತ್ತಿಕೊಂಬೆನೆನ್ನ ಕಪಿಲಸಿದ್ಧ ಮಲ್ಲಿ ನಾಥಯ್ಯನ ! ೧೪೬-೧೨೭-3-30.

ಇಂತು ಪ್ರಭುದೇವರನಱಸಿಕೊಂಡು ಬರುತ್ತಿಪ್ಪ ಸಿದ್ಧರಾಮಯ್ಯದೇವರೊಡನೆ, ಗುಡ್ಡಗಳು—ದೇವ, ಆತನು ನಿಂದರೆ ನೆಳಲಿಲ್ಲ, ಸುಳಿದರೆ ಹಜ್ಜೆಯಿಲ್ಲ, ಕಾಯವಿದ್ದೂ ಕಾಯವಿಲ್ಲ, ನೀವಿನ್ನು ಆವ ಪರಿಯಲ್ಲಿ ಮುನಿಸ ತಿಳುಹಿ ತಪ್ಪಿರೆನೆ, ಆ ಗುಡ್ಡಗಳೊಡನೆ ಪ್ರತ್ಯುತ್ತರವ ಕೊಟ್ಟ ಪ್ರಸ್ತಾವದ ವಚನ:

ಅವನಾದ ಗತಿಯಪ್ಪೆ, ಅವ ನಿಂದ ನಿಲವ ನಿಲುವೆನು; ಆತ ಬಿಟ್ಟುದ ಬಿಡುವೆ, ಅವನ ಬೆನ್ನ ಬಳಿಯ ಸಲುವೆ. ಎನ್ನ ಪ್ರಾಣವನವನ ಮೇಲಿಕ್ಕಿ, ನೆರೆವೆ ಕಪಿಲಸಿದ್ಧ ಮಲ್ಲಿಕಾರ್ಜುನನ. ೧೪೭-೧೨೮-3-31. ಮತ್ತಂ:

ಮದಹಸ್ತಿ ಮದಹಸ್ತಿಯ ಪಿಡಿವುದಲ್ಲದೆ, ಮತ್ತೊಂದ ಹಿಡಿಯದು. ಆ ರೂಪಿಂಗಾ ರೂಪು ಹಿಡಿವುದಲ್ಲದೆ, ಮತ್ತೊಂದು ರೂಪ ಹಿಡಿಯದು. ರೂಪಿಲ್ಲದಾತನ ರೂಪಿಸಿ ಹಿಡಿವೆನು ಕಪಿಲಸಿದ್ಧ ಮಲ್ಲಿಕಾರ್ಜುನನ. ೧೪೮-೧೨೯-3-32.

ಹರಿದು [1]ಹಿಡಿದು[1] ಹತ್ತುವೆನವನ, [2]ಹತ್ತಿ[2] ಮುಟ್ಟಿ ಹಿಡಿವೆನವನ. ಮಹಾ ಪ್ರಚಂಡ [3]ಮನ[3]ದಿಂದ ಕಪಿಲಸಿದ್ಧ ಮಲ್ಲಿಕಾರ್ಜುನನ [4]ಹಿಡಿವೆನು.[4] ೧೪೯-X-3-33.

ಇಂತೆಂದು ನುಡಿವ ಸಿದ್ಧರಾಮತಂದೆಗಳೊಡನೆ, ಆ ಗುಡ್ಡಗಳು—ದೇವ, ಆತನ ಕೋಪಾರೂಢಿಯಿಂದೊಗೆದ ಅಂಗಾಲ ಕಣ್ಣಿನ ಮಹಾಜ್ವಾಲೆಯ ನಿಲಿಸುವ ಪರಿಯೆಂ ತೆಂದೆನೆ, ಅವರಿಗೆ ಕೊಟ್ಟ ಪ್ರತ್ಯುತ್ತರ:

ಅಂಗಾಲ ಕೋಪವ ಮನಕ್ಕೆ ತಂದಿಪ್ಪವನ, ಆ ಮನದ ಕೋಪವ ಹೃದಯದಲ್ಲಿ ಇಟ್ಟುಕೊಂಡಿಪ್ಪವನ, ಅವನ ಪಾದಕ್ಕೆ ಎನ್ನ ನೊಸಲ ತಂಪ ತಂದು ತಳಿವೆ ! ಎನ್ನ ನೊಸಲ ಅಮೃತದಿಂದ ಅವನ ಮನವ ತಿಳುಹುವೆ, ಕಪಿಲಸಿದ್ಧ ಮಲ್ಲಿಕಾರ್ಜುನ. ೧೫೦-೧೩೦-3-34.

---

[1] (ಶಿ) (ಗೂ R. ಇಈ) X (ದೇ ಗೂ ಉ). [2] (ದೇ) ಹತ್ತಿ ಮನವ (ಶಿ ಗೂ ಉ). [3] ತನ (ದೇ) ಮನ (ಅನ್ಯತ್ರ.) [4] ಮನವ ಹಿಡಿವೆನು (ಶಿ) ಹಿಡಿವೆನು (ಅನ್ಯತ್ರ).

ಇಂತು, ಗುಡ್ಡುಗಳೊಡನೆ ಪ್ರಸಂಗಿಸುತ್ತ ಬಂದು, ಸಿದ್ಧರಾಮಯ್ಯದೇವರು—ಪ್ರಭುದೇವರ ದರುಶನವಾಗಿ, ಅವರ ಶ್ರೀಮೂರ್ತಿಯಂ ನೋಡಿ, ಹರುಷಾಶ್ರುಗಳೊಳಗೆ ಓಲಾಡುತ್ತಿಪ್ಪ ಪ್ರಸ್ತಾವದ ವಚನ :

ಅಱಲುಗೊಂಡ ಕೆಱೆಗೆ [1]ತೊಱೆ[1] ಬಂದು ಹಾಯ್ದಂತೆ—ಎಲೆಯಯ್ಯ, ನಿಮ್ಮ ಕಂಡು ಕಂಗಳು ಕಡೆಗೋಡಿವರಿದವಯ್ಯ. ಎನ್ನ ಮನಕ್ಕೆ ಮನ ವೇದ್ಯವಾದರೆ ಕೈಮಱೆದೆ ನಾಹಾ ಎಲೆಯಯ್ಯ ! ಕಪಿಲಸಿದ್ಧ ಮಲ್ಲಿನಾಥನ ಕಂಡ ಸುಖ ಆರಿಗೂ ಇಲ್ಲ. ೧೫೧-೧೩೧-3-35. ಮತ್ತಂ :

ಅಯ್ಯ, ನಿಮ್ಮ ಕಂಡು ಕಂಗಳು ನೋಡಲಮ್ಮದೆ ಬೆಚ್ಚಿ ಬೆದಱಿದವಯ್ಯ. ನೀನು ಶತಕೋಟಿ ಸೂರ್ಯ[2]ಪ್ರಕಾಶನು.[2] ನಿನ್ನ ಕಂಡ ಬಳಿಕ, ಕರ್ಮ ಉಂಟೇ, ಕಪಿಲಸಿದ್ಧ ಮಲ್ಲಿಕಾರ್ಜುನ ? ೧೫೨-೧೩೨-3-36.

ಇಂತು ಪ್ರಭುದೇವರ ಮೂರ್ತಿಯಂ ಕಂಡು, ಸಿದ್ಧರಾಮಯ್ಯದೇವರು—ಆ ಪ್ರಭುವಿನ ಶ್ರೀಪಾದಕ್ಕೆ ನಮಸ್ಕಾರವ ಮಾಡುವ ಪ್ರಸ್ತಾವ :

ಎಲೆ ಅಯ್ಯ, ಎನ್ನ ಶಿರ ನಿಮ್ಮ ಚರಣವ ಮುಟ್ಟಿದ ಬಳಿಕ, ಎನ್ನಲ್ಲಿ ಗುಣದೋಷವ ನಱಸುವರೇ ? "ಭೃತ್ಯಾಪರಾಧಃ ಸ್ವಾಮಿನೋ ದಂಡ". ಕಪಿಲಸಿದ್ಧ ಮಲ್ಲಿಕಾರ್ಜುನ ದೇವ, ತ್ರಾಹಿ ತ್ರಾಹಿ ಕಾಯಯ್ಯ. ೧೫೩-೧೩೩-3-37.

ಪುಣ್ಯ ಪಾಪಂಗಳಱಿಯದ ಮುನ್ನ, ಅನೇಕ ಭವಂಗಳಲ್ಲಿ ಬಂದು, ನಿಮ್ಮ ನಿಲವ ನಱಿಯದೆ ಕೆಟ್ಟೆನಯ್ಯ ! ಇನ್ನು ನಿಮ್ಮ ಶರಣುವೊಕ್ಕೆ. ನಾ ನಿಮ್ಮನೆಂದೂ ಅಗಲದಂತೆ ನಡೆಸಯ್ಯ, ನಿಮ್ಮ ಧರ್ಮ. ನಿಮ್ಮಲೊಂದು ಬೇಡುವೆ—ಎನ್ನ ಕರ್ಮಬಂಧನ ಬಿಡುವಂತೆ ಮಾಡಯ್ಯ, ಕಪಿಲಸಿದ್ಧ ಮಲ್ಲಿಕಾರ್ಜುನ. ೧೫೪- × - × .

ನಮಸ್ಕಾರದೊಳು ತನುವ ಮಱೆದು, ಸ್ತೋತ್ರವಂ ಮಾಡುತಿಪ್ಪ ಪ್ರಸ್ತಾವದ ವಚನ:

ನಿಮ್ಮ ನಿಜದಂತುವನಾರು ಬಲ್ಲರಯ್ಯ ? ಚತುರ್ದಶಭುವನಂಗಳೆಲ್ಲವೂ ನಿಮ್ಮ ಕರಸ್ಥಳದೊಳಗೆ ಅಡಗಿಪ್ಪವಯ್ಯ ? ನಿನಗೆಣೆಯಪ್ಪ ದೇವರುಂಟೆ, ಕಪಿಲಸಿದ್ಧ ಮಲ್ಲಿಕಾರ್ಜುನ ? ೧೫೫-೧೩೪-3-38.

ಅನಂತದೇವರೆಲ್ಲರೂ ತಂಡ ತಂಡದಲ್ಲಿ ಪ್ರಣಾಮಂಗೆಯ್ಯಲು, ಅವರ ಮಕುಟ ಸಂಘಟ್ಟರಜ ಉದುರಲಿಕೆ, ಅಲ್ಲಿ ರಜತಗಿರಿಗಳಾದವು, ಕಪಿಲಸಿದ್ಧ ಮಲ್ಲೇಶ್ವರ ದೇವರ ದೇವ, ನಿಮ್ಮ ಮುಂದೆ. ೧೫೬-೧೩೫-3-39.

ಹರಿಯೆಂಬಾತ ನಿಮ್ಮ ಚರಣವನಱಿಯ, ಬ್ರಹ್ಮನೆಂಬಾತ ನಿಮ್ಮ ಮಕುಟವನಱಿಯ. ಯತಿ-ವ್ರತಿ-ಋಷಿಗಳೆಂಬವರು ನಿಮ್ಮ ಒಳಗನಱಿಯರು. ಸಮಸ್ತ ದೇವರ್ಕಳು ನಿಮ್ಮ ರೋಮದ ಪ್ರಮಾಣನಱಿಯರು. ಶತಕೋಟಿ ಸೂರ್ಯರು ನಿಮ್ಮ ಬೆಳಗ ಕಾಣಲಱಿಯರು. ಕಪಿಲಸಿದ್ಧ ಮಲ್ಲಿನಾಥ, ನಾ ನಿಮ್ಮನಱಿಯಬಲ್ಲವನೆ ಅಯ್ಯ ? ೧೫೭-೧೩೬-3-40.

---

[1] ತೆರೆ (ದೇ). [2] ಪ್ರಕಾಶಾತೀತನು (ದೇ ಗೂ) (ಉ).

ಕೈಗಳ ಬಿಚ್ಚಿ ಬಿಸಾಟರೆ ಬಿಡೆ, ನೈಗಳ ಕಡಿದು ಹರಹಿದಡೆ ಬಿಡೆ. ಬಿಡೆನು ನಿಮ್ಮ ಚರಣವನಿನ್ನು. ಎನ್ನ ತನುವಳಿದಡೆ, ಜ್ಞಾನತನುವಿಂದ ನಿಮ್ಮ ಹೊದ್ದುವೆ ಕಾಣಾ, ಕಪಿಲಸಿದ್ಧ ಮಲ್ಲಿನಾಥ. ೧೫೮-೧೩೭-3-42.

ನೆನಸುವೆ, ಮಱಸುವೆ. ಎನ್ನ ಗುಣದೋಷ ನಿಮ್ಮದು. ಕೇಳಯ್ಯ, ಎನ್ನ ಬಿನ್ನಪವ: ನಿಮ್ಮ ನೆನೆವವ ನಾನಲ್ಲ ಕಂಡಯ್ಯ, ನಿಮ್ಮಿಂದ ನಿಮ್ಮ ನೆನೆವೆನು, ಕೃಪೆಮಾಡಾ ಕಪಿಲಸಿದ್ಧ ಮಲ್ಲಿಕಾರ್ಜುನ. ೧೫೯- × -3-41.

ಇಂತು ಸಿದ್ಧರಾಮಯ್ಯದೇವರು ಸ್ತೋತ್ರಮಂ ಮಾಡುತ್ತಿರಲು, ಪ್ರಭುದೇವರು ಆ ಸ್ತೋತ್ರಮಂ ಜಱೆದು, ತಮ್ಮ ನಿಲವ ಹೇಳುವ ಪ್ರಸ್ತಾವದ ವಚನ:

ಕಾಯಗೊಂಡ ಮಾನವರಂತೆ ಕೈಗೆ ಸಿಲುಕಿ ಸಿಲುಕ. ಪ್ರಾಣವಿಡಿದ ಜೀವಿಗಳಂತೆ ಎಡೆಯಾಡಿಯಾಡದಿಪ್ಪ. ಕಾಬಡೆ ಕಣ್ಣಳತೆಯಲ್ಲ, ಕೇಳುವಡೆ ಕಿವಿಯಳತೆಯಲ್ಲ. ಗೊಗೇಶ್ವರನ ನಿಲವು ಬಱಯ ಸ್ತೋತ್ರಕ್ಕೆ [1]ನಿಲುಕದು[1] ಕಾಣಾ, ಸಿದ್ಧರಾಮಯ್ಯ. ೧೬೦-೧೩೮-3-43. ಮತ್ತಂ:

ಕಂಗೆ ಕಾಬಡೆ ರೂಪಲ್ಲ. ಕೈಗೆ ಸಿಲುಕುವಡೆ ದೇಹಿಯಲ್ಲ. ನಡೆದರೆ ಗಮನವಿಲ್ಲ. ನುಡಿದರೆ ವಾಚಾಳನಲ್ಲ. ನಿಂದಿಸಿದವರಿಗೆ ಹಗೆಯಲ್ಲ. ಹೊಗಳಿದವರಿಗೆ ಕೆಳೆಯಲ್ಲ. ಗೊಗೇಶ್ವರನ ನಿಲವು ಮಾತಿನ ಮಾತಿಗೆ ಸಿಲುಕುವುದೆ? ಸಿದ್ಧರಾಮ, ನೀನು ಮರುಳಾದೆಯಲ್ಲ! ೧೬೧-೧೩೯-3-44.

ಇದಕ್ಕೆ ಸಿದ್ಧರಾಮಯ್ಯದೇವರು ಕೊಟ್ಟ ಪ್ರತ್ಯುತ್ತರದ ವಚನ:

ಸ್ತೋತ್ರವೆಂಬುದು ನೀವು ಮಾಡಲಾದುದು ಕಂಡಯ್ಯ. ಮೂರ್ತಿಯೆಂಬುದು ನೀನು ನೆನೆದಡಾದುದಯ್ಯ. ಆ ಮೂರ್ತಿಯೆಂಬುದು ನಿಮ್ಮ [2]ಸ್ವಭಾವ[2] ಕಂಡಯ್ಯ. ಎನ್ನ ಹೃದಯಕಮಲದೊಳಗೆ ಸ್ಮರಣೆ ನಿನ್ನ ಗತಿ ನೋಡಯ್ಯ. ಕಪಿಲಸಿದ್ಧ ಮಲ್ಲಿನಾಥ, ನೀನು ಸ್ತೋತ್ರಪ್ರಿಯನಲ್ಲದೊಡೆ, ಹಲಾಯುಧಂಗೆ ಎಂತೊಲಿದೆ ಹೇಳಾ?! ೧೬೨-೧೪೦-3-45.

ವಚನದ ರಚನೆಯೆಂಬ ಮಾತಿನ ಬಣ್ಣದ ಪರಿಯಲ್ಲ ನೋಡಾ! ಹೊಗಳಿ ಕಂಡವರೆಲ್ಲರೂ ಮೂರ್ತಿಗೊಳಗಾದರು. ವೇದಶಾಸ್ತ್ರಮಾರ್ಗವೆಲ್ಲವೂ ಹೊಗಳಿ ಕಾಣವೆಂಬುದ ಗೊಗೇಶ್ವರಸಾಕ್ಷಿಯಾಗಿ ಮೂರುಲೋಕ ಬಲ್ಲುದು ಕಾಣಾ ಸಿದ್ಧರಾಮಯ್ಯ. ೧೬೩-೧೪೧-3-46.

ವೇದಪ್ರಿಯನಲ್ಲಯ್ಯ ನೀನು, ಶಾಸ್ತ್ರಪ್ರಿಯನಲ್ಲಯ್ಯ ನೀನು, ಸ್ತೋತ್ರಪ್ರಿಯನಲ್ಲಯ್ಯ ನೀನು. ಯುಕ್ತಿಪ್ರಿಯನಲ್ಲಯ್ಯ ನೀನು, ಮುಕ್ತಿಪ್ರಿಯನಲ್ಲಯ್ಯ ನೀನು. ಇವೆಲ್ಲವಕ್ಕೆ ನೀವು ಅಸಾಧ್ಯ ಕಂಡಯ್ಯ, ಭಕ್ತಿಪ್ರಿಯ ನೀನೆಂದು ಬಂದು ನಿಮ್ಮ ಮಱೆವೊಕ್ಕೆ ಕಾಯಯ್ಯ, ಕಪಿಲಸಿದ್ಧ ಮಲ್ಲಿನಾಥ. ೧೬೪-೧೪೨-3-47.

---

[1] (ದೇ) ಸಿಲುಕದು (ಅನ್ಯತ್ರ). [2] (ಹ ದೇ ಉ) ಸ್ವಭಾವ (ಶಿ).

ನೀನು ಭಕ್ತಿಪ್ರಿಯನೆಂದು ನಂಬಿದೆನೆಂದು ಬಿನ್ನೈಸುವ ಸಿದ್ಧರಾಮ ತಂದೆಗಳಿಗೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರದ ವಚನ:

ಭಕ್ತಿಯುಕ್ತಿಯನಾರು ಬಲ್ಲರು? ಬಲ್ಲವರನಾರನೂ ಕಾಣೆ. ತನ್ನ ಮಱೆದು, ಇದಿರನಱಿದು ಇರಬಲ್ಲಡೆ, ಆತ ಭಕ್ತ. ಆ ಭಕ್ತಿಗೆ ಶಿವನೊಲಿವ. ನುಡಿಯಲ್ಲಿ ಭಕ್ತಿಯುನಾಡಿ, ನಡೆಯಲ್ಲಿ ಇಲ್ಲದಿದ್ದರೆ, ಕಡೆಮುಟ್ಟ ಶಿವನೊಲಿವುದು ಹುಸಿ. ಮಱೆದು ಕೋಪ ದುರಿಯನುಗುಳಿ, ಅಱಿದು ಬಂದೆಱಗಿದೆನೆಂಬ ಬಱುನುಡಿಗೆ ಒಲಿವನೇ, ನಮ್ಮ ಗೊಗೇಶ್ವರ ಲಿಂಗವು? ೧೬೫-೧೪೩-3-48.

ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಸಿದ್ಧರಾಮಯ್ಯದೇವರ ಬಿನ್ನಪದ ವಚನ:

ಎನ್ನ ಕೋಪವೆಂಬುದು ನಿಮ್ಮ ಕಣ್ಣು ನೋಡಯ್ಯ. ನಾನೇತಱೊಳಗೆ ಏನು ಹೇಳಾ! ನಿಮ್ಮ ತೇಜದ ಮುಂದೆ ಎನ್ನಱಿವೇತಱದು ಹೇಳಾ! ಎನ್ನ ದಿಟದ ಭಕ್ತಿ ನಿನ್ನ ರೂಪು ಕಂಡಯ್ಯ. ಎನ್ನ ಸಟೆಯ ಭಕ್ತಿಯೂ ನಿನ್ನ ರೂಪು ಕಂಡಯ್ಯ. ಎನಗೆ ಬೇಱೆ ಸ್ವತಂತ್ರ-ಉಂಟೇ, ಕಪಿಲಸಿದ್ಧ ಮಲ್ಲಿನಾಥ? ೧೬೬-೧೪೪-3-49.

ಇದಕ್ಕೆ ಪ್ರಭುದೇವರು ನಿರೂಪಿಸಿದ ವಚನ:

ಕೋಪ-ತಾಪವೆಂಬುದು ಅಱಿವಿನೊಳಗೆ. ಭಕ್ತಿ-ಯುಕ್ತಿಯೆಂಬುದು ನಿತ್ಯದೊಳಗೆ. ಭಾವದ ಬಗೆಗೆ ಬಣ್ಣವಿಟ್ಟುಕೊಂಡರೆ, ನಿರ್ಭಾವಿಕಂಗೆ ಅದು ಸಹಜವಹುದೆ? ಬಂದ ಶರಣರ ನಿಲವನಱಿದು, ಸಂದುಸಂಶಯವಳಿದು ನಂಬದಿದ್ದಡೆ, ಹಿಂದುಮುಂದಾಗಿ ಹೋಹನು ಕಾಣಾ, ನಮ್ಮ ಗೊಗೇಶ್ವರ ಲಿಂಗನು. ೧೬೭-೧೪೫-3-50.

ಹೀಗೆಂದು ಪ್ರಭುದೇವರು ಮುನಿದು ಹಿಂದುಮುಂದಾಗಲು, ಸಿದ್ಧರಾಮತಂದೆಗಳು ಅಡ್ಡಬಿದ್ದು ಬಿನ್ನೈಸಿದ ವಚನ:

ಹಿರಿದು [1][ಆಗ್ರಹ][1]ದಿಂದ ನೀನೆನ್ನ ಮೇಲಿಕ್ಕಿ ಒಲ್ಲೆ ಸಾರೆಂದು ಹೋಹೆ ಕಾಣಾ ಅಯ್ಯ! ಕೈಯ ಹಿಡಿದಡಂತು ಮುರಿಚುವೆ! ಎನ್ನ [2]ಉರದಲಪ್ಪಿ[2] ಹಿಡಿದಡೆ[= ಡಿ ?]ಂತು ಮುರಿಚುವೆ, ನೀನು ಇನ್ನು ಹೋಹ ಪರಿಗಳ ನಿಲಿಸುವೆ ಕೇಳು ಗಡಾ! [3]ಸೂಕ್ಷ್ಮತನುವಿನಲ್ಲಿ[3] ಹಿಡಿದರೆ, ಎಂತು ಮುರಿಚುವೆ ಹೇಳಾ, ಕಪಿಲಸಿದ್ಧ ಮಲ್ಲಿಕಾರ್ಜುನ? ೧೬೮-೧೪೬-3-51.

ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಅಂಗದಲ್ಲಿ ಅಪ್ಪಿದೆನೆಂದಡೆ ಸಿಲುಕದು. ಪ್ರಾಣದಲ್ಲಿ ಅಪ್ಪಿದೆನೆಂದರೆ ಸಿಲುಕದು. ಸೂಕ್ಷ್ಮನ ಮನದ ಕೊನೆಯ ಮೊನೆಯ ಮೇಲೆ ಅಪ್ಪಿದೆನೆಂದರೆ ಸಿಲುಕದು. ಭಾವಾತೀತವಾದ ನಿರಾಕಾರದ ಘನವು ಸುಜ್ಞಾನಮುಖಕ್ಕೆ ಅಸಾಧ್ಯ ನೋಡಾ! ಗೊಗೇಶ್ವರನ

---

1 ಆಗ್ರ (ದೇ) (ಗೂ) (ಉ) ಆಘ್ರ (ಶಿ) ಉಗ್ರ (ಹ). 2 (ಶಿ ಗೂ) ಉದರದಲಪ್ಪಿ (ದೇ) ಉದರ ಅಪ್ಪಿ (ಹ). 3 (ಉ ಗೂ) ಸೂಕ್ಷ್ಮನ ವಿರಹದಲ್ಲಿ (ಶಿ ದೇ) ಸೂಕ್ಷ್ಮತನುವಿನ ಮನದ ವಿರಹದಲ್ಲಿ (ಹ).

ಶರಣರನಿನ್ನಾವ ಪರಿಯಲ್ಲಿ ತಡೆದು ನಿಲಿಸುವೆ ಸಿದ್ಧರಾಮಯ್ಯ ? ೧೬೯-೧೪೭-3-52.

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಸಿದ್ಧರಾಮಯ್ಯದೇವರು ಬಿನ್ನೈಸಿದ ಪ್ರಸ್ತಾವದ ವಚನ :

ಎನ್ನನಾಗಳೆ ಬಂದಿವಿಡಿದೆ ಗಡಾ ನೀನು. ನಿಮ್ಮ ಹಿಡಿವರೆ ಹಿಡಿವರು— ತನುವಿರೆ ತನು ಬೇಱಾದವರು. ನಿಮ್ಮ ಹಿಡಿವರೆ ಹಿಡಿವರು—ಮನವಿರೆ ಮನ ಬೇಱಾದವರು. ನಿಮ್ಮ ಹಿಡಿವರೆ ಹಿಡಿವರು—ಕೈಯಿರೆ ಕೈ ಬೇಱಾದವರು. ನಿಮ್ಮ ಹಿಡಿವರೆ ಹಿಡಿವರು—ಕಣ್ಣಿರೆ ಕಣ್ಣು ಬೇಱಾದವರು. ಇನಿಸುಳ್ಳವರು ಮೊದಲಾಗಿ ನಿಮ್ಮ ಹಿಡಿಯಲಾಱರು. ಕಪಿಲಸಿದ್ಧ ಮಲ್ಲಿನಾಥ, ನಿಮ್ಮ ಹಿಡಿದು ತಡೆಯಲಾನೇತಱವನಲ್ಲ; ಕರುಣದಿಂದ ಬಾರಾ ಎನ್ನ ದೇವರ ದೇವ. ೧೭೦-೧೪೮-3-53.

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನಪಂಗೆಯ್ದು, ತನ್ನ ಮಠಕ್ಕೆ ಬಿಜಯಂಗೆಯ್ವು ದೆನಲು, ಪ್ರಭುದೇವರು— ನಿಮ್ಮ ಮಠವೆಂದೇನು ? ಈ ಇದ್ದ ಠಾವಿನಲ್ಲಿಯೆ ಭಕ್ತಿಮಾಡಿ ಪರಿಣಾಮಿಸುವುದಲ್ಲದೆ, ನಾವತ್ತ ಬರಲಾಱೆವೆಂದು ನಿರೂಪಿಸಿದ ಪ್ರಸ್ತಾವದ ವಚನ:

ಗತಿಗೆಟ್ಟು, ಧೃತಿಗೆಟ್ಟು, ಮತಿಗೆಟ್ಟವ ನಾನಯ್ಯ. ನಡೆವರೆ ಶಕ್ತಿಯಿಲ್ಲ, ನುಡಿವರೆ ಜಿಹ್ವೆಯಿಲ್ಲ. ಇದಿರಲೊಬ್ಬರ ಉಪಚಾರ ಸೇರದು ನೋಡಾ ಎನಗೆ. ಬಂದ ಬರವನಱಿದು, ನಿಂದ ನಿಲವ ಕೂಡಬಲ್ಲ ಶರಣಂಗೆ [1]ಏಕಾಂತ ಬೇಱೊಂದೆಂಬ[1] ಸಂದೇಹ ಉಂಟೆ ? ತೆಱಹಿಲ್ಲದ ಘನವನೊಳಕೊಂಡ ಬಳಿಕ, ಬರಲೆಡೆಯುಂಟೆ, ನಮ್ಮ ಗೊಗೇಶ್ವರ ಲಿಂಗಕ್ಕೆ? ೧೭೧-೧೪೯-3-54.

ಹೀಗೆಂದು ಪ್ರಭುದೇವರು ನಿರೂಪಿಸಲು, ಭಕ್ತಿವತ್ಸಳನೆನಿಸಿ ಇಲ್ಲಿ ಪರಿಯಂತರ ಬಿಜಯಂಗೆಯ್ದು, ಇನ್ನು ಬಾರೆನೆಂಬುದಕ್ಕೆ ಕಾರಣವೇನೆಂದು ಸಿದ್ಧರಾಮಯ್ಯದೇವರು ಬೆಸಗೊಂಬ ಪ್ರಸ್ತಾವದ ವಚನ :

ತೆಱಹಿಲ್ಲದ ಘನವು ಕುಱುಹಿಂಗೆ ಬಂದ ಕಾರಣವೇನು ಹೇಳಾ ಎಲೆ ಅಯ್ಯ ? ಭಕ್ತಿ ಕಾರಣ ಇಚ್ಛೆಗೆ ಬಂದ ಬಳಿಕ, ಉಪಚಾರಕ್ಕೆ ತೆಱಹುಂಟೆ, ಕಪಿಲಸಿದ್ಧ ಮಲ್ಲಿನಾಥ ? ೧೭೨-೧೫೦-3-55.

ಈ ಉತ್ತರಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ :

ಭಕ್ತನಿರ್ದ ಠಾವಿಗೆ ಕರ್ತ ಬಂದ ಬಳಿಕ, ಅತ್ತಿತ್ತ ಹರಿಯದೆ ನಂಬಬೇಕು ನೋಡಾ. ಕರ್ತನ ಕಂಡು, ಭೃತ್ಯನುರಿಯನುಗುಳಿದರೆ, ಬಳಿಕ ಕರ್ತೃ-ಭೃತ್ಯಭಾವಕ್ಕಿನ್ನು ಸಂಬಂಧ ವೇನು ? ತಪ್ಪಿ ತಪ್ಪಿ ತಿದ್ದಿಕೊಂಡಹೆನೆಂದರೆ ಹಸನಾಗಬಲ್ಲುದೆ? ಗೊಗೇಶ್ವರನ ಶರಣನಾ ರೆಂಬುದ ನೀನೆತ್ತ ಬಲ್ಲೆ ಹೋಗಾ, ಮರುಳು ಸಿದ್ಧರಾಮಯ್ಯ. ೧೭೩-೧೫೧-3-56.

ಹೀಗೆಂದು ಪ್ರಭುದೇವರು ನಿರೂಪಿಸಲು, ಸಿದ್ಧರಾಮಯ್ಯದೇವರು ನೊಂದು, ಅತ್ಯಂತ ಭೀತಿಯನೆಯ್ದಿ ಬಿನ್ನೈಸಿದ ಪ್ರಸ್ತಾವದ ವಚನ:

ಎನ್ನ ಒಳಗನೊತ್ತಿ ನೋಡುವಿರಿ, [2]ಎನ್ನಲೇನುಂಟಯ್ಯ[2] ನುಡಿಯಿಲ್ಲದಭವ ನೀನು

[1] ಬೇಱೊಂದೇಕಾಂತವೆಂಬ (ದೇ) (ಗೂ) (ಉ). [2] (ದೇ) ಎನ್ನನೆಲೆಯಯ್ಯ (ಶಿಹ).

ನುಡಿಗಲಿತನೆಂದರೆ ನಿಮ್ಮ ನೊಡಂಬಡಿಸಲಾನು ಸಮರ್ಥನೇ? ಅನಂತವೇದಂಗಳೂ ನಿಮ್ಮ ಮುಂದೆ ಉಸುರಿಕ್ಕಲಮ್ಮದೆ ಮೂಗರಾಗಿದ್ದವು. ನಿಮಗಾನಿದಿರುತ್ತರವ ಕೊಟ್ಟು ಕೆಟ್ಟ ಕೇಡಿಂಗೆ ಏನೆಂಬೆನೆಲೆಯಯ್ಯ, ಕಪಿಲಸಿದ್ಧ ಮಲ್ಲಿನಾಥ, ನಾನುಭಯಭ್ರಷ್ಟನೆಂಬುದ ನೀವೆ ಬಲ್ಲಿರಿ. ೧೭೪-೧೫೨-3-57. ಮತ್ತಂ:

ಅಯ್ಯ, ನಿಮ್ಮ ಕಂಡ ಕಾಣಿಕೆಯಲ್ಲಿ ನಂಬಿ ನಚ್ಚಿ ಶರಣುವೊಗಲಱಿಯದೆ, ಕೆಮ್ಮನೆ ಅಹಂಕಾರವ ಹೊತ್ತುಕೊಂಡು ಕೆಟ್ಟೆ ನೋಡಯ್ಯ. ಕೆಡಿಸಿ ಮಱುಗಿ ಅಱಿಸಿಹೆನೆಂಬ ಮರುಳನು ನಾನಯ್ಯ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ— ಹಾಲಲದ್ದು, ನೀರಲದ್ದು, ನೀನೆ ಗತಿ, ನೀನೆ ಮತಿ. ೧೭೫-x-3-58. ಮತ್ತಂ:

ಎನ್ನ ಭರ-ಭಾರ ನಿಮ್ಮದಯ್ಯ. ಎನ್ನ ಹಾನಿ-ವೃದ್ಧಿ ನಿಮ್ಮದಯ್ಯ, ಎನ್ನ [1]ಕರಕರ[1] ಕಾಡದಿರು ತಂದೆ. ನಿನ್ನ ಕಾಟವೆನ್ನ ಪ್ರಾಣದೋಟ. ಕಪಿಲಸಿದ್ಧ ಮಲ್ಲಿನಾಥ, ಕೊಲ್ಲು ಕಾಯಿ, ನಿಮ್ಮ ಧರ್ಮದವ ನಾನು. ೧೭೬-೧೫೩-3-59.

ಇಂತು ಕಿಂಕುರ್ವಾಣದಿಂದಿಪ್ಪ ಸಿದ್ಧರಾಮಯ್ಯದೇವರು ಪ್ರಭುದೇವರ ಚರಣದ ಮೇಲೆ ಬಿದ್ದು ಅಳುತ್ತಿರಲು ಆ ಪ್ರಭುದೇವರು ಕರುಣದಿಂದ ಶಿರವಹಿಡಿದೆತ್ತಿದ ಪ್ರಸ್ತಾವದವಚನ:

ಹೊಱಗಾಡಿ ಬಂದನೆಂದು ನುಡಿಸಲೊಲ್ಲದೆ ಸುಮ್ಮನೆ ಇದ್ದೆನು. ಎನ್ನ ಮನ ನೊಂದುತಾಗಿದರೆ, ನಿಮ್ಮತ್ತ [2]ಮುಂದಾದೆನು[2]. ಬಿಕ್ಕುತ್ತ ಬೆದಱುತ್ತ ಕಾಲ ಮೇಲೆ ಬಿದ್ದರೆ, ಕಂಗಳ ಉದಕ ಮಜ್ಜನಕ್ಕೆಱೆ[3]ದಂತಾಯಿತ್ತು. ಅಂತಿದ್ದರೆ ಕಂಡು ನೆಗಹಿದನು ನಮ್ಮ ಗೊಗೇಶ್ವರಲಿಂಗ. ೧೭೭-೧೫೪-3-60.

ಇಂತು ಅಳುತ್ತಿಪ್ಪ ಸಿದ್ಧರಾಮಯ್ಯದೇವರ ಕಣ್ಣ ನೀರನು ಕೃಪೆಯಿಂ ತೊಡೆದ ಪ್ರಸ್ತಾವದೊಳು, ಆ ಸಿದ್ಧರಾಮಯ್ಯದೇವರು ಬಿನ್ನೈಸಿದ ವಚನ:

ಎನ್ನ ತನು ಕರಗಿ, ಮನ ಕೊರಗಿದ ದುಃಖವಿದಾರದಯ್ಯ. ಅಯ್ಯಾ, ಅಯ್ಯಾ ಎಂದು ಅಳುವ ಅಕ್ಕೆಯಿದಾರದಯ್ಯ. ಮಱಹೆಂಬ ಕೂರಸಿಗೆ ಗುಱಿಮಾಡಿದವರಾರಯ್ಯ? ಹಾಹಾಯೆಂಬ ಧ್ವನಿಯ ಕೇಳಲಾಱದೆ, ಕಂಡು, ಕರುಣದಿಂದ ಶಿರವ ಹಿಡಿದೆತ್ತಿ, ಎನ್ನ ಕಣ್ಣನೀರ ತೊಡೆದನು ಕಪಿಲಸಿದ್ಧ ಮಲ್ಲಿನಾಥಯ್ಯನು. ೧೭೮-x-3-61.

ಇಂತು ಸಿದ್ಧರಾಮಯ್ಯದೇವರ ಕಿಂಕುರ್ವಾಣಮಂ ಕಂಡು, ಕೃಪೆಯಿಂದ ಶಿರವ ಹಿಡಿದೆತ್ತಿ, ಕಣ್ಣ ನೀರ ತೊಡೆದು, ಆ ಪ್ರಭುದೇವರು ಪ್ರಸನ್ನರಾಗಿ— ಪರಮಯೋಗಿ, ಶುದ್ಧ ಸಾತ್ವಿಕಯೋಗಿ, ಸಚ್ಚಿದಾನಂದಯೋಗಿ, ನಿತ್ಯಪರಿಪೂರ್ಣಯೋಗಿ, ಶಿವಯೋಗಾಮೃತ ಸೇವ್ಯ ಸಂತುಷ್ಟಯೋಗಿ, ಪರಮಾನಂದಯೋಗಿ, ಸಕಲಕರಣಗುಣರಹಿತಯೋಗಿ, ಸರ್ವೇಂದ್ರಿಯ ಸುಖನಿರ್ಮೂಲಯೋಗಿ, ಸಂಸಾರವನದಾವಾನಲಯೋಗಿ, [1]ಮಾಯಾಗಾರ[3]ಯೋಗಿ, ಮಾಯಾಮಯದೂರಯೋಗಿ, ಮಾಯಾಮದಮಥನಯೋಗಿ, ಸಗುಣಯೋಗಿ, ಸನ್ನಿಧಾನಯೋಗಿ, ನಿರ್ಗುಣಯೋಗಿ, ನಿರಂಜನಯೋಗಿ, ಸಕಲ

[1] ಖರಖರ (ಶಿ) ಕರಕರ (ಅನ್ಯತ್ರ). [2] ಮುಂತಾದೆನು (ಹ ದೇ). [3] ಮಾಯಾಗಾರ ದೂರ (ದೇ) ಮಾಯಾಹರ (ಗೂ ಉ).

ನಿಷ್ಕಲತತ್ತ್ವ ಶಿರೋರತ್ನಯೋಗಿ, ಅಖಂಡಿತ ಪರಿಪೂರ್ಣಯೋಗಿ, ಅಪ್ರಮಾಣಗುಣ ಭರಿತಯೋಗಿ,ಅಪ್ರತರ್ಕ್ಯಚಾರಿತ್ರ್ಯಯೋಗಿ, ಅಸಾಧ್ಯಸಾಧಕಯೋಗಿ, ಅಭೇದ್ಯ ಭೇದಕ ಯೋಗಿ, ಸುಜ್ಞಾನ ಪ್ರಭಾಮಯಯೋಗಿ, ಮಹಾಜ್ಞಾನೈಕ ಚೈತನ್ಯಯೋಗಿ, ಕಾಯ ಗುಣ-ಧರ್ಮ-ಕರ್ಮಸಂಹಾರಯೋಗಿ, ಬ್ರಹ್ಮಾಂಡ ಸಂದೋಹ ಸಂಭೂತಕಾರಣ ಯೋಗಿ, ನಿರವಯ ನಿರ್ಲೇಪ ನಿಷ್ಪಾಪಯೋಗಿ, ಇಹಲೋಕ ಪರಲೋಕಗತಿರಹಿತ ಯೋಗಿ—ಎಂದು ಕೊಂಡಾಡಿ, ಆ ಸಿದ್ಧರಾಮಯ್ಯದೇವರ ಬಿಗಿಯಪ್ಪಿಕೊಂಡ ಪ್ರಸ್ತಾವದ ವಚನ :

ನಿಮ್ಮಲ್ಲಿ ಸನ್ನಿಹಿತನಾಗಿ ನಿಜವನಱಿದು ಬೆರಸಿದ ಶಿವಯೋಗಿಯ ಕಂಡರೆ ಮನ ವಗಲಲಾಱದಯ್ಯ, ಎನ್ನ ತನು ಅಪ್ಪದಿರಲಾಱದಯ್ಯ. ಎನ್ನ ಸಬುದ ಹೊಗಳಿಯಲ್ಲದೆ ಸೈರಿಸದಯ್ಯ. ಗೊಗೇಶ್ವರ, ನಿಮ್ಮ ಶರಣ ಶಿವಯೋಗಿ ಸಿದ್ಧರಾಮಯ್ಯನನಪ್ಪಿ ಸೊಪ್ಪ ಳಿದು, ನಮೋ ನಮೋ ಎನುತಿದ್ದೆನು. ೧೭೯-೧೫೫-3-62. ಮತ್ತಂ :

ಕಾಯದೊಳಗೆ ಕರಣವಿಲ್ಲ, ಪ್ರಾಣದೊಳಗೆ ಭಾವವಿಲ್ಲ, ಭಾವದೊಳಗೆ ಭ್ರಮೆಯಿಲ್ಲ, ನವನಾಳದೊಳಗೆ ಸುಳುಹು ಮುನ್ನಿಲ್ಲ. ಬ್ರಹ್ಮರಂಧ್ರದಲ್ಲಿ ಅಱಿವಱಿತ ಶಿವಯೋಗಿ ಗೊಗೇಶ್ವರನ ಶರಣ ಸಿದ್ಧರಾಮಯ್ಯನ ಕಂಡೆನ್ನ ಭವಂ ನಾಸ್ತಿಯಾಯಿತ್ತು ಕೇಳಾ. ೧೮೦-೧೫೬-3-63.

ಯೋಗ-ಶಿವಯೋಗವೆಂಬರು. ಯೋಗದ ಹೊಲಬನಾರು ಬಲ್ಲರಯ್ಯ. ಹೃದಯ-ಕಮಲ[1][ಸದ್ಮ][1]ದಲ್ಲಿ ಭ್ರಮಿಸುವನ ಕಳೆದಲ್ಲದೆ ಯೋಗವೆಂತಪ್ಪುದೋ ! ಐವತ್ತೆರಡಕ್ಷರದ ಲಿಪಿಯನೋದಿ, ನೋಡಿ, ಆಱು ನೆಲೆಯ ಮೇಲಿಪ್ಪ ಮಣಿ ಮಾಡ ದೊಳಗೆ ಇರಬಲ್ಲಡೆ, ಅದು ಯೋಗ. ಸೋಹಮ್ಮೆಂಬ ಸುಳುಹಡಗಿ, ಮನ ನಷ್ಟವಾಗಿರ ಬಲ್ಲ ಕಾರಣ, ಗೊಗೇಶ್ವರನ ಶರಣ ಸಿದ್ಧರಾಮಯ್ಯ, ನಿನಗೆ ನಮೋ ನಮೋ ಎಂದು ಬದುಕಿದೆನು. ೧೮೧- × -3-64.

ಹೀಗೆಂದು ಸಿದ್ಧರಾಮಯ್ಯದೇವರಿಗೆ ಪ್ರಭುದೇವರು ನಿರೂಪಿಸಲು, ಅದಕ್ಕೆ ಸಿದ್ಧ ರಾಮಯ್ಯದೇವರು ಬಿನ್ನೈಸಿದ ಪ್ರಸ್ತಾವದ ವಚನ :

ಯೋಗದ ಹೊಲಬ ನಾನೆತ್ತ ಬಲ್ಲೆನಯ್ಯ ! ಯೋಗ ಶಿವ-ಶಕ್ತಿ ಸಂಪುಟವಾಗಿಪ್ಪು ದಲ್ಲದೆ, ಶಿವ-ಶಕ್ತಿ ವಿಯೋಗವಪ್ಪ ಯೋಗವಿಲ್ಲಯ್ಯ. ಹೃದಯಕಮಲದೊಳಗೆ ಭ್ರಮಿಸದೆ ಇಪ್ಪಾತ ನೀನೆಯಲ್ಲದೆ, ಎನಗೆ ಬೇಱೆ[3] ಸ್ವತಂತ್ರ ಉಂಟೇ, ಕಪಿಲಸಿದ್ಧ ಮಲ್ಲಿಕಾರ್ಜುನ ? ೧೮೨-೧೫೭-3-65. ಮತ್ತಂ :

ಉತ್ಪತ್ತಿ-ಸ್ಥಿತಿ-ಲಯ ಹೊದ್ದದ ಅಭವ ನೀನು ಕಂಡಯ್ಯ. ಎನಗೆ ಬೇಱೆ[3] ಸ್ವತಂತ್ರ ವಿಲ್ಲ ಕೇಳಾ ! ನಿನ್ನ ಇಚ್ಛಾಮಾತ್ರದಲ್ಲಿ [2]ನಾನಿಪ್ಪೆನು. ಹಿರಿಯ ನೀನೇ, ದೇವ ನೀನೆ ! ಕಪಿಲಸಿದ್ಧಮಲ್ಲಿನಾಥ[2], ನಾನೇತಱೊಳಗೇನಪ್ಪೆ ಹೇಳಾ ! ೧೮೩- × -3-66.

---

[1] ಪದ್ಮ (ಶಿ) ಪತ್ರ (ಅನ್ಯತ್ರ). [2] (ದೇ) (ಗೂಉ) ನಾಥ (ಶಿ) Note : ಇದು ಸದೃಶಾಕ್ಷರ ಮಧ್ಯಲೋಪ ಲೇಖನಕ್ಕೆ ನಿದರ್ಶನ.

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು, ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಮನವಮನ ಬೆರಸಿದವರಿಂತಿಪ್ಪರಂತಿಪ್ಪರೆನ್ನವರ ಪರಿಯಱಿಯ ಬಾರದು ಕೇಳಾ! ಇದಿರಿಂಗೆ ಇಚ್ಛೆಯನಱಿದಿಪ್ಪರು, ಒಳಗ ನೋಡಿದರೆ ಬಟ್ಟಬಯಲಲ್ಲಿ ಇಪ್ಪರು. ಗೊಗೇಶ್ವರನ ಶರಣರು ತಾಪಿಲ್ಲದ ಮಹಿಮರೆಂಬುದನು ನಿನ್ನಿಂದಲಱಿದೆ ನೋಡಾ ಸಿದ್ಧರಾಮಯ್ಯ! ೧೮೪-೧೫೮-3-67.

ಹೀಗೆಂದು ಪ್ರಭುದೇವರು ನಿರೂಪಿಸಲು, ಸಿದ್ಧರಾಮಯ್ಯದೇವರು ಬಿನ್ನೈಸಿದ ವಚನ:

ಅಪ್ಪುದನಲ್ಲಮದನೊಪ್ಪ ಮಾಡುವಿರಯ್ಯ. ನಿಮ್ಮ ಒಲವು ಚೆಲುವು ಕಂಡಯ್ಯ. ನೀನೆಂತು [1]ಮಾಡಿದರೆ[1] ಅಂತಿಪ್ಪುದಲ್ಲದೆ, ಅಪ್ಪುದಲ್ಲೆಂಬವರಿಲ್ಲ ಕಾಣಾ, ಕಪಿಲಸಿದ್ಧ ಮಲ್ಲಿಕಾರ್ಜುನದೇವ. ೧೮೫- × -3-68.

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು, ಆ ಬಿನ್ನಪಕ್ಕೆ ಪ್ರಭುದೇವರು ಸಂತೋಷಿಸಿದ ಪ್ರಸ್ತಾವದ ವಚನ:

ಸ್ವತಂತ್ರ-ಪರತಂತ್ರಕ್ಕೆ [2]ಆವುದು[2] ಚಿಹ್ನ ನೋಡಾ: ತಾನೆಂಬುದಳಿದು, ಇದಿರೆಂಬುದ ಮಱೆದು, ಭಾವದಗ್ಧವಾಗಿರಬಲ್ಲಡೆ ಅದು ಸ್ವತಂತ್ರ; ನೀನೆಂಬುದ ಅಧಿಕರಿಸಿ, ತಾನೆಂಬುದ ನೀಕರಿಸಿ, ಉಭಯ ಭಾವದಲ್ಲಿ ಸನ್ನಿಹಿತನಾಗಿರಬಲ್ಲಡೆ ಪರತಂತ್ರ. ಸ್ವತಂತ್ರ-ಪರತಂತ್ರವೆಂಬೆರಡನೂ ವಿವರಿಸದೆ, ತನ್ನ ಮಱೆದಿಪ್ಪವನೆ ಉಪಮಾತೀತನು! ಗೊಗೇಶ್ವರನ ಶರಣರು ದೇಹವಿಲ್ಲದ ನಿರ್ದೇಹಿಗಳೆಂಬುದು ಇಂದೆನಗೆ ಕಾಣ ಬಂದಿತ್ತು ನೋಡಾ, ಸಿದ್ಧರಾಮಯ್ಯ. ೧೮೬- × -3-69.

ನೀನು ನಿರ್ದೇಹಿ ಎಂದು ಎನಗೆ ಅಱಿಯ ಬಂದಿತ್ತೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಸಿದ್ಧರಾಮಯ್ಯದೇವರ ಬಿನ್ನಪದ ವಚನ:

ಮಾತುಳ್ಳನ್ನಕ್ಕರ ದೇಹ ಹಿಂಗದು, ನೆನಹುಳ್ಳನ್ನಕ್ಕರ ಪ್ರಾಣಸೂತಕ ಬಿಡದು. ಕಾಯಜೀವದ ಭ್ರಾಂತಿನ ಹೊಲಿಗೆಯ ಸಂದ ಬಿಚ್ಚಲಱಿಯೆನು. ನಿರ್ದೇಹಿಯೆಂದರೆ ನಗರೇ ನಿಮ್ಮ ಪ್ರಮಥರು? ಎನ್ನ ಅಂತರಂಗದಲುಳ್ಳ ಅವಗುಣವ ಹಿಂಗಿಸಿ, ನಿನ್ನಂತೆ ಮಾಡಿದಡೆ, ಆನು ಉಳಿವೆನಲ್ಲದೆ, ಬೇಱೆ ಗತಿಯ ಕಾಣೆ ನೋಡಯ್ಯ, ಕಪಿಲಸಿದ್ಧ ಮಲ್ಲಿನಾಥ, ಹಿಂದೆ ಇಲ್ಲದಡೇನು ಮುಂದೆ ತಪ್ಪದು. ೧೮೭- × -3-70.

ಈ ಬಿನ್ನಪಕ್ಕೆ, ಪ್ರಭುದೇವರು—ಮೆಚ್ಚಿ, ಆ ಸಿದ್ಧರಾಮಯ್ಯದೇವರ ಕೈವಿಡಿದು ಕೊಂಡು ಏಕಾಂತ ಸಮಾಧಿ ಸ್ಥಳಕ್ಕೆ ಬಿಜಯಂಗೆಯ್ದ ಪ್ರಸ್ತಾವದ ವಚನ:

ಅಹುದಹುದು ಭಕ್ತಿಭಾವದ ಭಜನೆ ಎಂತಿರ್ದುದಂತೆ. ಅಂತರಂಗದ ಅಱಿವಿಂಗೆ ಆಚಾರವೇ ಕಾಯ. ಆಚಾರಕಾಯವಿಲ್ಲದಿರೆ ಅಱಿವಿಂಗಾಶ್ರಯವಿಲ್ಲ. ಅಱಿವು

[1] (ಶಿ) ನೋಡಿದರೆ (ದೇಗೂಉ). [2] (ದೇಗೂಉ) × (ಶಿ).

ಆಚಾರದಲ್ಲಿ ಸಮವೇದಿಸಿದ ಲಿಂಗೈಕ್ಯನ ಕ್ರಿಯಾಬದ್ಧನೆಂದು ನುಡಿದರೆ, ಪಂಚ ಮಹಾ ಪಾತಕ. ನಿನ್ನ ಅಱಿವಿಂಗೆ ಅಚ್ಚಾಗಿ, ಆಚಾರಕ್ಕೆ ಆಳಾಗಿ, ನಮ್ಮ ಗೊಗೇಶ್ವರನು ನಿಮ್ಮ ಕೈವಶಕ್ಕೆ ಒಳಗಾದನು. ನಿನ್ನ ಸುಖಸಮಾಧಿಯ ತೋಱು ಬಾರ, ಸಿದ್ಧರಾಮಯ್ಯ. ೧೮೮-×-3-71.

ಇಂತು ಸಿದ್ಧರಾಮಯ್ಯದೇವರನು ಕೈವಿಡಿದುಕೊಂಡು, ಪ್ರಭುದೇವರು ಏಕಾಂತ ಸಮಾಧಿಗೆ ಬಿಜಯಂಗೆಯ್ದ ಪ್ರಸ್ತಾವದೊಳು, ಆ ಸಿದ್ಧರಾಮಯ್ಯ ತಂದೆಗಳು ಬಿನ್ನೈಸಿದ ವಚನ:

ಎಮ್ಮನಲ್ಲನೊಲಿದು [1]ಒಲಿಸಿ[1] ಕಾಡುತ್ತಿದ್ದರೆ, ಬಾರಾ ಬಾರಾ ಎಂದೆನ್ನ ಕರುಣ ಹರಣವ ತೋಱಿದರೆ, ತಾನೆ ಒಲಿದು ಬಂದೆನ್ನ ತಲೆಯ ಹಿಡಿದು, ಮನೆಗೆ ಬಂದ ಕಪಿಲ ಸಿದ್ಧಮಲ್ಲಿನಾಥನ ಒಲುಮೆಯ ಘನವನೇನೆಂದುಪಮಿಸುವೆನು ? ೧೮೯-೧೫೯-3-72.

ಇಂತು ಪ್ರಭುದೇವರು ಮಠಕ್ಕೆ ಬಿಜಯಂಗೆಯ್ದಲ್ಲಿ, ಸಿದ್ಧರಾಮಯ್ಯದೇವರು—ತಮ್ಮ ಹೃದಯಕಮಳವೆಂಬ ಸಿಂಹಾಸನವನಿಕ್ಕಿ, ಪಾದಾರ್ಚನೆಯ ಮಾಡಿ, ಅರ್ಚಿಸಿ, ಪೂಜಿಸಿ, ಪಾದೋದಕಮಂ ಕೊಂಡು, ಪರಮ ಹರುಷವನೆಯ್ದಿದ ಪ್ರಸ್ತಾಪದ ವಚನ:

ಅಯ್ಯಾ, ಅಯ್ಯಾ, ನೀವು ಬಾರದಿದ್ದರೆ ಹಂಬಲಿಸುತಿದ್ದೆ. ನೀವೆನ್ನ ಹಂಬಲ ಕೇಳಿ ಕರುಣದಿಂದ ಭೋರನೆ ಬಂದಡೆ, ಆನು ತಳವೆಳಗಾಗಿ, ಅವಗುಣವೆಂಬ ರಜವ ಕಳೆದು, ಕಂಬಳಿಯ ಪೀಠವನೊಲ್ಲದೆ, ಹೃದಯ ಪೀಠವನಿಕ್ಕಿ; ಮೇಲುಪ್ಪರಿಗೆಯ ಒಱತೆಯ ತಂದು ಪಾದಾರ್ಚನೆಯ ಮಾಡಿ, ಎರಡೆಸಳ ಕಮಲವನೆರಡು ಪಾದಕ್ಕೆ ಪೂಜಿಸಿ, ಕಂಗಳ ತಿರುಳ ತೆಗೆದು ಆರತಿಯನೆತ್ತಿ, ಉಸುರ ನುಂಗಿದ ಪರಿಮಳದ ಧೂಪವಂ ಬೀಸಿ, ನೆತ್ತಿಯ ಪರಿಯಾಣದೊಳಿಟ್ಟು ಬೋನವ ಗಡಣಿಸಿದರೆ, ಸಯದಾನ ಸವೆಯದೆ ಆರೋಗಣೆಯ ಮಾಡಿ, ಉಂಡ ಬಾಯ ತೊಳೆದರೆ ಸಂದೇಹ[2]ವಾದೂದೆಂದು[2], ಮೇಲು ಸೆಱಗಿನೊಳಗೆ [3]ತೊಡೆದು[3]ಕೊಂಡು, ಬಾಯ ಮುಚ್ಚುಳ ತೆಗೆಯದೆ, ತ್ರಿಕರಣವೆಂಬ ತಾಂಬೂಲವನಳವಡಿಸಿ, ಭಾವದ ಕಣ್ಣಡವ ಹಱಿದು ಹಾಯ್ಕಿದ—ಆತನ ಪಾದಕ್ಕೆ ನಾನು ಶರಣೆಂದು, ಪಾದೋದಕವ ಕೊಂಡೆ. ಆತನ ಪ್ರಸಾದಕ್ಕೆನ್ನ ಸೆಱಗ ಹಾಸಿ ಆರೋಗಿಸಿ ಸುಖಿಯಾದೆನು—ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ, ನಿಮ್ಮ ಶರಣ ಪ್ರಭುದೇವರ ಕರುಣವೆನಗೆ ಸಾಧ್ಯವಾದ ಪರಿಯನೇನೆಂದುಪಮಿಸುವೆನು. ೧೯೦-೧೬೦-3-74.

ಇಂತು ಪ್ರಭುದೇವರ ಶ್ರೀಪಾದವನೆ ಅಷ್ಟವಿಧಾರ್ಚನೆ ಷೋಡಶೋಪಚರಿಯದಿಂ ಪೂಜಿಸಿದ ಸಿದ್ಧರಾಮಯ್ಯದೇವರು—ಕೃಪೆಯಿಂದ ಎನ್ನ ಬೋಧಿಸಿ ಎಂದು ಬಿನ್ನೈಸುವ ವಚನ:

ಆದಿಯಲ್ಲಿ ನಿಮ್ಮಿಂದಲಾನಾದೆನಯ್ಯ. ಅನಾದಿಯಲ್ಲಿ ನಿಮ್ಮವನಾಗಿದ್ದೆನಯ್ಯ. ನಿಮ್ಮ

[1] ಒಲಿಸಿ (ಶಿಹ) ಒಲಿಸಿಬಲ್ಲದೆ (ದೇ). [2] (ಹ) (ಶಿ) (ಉ) ವಾದುದೆಂದು (ದೇ) [ವಾದಹುದೆಂದು ?]. [3] ತೊಳೆದು (ಶಿಗೂ) ತೊಡೆದು (ಅನ್ಯತ್ರ).

ಹಸ್ತ ಮುಟ್ಟದಲ್ಲಿ ನಿಮ್ಮನೆನ್ನ ಮನದೊಳಗಿಟ್ಟುಕೊಂಡಿದ್ದೆನಯ್ಯ. ಕಾಯವೆಂಬ ಕಪಟವನೊಡ್ಡಿ, ನಿನ್ನ ಮಱಸಿಕೊಂಡಿದ್ದರೆ, ನಿನ್ನ ಬೆನ್ನ ಬಳಿ ಸಂದು, ನಿಮ್ಮ ಕಂಡೆನಯ್ಯ. ಕಪಿಲಸಿದ್ಧಮಲ್ಲಿನಾಥಯ್ಯ, ಎನ್ನ ಅಂತರಂಗಶುದ್ಧನ ಮಾಡಿ ತಿಳುಹಾ, ನಿನ್ನ ಧರ್ಮ. ೧೯೧-೧೬೧-3-75.

ಇದಕ್ಕೆ ಪ್ರಭುದೇವರ ನಿರೂಪ:

ಆದಿಯಲ್ಲಿ ಗುರುಬೀಜವಾದ [1]ಪಿಂಡಕ್ಕೆ[1] ಅನಾದಿಯೆಂಬುದನೊಬ್ಬರು ತಿಳುಹಲುಂಟೆ? ಆದಿ ಕಾಯ, ಅನಾದಿ ಪ್ರಾಣವಾಗಿಪ್ಪ ಯೋಗವ ಭೇದಿಸಿ, ತನ್ನೊಳಗೆ ತಾನೆ ತಿಳಿದು ನೋಡಲು, ಕೋಹಮ್ಮೆಂಬುದು ತಾನೆ ಸತ್ಯ ನೋಡಾ! ಗೊಗೇಶ್ವರಲಿಂಗದ [2]ನಿಜವು[2] ಹೇಳಿ ಕೇಳಿ [3]ಕಂಡೆ[3]ನೆಂದರೆ ಅಸಾಧ್ಯ ಕಾಣಾ ಸಿದ್ಧರಾಮಯ್ಯ. ೧೯೨-೧೬೨-3-76.

ಹೀಗೆಂದು ಪ್ರಭುದೇವರು ನಿರೂಪಿಸಲು, ಸಿದ್ಧರಾಮಯ್ಯದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಎಲೆಯಯ್ಯ, ನಿಮ್ಮ ಬೆಳಗಿನ ಪರಿಯ ಕೇಳು ಕಂಡಾ! ನಾನಾರೆಂಬುದ ತಿಳಿದು, ಕಂಡ ಬೆಳಗ ಕಾಬ ಪರಿಯೆಂತು ಹೇಳಾ? ಕಂಡುದ ಕಂಡು, ಕಾಯದೊಳಗೆ ಸಂತವಿಡುವ ಪರಿಯೆಂತಯ್ಯ. ಕಪಿಲಸಿದ್ಧಮಲ್ಲಿನಾಥಯ್ಯ, ನೀವೆನ್ನ ಮನವ ತಿಳುಹುವಡೆ, ಅಸಾಧ್ಯ ಉಂಟೆ ದೇವರ ದೇವ? ೧೯೩-೧೬೩-3-77.

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ವಚನ:

ತನ್ನ ನಱಿಯೆನೆಂಬುದು ಅಜ್ಞಾನ ನೋಡಾ! ಅಱಿಯದ ಅಜ್ಞಾನವನತಿಗಳೆ[4]ದು[4] ಜ್ಞಾನವ ಕಾಣೆನೆಂಬುದು [5]ವಿಪರೀತ[5]ಭಾವ ನೋಡಾ! ಎಲ್ಲವನೂ ತೋಱುವ ಘನವನೆಲ್ಲಿಯೂ ಕಾಣಬಾರದು, ಕಾಣಬಾರದ ನಿಜವ ತೋಱಬಾರದು, ತೋಱಬಾರದ [6]ಮಹವ[6] ತಿಳುಹ ಬಹುದೇ? ಗೊಗೇಶ್ವರಲಿಂಗದಲ್ಲಿ ಬವಕೆ ಉಳ್ಳನ್ನಕ್ಕರ, ತವಕವೆಡೆಗೊಂಡಿಪ್ಪ ಕಾರಣ, ತಿಳುಹಲಿಲ್ಲವೆಂಬುದ ನಿನ್ನ ನೀನೇ ತಿಳಿದು ನೋಡಾ, ಸಿದ್ಧರಾಮಯ್ಯ. ೧೯೪-೧೬೪-3-78.

ಹೀಗೆಂದು ಪ್ರಭುದೇವರು ನಿರೂಪಿಸಲು, ಸಿದ್ಧರಾಮಯ್ಯದೇವರು ನಿರೂಪಿಸಿದ ಪ್ರಸ್ತಾವದ ವಚನ:

ಕಂಡ ಕನಸು ದಿಟವಾಗಿ, ಕಂಡೆನೆಂಬುದು ಬೆನ್ನ ಬಿಡದು ನೋಡಾ! ಕಂಡುದ, ಕಾಣೆನೆಂಬುದ, ಎರಡನು ಅಱಿಯದೆ, ತವಕತಲ್ಲಣಕ್ಕೆ ಎಡೆಯಾದೆನು. ತವಕದ ಕೂಟ

---

1 (ಶಿದೇಗೂಉ) ಕಾಯಕ್ಕೆ (ಹ). 2 (ಶಿಹ) (ದೇ) ನಿಲವು (ಗೂಉ). 3 (ಶಿಹ) ಕಂಡಿಹೆ (ಗೂಉ) ಕಂಡೆಹೆ (ದೇ) [=ಕಂಡಹೆ]. 4 (ಹಗೂ) ದ (ಶಿದೇ). 5 ಪತಿತ (ದೇ). 6 ಸಹಜವ (ಹ) ನಿಜವ (ದೇ).

ನಿನ್ನಲ್ಲಿ ತದುಗತವಾದೆನು, ಕಪಿಲಸಿದ್ಧಮಲ್ಲಿನಾಥಯ್ಯ, ನಿಮ್ಮ ಕರುಣವೆನಗೆ ಸಾಧ್ಯವಾಯಿತ್ತಾಗಿ. ೧೯೫-೧೬೫-3-79.

ಕೂಡುವ ತವಕ[1][ದೆ][1] ನಿಮ್ಮಲ್ಲಿ ಸಮರಸವಾದೆನೆಂದರೆ, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಬಯಕೆಯೆಂಬುದು ದೂರದ ಕೂಟ, ಬಯಸೆನೆಂಬುದು ಕೂಟದ ಸಂದು, ಈ ಉಭಯವೂ [2]ಕಪಟ[2]-ಕಣ್ಣಡವಲ್ಲದೆ ಸಹಜವಲ್ಲ. ಕೂಡಿ ಕಂಡ ಪರಿಯೆಂತು ಹೇಳಾ ಇನ್ನು ಲಿಂಗೈಕ್ಯವನು!? ಕೂಪ ಠಾವಿನಲ್ಲಿ ಪರವಶ[3]ನಾ[3]ದೆನೆಂಬ ಮಾತ ಮೆಚ್ಚುವನೆ ನಮ್ಮ ಗೊಗೇಶ್ವರಲಿಂಗ. ೧೯೬-೧೬೭-3-80.

ಇಂತು, ಲಿಂಗದಲ್ಲಿ ಕೂಪವರಾಗಿದ್ದಲ್ಲಿ ಭೇದಬುದ್ಧಿ ಎಡೆಗೊಂಡಿಪ್ಪುದಲ್ಲದೆ ಸಮರಸ ಭಾವವಿಲ್ಲೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಸಿದ್ಧರಾಮಯ್ಯದೇವರು ನಿರೂಪಿಸಿದ ಪ್ರಸ್ತಾವದ ವಚನ:

ನೀ ಕೂಪನಾಗಿದ್ದಲ್ಲಿ ಕೂಪೆ ನೋಡಯ್ಯ. ನೀ ಒಲ್ಲದೆ ಇದ್ದರೆ ಒಲ್ಲೆ ನೋಡಯ್ಯ. ಎನ್ನ ಅಱಿವು ಮಱವೆ ಇಬ್ಬರಿಗೂ ಸರಿ ನೋಡಾ! ಎನ್ನ ಬಯಕೆಯೊಳಗಣ ಬೈಕೆಯ ನಿಧಾನ ನೀನೆಂದು ಕಂಡ ಬಳಿಕ ಬಯಸುವಾತನು ನೀನೆ ಕಾಣಾ ಕಪಿಲಸಿದ್ಧ ಮಲ್ಲಿನಾಥಯ್ಯ. ೧೯೭-೧೬೮-3-81.

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು, ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಬಯಸುವ ಬಯಕೆ ನೀನಾದ ಪರಿಯೆಂತು ಹೇಳಾ? ಅಱಿಸುವ ಅಱಿಕೆ ನೀನಾದ ಪರಿಯೆಂತು ಹೇಳಾ? ಕಾಯವೇ ಲಿಂಗ, ಪ್ರಾಣವೇ [4]ಜಂಗಮವಾದ[4] ಶರಣಂಗೆ ಬೇಱೆ[3] ದೇವಾಲಯವ ಮಾಡಿಸಲೇಕೆ ಹೇಳಾ? ಗೊಗೇಶ್ವರ ಲಿಂಗವು ಸಾಧ್ಯವಾಯಿತ್ತೆಂಬುದ ಮಾತಿನಲ್ಲಿ ಕಂಡೆನಲ್ಲದೆ, ಕಾರ್ಯದಲ್ಲಿ ಕಾಣೆ ನೋಡಾ ಸಿದ್ಧರಾಮಯ್ಯ ೧೯೮-೧೬೯-3-82.

ಹೀಗೆಂದು ಪ್ರಭುದೇವರು ನಿರೂಪಿಸಲು, ಸಿದ್ಧರಾಮಯ್ಯದೇವರು ನಿರೂಪಿಸಿದ ಪ್ರಸ್ತಾವದ ವಚನ:

ಅಣುವಿನೊಳಗೆ ಅಣುವಾಗಿಪ್ಪಿರೆಲೆ ದೇವ, ನೀವು ಮನದೊಳಗೆ ಘನವಾಗಿ ಇಪ್ಪೆಯಯ್ಯ. [5]ಜಗದೊಳಗೆಲ್ಲಿಯೂ[5] ನೀನಿಲ್ಲದೆಡೆಯುಂಟೆ? ಎಂಬತ್ತುನಾಲ್ಕು ಲಕ್ಷ ಶಿವಾಲಯಂಗಳ ನೀವು ಮಾಡಿ ಒಳಗಿಪ್ಪುದ ಕಂಡು, ನಾನು ಮಾಡಿದೆನಲ್ಲದೆ, ಕಪಿಲಸಿದ್ಧ ಮಲ್ಲಿನಾಥಯ್ಯ ಬೇಱೆ[3] ಸ್ವತಂತ್ರವಱಿಯೆ. ೧೯೯-೧೭೦-3-83.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

ಕಡೆನಾಡ ಲಿಂಗವ ನಡುನಾಡಿಗೆ ತಂದೆನೆಂಬ ಅಹಂಕಾರವ ಮುಂದುಗೊಂ[6]ಡಿದ್ದೆ[6]

[1] ವೆ (ಸರ್ವತ್ರ). [2] (ಹದೇ) ಕಲ್ಪದ (ಶಿ). [3] (ಶಿ) ವಾ (ಅನ್ಯತ್ರ). [4] (ಹ) ಶರಣನಾದ (ಅನ್ಯತ್ರ). [5] (ಹಗೂ) ಜಗವೆಲ್ಲಿಯೂ (ಶಿ). [6] (ಶಿ ಗೂ ದೇ) ಡೆ (ಹ).

ಯಲ್ಲಾ ? ಎಂಬತ್ತುನಾಲ್ಕು ಲಕ್ಷ ಶಿವಾಲಯವೆಂಬ ಬಯಲು ಭ್ರಮೆ ಎಲ್ಲಿಯದು ಹೇಳಾ? ಮಹಾಘನಲಿಂಗಕ್ಕೆ ಜಗದ ಜೀವರಾಶಿಗಳು ಶಿವಾಲಯವಾಗಬಲ್ಲವೆ? ನಿನ್ನೀ ಲಕ್ಷದ ಮೇಲೆ ತೊಂಬತ್ತಾಱು ಸಾವಿರ ಲಿಂಗವ [1]ನಿನ್ನ ಎದೆಯಲ್ಲಿ ಇಱಿದುಕೊಳ್ಳೈ[1]! ಗೊಗೇಶ್ವರ ಲಿಂಗವು ತನ್ನ ತಪ್ಪಿಸಿಕೊಂಡು ಹೋಹುದ ಮಱೆದೆಯಲ್ಲಾ ಮರುಳು ಸಿದ್ಧರಾಮಯ್ಯ. ೨೦೦-೧೭೩-3-84.

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಸಿದ್ಧರಾಮಯ್ಯದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಸಕಲ ಲಿಂಗವ ಹಿಡಿದು ಅಗಲದೆ ನಡೆಯೆಂದಿರಾಗಿ ನಡೆವುತ್ತಿದ್ದೆನು. ಲಿಂಗ ಪ್ರತಿಷ್ಠೆ ಮಾಡೆಂದು ಎನಗೆ ನಿರೂಪಿಸಿದ ಕಾರಣ, ಮಾಡುತ್ತಿದ್ದೆನಲ್ಲದೆ, ಎನಗೆ ಬೇಱೆ ಸ್ವತಂತ್ರ ಉಂಟೇ? ಹಿಂದೆ ನೀವು ಕೊಟ್ಟ ನಿರೂಪ ನಿಮಗೆ ಹುಸಿಯಾದರೆ, ಇನ್ನು ಮುಂದೆ ಸಯವಪ್ಪಂತೆ ನಡೆಸಾ, ಕಪಿಲಸಿದ್ಧ ಮಲ್ಲಿನಾಥಯ್ಯ. ೨೦೧-೧೭೪-3-85.

ನಾನೇನ [2]ಮಾಡುವುದೆಲ್ಲವೂ[2] ನೀವೆಂದೆ ಇದ್ದೆನಯ್ಯ. ನಾನೇನ ಮಾಡಿದುದನೆಲ್ಲವನೂ ನೀನೆಯಲ್ಲವೆಂದರೆ, ಅದು ಮಾಣಲಿ, ಮಾಣಲಿ, ನಿಮ್ಮಾಣತಿ. ಕಾಣಬಾರದ ಘನವ ಕಾಯದಲ್ಲಿ[3]ರಿಸಿ[3], ಹೇಳಬಾರದ ನಿಜವ ಮನದಲ್ಲಿ ನೆಲೆಗೊಳಿಸಿ, ತೋಱಬಾರದ ಕುಱುಹನೆನ್ನ ಅಱಿವಿನಲ್ಲಿರಿಸಿ, ಇನ್ನು ನಿಮ್ಮ ಕಾಂಬಂತೆ ಮಾಡಾ, ಕಪಿಲಸಿದ್ಧ ಮಲ್ಲಿನಾಥ. ೨೦೨-೧೨೫-X

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ತೋಱಬಾರದ ಘನವ ಹೇಳಲೆಂದೇನಯ್ಯ, ಹೇಳಬಾರದ ಘನವ ತೋಱಲೆಂದೇನಯ್ಯ. ಸ್ವರದ ಸಂಧಾನದ ಪರಿಯಲ್ಲ ನೋಡಾ! ಗೊಗೇಶ್ವರ ಲಿಂಗವು ಕಲ್ಪಿತವಲ್ಲ ನೋಡಯ್ಯ. ೨೦೩-೧೭೮-X

ಪರಬ್ರಹ್ಮವೆಂಬುದನು ಕಲ್ಪಿಸಿ ಹೇಳಬಾರದೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಸಿದ್ಧರಾಮಯ್ಯದೇವರು ಬಿನ್ನೈಸಿದ ವಚನ:

ಬೆರಸಿ ಬೆಚ್ಚಾತನ ಕಂಡೆನೆಂಬೆನಯ್ಯ! ಆತನ ಬಟ್ಟೆಯ ಕಾಣೆ ನೋಡಯ್ಯ! ಶರೀರ ವಿಡಿದಿಪ್ಪ ಶತಕೋಟಿ ಜೀವಂಗಳ ಭೇದವನಱಿಯೆನು, ನಿಮ್ಮ ನಾನೆತ್ತ ಬಲ್ಲೆನಯ್ಯ? ನೀವು ಮಾಡಿದ [4]ಬೆಂಬಳಿ[4] ಹೊರೆಗಾಣಲಾಪೆನಲ್ಲದೆ, ನಾ ಬೇಱೆ ಕಾಬುದು ಹುಸಿ. ನೀನೆ ತೋಱಯ್ಯ ಎನಗೆ ಕಪಿಲಸಿದ್ಧ ಮಲ್ಲಿಕಾರ್ಜುನ. ೨೦೪-೧೭೯-3-102.

---

[1] ಇಷ್ಟು ಬರವಣಿಗೆಗೆ ಬೇಕಾದ ಜಾಗ ಶಿ ಪ್ರತಿಯಲ್ಲಿ ಖಾಲಿ ಇದೆ. ಬಹುಶಃ ಇದರ ಮೂಲ ಪ್ರತಿಯಲ್ಲಿ ಗ್ರಂಥಪಾತವೋ ತ್ರುಟಿತವೋ ಆಗಿದ್ದಿರಬಹುದು. ಆದರೆ "ಹ" ಪ್ರತಿಯಲ್ಲಿ ಹಾಗಾಗಿಲ್ಲ. ಇರಬೇಕಾದ ಪಾಠವಿದೆ. ಅದೇ ಪಾಠ ದೇ ಗೂ ಮುಂತಾದ ಪ್ರತಿಗಳಲ್ಲಿ ಬಂದಿದೆ. [2] ಮಾಡುವುದೆಲ್ಲವನೂ (ದೇ) ಮಾಡುವುದನೆಲ್ಲವನು (ಶಿ). [3] (ಹ ದೇ ಗೂ) ಧರಿಸಿ (ಶಿ). [4] (ಶಿ) ಬೆಂಬಳಿಯ (ಹ) ಬೆಂಬಳಿಯಲ್ಲಿ (ಗೂ) (ದೇ).

ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ:

ಅಭ್ಯಾಸದ ಮಾತಲ್ಲ. ಶ್ರೋತ್ರದ ಸುಖವಲ್ಲ. ಶಾಸ್ತ್ರದ ಅನುಭವದ ಮಾತಲ್ಲ. ಒಳಗಣ ಮಾತಲ್ಲ. ಹೊಱಗಣ ಮಾತಲ್ಲ. ಇದಱಂಗವನಱಿಯದೆ ಅನುಭವವ ಮಾಡಿ ಫಲವೇನು ಹೇಳಾ! ಗೊಗೇಶ್ವರ ಲಿಂಗವು ಉಪಮಾತೀತ ನೋಡಾ ಸಿದ್ಧರಾಮಯ್ಯ, ೨೦೫-೧೮೧-3-103.

ಇಂತು ಪರಬ್ರಹ್ಮವೆಂಬುದನು ಆರಿಗೂ ತೋಱಬಾರದು, ಉಪಮಾತೀತವೆಂದು ಪ್ರಭುದೇವರು ನಿರೂಪಿಸಲು ಇದಕ್ಕೆ ಸಿದ್ಧರಾಮಯ್ಯದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಉಪಮೆ-ಅನುಪಮೆ ಎಂಬುದು ನಿಮ್ಮಾಧೀನ ಕಂಡಯ್ಯ, ಹೇಳಿಹೆ-ಕೇಳಿಹೆನೆಂಬುದು ನೀನೆ ಕಂಡಯ್ಯ! ಎನ್ನ ಅಂತರಂಗ ಬಹಿರಂಗಕ್ಕೆ ನೀನೆ ಕರ್ತನಾದ ಕಾರಣ, ನಿಮ್ಮ ನಿಜವ ಹೇಳದಿರ್ದಡೆ ಎಂತುಳಿವೆನಯ್ಯ, ಕಪಿಲಸಿದ್ಧ ಮಲ್ಲಿನಾಥಯ್ಯ? ೨೦೬-೧೮೫-3-104.

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು, ಪ್ರಭುದೇವರು—ಕಾಯ-ಜೀವದ ಸಂದು-ಭೇದವ ವಿವರಿಸಿ ಬೋಧಿಸುತ್ತಿದ್ದ ಪ್ರಸ್ತಾವದ ವಚನ:

ದೇಹಭಾವವಳಿದಲ್ಲದೆ, ಜೀವಭಾವವಳಿಯದು. ಜೀವಭಾವವಳಿದಲ್ಲದೆ, ಭಕ್ತಿ ಭಾವವಳವಡದು. ಭಕ್ತಿಭಾವವಳವಟ್ಟಲ್ಲದೆ, ಅಱಿವು ತಲೆದೋಱದು. ಅಱಿವು ತಲೆದೋಱಿದಲ್ಲದೆ, ಕುರುಹು ನಷ್ಟವಾಗದು. ಕುರುಹು ನಷ್ಟವಾದಲ್ಲದೆ, ಮಾಯೆ ಹಿಂಗದು. ಅದು ಕಾರಣ, ಕಾಯದ ಜೀವದ ಹೊಲಿಗೆಯ ಅಳಿದ ಭೇದವ ತಿಳಿಯ ಬಲ್ಲರೆ, ಗೊಗೇಶ್ವರ ಲಿಂಗದ ಅಱಿವು ಸಾಧ್ಯವಪ್ಪುದು ಕಾಣ ಸಿದ್ಧರಾಮಯ್ಯ. ೨೦೭-೧೮೬-3-106.

ಕಾಯ-ಜೀವದ ಸಂದು-ಭೇದವ ತಿಳಿದು ನೋಡಿದರೆ ನಿಜವು ಸಾಧ್ಯವಹುದೆಂದು ಪ್ರಭುದೇವರು ನಿರೂಪಿಸಲು, ಸಿದ್ಧರಾಮಯ್ಯದೇವರು ಬಿನ್ನೈಸಿದ ವಚನ:

ನೀರ-ಕ್ಷೀರದ ಸಂದುಗಳ ಹಂಸೆ ಬಿಚ್ಚಬಲ್ಲುದು, ನೋಡಯ್ಯ. ದೇಹ-ಜೀವದ ಸಂದ ನೀವು ಬಿಚ್ಚಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯ? ನೀನಿಕ್ಕಿದ ತೊಡಕ ಬಿಡಿಸ ಬಾರದು, ನೀವು ಬಿಡಿಸಿದ ತೊಡಕನಿಕ್ಕಬಾರದು. ಕಪಿಲಸಿದ್ಧ ಮಲ್ಲಿನಾಥಯ್ಯ, ನೀನೇ ಎನ್ನ ಕಾಯದ ಜೀವದ ಹೊಲಿಗೆಯ ಬಿಡಿಸಾ ನಿಮ್ಮ ಧರ್ಮ. ೨೦೮-೧೮೭-3-107.

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಕಾಯದ ಕಳವಳ ಕಾಣೆನೆಂದಲ್ಲಿಯೆ ತಪ್ಪಿತ್ತು. ಜೀವದ ದುಷ್ಕೃತ ದೂರವೆಂದಲ್ಲಿಯೆ ತಪ್ಪಿತ್ತು. ಕಾಯಜೀವನೆಂಬ ಸೂತಕ ಮನ ನಿರ್ಮಲವಾದಲ್ಲಿಯೆ ಅಳಿಯಿತ್ತು. ಗೊಗೇಶ್ವರನೆಂಬ ಲಿಂಗವನಱಿಯಬೇಕಾದರೆ, ನಿನ್ನ ಒಳಗ ತೊಳೆದು ನೋಡಾ, ಸಿದ್ಧ ರಾಮಯ್ಯ. ೨೦೯-೨೧೫-3-108.

ನಿನ್ನ ಒಳಗ ತೊಳೆದು ನಿರ್ಮಳವ ಮಾಡಲು, ಸರ್ವಸಂದೇಹವೂ ಅಳಿದು, ಶಿವ ತತ್ವ ಸಾಧ್ಯವಪ್ಪುದೆಂದು ನಿರೂಪಿಸಲು; ಇದಕ್ಕೆ ಸಿದ್ಧರಾಮಯ್ಯದೇವರ ಬಿನ್ನಪದ ವಚನ:

ಅಯ್ಯ, ಮನದ ರಜದ ಮಣ್ಣು [1][ಕಳೆದುದಯ್ಯ][1]. ಶಾಂತಿಯುದಕದಲ್ಲಿಕ್ಕಿ ತೆಗೆವೆನಯ್ಯ, ಜಳಕವನೆ ಮಾಡಿ ಯೋಗಕಂಪನಿಕ್ಕಿ ಹೊದೆವೆನಯ್ಯ, ಅದನೊಂದೆಡೆಗೆ ತಂದು ಬಟ್ಟಗಾಣದಲ್ಲಿಕ್ಕಿ ಹಿಳಿವೆನಯ್ಯ, ಹಿಳಿದ ರಸದ ಕಂಪ [2]ತೊಡೆವ[2] ಒಡೆಯ ನೀನೆ ಕಪಿಲಸಿದ್ಧ ಮಲ್ಲಿನಾಥ. ೨೧೦-೨೧೬-3-109.

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಮನವ ತೊಳೆದು ನಿರ್ಮಲವ ಮಾಡಿಹೆನೆಂಬ ಯೋಗವೆಂತುಟೋ! ಮನವ ಹಿಡಿದು ತಡೆದಹೆನೆಂಬವರ ಮರುಳಾಗಿ ಕಾಡಿತ್ತು ನೋಡಾ ಮನವು! ಮನ ವಿಕಲ್ಪಜ್ಞಾನದಿಂದಱಿದು ಅದ ಶುದ್ಧವ ಮಾಡಿಹೆನೆಂಬುದು ತಾನೆ ಮನ ನೋಡಾ! ನಮ್ಮ ಗೊಗೇಶ್ವರ ಲಿಂಗದ ಅನುವನಱಿದಹೆನೆಂಬವರು ಮನವಿಲ್ಲದಿರಬೇಕು ನೋಡಾ ಸಿದ್ಧರಾಮಯ್ಯ. ೨೧೧-೨೧೭-3-110.

ಇದಕ್ಕೆ ಸಿದ್ಧರಾಮಯ್ಯ ದೇವರ ಪ್ರತ್ಯುತ್ತರ:

ಮನವೆಂಬ ಸಂಕಲ್ಪವನಱಿಯೆನು, ಸಂಕಲ್ಪ ಸಿದ್ಧಿಯಾಯಿತ್ತಾಗಿ. [3]ಸಂಕಲ್ಪ[3] ಸಂಬಂಧವನಱಿಯೆನು, ನಿಮ್ಮ ವಿಚಾರವೆಡೆಗೊಂಡಿತ್ತಾಗಿ. ನಿಮ್ಮ ವಿಚಾರವೆ ಅಂತರಂಗದೊಳಗೆ ತುಂಬಿತ್ತಾಗಿ, ಎನ್ನ ಮನದ ಮುಂದೆಲ್ಲಾ ನೀವೆಯಾಗಿದ್ದಿರಯ್ಯ, ಕಪಿಲಸಿದ್ಧ ಮಲ್ಲಿಕಾರ್ಜುನ. ೨೧೨-೨೧೮-3-111.

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ವಿಚಾರವೆಂಬುದು ಸಂದೇಹಕ್ಕೊಳಗು ನೋಡಾ! ವಿಚಾರಿಸುವನ್ನಕ್ಕರ ನೀನಾರೆಂಬುದನೆತ್ತ ಬಲ್ಲೆ ಮರುಳೆ? ವಾಙ್ಮನೋತೀತನಾದ ಘನವು [4]ವಿವೇಕಕ್ಕೆ[4] ನಿಲುಕುವುದೆ? ಗೊಗೇಶ್ವರಲಿಂಗವು ತನ್ನ ತಿಳಿದು ನೋಡಿಹೆನೆಂಬವರ ವಿಚಾರವೆಂಬ ಬಲೆಯಲ್ಲಿ ಕೆಡಹಿದನು. ೨೧೩-೨೧೯-3-112.

ಇದಕ್ಕೆ ಸಿದ್ಧರಾಮಯ್ಯದೇವರ ಬಿನ್ನಪದ ವಚನ:

ವಿವೇಕವೆಂಬುದು ಬೆಱೆಯಿಲ್ಲ ಕಂಡಯ್ಯ! ವಿವೇಕನವನಾಳದ ಶುದ್ಧವ ತೊಡೆದು ಸುನಾಳಶುದ್ಧವ ಮಾಡುವೆ. ಅಷ್ಟದಳಕಮಲವನೂರ್ಧ್ವಮುಖವ ಮಾಡಿ, ನಿಜಪದದಲ್ಲಿ ನಿಲಿಸಿದೆ. ಐವತ್ತೆರಡಕ್ಷರವ ತಿಳಿದು ನೋಡಿ, ಏಕಾಕ್ಷರದಲ್ಲಿ ನಿಲಿಸಿದೆ. ಕಪಿಲಸಿದ್ಧ ಮಲ್ಲಿನಾಥ, ಎನ್ನ ವಿಚಾರದ ಹವಣ ನೀನೇ ಬಲ್ಲೆ. ೨೧೪-೨೨೦-3-113.

---

[1] (ಗೂ R. ಅ. ಇ. ಈ.) ಕಳೆದುದಯ (ಶಿಹಗೂ). [2] (ಶಿ) ಕೊಡುವ (ಹ ಗೂ ದೇ). [3] (ಶಿ) ಸಂಕಲ್ಪವೆಂಬ (ಅನ್ಯತ್ರ). [4] (ಶಿ ಹ ದೇ) ವಿಚಾರಕ್ಕೆ (ಗೂ).

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ :

ಯೋಗ-ವಿಯೋಗವೆಂಬ ಹೊಲಬ ಬಲ್ಲವರನಾರನೂ ಕಾಣೆ : ನವನಾಳದ ಸುಳುಹ ತಿಳಿದಹೆನೆಂಬುದು ಯೋಗವಲ್ಲ. ಐವತ್ತೆರಡಕ್ಷರ ಶಾಸನವನೋದಿ ನೋಡಿ, ಹೃದಯ ಕಮಲಕರ್ಣಿಕೆಯಲ್ಲಿ ಸಿಲುಕಿದೆನೆಂಬುದು ಯೋಗವಲ್ಲ. ಬಹಿರಂಗವೆಂಬರೆ ಕ್ರಿಯಾ ರಹಿತ, ಅಂತರಂಗವೆಂಬರೆ ವಾಙ್ಮನೋತೀತ. ಗೊಗೇಶ್ವರನೆಂಬ ಲಿಂಗವು ಷಡುಚಕ್ರದ ಮೇಲೆ ಇಲ್ಲ, ನಿಲ್ಲು [1]ಮಾಣಾ[1] ಸಿದ್ಧರಾಮಯ್ಯ. ೨೧೫-೨೨೧-3-114.

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಸಿದ್ಧರಾಮಯ್ಯದೇವರು ಬಿನ್ನೈಸಿದ ಪ್ರಸ್ತಾವದ ವಚನ :

ಅಂತರಂಗದಲ್ಲಿ ನಿಮ್ಮ ನೋಡುವನಲ್ಲ ಕೇಳು ಕಂಡಾ, ಎಲೆಯಯ್ಯ. ಬಹಿರಂಗದಲ್ಲಿ ಬಳಸುವನಲ್ಲ, ಕೇಳು ಕಂಡಾ ಎಲೆಯಯ್ಯ. ಸುಷುಮ್ನನಾಳದ ಬಟ್ಟೆಯ ತುದಿಯನಡರಿ ಸಾವಿರದಳ ಮಂಟಪದಲ್ಲಿ ನಿಮ್ಮ ನೆಲೆ[2]ಗಂಡಿ[2]ಪ್ಪೆ ನೋಡಾ ! ಕಪಿಲಸಿದ್ಧ ಮಲ್ಲಿನಾಥಯ್ಯ. ೨೧೬-೨೨೨-3-115.

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ :

ಸ್ವಸ್ಥ ಪದ್ಮಾಸನದಲ್ಲಿ ಕುಳ್ಳಿರ್ದು, ನೆಟ್ಟೆಲುವ ಮುಱಿದು, ನಿಷ್ಠೆಯಿಂದ ಹಿಂದಣ ಬಟ್ಟೆಯ ತೆಗೆದು, ಅಮೃತವನುಂಡಿಹೆನೆಂಬವರು ಕೆಟ್ಟ ಕೇಡಿಂಗೆ ಕಡೆಯಿಲ್ಲ. ಅತ್ಯತಿಷ್ಠದ್ದ ಶಾಂಗುಲ[3]ನೆಂಬ[3] ಶ್ರುತಿಯ ನೋಡಲು, ಮುಟ್ಟ ನೆಲೆಗೊಳಿಸುವ ಠಾವುಂಟೆ ? ಸ್ಥಾನ ಮಾನವೆಂಬ ಮಾತಿಂಗೆ ದೂರವಾದ ಘನವ ಬ್ರಹ್ಮರಂಧ್ರದಲ್ಲಿ ಕಂಡೆನೆಂದರೆ, ಕಾಣ ಬಹುದೇ ? ನಮ್ಮ ಗೊಗೇಶ್ವರ ಲಿಂಗವು ಕಲ್ಪಿತಕ್ಕೆ ದೂರ ಕೇಳಾ ಸಿದ್ಧರಾಮಯ್ಯ. ೨೧೭-೨೨೫-3-116.

ಪರಬ್ರಹ್ಮವನು ಬ್ರಹ್ಮರಂಧ್ರದಲ್ಲಿ ನೆಲಗೊಳಿಸಿದೆನೆಂಬುದು ಕಲ್ಪಿತವಲ್ಲದೆ ನಿರ್ವಿ ಕಲ್ಪಿತವಲ್ಲಾ ಎಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಸಿದ್ಧರಾಮಯ್ಯದೇವರು ಬಿನ್ನೈಸಿದ ಪ್ರಸ್ತಾವದ ವಚನ :

ನಾ ನಿನ್ನ ರೂಪ ವಿಚಾರಿಸುವನಲ್ಲ ಕೇಳಾ ! ನಿನ್ನ ಧ್ಯಾನದಲ್ಲಿಪ್ಪವನಲ್ಲ ನೋಡಾ ! ಅತ್ಯತಿಷ್ಠದ್ದಶಾಂಗುಲದಲ್ಲಿ ನಿಮ್ಮನಿರಿಸಿ, ನಾನೊಂದೆಡೆಯಲ್ಲಿ ಇಪ್ಪೆನೋಡಾ ! ಓಂಕಾರ ವೆಂಬ ಪೀಠಿಗೆ ನಾನಾಗಿ, ನಿಶ್ಶಬ್ದವೆಂಬ ಲಿಂಗವ ನೆಲೆಗೊಳಿಸಿ, ಬೆರಸಿ ಬೇಱಿಲ್ಲದೆ ಇಪ್ಪೆ ನೋಡಯ್ಯ, ಕಪಿಲಸಿದ್ಧ ಮಲ್ಲಿನಾಥ ನೀನು ಪ್ರಣವರೂಪಿಯಾಗಿ. ೨೧೮-೨೨೬-3-117.

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ :

---

[1] (ಶಿಹ) ಕಾಣಾ (ಗೂ ದೇ). [2] (ಶಿ ದೇ) ಗೊಂಡಿ (ಹ ಗೂ). [3] (ಶಿ) ವೆಂಬ (ಅನ್ಯತ್ರ).

ಬಿಂದುವೇ ಪೀಠವಾಗಿ, ನಾದವೇ ಲಿಂಗವಾದರೆ, ಅದು ಭಿನ್ನಲಿಂಗ ನೋಡಾ! ಕಳೆಯೆಂಬ ಪೂಜೆ ನಿರ್ಮಾಲ್ಯವಾಗಿ ನಾದ-ಬಿಂದು-ಕಳಾತೀತ ನೋಡಾ! ಮಹಾ ಘನಲಿಂಗೈಕ್ಯವು ಅಲ್ಲಿ ಇಲ್ಲಿ ಸಿಲುಕದು. ಅಚಳವಪ್ಪ ನಿರಾಳವ ಪ್ರಣವರೂಪೆಂದು ಹೆಸರಿಡಬಹುದೇ? ನಮ್ಮ ಗೊಗೇಶ್ವರನ ನಿಲವು—ನಿಶ್ಶಬ್ದಂ ಬ್ರಹ್ಮ ಉಚ್ಯತೇ, ಎಂಬುದನಱಿಯಾ ಸಿದ್ಧರಾಮಯ್ಯ. ೨೧೯-೨೨೭-3-118.

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಸಿದ್ಧರಾಮಯ್ಯ ದೇವರು ಬಿನ್ನೈಸಿದ ಪ್ರಸ್ತಾವದ ವಚನ:

ನಾದ-ಬಿಂದುವೆಂಬಲ್ಲಿ ಅಂಗ-ಲಿಂಗಸಂಬಂಧವೆಂಬೆನಯ್ಯ. ನಾದ ಪ್ರಾಣ, ಬಿಂದು ಕಾಯವಾದ ಕಾರಣ, ನಾದ ಸ್ವರವಲ್ಲ, ಬಿಂದು ಕಾಯವಲ್ಲ. ಉಭಯಸೂತಕವೆಂಬುದು ರಹಿತ ಕಂಡಯ್ಯ. ನಾದ-ಬಿಂದುವಿನ ಒಡ್ಡ ತೋಱಿ ಮನಮಗ್ನವಾದ ನಿಲವ, ಕಪಿಲಸಿದ್ಧ ಮಲ್ಲಿನಾಥ, ನೀವೇ ಬಲ್ಲಿರಿ. ೨೨೦-೨೨೮-3-119.

ನಾದ-ಬಿಂದು-ಕಳಾತೀತವಾದ ಮಹಾಘನದೊಳಗೆ ಮನಮಗ್ನವಾಗಿದ್ದೆನೆಂದು ಸಿದ್ಧ ರಾಮಯ್ಯದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದಪ್ರಸ್ತಾವದ ವಚನ:

ಅಱಿವನಱಿದು, ಮಱಹ ಮಱೆದು, ಸಂಕಲ್ಪ ಸಂಶಯವಳಿದು, ನಿಲವನಱಿದ ಪರಿಯೆಂತು ಹೇಳಾ! ಅಱಿದೆನೆಂದರೆ ಜ್ಞಾನಕ್ಕೆ ದೂರ, ಮಱೆದೆನೆಂದರೆ ಮನಕ್ಕೆ ದೂರ; ಅಱಿದು ಮಱೆದೆನೆಂದರೆ ಉಪಮೆಗೆ ದೂರ. ನಿರ್ಭಾವದ ಹೊಲಿಗೆಯಲ್ಲಿ ಭಾವಸಂಕಲ್ಪ ಬಿಡದು. ನಮ್ಮ ಗೊಗೇಶ್ವರ ಲಿಂಗದಲ್ಲಿ ಮನಮಗ್ನಯೋಗ ನಿನಗೆಂತು ಸಾಧ್ಯವಾಯಿತ್ತು ಹೇಳಾ ಸಿದ್ಧರಾಮಯ್ಯ? ೨೨೧-೨೨೯-3-120.

ಈ ಉತ್ತರದ ಶಿವಾನುಭಾವಕ್ಕೆ ಸಿದ್ಧರಾಮಯ್ಯದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಎನ್ನ ಮನ ಮತ್ತೊಂದಕ್ಕೆ ಇಂಬಿಲ್ಲ ಕಂಡಯ್ಯ. ನಿಮ್ಮ ನೆನೆವೆ ನಾನು, ನೀನು ಎನ್ನ ನೆನೆವೆ ಕಂಡಯ್ಯ. ನಿನಗೆಯೂ ಎನಗೆಯೂ ಒಂದೆ ಮನ ನೋಡಯ್ಯ. ನೀನು ಮನಮುಕ್ತನಾದ ಕಾರಣ ನಿಮ್ಮೊಡನೆ ಎನ್ನ ಮನಮುಕ್ತ ನೋಡಯ್ಯ, ಕಪಿಲಸಿದ್ಧ ಮಲ್ಲಿನಾಥ. ೨೨೨-೨೩೦-3-121.

ಹೀಗೆಂದು ಸಿದ್ಧರಾಮಯ್ಯದೇವರು ಮನಮಗ್ನವಪ್ಪ ಮಹಾನುಭಾವಮಂ ಬಿನ್ನೈಸಲು, ಇದಕ್ಕೆ ಪ್ರಭುದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಮನ ಉಂಟೆ ಮರುಳೇ ಶಿವಯೋಗಿಗೆ? ಮತ್ತೊಮ್ಮೆ ಮನಮಗ್ನ ಉಂಟೆ ಶಿವ ಶರಣಂಗೆ? ಇಲ್ಲದ ಮನವನುಂಟೆಂದು, ನುಡಿದು ಅಡಗಿಸಿದೆನೆಂಬ ಮಾತು ಮನವ ನೆಲೆಮಾಡಿ ತೋಱುತ್ತಲದೆ. ಗೊಗೇಶ್ವರನನಱಿದ ಶರಣಂಗೆ ತೋಱಲಿಲ್ಲ ಅಡಗಲಿಲ್ಲ ಕೇಳಾ! ೨೨೩-೨೩೧-3-122.

ಹೀಗೆಂದು ಪ್ರಭುದೇವರು ನಿರೂಪಿಸಿದ ಮಹಾನುಭಾವನಿಷ್ಪತ್ತಿಗೆ ಸಿದ್ಧರಾಮಯ್ಯ ದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಮನಮಗ್ನವೆಂದಡೇನು ಕೊಱತೆ ಹೇಳಾ ಎಲೆಯಯ್ಯ ? ಮನವಿಲ್ಲದ ಬಚ್ಚಬಱಿಯ ಬೊಮ್ಮವೆಂಬುದೇನು ಹೆಚ್ಚು ಹೇಳಾ ಎಲೆಯಯ್ಯ ? ನುಡಿವ ಮಾತಿನಲ್ಲಿ ವಿವರ ತೋಱಿತ್ತೆಂದರೆ ತಾತ್ಪರ್ಯವಂತಪ್ಪುದೇ ಕಪಿಲಸಿದ್ಧ ಮಲ್ಲಿನಾಥ? ೨೨೪-೨೩೨-3-123.

ಹೀಗೆಂದು ಬಿನ್ನೈಸಿದ ಸಿದ್ಧರಾಮಯ್ಯದೇವರ ನಿಜಾನುಭಾವಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ :

ಮನಮಗ್ನವೆಂತಿಪ್ಪುದಂತೆ ಇರಬೇಕಲ್ಲದೆ ಮತ್ತೊಂದು ಮನವೆಂಬುದುಂಟೆ ಹೇಳಾ ! ಅಱಿದು ಮಱೆದುದ ಅಱಿದು ನುಡಿದು ಮಱೆದೆನೆಂಬ ಜ್ಞಾನಉಂಟೆ? ಗೊಗೇಶ್ವರ ಲಿಂಗವು ನೆಱೆ ಮಱೆದೆನೆಂದಲ್ಲಿಯಲ್ಲದೆ ಮಱೆಮಾಡಿ ಕಾಡನು. ೨೨೫-೨೩೩-3-124

ಹೀಗೆಂದು ಪ್ರಭುದೇವರು ನಿರೂಪಿಸಿದ ಮಹಾವಾಕ್ಯಕ್ಕೆ ಸಿದ್ಧರಾಮಯ್ಯದೇವರು ಬಿನ್ನೈಸಿದ ಪ್ರಸ್ತಾವದ ವಚನ :

ಅಂಗದಂತೆ ಲಿಂಗ, ಲಿಂಗದಂತೆ ಅಂಗವಾದ ಬಳಿಕ— ಅಂಗದಂತೆ ಲಿಂಗೈಕ್ಯ, ಲಿಂಗದಂತೆ ಅಂಗೈಕ್ಯ. ಮನವೆ ಲಿಂಗ, ಲಿಂಗವೆ ಮನವಾದ ಬಳಿಕ, [1]ಮಾತುಮಥನ[1]ಗಳೆಲ್ಲಾ ಹೊಳ್ಳಾದ ಕಾರಣ, ಮಾತೆ ಲಿಂಗೈಕ್ಯ, (?) A [ಲಿಂಗೈಕ್ಯವೆ ಸ್ವರಶಬ್ದ]. ಸ್ವರಶಬ್ದವೆಲ್ಲಾ ಲಿಂಗೈಕ್ಯವಾದ ಬಳಿಕ ಇನ್ನು A ಸ್ವರಶಬ್ದ ಸಂದಣೆಗೆ ತೆಱಹುಂಟೆ? ಕಪಿಲಸಿದ್ಧ ಮಲ್ಲಿನಾಥ, ಇನ್ನು ನಿಮ್ಮ ದೇವರೆಂದು ಅಱಿಸಲುಂಟೋ ಇಲ್ಲವೋ ಎಂಬುದನು ತಿಳುಹಿ ಕೊಡಾ ಎಲೆಯಯ್ಯ ! ೨೨೬-೨೩೪-3-125.

ಹೀಗೆಂದು ಸಿದ್ಧರಾಮಯ್ಯದೇವರು ಪರತತ್ವದಱಿವಿಂಗೆ ಹಱಿವ ನುಡಿದು, ನಿಮ್ಮ ನಿಲವನಱಿಸಲುಂಟೋ ಇಲ್ಲವೋ ಎಂಬುದನು ನೀವೇ ನಿರೂಪಿಸಿ ಎನಲು, ಅದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ:

ಕರ್ಪುರದ ಗಿರಿಯ ಉರಿ ಹಿಡಿದ ಬಳಿಕ ಇದ್ದಿಲುಂಟೆ? ಮಂಜಿನ ಶಿವಾಲಯಕ್ಕೆ ಬಿಸಿಲ ಕಳಸ ಉಂಟೆ ? ಉರಿಯ ಗಿರಿಯು ಅರಗಿನ ಬಾಣದಲ್ಲಿ ಎಚ್ಚ ಬಳಿಕ ಮರಳಿ ಬಾಣವನಱಿಸಲುಂಟೇ ? ಗೊಗೇಶ್ವರಲಿಂಗವನಱಿದಬಳಿಕ, ದೇವರೆಂದಱಿಸಲುಂಟೇ, ಹೇಳಾ ಸಿದ್ಧರಾಮಯ್ಯ ? ೨೨೭-೨೩೫-3-126.

ಹೀಗೆಂದು ನಿರೂಪಿಸಿದ ಪ್ರಭುದೇವರ ಮಹಾನುಭಾವಕ್ಕೆ ಸಿದ್ಧರಾಮಯ್ಯದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಅಯ್ಯ ನಿಮ್ಮ ದೇವರೆಂದು ಭಾವಿಸಲಱಿಯೆನು ಕೇಳು ಕಂಡಾ ! ಎನ್ನ ಮನವ ನುಂಗಿದೆಯೆಂದು ನಿಮಗಾನು ಬಿನ್ನಹವ ಮಾಡಿದ ಕಾರಣ, ಎನ್ನ ಒಳಗೆ ಹೊಱಗೆಲ್ಲ ನೀನೆ ಕಂಡಯ್ಯ. ನಿಮ್ಮೊಳಡಗಿದ ನುಡಿಯನೊಳಕೊಂಡ ಅಱಿವು ಅಱಿದಱಿದು ಮಱೆದ ಪರಿಯೆಂತಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ? ೨೨೮-೨೩೬-3-127.

---

[1] (ದೇ) ಮಾತು (ಹ) ಮಾತು ಮಾತು (ಅನ್ಯತ್ರ). A ಸ್ವರಶಬ್ದವೆಲ್ಲಾ ಲಿಂಗೈಕ್ಯವಾದ ಬಳಿಕ ಇನ್ನು ಸ್ವರಶಬ್ದ (ಹ) ಲಿಂಗೈಕ್ಯವೆ ಸ್ವರಶಬ್ದ (ಶಿಗೂ) ಲಿಂಗೈಕ್ಯವೆ ಸ್ವರಶಬ್ದ ಶಬ್ದ (ದೇ).

ಹೀಗೆಂದು ಬಿನ್ನೈಸಿದ ಸಿದ್ಧರಾಮಯ್ಯದೇವರ ಶಿವಾದ್ವೈತಪ್ರಸಂಗಕ್ಕೆ ಪ್ರಭುದೇವರು—ಸರ್ವಶೂನ್ಯ ಸಮಾಧಿಯ ನಿಲವ ನಿರೂಪಿಸುತ್ತಿರ್ದ ಪರಿ ಅದೆಂತೆಂದಡೆ: ಆ ಪ್ರಸ್ತಾವದ ವಚನ:

ಅಱಿದೆನೆಂಬುದು ತಾ ಬಯಲು, ಅಱಿಯೆನೆಂಬುದೂ ತಾ ಬಯಲು. ಮಱೆದೆನೆಂಬುದು ತಾ ಬಯಲು, ಮಱೆಯೆನೆಂಬುದೂ ತಾ ಬಯಲು. ಅಱುಹಿನ ಕುಱುಹಿನ ಮಱಹಿನೊಳಗೆ ಗೊಗೇಶ್ವರನೆಂಬುದು ತಾ ಬಯಲು ನೋಡಾ! ೨೨೯-೨೪೪-3-128.

ಇಂತು ಪ್ರಭುದೇವರು ನಿರೂಪಿಸಿದ ಮಹಾವಾಕ್ಯದ ಸ್ವಾನುಭಾವೋಪದೇಶದಿಂ ಸಿದ್ಧರಾಮಯ್ಯದೇವರು ಪ್ರಸನ್ನತ್ವವಮಂ ಪಡೆದು, ಪರಬ್ರಹ್ಮದೊಳು ನಿರ್ವಾಣವೆಂದಪ್ಪುದೆಂದು ಆ ಪ್ರಭುದೇವರ ಬೆಸಗೊಂಡ ಪ್ರಸ್ತಾವದ ವಚನ:

ಅಯ್ಯ, ಕಬ್ಬುನ ನೀರನೊಳಕೊಂಬಂತೆ, ಶಬುದ ನಿರಾಳವನೊಳಕೊಂಬಂತೆ, ಮರೀಚಿಯ ಬಯಲೊಳಕೊಂಡಿಪ್ಪಂತೆ ಎನ್ನನೆಂದೊಳಕೊಂಬೆ ಹೇಳಾ ಕಪಿಲಸಿದ್ಧಮಲ್ಲಿಕಾರ್ಜುನ ದೇವರ ದೇವ. ೨೩೦-೨೪೫-3-129.

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಮಹಾವಾಕ್ಯವೆಂತಿದ್ದುದೆಂದಡೆ ಆ ಪ್ರಸ್ತಾವದ ವಚನ:

ತೆಱಹಿಲ್ಲದ ಘನವ ಮನ ಒಳಕೊಂಡು, [1]ತಲೆಯಿಲ್ಲದ[1] ಮನವ ಘನ ಒಳಕೊಂಡು, ತನಗೆ ತಾ ತರಹರವಾದ ಬಳಿಕ ಇನ್ನು ಮರಳಿ ಇಂಬುಗೊಳಲುಂಟೆ? ಗೊಗೇಶ್ವರನ ಲೀಲೆ ಮೂಬನ್ನಬರ ಉರಿಯೊಳಗಣ ಕರ್ಪುರದಂತೆ ಇರಬೇಕು ಕಾಣಾ ಸಿದ್ಧರಾಮಯ್ಯ. ೨೩೧-೨೪೭-3-130.

ಇಂತು ಪ್ರಭುದೇವರು ನಿರ್ವಾಣದ ನಿಲುಕಡೆಯಂ ನಿರೂಪಿಸಲು, ಇದಕ್ಕೆ ಸಿದ್ಧರಾಮಯ್ಯದೇವರು ಪರಾಮರಿಸಿ, ಆ ಪ್ರಭುದೇವರ ಕರಸ್ಥಲದ ಲಿಂಗದ ಆದ್ಯಂತವಮಂ ಕೇಳಿದ ಪ್ರಸ್ತಾವದ ವಚನ:

ಅಯ್ಯ ನಿಮ್ಮ ಸರ ಉಂಡ ಸಬುದವೆನ್ನ ಮನಕ್ಕೆ ವೇದ್ಯವಾಯಿತ್ತು. ನಿಮ್ಮ ನಿಜ ಉಂಡ ನಿರ್ಣಯವೆನ್ನ ಮತಿಗೆ ವೇದ್ಯವಾಯಿತ್ತು. ನಿಮ್ಮ ಕರುಣಪ್ರಸಾದವೆನ್ನ ಸರ್ವಾಂಗ ವೇದ್ಯವಾಯಿತ್ತು. ನಿಮ್ಮ ಕಾಯವಿಡಿದಿಪ್ಪ ಕರಸ್ಥಳದ ಕಾರಣವ ಹೇಳಾ ಕಪಿಲಸಿದ್ಧಮಲ್ಲಿನಾಥ. ೨೩೨-೨೪೮-3-133.

ಇಂತು ಸಿದ್ಧರಾಮಯ್ಯದೇವರು ಬಿನ್ನಪಂಗೆಯ್ಯಲು, ಪ್ರಭುದೇವರು—ತಮ್ಮ ಕರಸ್ಥಲದ ಅನಾದಿ ಸಂಸಿದ್ಧವಮಂ ನಿರೂಪಿಸುತ್ತಿದ್ದರು. ಅದೆಂತೆಂದಡೆ ಆ ಪ್ರಸ್ತಾವದ ವಚನ:

ಅನಾದಿಯೆಂಬ ಗಣನಾಥನ ಶಿಷ್ಯನು ಆದಿಗಣನಾಥನು. ಆದಿಗಣನಾಥನ ಶಿಷ್ಯನು ಅಧ್ಯಾತ್ಮ ಗಣನಾಥನು. ಅಧ್ಯಾತ್ಮಗಣನಾಥನ ಶಿಷ್ಯನು ಆತ್ಮಗಣನಾಥನು. ಆತ್ಮಗಣನಾಥನ ಶಿಷ್ಯನು ವ್ಯೋಮಸಿದ್ಧ ಗಣನಾಥನು. ವ್ಯೋಮಸಿದ್ಧ ಗಣನಾಥನ ಶಿಷ್ಯನು ಬಸವಣ್ಣನೆಂಬ ಗಣನಾಥನು. ಬಸವಣ್ಣನೆಂಬ ಗಣನಾಥನ ಶಿಷ್ಯನು ಅನಿಮಿಷನೆಂಬ ಗಣನಾಥನು.

[1] (ಶಿಹ ಗೂ ಉ) ತೆಱಹಿಲ್ಲದ (ದೇ).

ಅನಿಮಿಷನೆಂಬ ಗಣನಾಥನ ಶಿಷ್ಯನು ಅಲ್ಲಮಪ್ರಭುವೆಂಬ ಗಣನಾಥನು. ಇಂತು ಅನಾದಿವಿಡಿದು ಬಂದ ಅನುಪಮಲಿಂಗವು ಗೊಗ್ಗೇಶ್ವರನೆಂಬ ಹೆಸರನೊಳಕೊಂಡು, ಎನ್ನ ಕರಸ್ಥಲಕ್ಕೆ ಸಾಧ್ಯವಾಯಿತ್ತು ಕಾಣಾ ಸಿದ್ಧರಾಮಯ್ಯ. ೨೩೩-೨೪೯-3-134.

ಹೀಗೆಂದು ಪ್ರಭುದೇವರು ತಮ್ಮ ಕರಸ್ಥಲದ ಲಿಂಗದ ಪೂರ್ವಾಪರವಂ ತಿಳಿಯ ಪೇಳಲು, ಸಿದ್ಧರಾಮಯ್ಯದೇವರು—ಇಷ್ಟಲಿಂಗವಿಡಿದು ನಿಜಲಿಂಗೈಕ್ಯವ ಕಾಬ ಪರಿ ಹೇಗೆಂದು ಬೆಸಗೊಂಬ ಪ್ರಸ್ತಾವದ ವಚನ :

ಕಾಯವೆ ಪೀಠಿಗೆ, ಪ್ರಾಣವೇ ಲಿಂಗವಾಗಿರಲು ಬೇಱೆ ಮತ್ತೆ ಕುಱುಹೇಕಯ್ಯ? ಕುಱುಹುವಿಡಿದು ಕೂಡುವ ನಿರವಯ ಉಂಟೇ ಜಗದೊಳಗೆ? ನಷ್ಟವ ಕೈಯಲ್ಲಿ ಹಿಡಿದು, ದೃಷ್ಟವ ಕಂಡಹೆನೆಂದರೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು ಸಾಧ್ಯವಹ ಪರಿಯ ಹೇಳಾ ಪ್ರಭುವೆ. ೨೩೪-೨೫೦-3-135.

ಇಂತು ಕುಱುಹುವಿಡಿದು ನಿರವಯಲಿಂಗವ ಕಾಬ ಪರಿಯೆಂತೆಂದು ಸಿದ್ಧರಾಮಯ್ಯ ದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ :

ಇಷ್ಟಲಿಂಗ-ಪ್ರಾಣಲಿಂಗವೆಂಬ ಭೇದವನಾರು ಬಲ್ಲರು ಹೇಳಾ! ಅಂತರಂಗವೆಂಬ ಶಬ್ದಕ್ಕೆ ಬಹಿರಂಗ ಮುಂದುಗೊಂಡಿಪ್ಪುದು. ಮನವನೆಡೆಗೊಂಡ ಲಿಂಗದಱಿವು ವಿಚಾರದ ವ್ಯಾಕುಳಕ್ಕೆ ಒಳಗಾಗಬಾರದೆಂದು, ಮನ-ಜ್ಞಾನ-ಭಾವ-ನೋಟವ ತಂದು, ಕರಸ್ಥಲ ದಲ್ಲಿ ನಿಕ್ಷೇಪಿಸಿ, ಅಂತರಂಗ ಬಹಿರಂಗವೆಂದಱಿಯದೆ ಅನಿಮಿಷನಾಗಿಪ್ಪನಾ ಶರಣನು. ಪ್ರಾಣಲಿಂಗದ ಪ್ರಸನ್ನಮುಖವ ನೋಡಿ ಪರಿಣಾಮಿಸಲೋಸುಗರ, ತೇಜವೆಂಬ ದರ್ಪಣವ ಹಿಡಿದಿಪ್ಪನು ನೋಡಯ್ಯ. ಗೊಗ್ಗೇಶ್ವರಲಿಂಗದಲ್ಲಿ ನಿಜವನೆಯ್ದಿಹೆನೆಂದರೆ, ಕುಱುಹುವಿಡಿದು ಕುಱುಹುಗೆಡಬೇಕು ಸಿದ್ಧರಾಮಯ್ಯ. ೨೩೫-೨೫೧-3-136.

ಹೀಗೆಂದು ಪ್ರಭುದೇವರು ತಮ್ಮ ಕರಸ್ಥಳದ ಇಷ್ಟಲಿಂಗಸಂಬಂಧದ ಘನವ ವಿವೇಕಮುಖದಿಂ ತಿಳುಹಿ ತೋಱಲು, ಸಿದ್ಧರಾಮಯ್ಯದೇವರು ಪರಮ ಹರುಷಿತರಾಗಿ, ಆ ಕರಸ್ಥಳದ ಲಿಂಗದಲ್ಲಿ [1]ಅಡಗಿಪ್ಪ[1] ಸ್ಥಲನಿರ್ದೇಶವೆಷ್ಟು ಭೇದವೆಂದು ಬೆಸಗೊಂಬ ಪ್ರಸ್ತಾವದ ವಚನ :

ಅಯ್ಯ, ನಿಮ್ಮ ಕರಸ್ಥಳದ ಘನವನುಪಮಿಸ ಬಲ್ಲವರಿಲ್ಲಯ್ಯ, ಅಯ್ಯ ನಿಮ್ಮ ಮಹಿಮೆಯನಱಿವಡೆ ನಾನೇತಱೊಳಗೇನಯ್ಯ? ಅಯ್ಯ, ಇಷ್ಟಲಿಂಗವ ಮುಟ್ಟಿದ ಶರಣನೊಳಗೆ ಹುಟ್ಟಿದ ಸ್ಥಳವೆಷ್ಟೆಂಬುದ ತಿಳುಹಿ ಎನ್ನನುಳುಹಿಕೊಳ್ಳಾ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ. ೨೩೬-೨೫೨-3-137.

ಹೀಗೆಂದು ಸಿದ್ಧರಾಮಯ್ಯದೇವರು ಇಷ್ಟಲಿಂಗದೊಳಗಣ ಸೂಕ್ಷ್ಮಭೇದವಂ ಕೇಳಲು, ಪ್ರಭುದೇವರು ಈ ಸೂಕ್ಷ್ಮದ ಸ್ಥಿತಿಗತಿಯನು ಸಂಗನ ಬಸವಣ್ಣ ಬಲ್ಲನು. ಆತನ ಕೈಯಲ್ಲಿ ನಿನಗೆ ತಿಳಿಹಿಕೊಡಿಸಿಹೆನು ನಡೆ ಎಂದು ನಿರೂಪಿಸಿದ ಪ್ರಸ್ತಾವದ ವಚನ :

---

[1] (ಹ ಗೂ) (ದೇ) ಅತನಿಪ್ಪ (ಶಿ).

*ಆಯತಲಿಂಗವಿಡಿದು ಸ್ವಾಯತಲಿಂಗವ ಕಾಣಬೇಕು ಸಿದ್ಧರಾಮಯ್ಯ. ಸ್ವಾಯತ ಲಿಂಗವಿಡಿದು ಜಂಗಮಲಿಂಗವ ಕಾಣಬೇಕು ಸಿದ್ಧರಾಮಯ್ಯ. ಜಂಗಮಲಿಂಗವಿಡಿದು ಗುರುಲಿಂಗವ ಕಾಣಬೇಕು ಸಿದ್ಧರಾಮಯ್ಯ. ಗುರುಲಿಂಗವಿಡಿದು ಶಿವಲಿಂಗವ ಕಾಣಬೇಕು ಸಿದ್ಧರಾಮಯ್ಯ. ಶಿವಲಿಂಗವಿಡಿದು ಪ್ರಸಾದಲಿಂಗವನಱಿಯಬೇಕು ಸಿದ್ಧರಾಮಯ್ಯ. ಇಂತು ಷಡುಸ್ಥಲದಂತುವ ಸಂಧಿಸಿ ಒಂದು ಮಾಡಿಕೊಂಡಿಪ್ಪ ಕರಸ್ಥಲದನುವನು ಗೊಗೇಶ್ವರನ ಶರಣ ಸಂಗನ ಬಸವಣ್ಣ ಬಲ್ಲ. ಬೆಸಗೊಂಬ ಬಾರಾ ಸಿದ್ಧರಾಮಯ್ಯ. ೨೩೭-೨೫೩-3-138.

ಇಂತು ಬಸವರಾಜದೇವರ ದರ್ಶನವಾಗಬೇಕು ನಡೆ ಎಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಸಿದ್ಧರಾಮಯ್ಯದೇವರು ಪರಮಹರುಷಿತರಾಗಿ ಬಿನ್ನೈಸಿದ ಪ್ರಸ್ತಾವದ ವಚನ :

ಅಯ್ಯ, ನಿಮ್ಮ ಕರಸ್ಥಲದ ಘನ ನಿಮ್ಮಲ್ಲಿಯೇ ಇರಲಿ. ಅಯ್ಯ, ನಿಮ್ಮ ಪರಸ್ಥಲದ ಘನ ನಿಮ್ಮಲ್ಲಿಯೇ ಇರಲಿ. ಕರಸ್ಥಲವನೊಲ್ಲೆ ಪರಸ್ಥಲವನೊಲ್ಲೆ ಆವುದನು ಒಲ್ಲೆ ನೋಡಯ್ಯ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ, ನೀನೊಲಿದ ಸಂಗನ ಬಸವಣ್ಣನ ಶ್ರೀಪಾದದ ಘನವ ತೋಱಿಹೆನೆಂಬ ಮಾತಿಂಗೆ ಮಾಱುವೋದೆನು. ಇನ್ನು ತೋಱಿ ಎನ್ನನುಳುಹಿಕೊಳ್ಳಾ, ಎನ್ನ ದೇವರ ದೇವರ ದೇವ. ೨೩೮-ಪುಟ 44-3-139.

ಇಂತು ಸಿದ್ಧರಾಮಯ್ಯದೇವರು ಬಿನ್ನೈಸಲು ಪ್ರಭುದೇವರು ಸಿದ್ಧರಾಮಯ್ಯದೇವರು ಕಲ್ಯಾಣದತ್ತಲಭಿಮುಖವಾಗಿ ಬರುತ್ತಿರ್ಪ ಪ್ರಸ್ತಾವದ ವಚನ :

ಅಂಗದಲ್ಲಿ ಆಚಾರವ ಸ್ವಾಯತವ ಮಾಡಿಕೊಂಡನು. ಆಚಾರದಲ್ಲಿ ಪ್ರಾಣವ ಸ್ವಾಯತವ ಮಾಡಿಕೊಂಡನು. ಪ್ರಾಣದಲ್ಲಿ ಲಿಂಗವ ಸ್ವಾಯತವ ಮಾಡಿಕೊಂಡನು. ಲಿಂಗದಲ್ಲಿ ಜಂಗಮವ ಸ್ವಾಯತವ ಮಾಡಿಕೊಂಡನು. ಜಂಗಮದಲ್ಲಿ ಪ್ರಸಾದವ ಸ್ವಾಯತವ ಮಾಡಿಕೊಂಡನು. ಪ್ರಸಾದದಲ್ಲಿ ನಿತ್ಯವ ಸ್ವಾಯತವ ಮಾಡಿಕೊಂಡನು. ನಿತ್ಯದಲ್ಲಿ ದಾಸೋಹವ ಸ್ವಾಯತವ ಮಾಡಿಕೊಂಡನು.ದಾಸೋಹದಲ್ಲಿ ತನ್ನ ಮಱೆದು ನಿಶ್ಚಿಂತನಿವಾಸಿಯಾಗೈದಾನೆ. ನಮ್ಮ ಗೊಗೇಶ್ವರ ಲಿಂಗದಲ್ಲಿ ಸಂಗನ ಬಸವಣ್ಣನ ಶ್ರೀಪಾದಕ್ಕೆ ಶರಣೆಂದು ಧನ್ಯರಾಗಬೇಕು ನಡೆಯಾ ಸಿದ್ಧರಾಮಯ್ಯ. ೨೩೯-ಪುಟ 45-3-140.

---

* ಇಲ್ಲಿಂದ ೨೪೩-೩೧೫-4-4 ನೇ ವಚನದಲ್ಲಿನ ನಕ್ಷತ್ರದ ಚಿಹ್ನೆಯ ವರೆಗಿನ ಗ್ರಂಥ ಭಾಗವಿರುವ 105ನೇ ಗರಿ "ಶಿ" ಪ್ರತಿಯಲ್ಲಿ ಕಳೆದುಹೋಗಿದೆ. ದೇ-ಹ-ಗೂ ಮೂಲಗಳಿಂದ ಪರಿಷ್ಕರಿಸಿ ಅದನ್ನು ಇಲ್ಲಿ ಕೊಟ್ಟಿದೆ.

ಇಂತು ಸಿದ್ಧರಾಮಯ್ಯದೇವರು ಪ್ರಭುದೇವರು ಬಸವರಾಜದೇವರ ಮಹಾತ್ಮ್ಯೆಯನು ಕೊಂಡಾಡುತ್ತ ಪರಮಾನಂದದಲ್ಲಿ ಓಲಾಡುತ್ತ ಇರಲು—ಇತ್ತಲು, ಬಸವರಾಜ ದೇವರು ಅನಾದಿಯಲ್ಲಿ ಅನಿಮಿಷಂಗೆ ತಮ್ಮ ಪ್ರಾಣಲಿಂಗವ ಕೊಟ್ಟ ದೆಸೆಯಿಂದ, ಪರ ಮೇಶ್ವರನು—ನಿನ್ನ ಪ್ರಾಣಲಿಂಗವನಱಸಿಕೊಂಡು ಬಾ ಹೋಗೆಂದು ಬೆಸನಂಕೊಡಲು, ಆ ಬೆಸನಪಡೆದು, ಏಳುನೂಱೆಪ್ಪತ್ತು ಅಮರಗಣಂಗಳು ಸಹಿತ ಮರ್ತ್ಯಕ್ಕೆ ಇಳಿ- ತಂದು, ಇಂಗಳೇಶ್ವರ ಬಾಗವಾಡಿಯ ಮಂಡಿಗೆಯ ಮಾದಿರಾಜನ ಸತಿ ಮಾದಲಾಂಬಿ ಕೆಯ ಗರ್ಭದಿಂ—ಧರೆಯನೊಡೆದು ಮೂಡಿದ ಸ್ವಯಂಭುಲಿಂಗದಂತೆ—ಉದ್ಭವಿಸಿ, ಮರ್ತ್ಯಲೋಕದಲ್ಲಿ ಶಿವಭಕ್ತಿ ಕಲ್ಪತರುವಿನ ಸಸಿ ಬೆಳೆವಂತೆ ದಿನದಿನಕೆ ಬೆಳೆದು, ತಾನೆ ಜಂಗಮಕ್ಕೆ ಸರ್ವಜ್ಞನೆಂಬುದು ಸತ್ಯಮಾದಂತೆ—ವೇದಶಾಸ್ತ್ರ ಪುರಾಣಾದಿಯಾದ ಸಕಲ ವಿದ್ಯಾಭ್ಯಾಸಮಂ ಕಳೆದು ಮರ್ತ್ಯಲೋಕದ ಕತ್ತಲೆಯ ಕಳೆವಂತೆ ಸುಜ್ಞಾನೋದಯ ವಾಗಿ ಮಾಯಾಪಾಶಮಂ ಪರಿವಂತೆ ಮಾತಾಪಿತರು ಮೊದಲಾದ ಪೂರ್ವಾಶ್ರಯ ಸಂಬಂಧ ಸೂತಕಮಂ ಪರಿದು, ಅಲ್ಲಿಂ ತನ್ನಿಂ ಕಿಱಿಯಳಪ್ಪ ನಾಗಾಂಬಿಕೆಯು ಸಹಿತ ಕಪ್ಪಡಿಯ ಸಂಗಯ್ಯದೇವರಿಗೆ ಬಂದು, ಶೈವೋಪದೇಶಮಂ ಅವರ ಸ್ವಯಹಸ್ತದಿಂ ಪಡೆದು, ಕೈಲಾಸದಿಂ ಬಂದ ನಿರೂಪದ ಹವಣನಱಿದು, ಬಂದು, ಕಲ್ಯಾಣವೆಂಬ ಪಟ್ಟಣಕ್ಕೆ ಬಿಜಯಂಗೆಯ್ದು, ಶಿವನಟ್ಟಿದ ರಾಯಸ ನಿರೂಪಮಂ ಓದಿ, ಅಱುವತ್ತು ಕೋಟಿ ವಸ್ತುವಂ ತೆಗೆದು, ಬಿಜ್ಜಳರಾಯಂ ತರ್ಕಿಸಲು, ದೃಷ್ಟಮಂ ತೋಱಿ—ಆ ಮಹಾರಾಯಂಗೆ ಶಿರಪ್ರಧಾನನಾಗಿ, ಶಿವಕಾಯಕದಿಂದಿರುತ್ತ, ಅನಂತ ಕೊಂಡೆಯಂಗಳ ಪರಿಹರಿಸುತ್ತ, ಅನಂತ ಪ್ರಾಣಂಗಳಂ ಪಡೆವುತ್ತಲಿಂತನಂತ ಪವಾಡಂಗಳಂ ಮೆಱೆವುತ್ತ, ಮರ್ತ್ಯಲೋಕವನೆಯ್ದೆ ಪಾವನವ ಮಾಡುತ್ತ, ಶಿವಭಕ್ತಿಯ ಘನವನು ಬೆಳಗಿ ತೋರುತ್ತ, ಗುರು-ಲಿಂಗ-ಜಂಗಮದಾಸೋಹದೊಳೋಲಾಡುತ್ತ, ತನ್ನ ಪ್ರಾಣಲಿಂಗ ಅಲ್ಲಮ ಪ್ರಭುವಿಂಗೆ ಸಾಧ್ಯವಾಯಿತ್ತು, ಆ ಲಿಂಗವೆನಗಿನ್ನಾವ ಮುಖದಿಂ ಸಾಧ್ಯವಾದಪುದೆಂದು ಚಿಂತಿಸುತ್ತಿಪ್ಪಂಗೆ, ಶಿವಂ—ತಾನೆ ಪ್ರಾಣಲಿಂಗದ ಸಂಬಂಧನಿರ್ಣಯಮಂ ಬಸವಂಗೆ ತೋರ್ಪೆನೆಂದು, ಪ್ರಸಾದಮುಖದಿಂ ನಾಗಾಂಬಿಕೆಯ ಗರ್ಭದೊಳು ಚೆನ್ನಬಸವಣ್ಣ ನೆಂಬ ನಾಮದಿಂದೊಗೆದು, ಶಿವಜ್ಞಾನ ಪ್ರಬಲಮಾದಂದದಿಂ ಪ್ರಬುದ್ಧನಾಗಿ, ಶಿವ ತತ್ವಜ್ಞಾನ ಸಂಪನ್ನನಾಗಿ, ಆ ಬಸವರಾಜದೇವರ ಕೈಯಲ್ಲೂ ವಿವೇಕಭಾಗೆಯಿಂದುಪ ದೇಶಮಂ ಪಡೆದು, ಅಲ್ಲಮ ಪ್ರಭುದೇವರ ಬರವಿಂಗೆ ತಾನೆ ಕಾರಣರೂಪನಾಗಿ, ಚೆನ್ನ ಸಂಗಮನಾಥನೆಂಬ ಲಿಂಗಮಂ ಪ್ರಾಣಲಿಂಗವಾಗಿ ಅನುಗ್ರಹಿಸಿಕೊಂಬ ಪ್ರಸ್ತಾವ ದೊಳು, ಆ ಚಿಕ್ಕದಣ್ಣಾಯಕರು ಬಸವರಾಜದೇವರ ಉಪಾಸ್ತಿಯ ಮಾಡುವ ವಚನ:

ಮೀನಜರೋಮಜ ಋಷಿಯರು ಮೊದಲಾದನಂತ ಕೋಟಿ [1]ಋಷಿಗಳಿಲ್ಲದಂದು, ಅನಂತಕೋಟಿ[1] ಹರಿಬ್ರಹ್ಮರಿಲ್ಲದಂದು ಅಲ್ಲಿಂದತ್ತತ್ತ ನೀನೇಕೋಲಿಂಗ, ಒಬ್ಬನೆ ಶರಣ. ಗುರುವೆ, ಪರಮಗುರುವೆ ನೀನೇಗತಿಯಯ್ಯ, ಆದಿಕುಳಕ್ಕೆ ಮೂಲಿಗನಾಗಿ ಸುಳುಹುದೋಱಿ, ಪಾವನವ ಮಾಡ ಬಂದಿರಿ. ಬಹುಮುಖಜೀವಿಗಳಿಗೆ ಬಹುಮುಖ ಪ್ರಸಾದವ ತೋಱಬಂದಿರಯ್ಯ. ಭುವನವ ಸಲಹಲೆಂದು [2]ಅವತರಿಸಿ, ಆದಿಯ ಲಿಂಗವನಾದಿಯ ಶರಣನ ಕೈಯಲ್ಲಿ ಕೊಟ್ಟರೆ, ಆ ಲಿಂಗವನೆನಗೆ ನೀನು[2] ಪುಟ್ಟಿಸಿದ ಘಟಕ್ಕೆ ಕಾರುಣ್ಯವ ಮಾಡಿ ಸಲಹಯ್ಯ ಕೂಡಲಚೆನ್ನಸಂಗಮದೇವ. ೨೪೦-೩೧೨-4-1

ಇಂತು ಚಿಕ್ಕದಣ್ಣಾಯಕರು ಉಪಾಸ್ತಿಯ ಮಾಡಲು, ಬಸವರಾಜದೇವರು ಭಕ್ತಿಭಾವ ಸಂಪನ್ನರಾಗಿ, ಸರ್ವವೂ ಸಂಗಮನಾಥನೆಂಬ ಭಾವಭೇದದಿಂದ ಉಪದೇಶವ ಮಾಡಲಮ್ಮೆನೆಂದು ನಿರೂಪಿಸಿದ ವಚನ :

ಓಹೋ ನಾನೊಬ್ಬರಿಗುಪದೇಶವ ಮಾಡಲಮ್ಮೆನು. ಮುನ್ನಲಾದವರು ತಮ್ಮಿಂದ ತಾವಾದರು. ಅವರೆಲ್ಲರೂ ನಿಜಲಿಂಗೈಕ್ಯರಾದರು. ನಾನೇನೂ ಮಾಡಿದುದಿಲ್ಲ. [3]ಶಿವಭಕ್ತರ ಕಿಂಕಿಲನಾಗಿ ನಿನ್ನ ಲಿಂಗ ಅಱಿಸಿಕೊಂಡು ಬಾ ಹೋಗೆಂದು ಕಳುಹಿದರೆ, ಅಱಿಸಲೆಂದು ಬಂದೆ. ಕಾಲಾಗ್ನಿರುದ್ರನ ಆಜ್ಞೆಯಿಂದ ಭೃತ್ಯನಾಗಿ ಬಂದಿರ್ದು ಕರ್ತನಾದೆನೆಂದಡೆ ಆ ಕರ್ತನೆನ್ನ ನಗುವನು[3]. ತತ್ವವ ಹಿಡಿದವರಿಗೆ ತೊತ್ತಾಗಿ ನಡೆವೆನು. ಅಮರಗಣಂಗಳು ಸಾಕ್ಷಿಯಾಗಿ ಕೂಡಲಸಂಗಮದೇವರ ಶರಣರ ಮುಂದೆ ಭಾಷೆಪ್ರಸಾದವನಿಕ್ಕಲಮ್ಮೆನಯ್ಯ ಚೆನ್ನಬಸವಣ್ಣ ! ೨೪೧-೩೧೩-4-2.

ಹೀಗೆಂದು ಬಸವರಾಜದೇವರು ನಿರೂಪಿಸಲು, ಅದಕ್ಕೆ ಚೆನ್ನಬಸವಣ್ಣನು ನಿಮ್ಮ ಕರುಣದಿಂದ ಅನುಗ್ರಹವ ಪಡೆವೆನಲ್ಲದೆ, [4]ಬಲಾತ್ಕಾರವ ಮಾಡುವಂಥಮೂರ್ಖನಾನಲ್ಲ[4]. ಅನಾದಿವಿಡಿದು ನಾ ನಿಮ್ಮ ಶಿಷ್ಯನೆಂಬ ಭೇದವ ತೋಱಿಸಿ ಒಡಂಬಡಿಸಿ ಉಪಾಸ್ತಿಯ ಮಾಡುವ ಪ್ರಸ್ತಾವದ ವಚನ :

ಅಂಜದಿರಿ, ಅಂಜದಿರಿ. ಅನಿಮಿಷನಂತೆ ಬೇಡವವ ನಾನಲ್ಲ. ನಿಮಗನಾದಿಯ ಶಿಶು ನಾನಯ್ಯ.ಅದೆಂತೆಂದಡೆ—ಅಂಜನೆಗೆ ಜಲಗರ ಬೆಳೆಯಿತ್ತೆಂದು ಅಂಜಿ ಹೇಮರಸವ ಕುಡಿದಲ್ಲಿ, ಒಳಗಿದ್ದ ಕಪಿ ಶೃಂಗಾರವ ಮಾಡಿಸನೆ ? ಕೆಡುವುದೆ ಗುರುವಿನುಪದೇಶಪಿಂಡವು ? ಮಱೆವುದೇ ಶಿವಜ್ಞಾನವು ? ಹಿಂದೆ ಏಳುನೂಱು ವರುಷ ಮಂಡೋದರಿಯ ಬಸಿಱಲ್ಲಿ ಉದಯಂಗೆಯ್ಯನೇ ಇಂದ್ರಜಿತು ? ನೀವು, ನಾನು ಹೊಟ್ಟೆಯಲ್ಲಿರ್ದಂದು, ವಿಭೂತಿಯ ಪಟ್ಟವ ಕಟ್ಟಿದಂದೆ ಅನುಗ್ರಹವಾಯಿತ್ತು. ಕೂಡಲಚೆನ್ನಸಂಗಮದೇವಯ್ಯ, ನಿಮ್ಮ

[1] (ಹ) X (ದೇ). [2] (ದೇ) ಅವತರಿಸಿ ಆದಿಯ ಲಿಂಗವ ರೂಪು ಮಾಡಿ ತಂದು ಅನಾದಿಯ ಶರಣನ ಕೈಯಲ್ಲಿ ಕೊಟ್ಟೆ. ಆ ಲಿಂಗವನೆನಗೆ ರೂಪುಮಾಡಿ ತೋರಿಸಿ ನೀನು ಘನಪ್ರಸಾದದಿಂದ (ಹ) ಅವತರಿಸಿದಿರಿ. ಆದಿಲಿಂಗ ಅನಾದಿ ಶರಣನೆಂಬುದು ತಪ್ಪದು ನೀವು (ಗೂ). [3] (ಹ) ಶಿವಭಕ್ತರ ಕಿಂಕಿಲನಾಗಿ ಅಱಿಸುವಂದು ಕಾಲಾಗ್ನಿರುದ್ರನ ಆಜ್ಞೆಯಿಂಪ ಭೃತ್ಯನಾಗಿ ಬಂದಿರ್ದು ಕರ್ತನಾದಹೆನೆಂದರೆ ಆ ಕರ್ತನೆನ್ನ ನಗುವನು (ದೇ) X (ಗೂ). [4] (ಹ ದೇ) ಬಿಡುವನಲ್ಲ (ಗೂ).

ತೊತ್ತಿನ ತೊತ್ತು ನಾನು ಚೆನ್ನಬಸವಣ್ಣನು. ೨೪೨-೩೧೪-4-3.

ಹೀಂಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಬಸವರಾಜದೇವರು—ಎಲ್ಲಾ ಶಿವಭಕ್ತರಿಗೆಯೂ ಶಿಶುವಲ್ಲದೆ, ಒಬ್ಬರಿಗೆಯು ನಾನು ಗುರುವಲ್ಲವೆಂದು—ನಿರೂಪಿಸಿದ ಪ್ರಸ್ತಾವದ ವಚನ :

ಆದಿ ಅನಾದಿಯಿಂದತ್ತತ್ತ ಮುನ್ನ, ಲಿಂಗಜಂಗಮವೆಂಬುದನಾರು ಬಲ್ಲವರಿಲ್ಲವೆಂದು, ಇದಱ ಸಕೀಲಸಂಬಂಧವ ತಿಳುಹಲೆಂದು, ಮರ್ತ್ಯಕ್ಕೆ ಕಳುಹಿದನು ಶಶಿಧರನು. ಅಂಗದ ಮೇಲೆ ಲಿಂಗ ಉಳ್ಳುದೆಲ್ಲವೂ ಸಂಗಮನಾಥನಲ್ಲದೆ, ಮತ್ತಾರನು ಕಾಣೆ. ಶಿಷ್ಯಂಗೆ ಗುರು ಉಪದೇಶವ ಮಾಡಬೇಕಲ್ಲದೆ, ಗುರುವಿಂಗೆ ಶಿಷ್ಯನನುಗ್ರಹವ ಮಾಡಿದ* ಠಾವುಂಟೆ ? ಎನ್ನ ಅಱಿವಿನ ಆದಿಗೆ ನೀನೆ ಕರ್ತನೆಂದು ನಾನಿರುತ್ತಿರಲು, ನಿನಗೆ ನಾನಿನ್ನು ಅನುಗ್ರಹವ ಮಾಡುವ ಪರಿ ಎಂತಯ್ಯ ? ಕೂಡಲಸಂಗಮದೇವರ ಸ್ವರೂಪವೆಂದು ನಿನ್ನ ಕಂಡಿಪ್ಪೆನು ಕಾಣಾ ಚೆನ್ನಬಸವಣ್ಣ. ೨೪೩-೩೧೫-4-4.

ಹೀಂಗೆಂದು ಬಸವರಾಜದೇವರು ನಿರೂಪಿಸಲು ಚಿಕ್ಕದಣ್ಣಾಯಕರು ಬಿನ್ನೈಸಿದ ಉಪಾಸ್ತಿಯ ವಚನ :

ಆದಿ ಲಿಂಗ, ಅನಾದಿ ಶರಣನೆಂಬುದು ತಪ್ಪದು. ಆದಿ ಗುರು, ಅನಾದಿ ಶಿಷ್ಯನೆಂಬುದು ತಪ್ಪದು. ಗುರುವಿಂಗೆ ಶಿಷ್ಯಂಗೆ ಏನು ದೂರ ದೇವ ?! ಮುಳ್ಳುಗುತ್ತುವರೆ ತೆಱಹಿಲ್ಲದ ಪರಿಪೂರ್ಣದ ಘನವು ಒಬ್ಬರಲ್ಲಿ ಒಂದು ಭಾವವುಂಟೆ? ಎನ್ನ ಒಳಗೆ ಬೆಳಗುವ ಜ್ಞಾನಲಿಂಗ[ಕ್ಕೆ] ನಿಮ್ಮ ಹೃದಯಕಮಲದ ಅಮೃತಲಿಂಗಕ್ಕೆ, ಸಂದು ಸಂಶಯ ಉಂಟೆ ? ನಿಮ್ಮೊಳಗೆ ತೊಳಗಿ ಬೆಳಗುವ ಜ್ಯೋತಿರ್ಲಿಂಗ, ಎನ್ನ ಅಂತರಂಗದ ಜ್ಞಾನ-ಲಿಂಗ-ಒಂದಱಲ್ಲಿ ಒಂದು ಬಿಚ್ಚಿ ಬೇಱುಮಾಡಬಾರದಾಗಿ, ಪ್ರಾಣಲಿಂಗ ಒಂದೆ, ಉಪದೇಶ ಒಂದೆ, ಕ್ರಿಯಾಕರ್ಮ ಒಂದೆ. ನೀವಿನ್ನಾವುದ ಬೇಱು ಮಾಡುವಿರಯ್ಯ ? ಕಾರ್ಯದಲ್ಲಿ ಗುರುವಾಗಿ, ಅಂತರಂಗಕ್ಕೆ ಸುಜ್ಞಾನೋಪದೇಶವ ಮುನ್ನವೆ ಮಾಡಿದ ಬಳಿಕ, ಕ್ರೀಯಿಂದ ಮಾಡಲಮ್ಮೆನೆಂದರೆ ಹೋಹುದೇ ? ಕೂಡಲಚೆನ್ನಸಂಗಮದೇವರು ಸಾಕ್ಷಿಯಾಗಿ, ಎನಗೆ ನೀವು ಉಪದೇಶವ ಮಾಡಿದರೆ, ಮರ್ತ್ಯಲೋಕದ ಮಹಾಗಣಂಗಳ ಕೈಯಲ್ಲಿ ಅಹುದಹುದೆನಿಸುವೆ, ಕಾಣಾ ಸಂಗನಬಸವಣ್ಣ. ೨೪೪-೩೧೬-4-5.

ಹೀಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಅದಕ್ಕೆ ಬಸವರಾಜದೇವರು ನಿರೂಪಿಸಿದ ಪ್ರಸ್ತಾವದ ವಚನ :

ಗುರುವಿಂಗೆ ನೀನೆ ಕರ್ತ. ಲಿಂಗಕ್ಕೆ ನೀನೆ ಕರ್ತ. ಜಂಗಮಕ್ಕೆ ನೀನೆ ಕರ್ತನು. ಪ್ರಸಾದಕ್ಕೆ ನೀನೆ ಕರ್ತ. ಕೂಡಲಸಂಗಮ ದೇವರು ಸಾಕ್ಷಿಯಾಗಿ, ಎನಗೆಯೂ ನೀನೆ ಕರ್ತನಾದ ಕಾರಣ, ನಾನು ಬೇಕೆನಲಮ್ಮೆನು, ಬೇಡಾ ಎನಲಮ್ಮೆನು ಕಾಣಾ ಚೆನ್ನಬಸವಣ್ಣ. ೨೪೫-೩೧೭-4-6.

ಎನಗೆ ನೀನೇ ಕರ್ತನಾದ ಕಾರಣ, ನೀನೆಹಂಗೆ ಮಾಡಿದರೆ ಅಹಂಗೆ ಮಹಾಪ್ರಸಾದವೆಂಬೆನಲ್ಲದೆ, ಬೇಱೆ ಸ್ವತಂತ್ರವನಱಿಯೆನೆಂದು ಬಸವರಾಜದೇವರು ನಿರೂಪಿಸಲು

ಚಿಕ್ಕದಣ್ಣಾಯಕರು ಆ ಉತ್ತರಕ್ಕೆ ಮಹಾಪ್ರಸಾದವೆಂದು ಅನುಗ್ರಹವ ಮಾಡಿಸಿಕೊಂಡ ಪ್ರಸ್ತಾವದ ವಚನ :

ದೇವ ದೇವ ಮಹಾಪ್ರಸಾದ : ತನ್ನ ರೂಪ ತಿಳಿದು ನೋಡಬೇಕೆಂದು ಕನ್ನಡಿಯನುಪಾಸ್ತಿಯ ಮಾಡಲು, ಆ ಕನ್ನಡಿ ಬೇಕು-ಬೇಡೆಂಬುದೇ ಅಯ್ಯ ? ಪತಿಯಾಜ್ಞೆಯಿಂದ ಸತಿ ಪತಿಭಾವವಂ ಧರಿಸೆಂದರೆ ಸಂಯೋಗಕಾಲದಲ್ಲಿ ಅಲ್ಲವೆಂದೆನಬಹುದೇ ? ನೀವೆ ಮಾಡಿದರೆ ನೀವೆ ಮಾಡಿದುದು ; ನಾನೆ ಮಹಾಪ್ರಸಾದವ ಸ್ವೀಕರಿಸಿದರೂ ನೀವೆ ಮಾಡಿದುದು. ಅಂಗೈಯ ಲಿಂಗದ ಲಕ್ಷಣವ ನೋಡಿ ಕೊಡಿ ಎಂದು ಕೊಟ್ಟರೆ, ಲಿಂಗದಲ್ಲಿ ಲಕ್ಷಣವನಱಸಲಾಗದು ಕೊಳ್ಳೆಂದು ಕೊಟ್ಟರೆ, ಮಹಾಪ್ರಸಾದವೆಂದು ಕೈಕೊಂಡೆನು. ಗುರು ಬೆದಱ ಅಂಜಿದರೆ, ಮನವ ಸಂತೈಸಿ, ಏಕಾರ್ಥಭೇದವ ತೋಱ, ಬಿನ್ನಹವ ಮಾಡಿದೆನು. ಕೂಡಲಚೆನ್ನಸಂಗಮದೇವರ ಮಹಾಮನೆಯ ಗಣಂಗಳು ಮೆಚ್ಚಲು, ಸಂಗನ ಬಸವಣ್ಣನ ಕರುಣದ ಶಿಶುವೆಂಬುದ ಮೂಱು ಲೋಕವೆಲ್ಲವು ಅಱದು ಜಯಜಯ ಎನುತ್ತಿದ್ದಿತು. ೧೪೬-೩೨೨-4-7. ಮತ್ತಂ :

ಕೃತಯುಗ, ತ್ರೇತಾಯುಗ, ದ್ವಾಪರ[ಯುಗ] ಕಲಿಯುಗವಿಲ್ಲದಲ್ಲಿಂದತ್ತತ್ತ ನೋಡಾ. ಧರೆಯೂ ಬ್ರಹ್ಮಾಂಡವೂ ಮೂರುತಿಗೊಳ್ಳದಲ್ಲಿಂದತ್ತತ್ತ ನೋಡಾ. ಪ್ರಸಾದವ ಸಾಧಿಸಿ ತಂದು, ಎನ್ನ ಕೈಯಲ್ಲಿ ಕೊಟ್ಟನಯ್ಯ ನಿಕ್ಷೇಪವಾಗಿ—ಕೂಡಲ ಚೆನ್ನ ಸಂಗಮ ದೇವರಲ್ಲಿ—ಬಸವಣ್ಣನೆಂಬ ಶ್ರೀ ಗುರುಲಿಂಗವು. ೧೪೭-೩೨೩-4-8.

ಇಂತು ಬಸವರಾಜದೇವರ ಕೈಯಲ್ಲಿ ಉಪದೇಶವ ಪಡೆದು, ಲಿಂಗಾನುಗ್ರಹವಂ ತಾಳ್ದ ಚಿಕ್ಕದಣ್ಣಾಯಕರು—ತಮಗೆ ಲಿಂಗಸ್ವಾಯತಸಂಬಂಧ ಸಯವಾದ ಭೇದವಂ ವಿವೇಕಮುಖದಿಂ ಪ್ರತಿಷ್ಠಿಸಿಕೊಂಡ ಪ್ರಸ್ತಾವದ ವಚನ :

ಪ್ರಾಣದಲ್ಲಿ ಲೋಭ, ಜಿಹ್ವೆಯಲ್ಲಿ ರುಚಿ, ಶ್ರೋತ್ರದಲ್ಲಿ ಕುಶಬ್ದ, ನಾಸಿಕದಲ್ಲಿ ದುರ್ಗಂಧ, ನೋಟದಲ್ಲಿ ಕಾಮ, ಶಬ್ದದಲ್ಲಿ ವಿರೋಧ—ಇಂತಹ ಭವಿಯ ಕಳೆದು ಭಕ್ತನ ಮಾಡಿದ ಪರಿ ಎಂತೆಂದಡೆ : ಕಾಮನ ಸುಟ್ಟ ವಿಭೂತಿಯಿಲ್ಲದ, ಕಾಲನ ಸುಟ್ಟ ವಿಭೂತಿಯಿಲ್ಲದ, ತ್ರಿಪುರವ ಸುಟ್ಟ ವಿಭೂತಿಯಿಲ್ಲದ, ಆದಿಯಾಧಾರವಿಲ್ಲದಂದಿನ ವಿಭೂತಿಯ ತಂದು ಪಟ್ಟವ ಕಟ್ಟಿದರೆ—ಭಾವಕ್ಕೆ ಗುರುವಾಯಿತ್ತು, ಪ್ರಾಣಕ್ಕೆ ಲಿಂಗವಾಯಿತ್ತು, ಜಿಹ್ವೆಗೆ ಪ್ರಸಾದವಾಯಿತ್ತು, ಶ್ರೋತ್ರಕ್ಕೆ ಶಿವಮಂತ್ರವಾಯಿತ್ತು, ನಾಸಿಕಕ್ಕೆ ಸ್ವಾನುಭವಗಂಧವಾಯಿತ್ತು, ನೋಟಕ್ಕೆ ಜಂಗಮವಾಯಿತ್ತು, ಶಬ್ದಕ್ಕೆ ಸಂಭಾಷಣೆಯಾಯಿತ್ತು. ಇಂತು ಪೂರ್ವಗುಣಂಗಳೆಲ್ಲವ ಕಳೆದು ಪುನರ್ಜಾತನಾದ ಕಾರಣ, ಕೂಡಲ ಚೆನ್ನಸಂಗನಲ್ಲಿ ಬಸವಣ್ಣನಿಂದ ಸರ್ವಾಂಗಲಿಂಗಿಯಾದೆನು. ೧೪೮-X-4-9. ಮತ್ತಂ :

ಹಸ್ತಮಸ್ತಕಸಂಯೋಗವಾಗದ ಮುನ್ನಪೆ ಯೌವನಮಥನವಾಯಿತ್ತು. ಆವುದ ಅಂತರಂಗವೆಂಬೆನು ? ಆವುದ ಬಹಿರಂಗವೆಂಬೆನು ? ಆವುದನಾತ್ಮಸಂಗವೆಂಬೆನು ?

ಹಸ್ತಮಸ್ತಕ ಸಂಯೋಗವೆ ಬಹಿರಂಗ, ಮನಸಂಯೋಗವೆ ಅಂತರಂಗ, ಕೂಡಲಚೆನ್ನ ಸಂಗನಲ್ಲಿ ಆತ್ಮಸಂಗವಾಯಿತ್ತು. ೨೪೯-೩೨೪-4-11.

ಮತ್ತಂ, ಬಸವರಾಜದೇವರು ತಮಗೆ ಉಪದೇಶವ ಮಾಡಿದ ಮಹಾತ್ಮೆಯನು ವಿವೇಕಮುಖದಿಂದಱಿದು ಪರಿಣಾಮಿಸಿ, ಆ ಚಿಕ್ಕದಣ್ಣಾಯಕರು ಕೃತನಿಶ್ಚಯವ ನೈದಿದ ಪ್ರಸ್ತಾವದ ವಚನ:

ಪ್ರಥಮದಲ್ಲಿ ಗುರು ಕಾಣಿಕೆಯಾಗಿ ಕರ್ಮಂಗಳು ಬೆಚ್ಚಿ ಬೆದಱಿದವು. ಹುಸಿ ಯಾಮಿಷ ತಾಮಸಕುಟಿಲಂಗಳು ತಮಗೆ ನಿಂದಿರ ಠಾವಿಲ್ಲೆನುತ್ತಿರ್ದವು. ಸದ್ಗುರು ಕಾರುಣ್ಯಹಸ್ತಮಸ್ತಕಸಂಯೋಗದಲ್ಲಿ, ಪೂರ್ವಗುಣವಳಿದು ಪುನರ್ಜಾತನಾಗಿ ಕರಣಾದಿಗುಣಂಗಳ ಕಳೆದು, ಶಿವಲಿಂಗದಲ್ಲಿ ಉಳಿದು, ಅನುಪಮಸುಖಸಾರಾಯ ಶರಣನೆನಿಸಿದ ಕಾರಣ, ಇದನಱಿದು ಲಿಂಗದಲ್ಲಿ ತದುಗತವಾಗಿರ್ದನು. ಜಂಗಮದಲ್ಲಿ ಕರುಣವ ಪಡೆದು, ಭವಿಯನೊಲ್ಲೆನೆಂದು ಬೇಱೆ ನಿಂದ ಕಾರಣ, ಕೂಡಲಚೆನ್ನಸಂಗಮ, ದೇವ, ನಿಮ್ಮ ಶರಣ ಬಸವಣನೆನ್ನ ಭವಕಲ್ಪಿತವ ಕಳೆದನು. ೨೫೦-೩೨೫-4-12. ಮತ್ತಂ:

ಚರಣವಿಡಿದಂಗೆ ಕರುಣಿಸಿ ಕಂದೆಱವೆಯ ಮಾಡಬೇಕೆಂದು, ಮಱಹಿಂದ ಬಂದ ಕಾಯದ ಕರ್ಮವ ಕಳೆದು, ಕರುಣಿ ಕಂದೆದಱವೆಯ ಮಾಡಿದ ಪ್ರಾಣಲಿಂಗ ವೆಂತಿದ್ದುದೆಂದಡೆ—ಆಲಿ ನುಂಗಿದ ನೋಟದಂತೆ, ಬಯಲು ನುಂಗಿದ ಬ್ರಹ್ಮಾಂಡ ದಂತೆ, ಮುತ್ತು ನುಂಗಿದ ಉದಕದಂತೆ, ಪುಷ್ಪ ನುಂಗಿದ ಪರಿಮಳದಂತೆ ಇಪ್ಪ ಮಹಾನುಭಾವಿಗಳನುಡಿಗೆನ್ನ ಒಡಲ ಗುಱಿಮಾಡಿದೆಯಾಗಿ, ಎನ್ನ ಒಡಲ ಪರ್ಯಾಯ ಕೆಟ್ಟಿತ್ತಯ್ಯ, ಕೂಡಲಚೆನ್ನಸಂಗಮದೇವ. ೨೫೧-೩೨೬-4-13. ಮತ್ತಂ:

ಹರ ತನ್ನ ರೂಪ ತೋಱಬೇಕೆಂದು, ಗುರುರೂಪಾಗಿ ಮರ್ತ್ಯಕ್ಕೆ ಬಂದು, ಮನಸ್ಥಲಕ್ಕೆ ಮಂತ್ರವಾದ. ತನುಸ್ಥಲಕ್ಕೆ ಪ್ರಸಾದವಾದ. ಕರಸ್ಥಲಕ್ಕೆ ಲಿಂಗವಾದ. ಇಂತೀ ತ್ರಿವಿಧದಲ್ಲಿ ತ್ರಿವಿಧಸ್ವಾಯತವಾದನು, ಕೂಡಲಚೆನ್ನಸಂಗನಲ್ಲಿ, ಎನ್ನ ಸಂಗನ ಬಸವಣ್ಣನು. ೨೫೨-೩೨೭-4-14. ಮತ್ತಂ:

ಮಾಂಸಪಿಂಡವೆಂದೆನಿಸದೆ ಮಂತ್ರಪಿಂಡವೆನಿಸಿದಾತನು ಬಸವಣ್ಣನು. ವಾಯುಪ್ರಾಣಿ ಯೆಂದೆನಿಸದೆ ಲಿಂಗಪ್ರಾಣಿಯೆಂದೆನಿಸಿದಾತನು ಬಸವಣ್ಣನು. ಜಗಭರಿತನೆಂಬ ಶಬ್ದಕ್ಕೆ ಅಂಗವಿಸದೆ ಶರಣಭರಿತಲಿಂಗವೆಂದೆನಿಸಿದ, ಕೂಡಲಚೆನ್ನಸಂಗಯ್ಯನಲ್ಲಿ, ಎನ್ನ ಪರಮ ಗುರು ಬಸವಣ್ಣನು. ೨೫೩-೩೨೮-4-15. ಮತ್ತಂ

ಆದಿ ಬಸವಣ್ಣನು, ಅನಾದಿ ಲಿಂಗವೆಂದೆಂಬರು, ಹುಸಿಹುಸಿ–ಈ ನುಡಿಯ ಕೇಳ ಲಾಗದು. ಆದಿ ಲಿಂಗವು, ಅನಾದಿ ಬಸವಣ್ಣನು. ಲಿಂಗವೂ ಬಸವಣ್ಣನ ಉದರ ದಲ್ಲಿ ಹುಟ್ಟಿತ್ತು. ಜಂಗಮವೂ ಬಸವಣ್ಣನ ಉದರದಲ್ಲಿ ಹುಟ್ಟಿತ್ತು. ಪ್ರಸಾದವು ಬಸವಣ್ಣನನುಕರಿಸಲಾಯಿತ್ತು. ಇಂತೀ ತ್ರಿವಿಧಕ್ಕೆ ಬಸವಣ್ಣನೆ ಕಾರಣನೆಂದಱಿದೆ ನಯ್ಯ ಕೂಡಲಚೆನ್ನಸಂಗಮದೇವಯ್ಯ. ೨೫೪-೩೨೯-4-16. ಮತ್ತಂ:

ಲಿಂಗದ ಪೂರ್ವಾಶ್ರಯವ ಕಳೆದು, ಇದು ಪ್ರಾಣಲಿಂಗವೆಂದು ತೋಱಿಬಂದನಯ್ಯ ಬಸವಣ್ಣನು. ಲಾಂಛನದ ಪೂರ್ವಾಶ್ರಯವ ಕಳೆದು, ಇದು ಜಂಗಮವೆಂದು ತೋಱಿ ಬಂದನಯ್ಯ ಬಸವಣ್ಣನು. ಪ್ರಸಾದದ ಪೂರ್ವಾಶ್ರಯವ ಕಳೆದು ಇದು ಮಹಾ ಪ್ರಸಾದವೆಂದು ತೋಱಿಬಂದನಯ್ಯ ಬಸವಣ್ಣನು. ಲಿಂಗದ-ಜಂಗಮದ-ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು ಮರ್ತ್ಯಕ್ಕೆ ಜನಿಸಿದನಯ್ಯ, ಕೂಡಲಚೆನ್ನಸಂಗನಲ್ಲಿ, ಬಸವಣ್ಣನು. ೨೫೫-೩೨೦-4-17.

ಮತ್ತಂ ಬಸವಣ್ಣನ ಸ್ತೋತ್ರವ ಮಾಡುವ ವಚನ :

ಒಮ್ಮೆಯೂ ಶ್ರೀ ಗುರುವಿನ ಚರಣವ ನೆನೆಯಲೊಡನೆ ಭವಬಂಧನ ಬಿಡುವುದು. ಗುರುವೆ ಶರಣು, ಗುರುಲಿಂಗವೆ ಶರಣು, ಹರಿಬ್ರಹ್ಮಾದಿಗಳಿಗೆ ಅಗೋಚರವಾದ ಕೂಡಲಚೆನ್ನಸಂಗನೆಂಬ ಲಿಂಗವ ತೋಱಿದ ಬಸವಗುರುವೆ ಶರಣು. ೨೫೬-೩೨೧-4-18.

ಮತ್ತಂ ಸ್ತೋತ್ರ :

ನಮಶ್ಶಿವಾಯ ಲಿಂಗವು, ಓಂ ನಮಶ್ಶಿವಾಯ ಬಸವಣ್ಣನು; ನಮಶ್ಶಿವಾಯ ಲಿಂಗವು ಓಂ ನಮಶ್ಶಿವಾಯ ಬಸವಣ್ಣನು; ಎನ್ನ ಮನಸ್ಥಲದಲ್ಲಿ ಬೆಳಗಿ ತೋಱಿದೆ ಯಾಗಿ. ಇದು ಕಾರಣ ಕೂಡಲಚೆನ್ನಸಂಗಯ್ಯ, ಆದಿ ಆಧಾರವಿಲ್ಲದಂದು ಮೊದಲಾಗಿ ಓಂ ನಮಶ್ಶಿವಾಯ, ಎನುತ್ತಿರ್ದೆನು. ೨೫೭-೩೨೨-4-19. ಮತ್ತಂ :

ಬಸವಣ್ಣ ಓಂಕಾರದಿಂದತ್ತತ್ತ, ನಾದ-ಬಿಂದು-ಕಳೆಗಳಿಂದತ್ತತ್ತ. ಪ್ರಥಮಾಚಾರಿ ನೀನೇ, ಲಿಂಗಾಚಾರಿ ನೀನೇ, ಜಂಗಮಾಚಾರಿ ನೀನೇ, ಪ್ರಸಾದಾಚಾರಿ ನೀನೇ, ಎನಗೆ ಸರ್ವಾಚಾರಿಯು ನೀನೆ. ನೀನೆ ಗತಿಮತಿಯಾಗಿ ಎನ್ನನುಳುಹಿದ ಕಾರಣ, ಕೂಡಲಚೆನ್ನಸಂಗಮದೇವ, ಆನ ನಿರ್ಣಯವಿಲ್ಲದಂದು ಓಂ ನಮಶ್ಶಿವಾಯ, ಎನುತಿರ್ದೆನು. ೨೫೮-೩೨೩-4-20.

ಇಂತು, ಚಿಕ್ಕದಣ್ಣಾಯಕರು ಬಸವರಾಜದೇವರ ಕೃಯ ಅನುಗ್ರಹಮಂ ಪಡೆದು ಪ್ರಾಣಲಿಂಗ ಸಂಬಂಧವಳವಟ್ಟು, ಅಂತರಂಗದ ಜ್ಞಾನ ಬಹಿರಂಗದ ಕ್ರೀಯಲ್ಲಿ ಸಮ ರಸವನೆಯ್ದಿ, ಸರ್ವಾಚಾರಸಂಪನ್ನನಾಗಿ ಕೃತಾರ್ಥನಾದ ಪರಮಹರುಷದಿಂದ, ಬಸವ ರಾಜದೇವರ ಮಹಾತ್ಮೆಗೆ ನಮಸ್ಕಾರವಂ ಮಾಡಿ ಸ್ತೋತ್ರಮಂ ಮಾಡುತ್ತಿರಲು, ಆ ಬಸವರಾಜದೇವರು ಆ ಚೆನ್ನಬಸವಣ್ಣನ ಮಹಾತ್ಮೆಯಂ ನೋಡಿ ನೋಡಿ, ಪರಮ ಹರುಷಿತರಾಗುತ್ತಿರ್ದ ಪ್ರಸ್ತಾವದ ವಚನ :

ಬಿತ್ತಪೆ ಬೆಳೆಯದೆ ಬೆಳೆದ ಹೆಬ್ಬೆಳಸಿನ ರಾಶಿಯ ನೋಡಾ. ಸುಗಂಧ ಬಂಧುರದಂತೆ ಹುಟ್ಟಿತ್ತಪೆ ಪರಿಮಳ. ಆದಿ-ಅನಾದಿ ಇಲ್ಲದ ಮುನ್ನ ತನ್ನಿಂದವೆ ತಾನೆಯಾಗಿದ್ದ ಕಾರಣ ತಟ್ಟದೆ ಮುಟ್ಟದೆ ಗುರುಕಾರುಣ್ಯವ ಹಡೆದು, ಲಿಂಗದಲ್ಲಿ ಸಯವಾಗಿ, ಎನಗೆ ಸತ್‌ಪಥವ ತೋಱಿಸಲೆಂದು ಆಗಾಪನು ಕೂಡಲ ಸಂಗಮದೇವರಲ್ಲಿ ಚೆನ್ನಬಸವಣ್ಣನು. ೨೫೯-೩೨೪-4-21. ಮತ್ತಂ :

ನಾನಾ ಸ್ಥಾನದಲ್ಲಿ ತೊಳಲಿ ಬಳಲಿ ಅಳಿದು ಉಳಿದು ನಿಂದ ನಿಲವಲ್ಲ. ಮರ್ತ್ಯಲೋಕದಲ್ಲಿ ಸದಾಚಾರದ ಘನವು ಹೂಳಿ ಹೋದಹುದೆಂದು—ಕರ್ತನು ತಾನೆ ಮಹಾಪ್ರಸಾದಿಯಾಗಿ ಉದಯವಾದನು. ಹಸ್ತಮಸ್ತಕ ಸಂಯೋಗವಿಲ್ಲದ ಮುನ್ನವೆ, ಆದಿಗುರು, ಅನಾದಿ ಶಿಷ್ಯನೆಂಬುದ ನೆಲೆಮಾಡಿ, ಸಂಗಮನಾಥನೆಂಬ ಲಿಂಗವನೆನ್ನ ಕೈಯಲ್ಲಿ ಕೊಟ್ಟು, ಸಾಮದಿಂದಲನುಗ್ರಹಿಸಿಕೊಂಡನು. ಎನ್ನ ಹಿಂದಣ ಪೂರ್ವಾಪರವನೆತ್ತಿ ತೋಱಿ, ತನ್ನತ್ತ ತೆಗೆದುಕೊಂಡನು, ಕೂಡಲಸಂಗಮದೇವರಲ್ಲಿ, ಚೆನ್ನಬಸವಣ್ಣನು. ೨೬೦-೩೩೬-4-22.

ಇಂತು ಬಸವರಾಜದೇವರು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡುತ್ತಿರಲು, ಆ ಚೆನ್ನಬಸವರಾಜದೇವರು ಬಸವರಾಜದೇವರ ಪೂರ್ವಾಪರಸಾಂಗತ್ಯಮಂ ತಿಳಿಯಪೇಳಿ ಕೊಂಡಾಡುತ್ತಿರ್ದರು. ಅದೆಂತೆಂದಡೆ ಆ ಪ್ರಸ್ತಾವದ ವಚನ:

ಪ್ರಥಮಕಾಲದಲ್ಲಿ ನಿರಾಲಂಬಿಯಾಗಿದ್ದಿರಯ್ಯ, ದ್ವಿತೀಯ ಕಾಲದಲ್ಲಿ ತೇಜೋಮೂರ್ತಿಯಾಗಿದ್ದಿರಯ್ಯ. ತೃತೀಯ ಕಾಲದಲ್ಲಿ ನಾದಮೂರ್ತಿಯಾಗಿದ್ದಿರಯ್ಯ. ಚತುರ್ಥ ಕಾಲದಲ್ಲಿ ಚೈತನ್ಯರೂಪ ತಾಳಿದ್ದಿರಯ್ಯ, ಪಂಚಮಕಾಲದಲ್ಲಿ ಧರ್ಮಮೂರ್ತಿಯಾಗಿದ್ದಿರಯ್ಯ, ಷಷ್ಠ ಕಾಲದಲ್ಲಿ ನೀವು ಪರಪುರುಷಾರ್ಥಸಾಧನವಾಗಿ ಲಿಂಗವ ತೋಱಿದರೆ, ಕೊಂಡಡಗಿದನೊಬ್ಬ ಗಣೇಶ್ವರನು. ಆ ಶಿಷ್ಯನ ಕೈಯ ಲಿಂಗವನಱಿಸಲೆಂದು ಮರ್ತ್ಯಕ್ಕೆ ಬಂದಿರಿ ನೀವು, ಅಮರಗಣಂಗಳು ಸಹಿತ. ಮುಟ್ಟಿ ಪ್ರಾಣಲಿಂಗದ ಹರಿ[=ಱಿ ?]ವ ತೋಱಬೇಕೆಂದು ನೀವಿತ್ತ ಬೆಸನವಿಡಿದು, ನಿಮ್ಮ ಕರುಣದ ಶಿಶುವಾಗಿ ಹುಟ್ಟಿದೆನು ನಿಮ್ಮ ಕರಕಮಲದಲ್ಲಿ, ಕೂಡಲಚೆನ್ನಸಂಗಮದೇವ, ನಿಮ್ಮ ಮಹಿಮೆಗೆ ನಮೋ ನಮೋ ಎನುತಿರ್ದೆನು. ೨೬೧-೩೩೭-4-25.

ಹೀಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಅದಕ್ಕೆ ಬಸವರಾಜದೇವರು ತಮ್ಮ ಪೂರ್ವಾಪರಮಂ ತಿಳಿದು ನೋಡಿ, ಆ ಚೆನ್ನಬಸವರಾಜದೇವರ ಒಡನೆ ತಮ್ಮ ಪ್ರಾಣಲಿಂಗವೆಂದು ಸಾಧ್ಯವಪ್ಪುದೆಂದು ಕೇಳುವ ಪ್ರಸ್ತಾವದ ವಚನ:

ತಿಂಬ ಗಂದೆಯ ಮೇಲೆ ಉಗುರು ಬಂದು ಬಿದ್ದಂತಾಯಿತ್ತು. ಎನ್ನ ಹಿಂದನೆಚ್ಚರಿಸಿ, ಮುಂದನಱುಹಿ, ಸಂದೇಹವ ಬಿಡಿಸಿದೆ. ಎನ್ನ ಕಂದುಕಲೆಯ ಕಳೆವ ತಂದೆ ನೀನಿರುತ್ತಿರಲು, ನನಗಿನ್ನಾವ ದಂದುಗವೂ ಇಲ್ಲ ನೋಡಾ! ಬಂದ ಕಾರ್ಯದ ಹದನಿನ್ನೆಂದು ಸಯವಪ್ಪುದು? ಕೂಡಲಸಂಗಮದೇವರು ಎನ್ನನಿತ್ತಬಾರೆಂಬ ಕಾಲವ ತಿಳುಹಾ ಚೆನ್ನಬಸವಣ್ಣ. ೨೬೨-೩೩೮-X

ಎನಗಿನ್ನೆಂದು ಪ್ರಾಣಲಿಂಗ ಸಂಬಂಧ ಸಯವಪ್ಪುದೆಂದು ಬಸವರಾಜದೇವರು ಬೆಸಗೊಳಲು ಆ ಸ್ಥಿತಿಗತಿಯ ಹೇಳುವ ಪ್ರಸ್ತಾವದ ವಚನ:

ಹೂವಿಡಿಯ ಹಱಿದು, ಹಣ್ಣ ಮಾಡಿದೆನೆಂದರೆ, ಕೆಲ[+ ಸ ?] ಕಾರ್ಯಂಗಳಪ್ಪವೇ ದೇವ? ಶಶಿಧರನಟ್ಟಿದ ಬೆಸನೊಳಗೆ -ಯುವೆ ಮಾತ್ರ ಮಣಿಹ ಪೂರೈಸದು; ಲಿಂಗಪ್ರಾಣ, ಪ್ರಾಣಲಿಂಗವೆಂಬ ಭೇದವ ತಿಳಿದಲ್ಲದೆ, ಸಂಗಮನಾಥನಿತ್ತ ಬಾರೆಂದೆತ್ತಿ

ಕೊಳನು. ಕೂಡಲಚೆನ್ನಸಂಗಯ್ಯಂಗೆ ಸವೆಯದ ಮುನ್ನವೆ ಸಯವಾಗಲುಂಟೆ ಸಂಗನ ಬಸವಣ್ಣ. ೨೬೩-೩೩೯-X

ಪ್ರಾಣಲಿಂಗಸಂಬಂಧ ಸಯವಾದಲ್ಲದೆ ನಿಜಪದದಲ್ಲಿ ಬೆರಸಬಾರದೆಂದು, ಚಿಕ್ಕ ದಣ್ಣಾಯಕರು ಬಿನ್ನೈಸಲು, ಅದಕ್ಕೆ ಬಸವರಾಜದೇವರು ನಿರೂಪಿಸಿದ ಪ್ರಸ್ತಾವದ ವಚನ:

ಲಿಂಗದ ಪ್ರಾಣದ ಸಕೀಲ ಸಂಬಂಧವೆಂತಿರ್ಪುದೆಂದಱಿಯೆನು. ಪ್ರಾಣಲಿಂಗದ ಸಕೀಲ ಸಂಬಂಧವೆಂತಿರ್ಪುದೆಂದಱಿಯೆನು. ಹೂಸಿ ಹುಂಡನ ಮಾಡಿ, ಹೊಱಗನೆ ಪೂಜಿಸಿ ವೃಥಾ ದಿನಂಗಳು ಸವೆದು ಹೋದವು. ಕೂಡಲಸಂಗಮದೇವರಲ್ಲಿ ಎನ್ನ ಪ್ರಾಣ ಲಿಂಗದಲ್ಲಿ ನಿಕ್ಷೇಪವಹ ಭೇದವ ತೋಱಾ ಚೆನ್ನಬಸವಣ್ಣ. ೨೬೪-೩೪೦-4-26.

ಹೀಗೆಂದು ಬಸವರಾಜದೇವರು ನಿರೂಪಿಸಲು, ಅದಕ್ಕೆ ಚಿಕ್ಕದಣ್ಣಾಯಕನು ಪ್ರಾಣ ಲಿಂಗ ಸಂಬಂಧದ ಭೇದಮಂ ತಿಳುಹುತಿರ್ದನು. ಅದೆಂತೆಂದರೆ ಆ ಪ್ರಸ್ತಾವದ ವಚನ:

ಹೋ ಹೋ ಗುರುವೇ, ನಿಮ್ಮ ಕರಕಮಲದಲ್ಲಿ ಉದಯಿಸಿ, ಅಂಗದ ಮೇಲೆ ಲಿಂಗವ ಧರಿಸಿ,ಆ ಲಿಂಗದಲ್ಲಿ ಆಗಾಗಿ;ಪ್ರಾಣ ಲಿಂಗ,ಲಿಂಗ ಪ್ರಾಣವೆಂಬುದ ನಾನು ಕಂಡೆನು. ನಿಮ ಗಾನು ತೋಱಲು ಸಮರ್ಥನೆ? ಆಚಾರವಂಗದ ಮೇಲೆ ನೆಲೆಗೊಂಡು, ಇಷ್ಟಲಿಂಗದಲ್ಲಿ ದೃಷ್ಟಿನಟ್ಟು ಭಾವಸಂಪನ್ನನಾಗಿಪ್ಪ ನಿಮ್ಮ ಘನವ ನಾನೆತ್ತ ಬಲ್ಲೆನಯ್ಯ? ಅನುಭಾವ ಅಂತರಂಗದಲ್ಲಿ ನೆಲೆಗೊಂಡು, ಪ್ರಾಣಲಿಂಗದೊಳು ನಿಕ್ಷೇಪಿತವಾಗಿ ನಿಜಚೈತನ್ಯವಾಗಿಪ್ಪ ನಿಮ್ಮ ಘನವ ನಾನೆತ್ತ ಬಲ್ಲೆನಯ್ಯ? ಜ್ಞಾನಸಮಾಧಿಯೊಳು ಬಯಕೆಯಡಗಿ, ಪರಿಣಾಮಲಿಂಗದಲ್ಲಿ ಮನಸ್ಸು ಲಯವಾಗಿ, ನಿಜಲಿಂಗಸ್ಥಲದಲ್ಲಿ ತೃಪ್ತರಾಗಿಪ್ಪಿರಿ ನೀವು. ನಿಮ್ಮ ಘನವ ನಾನೆತ್ತ ಬಲ್ಲೆನಯ್ಯ? ಅಂಗದ ಮೇಲೆ ಲಿಂಗ ಉಳ್ಳು ದೆಲ್ಲವೂ ಸಂಗಮನಾಥನೆಂದಲ್ಲಿಯೇ, ಜಂಗಮಪ್ರಾಣಿಯಾಗಿಪ್ಪಿರಿ ನೀವು. ನಿಮ್ಮ ಘನವ ನಾನೆತ್ತ ಬಲ್ಲೆನಯ್ಯ? ಲಿಂಗಕ್ಕೆ ಬಂದ ಪದಾರ್ಥವಲ್ಲದೆ ಕೊಳ್ಳೆನೆಂದು ಮನವಮೀಸಲು ತನುವಮೀಸಲು ಮಾಡಿ, ಸರ್ವಾಂಗಸುಖವೆಲ್ಲವನು ಪ್ರಾಣಲಿಂಗದಲ್ಲಿ ಅರ್ಪಿಸಿ, ನೀವು ತೊಲಗಿ ನಿರಾಭಾರಿಯಾಗಿ, ಪ್ರಸಾದಲಿಂಗಪ್ರಾಣಿಯಾಗಿಪ್ಪಿರಿ ನೀವು. ನಿಮ್ಮ ಘನವ ನಾನೆತ್ತ ಬಲ್ಲೆನಯ್ಯ? ಕೂಡಲ ಚೆನ್ನ ಸಂಗಯ್ಯ ಸಾಕ್ಷಿ ಯಾಗಿ, ನಿಮ್ಮ ಪ್ರಾಣಲಿಂಗದ ಸಂಬಂಧದ [1]ಸೆಱಗು[1] ಸೋಂಕಿನಲೊಕ್ಕುಮಿಕ್ಕ ಪ್ರಸಾದಿ ನಾನು ಕಾಣಾ ಸಂಗನ ಬಸವಣ್ಣ. ೨೬೫-೩೪೧-4-27

ಇಂತು, ಪ್ರಾಣಲಿಂಗ ಸಂಬಂಧವೆಹಂಗೆಂದು ಬಸವರಾಜದೇವರು ಕೇಳಲು, ಚಿಕ್ಕ ದಣ್ಣಾಯಕರು—ಉಪಾಯದಿಂದ ಸ್ತೋತ್ರಮುಖದಿಂದವೆ ಪ್ರಾಣಲಿಂಗಸಂಬಂಧದ ನಿರ್ಣಯಮಂ ಹೇಳದ ಹಾಗೆ ಹೇಳಿ ತೋಱಲು, ಅದಕ್ಕೆ ಬಸವರಾಜದೇವರು ಪ್ರಾಣ ಲಿಂಗಸಂಬಂಧದ ಭೇದಮಂ ತನ್ನೊಳ್ ತಾನೆ ಕಂಡು, ಹಾರೈಸಿ, ಹರುಷಂ ಬಟ್ಟು, ಚಿಕ್ಕದಣ್ಣಾಯಕರ ಕೊಂಡಾಡಿದ ವಚನ:

[1] (ಹಗೂ) × (ತಿ).

ಮರದೊಳಗೆ ಅಗ್ನಿ ಇದ್ದರೇನಯ್ಯ, ಮಥಿಸಿಸಿ ತೋಱುವರಿಲ್ಲದನ್ನಕ್ಕರ ಕಾಣಬಹುದೇ ಅಯ್ಯ? ಜಗದೊಳಗೆ[1] ಶಿವ ಪರಿಪೂರ್ಣನಾಗಿ ಕೂಡಿಹನೆಂದರೆ, ಅಂತರಂಗದಲ್ಲಿ ಕಾಣಬಹುದೇ[1] ಅಯ್ಯ? ಆದಿಲಿಂಗ ಅನಾದಿ ಶರಣನ ಭೇದವ ತಿಳುಹಿ, ನಿಜಪ್ರಾಣದೊಳಗಿಪ್ಪ ಸುಜ್ಞಾನಲಿಂಗವ ಕರಸ್ಥಲಕ್ಕೆ ತಂದು, ಆ ಕರಸ್ಥಲದ ಲಿಂಗವನೆನ್ನ ಸರ್ವಾಂಗದೊಳಗೆ ಪ್ರತಿಷ್ಠಿಸಿ ತೋಱಿ, ನಿತ್ಯನಿಜಲಿಂಗೈಕ್ಯದ ಹೊಲಬಿನ ಹಱಿವ ತೋಱಿಸಿ, ಮರ್ತ್ಯಲೋಕದೊಳಗೆಲ್ಲಾ — ಇಂದು ಮೊದಲಾಗಿ — ಪ್ರಾಣಲಿಂಗದ ಘನವನು ಹರಹಿ ಶಿವಭಕ್ತಿಯನುದ್ಧರಿಸಿದನು. ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನೆನ್ನನಾಗು ಮಾಡಿ ಉಳುಹಿದನಾಗಿ, ಇನ್ನು ಮರ್ತ್ಯಲೋಕಕ್ಕೆ ಬಂದರೆ, ಚೆನ್ನ ಬಸವಣ್ಣನ ಶ್ರೀಪಾದದಾಣೆ. ೨೬೬-೩೪೨-4-28

* ಇಂತು ಪ್ರಾಣಲಿಂಗ ಸಂಬಂಧಮಂ ತಿಳುಹಿ, ಎನ್ನನುಳುಹಿದನಾಗಿ, ನಾನು ಕೃತಾರ್ಥನಾದೆನೆಂದು ಬಸವರಾಜದೇವರು ನಿರೂಪಿಸಲು — ಚಿಕ್ಕದಣ್ಣಾಯಕರು ಬಿನ್ನೈಸಿದ ಪ್ರಸ್ತಾವದ ವಚನ:

ಮರ್ತ್ಯಲೋಕ ಶಿವಲೋಕವೆಂಬುದೊಂದು [2]ನಿಚ್ಚಯ ನಿಮಗೆ ಯಾವುದು[2] ದೇವ? ನೀವೀ ಕಲ್ಯಾಣಕ್ಕೆ ಬಂದವತರಿಸಿದಲ್ಲಿ. ಸತ್ಯಶರಣರೆಲ್ಲರನು ಪಾವನವ ಮಾಡಲೆಂದು ಬಂದರೆ-ಜನ್ಮದಲ್ಲಿ ಬಂದನೆಂದು ನುಡಿಯಬಹುದೇ? ಕರ್ತನ ನಿರೂಪ ಭೃತ್ಯಂಗೆ ಬಂದಲ್ಲಿ, ಆ ಭೃತ್ಯ ಕರ್ತನನಱಿಸಿ ಬಂದನಲ್ಲಾ! ಸತ್ಯ-ಸದಾಚಾರವ ಹರಹಿ, ಮರ್ತ್ಯವ ಪಾವನವ ಮಾಡಿ, ನಿಜಲಿಂಗಸಮಾಧಿಯೊಳು ನಿಲ್ಲುವರಿನ್ನಾರು ಹೇಳಾ ನೀನಲ್ಲದೆ? ಕೂಡಲ ಚೆನ್ನಸಂಗಮದೇವರು ಸಾಕ್ಷಿಯಾಗಿ ನಿಮಗೆ ಭವ ಉಂಟೆಂದು ಮನದಲ್ಲಿ ಹಿಡಿದರೆ, ಸಂಗನಬಸವಣ್ಣ, ನಿಮ್ಮ ಶ್ರೀಪಾದದಾಣೆ. ೨೬೭-೩೪೩-4-29

ನೀವು ಮರ್ತ್ಯಕ್ಕೆ ಬಂದರೇನು? ಶಿವಲೋಕದಲ್ಲಿ ಇದ್ದರೇನು? ನಿಮಗೆ ಭವಂಗಳಿಲ್ಲವೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಇದಕ್ಕೆ ಬಸವರಾಜದೇವರು ಪರಮ ಹರುಷಿತರಾಗಿ, ತಮ್ಮ ಪೂರ್ವಾಪರ ಸಾಂಗತ್ಯಮಂ ತಿಳುಹಿ ತೋಱುವ ಪ್ರಸ್ತಾವದ ವಚನ:

ಭವವಿಲ್ಲದಡೇನು? ಬಂಧನವಿಲ್ಲದಡೇನು? ಶಿವಗಣಂಗಳೆಲ್ಲರ ಮನಕ್ಕೆ ಬಾರದದು ಭವ-ಬಂಧನ ನೋಡಾ! ಪರಹಿತಾರ್ಥವಾಗಬೇಕೆಂದು ಲಿಂಗವ ಕೊಟ್ಟರೆ, ನಿಮ್ಮ ಪ್ರಮಥರ ಮುಂದೆ ಶಿವನು ಮುನಿದು ಮರ್ತ್ಯಲೋಕಕ್ಕೆ ಕಳುಹಿದನು. ಅಂಗದ ಮೇಲೆ ಲಿಂಗವುಳ್ಳುದೆಲ್ಲವೂ ಸಂಗಮನಾಥನೆಂದು ನಂಬಿದಲ್ಲಿ, ನಿಮ್ಮ ಪ್ರಮಥರೆನ್ನನೊಳಗೆ ಇಟ್ಟುಕೊಂಡರು. ಜಂಗಮ ಮುಖದಲ್ಲಿ ಲಿಂಗವನಱಿಸಿಕೋ ಎಂದರೆ, ದಾಸೋಹವೆಂಬ ಪಸಾರವನಿಕ್ಕಿದೆನು. ಕೂಡಲಸಂಗಮದೇವರ ಮುಂದೆ ಜಂಗಮಮುಖಲಿಂಗದಲ್ಲಿ

---

[1] (ಹ) × (ಶಿ) ಕೂಡೆ ಪರಿಪೂರ್ಣ ಶಿವನೆಂದರೆ ಅಂತರಂಗದಲ್ಲಿ ಕಾಣಬಹುದೇ (ಗೂ).
* ಇಲ್ಲಿಂದ ಮುಂದೆ ಬರುವ ಎರಡು ನಕ್ಷತ್ರ ಚಿಹ್ನೆಗಳ ವರೆಗಿನ ಭಾಗವಿರುವ ೧೦೮ನೇ ಗರಿ "ಶಿ" ಪ್ರತಿಯಲ್ಲಿ ಲುಪ್ತವಾಗಿದೆ. ಈ. ಭಾಗವನ್ನು "ದೇ" ಪ್ರತಿಯಿಂದ ಉಲ್ಲೇಖಿಸಿಕೊಂಡು "ಹ" ಪ್ರತಿಯೊಡನೆ ತಾಳೆ ನೋಡಲಾಗಿದೆ. [2] (ದೇ) ನಿಚ್ಚಣಿಗೆಯಾದವು ನೋಡಾ (ಹ ಗೂ ಉ).

ಎಂದು ಸುಖಿಯಪ್ಪೆನು ಹೇಳಾ ಚೆನ್ನಬಸವಣ್ಣ ? ೨೬೮-೩೪೪- X

ಜಂಗಮಮುಖದಲ್ಲಿ ಲಿಂಗವನೆಂದು ಕಂಡು ಬೆರಸುವೆನೆಂದು ಬಸವರಾಜದೇವರು ಕೇಳಲು, ಆ ಚಿಕ್ಕ ದಣ್ಣಾಯಕರು— ಅಲ್ಲಮಪ್ರಭುದೇವರ ಮುಖದಲ್ಲಿ ನಿಮ್ಮ ಇಷ್ಟಾರ್ಥ ಸಿದ್ಧಿಯಪ್ಪುದು, ಅವರನು ಈಗಳೆ ತೋಱಿಸಿ ಕೊಡುವೆನೆಂದು ಬಿನ್ನೈಸಿದ ಪ್ರಸ್ತಾವದ ವಚನ :

ಲಿಂಗಜಂಗಮ-ಜಂಗಮಲಿಂಗದ ಮುಖವ ನೀವಲ್ಲದೆ ಇನ್ನು ಬಲ್ಲವರಾರಯ್ಯ? ಅಂಗದ ಮೇಲೆ ಲಿಂಗವುಳ್ಳುದೆಲ್ಲವೂ ಸಂಗಮನಾಥನೆಂದಲ್ಲಿ, ಪರವಾದಿ ಬಿಜ್ಜಳನು ಒರೆದು ಸೋಡಲೆಂದಟ್ಟಿದರೆ ಹಗರಣಿಗರ— ಜಂಗಮಮುಖಲಿಂಗವ ಮಾಡಿದವರಾರು ಹೇಳಾ ನೀವಲ್ಲದೆ? ಮರದ ಮಾನಿಸರ ಕರೆದು—ಓ ಎನಿಸಿ, [1]ಉಡಿಸಿ[1], ಉಣಿಸಿ, ಜಂಗಮಲಿಂಗ ಪ್ರಾಣಿ ಸಂಗನ ಬಸವಣ್ಣನೆಂಬ ಧ್ವಜವನೆತ್ತಿ, ಮೆಱೆದವರಾರು ಹೇಳಾ ಈ ಕಲ್ಯಾಣದಲ್ಲಿ [2]ನೀವಲ್ಲದೆ ?[2] ಜಂಗಮಮುಖಲಿಂಗವನಱಿಯೆನೆಂದು ಎನ್ನ ಮನಕ್ಕೆ ಸಂದೇಹವನೊಡ್ಡಿ ಜಾಱಿದರೆ ನಾನು ಸೈರಿಸಬಲ್ಲೆನೆ? ನೀನು ಜಂಗಮಮುಖಲಿಂಗಸಂಬಂಧಿ ಎಂಬುದ ಕೇಳಿ, ಆದಿಗಣನಾಥನು ಅಲ್ಲಮಪ್ರಭುದೇವರೆಂಬ ನಾಮವ ಧರಿಸಿಕೊಂಡು ಬರುತ್ತೈದಾನೆ. ಕೂಡಲ ಚೆನ್ನಸಂಗಮದೇವರು ಸಾಕ್ಷಿಯಾಗಿ, ಸಂಗನ ಬಸವಣ್ಣ, ನೀನೆ ಜಂಗಮಪ್ರಾಣಿ ಎಂದು ನಾನು ನಂಬಿದ್ದೆನು. ೨೬೯-೩೪೫-4-31

ಅಲ್ಲಮ ಪ್ರಭುದೇವರು ನಿಮ್ಮನಱಸಿಕೊಂಡು ಬಪ್ಪುದನೀಗಳೆ ತೋಱಿದಪೆನೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಅದಕ್ಕೆ ಬಸವರಾಜದೇವರು ಪರಮಹರುಷಿತರಾದ ಪ್ರಸ್ತಾವದ ವಚನ :

ಜಂಗಮವೆ ಲಿಂಗವೆಂಬ ಭಾಷೆ ಫಲಿಸಿದರೆ ಇಂದಿನ ಪುಣ್ಯಕ್ಕೆ ಸರಿಯುಂಟೆ? ಲಿಂಗದ ಒಡಲ ಮನೆಯ ಮಾಡಿಪ್ಪ ಜಂಗಮವೆನ್ನ ಕಣ್ಣ ಮುಂದೆ ತೋಱಿದರೆ, ಇಂದೆನ್ನ ಭಾಗ್ಯಕ್ಕೆ ಕಡೆ ಇಲ್ಲ. ಆ ಜಂಗಮವೆ ದಿಟಕ್ಕೆನ್ನ ಮನೆಗೆ ಬಂದರೆ, ಕೂಡಲ ಸಂಗಮದೇವರಲ್ಲಿ ಸಲುಗೆಯ ವರವ ಹಡೆದೆನು ಕಾಣಾ ಚೆನ್ನಬಸವಣ್ಣ ನಿನ್ನ ಮುಂದೆ. ೨೭೦-೩೪೬-4-32

---

[1] (ದೇ) ಊಡಿ (ಹ) ಸುಡಿಸಿ ಉಡಿಸಿ (ಗೂ). [2] (ಗೂಶಿ) × (ದೇಹ).

ಹೀಂಗೆಂದು ಚಿಕ್ಕದಣ್ಣಾಯಕರು ಹಿರಿಯದಣ್ಣಾಯಕರು ತಮ್ಮೊಳಗೆ ತಾವು ಜ್ಞಾನಾನುಭಾವವ ಸಂಬಂಧಿಸಿ ನೋಡಿ ಕಂಡು, ಈಗಳೆ ಪ್ರಭುದೇವರ ಬರವು ತಪ್ಪಲಱಿಯದೆಂದು ಮಹಾನುಭಾವ ಗೋಷ್ಠಿಯೊಳಗೋಲಾಡುತ್ತಿರಲು; ಇತ್ತಲು, ಪ್ರಭುದೇವರು-ಸಿದ್ಧರಾಮಯ್ಯದೇವರು ಸೊನ್ನಲಿಗೆಯ ಪುರಮಂ ಪೊಱಮಟ್ಟು, ಅನಂತ ದೇಶಾಂತರಂಗಳಂ ಮಾಡುತ್ತ, ಹಲವು ಕೆಲವು ದಿವಸಂಗಳಂ ಕಳೆವುತ್ತ ಬಂದು, ಮರ್ತ್ಯಲೋಕದ ಸಕಲೈಶ್ವರ್ಯದ ಭಂಡಾರದ ನಿಜನಿಳಯವೆನಿಸಿಪ್ಪ, ಮತ್ತಂ; ಭೂಮಿಗೆ ಹೃತ್ಕಮಲ ಕರ್ಣಿಕಾವಾಸಮೆನಲೊಪ್ಪುವ, ವಾಣಿಯ ಮುಖದರ್ಪಣವೆನಿಸಿರ್ಪ, ಸಕಲ ಧರ್ಮಂಗಳಂ ತೀವಿದ ಕರಂಡಗೆಯೆನಿಸಿಪ್ಪ, ಸತ್ಯದ ಸಾಗರವೆನಿಸಿರ್ಪ, ಮುಕ್ತಿಗೆ ಮುಖವೆನಿಸಿರ್ಪ, ಪುಣ್ಯದ ಪುಂಜವೆನಿಸಿರ್ಪ, ಅಭಿನವ ಕೈಲಾಸವೆನಿಸಿಪ್ಪ ಶ್ರೀ ಕಲ್ಯಾಣಪುರಮಂ ಕಂಡು, ಇಲ್ಲಿ ಬಸವರಾಜದೇವರು ಮೂರ್ತಿಗೊಂಡು ಇರುತಿರ್ಪರೆಂದು ಅಱಿದು, ಆ ಪುರಕ್ಕೆ ವಂದನೆಯಂ ಮಾಡಿ ಸ್ತುತಿಸುತ್ತ, ಆ ಪ್ರಭುದೇವರು—ಸಿದ್ಧರಾಮಯ್ಯ ದೇವರಿಗೆ ಆ ಕಲ್ಯಾಣಪುರಮಂ ತೋಱಿಸಿ, ಕೊಂಡಾಡುತ್ತಿದ್ದ ಪ್ರಸ್ತಾವದ ವಚನ :

ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆಱೆದು, ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು, ತೊಳಗಿ ಬೆಳಗುತಿರ್ದುದಯ್ಯ ಶಿವನ ಪ್ರತಾಪ! ಆ ಬೆಳಗಿನೊಳಗೆ ಒಪ್ಪುತಿರ್ದರಯ್ಯ ಅಸಂಖ್ಯಾತರು. ಶಿವಭಕ್ತನಿರ್ದ ಕ್ಷೇತ್ರ ಅವಿಮುಕ್ತಿ ಕ್ಷೇತ್ರವೆಂಬುದು ಹುಸಿಯೇ? ಶಿವಭಕ್ತನಿರ್ದ ದೇಶ ಪಾವನವೆಂಬುದು ಹುಸಿಯೇ? ಗೊಗೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯರು ಸಂಗನ ಬಸವಣ್ಣನ ಮಹಿಮೆಯ ನೋಡಾ ಸಿದ್ಧರಾಮಯ್ಯ. ೨೭೧-೩೪೭-4-33.

ಇಂತು, ಪ್ರಭುದೇವರು ಸಿದ್ಧರಾಮಯ್ಯದೇವರಿಗೆ ಕಲ್ಯಾಣಪುರದ ಮಹಾತ್ಮೆಯಂ ಹೇಳಿ ಕೊಂಡಾಡುತ್ತಿರ್ಪ ತತ್ಕಾಲೋಚಿತದೊಳು—ಆ ಪುರದ ದ್ವಾರವಟ್ಟದ ಮುಂದೆ, ಶಾಸನದೊಳು ಕಲ್ಯಾಣಮಹಾತ್ಮೆಯನು ಚೆನ್ನಬಸವರಾಜದೇವರು ವಿವರವಾಗಿ ವಚನ ರೂಪವಾಗಿ ಬರೆದಿರಲು, ಅದಂ ಪ್ರಭುದೇವರು ಕಂಡು ಓದಿ ನೋಡಿದ ಪ್ರಸ್ತಾವದವಚನ :

ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ್ ಕಲ್ಯಾಣಪುರದ ಮಹಾತ್ಮೆ ಎಂತೆಂದೊಡೆ-ವಿಸ್ತರಿಸಿ ಪೇಳುವೆನು: ಎಲ್ಲಾ ಶಿವಗಣಂಗಳು ಕೇಳಿ ಕೃತಾರ್ಥರಾಗಿರಯ್ಯ. ಮರ್ತ್ಯಲೋಕದ ಮಹಾಗಣಂಗಳು ಕೇಳಿ ಕೃತಾರ್ಥರಾಗಿರಯ್ಯ. ರುದ್ರಲೋಕದ ರುದ್ರಗಣಂಗಳು ಕೇಳಿ ಕೃತಾರ್ಥರಾಗಿರಯ್ಯ. ನಾಗಲೋಕದ ನಾಗಗಣಂಗಳು ಕೇಳಿ ಕೃತಾರ್ಥರಾಗಿರಯ್ಯ. ಹದಿನಾಲ್ಕು ಭುವನಕ್ಕೆ ಕಳಶವೆಂದೆನಿಸುವ ರುದ್ರಲೋಕವೆ ಮರ್ತ್ಯಲೋಕಕ್ಕಿಳಿತಂದು ಕಲ್ಯಾಣವೆಂಬ ಪುರವಾಗಿ ಹುಟ್ಟಿತ್ತು ನೋಡಿರಯ್ಯ. ಅಲ್ಲಿ ಸತ್ಯರು,

ಸಾತ್ವಿಕರು, ನಿತ್ಯರು, ನಿಜೈಕ್ಯರು, ಮಹಾಜ್ಞಾನಿಗಳು, ಪರಶಿವಯೋಗಿಗಳು, ಶಿವಾನುಭಾವಸಂಪನ್ನರು, ಶಿವಲಿಂಗಪ್ರಾಣಿಗಳು, ಶಿವಪ್ರಸಾದ ಪಾದೋದಕ ಸಂಬಂಧಿಗಳು, ಶಿವಾಚಾರವೇದ್ಯರು, ಶಿವಾಗಮಸಾಧ್ಯರು, ಶಿವಸಮಯಪಕ್ಷರುಗಳಲ್ಲದೆ ಮತ್ತಾರು ಅಲ್ಲಿಲ್ಲ ನೋಡಿರೆ. ಅಯ್ಯ, ಪಾಪಿಗಳು, ಕೋಪಿಗಳು, ಅಸತ್ಯರು, ಅನಾಚಾರಿಗಳು ಹೊಗಬಾರದು ಕಲ್ಯಾಣವ. ಮೀಱಿ ಹೊಕ್ಕಹೆನೆಂಬವರಿಗೆ ಬಾಳ ಬಾಯಿಧಾರೆ ನೋಡಿರಯ್ಯ. ಆ ಕಲ್ಯಾಣ ಅಗಮ್ಯ ಅಗೋಚರ ನೋಡಯ್ಯ. ಆ ಮಹಾ ಕಲ್ಯಾಣದ ವಿಸ್ತೀರ್ಣ ತಾನೆಂದಡೆ—ಹನ್ನೆರಡು ಯೋಜನ ಪರಿಪ್ರಮಾಣದಗಲ ವಿಸ್ತೀರ್ಣ ಪಟ್ಟಣಕ್ಕೆ ಮುನ್ನೂಱುಮತ್ತೈದು ಬಾಗಿಲವಾಡ. ಆ ಬಾಗಿಲಿಂಗೆ ಮುನ್ನೂಱಐವತ್ತೈದು ವಜ್ರಧಾರೆಯ ಕದಂಗಳು, ಇನ್ನೂಱಇಪ್ಪತ್ತೈದು ಕಲುಗೆಲಸದ ದ್ವಾರವಟ್ಟಕ್ಕೆ ನಾನೂಱಐವತ್ತು ಸುವರ್ಣದ ಕೆಲಸದ ಕದಂಗಳು. ಅಲ್ಲಿ ನೂಱಹದಿನೈದು ಚೋರಗಂಡಿಗಳು, ಅವಕ್ಕೆ ನೂಱಹದಿನೈದು ಮೊಳೆಯಕದಂಗಳು. ಇಪ್ಪತ್ತು ಬಾಗಿಲು [1]ಅವಾರಿ[1]ಯಾಗಿಪ್ಪವಾಗಿ ಅವಕ್ಕೆ ಕದಂಗಳಿಲ್ಲ. ಆ ಪಟ್ಟಣಕ್ಕೆ ಬಳಸಿ ಬಂದ ಕೋಟೆ ನಾಲ್ವತ್ತೆಂಟು ಯೋಜನ ಪರಿಪ್ರಮಾಣು. ಬಾಹತ್ತರ ನಿಯೋಗಿಗಳ ಮನೆ ಲಕ್ಷ,ಮಾಂಡಲಿಕರ ಮನೆ ಲಕ್ಷ, ಸಾಮಂತರ ಮನೆಲಕ್ಷ,ರಾಯರಾವುತರ ಮನೆಯೊಳಡಗಿದ ಮನೆಗಳಿಗೆಲೆಕ್ಕವಿಲ್ಲ. ದ್ವಾದಶಯೋಜನದ ವಿಸ್ತೀರ್ಣದ**ಸೂರ್ಯವೀಥಿ ನೂಱೆಪ್ಪತ್ತು, ದ್ವಾದಶಯೋಜನ ವಿಸ್ತೀರ್ಣದಸೋಮವೀಥಿ ನೂಱಱುವತ್ತು, ಅದಱಿಂ ಮಿಗಿಲಾದ ಒಳಕೇರಿ ಹೊಱಕೇರಿಗೆ ಗಣನೆ ಇಲ್ಲ. ಆ ಪಟ್ಟಣದೊಳಗೆ ಲಕ್ಷದಮೇಲೆ ತೊಂಬತ್ತಾಱು ಸಾವಿರ ಶಿವಾಲಯ. ಆ ಶಿವಾಲಯಂಗಳಿಗೆ ಮುಖ್ಯವಾದ ತ್ರಿಪುರಾಂತಕದೇವರ ಶಿವಾಲಯ. ಮುನ್ನೂಱಱುವತ್ತು ಪದ್ಮಪತ್ರತೀವಿದ ಸರೋವರಂಗಳು. ಎರಡು ಲಕ್ಷವು ಎಂಬತ್ತೈದು ಸಾವಿರದ ಏಳುನೂಱೆಪ್ಪತ್ತು ದಾಸೋಹದ ಮಠಂಗಳು. ಆ ದಾಸೋಹದ ಮಠಂಗಳಿಗೆ ಮುಖ್ಯವಾದ ಬಸವರಾಜದೇವರ ಮಠದ ವಿಸ್ತೀರ್ಣವೆಂತೆಂದಡೆ : ಯೋಜನವರೆಯ ಬಿನ್ನಾಣದ ಕಲುಗೆಲಸದ ಪೌಳಿ, ಅತಿಸೂಕ್ಷ್ಮದ ಕುಸರಿಗೆಲಸದ ದ್ವಾರವಟ್ಟವೈದು. ಅವಕ್ಕೆ ಪಂಚಾಕ್ಷರಿಯ ಶಾಸನ. ಮಿಸುನಿಯ ಕಂಭದ ತೋರಣಂಗಳಲ್ಲಿ ರುದ್ರಾಕ್ಷಿಯ ಸೂಸಕ, ಆ ಬಾಗಿಲುವಾಡದಲ್ಲಿ ಒಪ್ಪುತ್ತಿಪ್ಪವಯ್ಯ. ನಂದಿಯ ಕಂಭ ಧ್ವಜ, ಉಪ್ಪರಗುಡಿಪತಾಕೆ, ವ್ಯಾಸಧ್ವಜ ಒಪ್ಪುತಿಪ್ಪವಯ್ಯ. ಆ ಮಧ್ಯದಲ್ಲಿ ಬಸವರಾಜದೇವರ ಸಿಂಹಾಸನದ ವಿಸ್ತೀರ್ಣಪ್ರಮಾಣು: ಸಹಸ್ರ-ಸುವರ್ಣಕಂಭದುಪ್ಪರಿಗೆ. ಅರಮನೆಗೆತ್ತಿದ ಹೊನ್ನಕಳಶ ಸಾವಿರ. ಗುರುಲಿಂಗ ಜಂಗಮಕ್ಕೆ ಪಾದಾರ್ಚನೆಯ ಮಾಡುವ ಹೊಕ್ಕರಣೆ ನಾಲ್ಕು ಪುರುಷಪ್ರಮಾಣದ ಘಾತ, ಅಲ್ಲಿ ತುಂಬಿದ ಪಾದೋದಕದ ತುಂಬನುಚ್ಚಿ ಬೆಳೆವ ರಾಜಶಾಲಿಯ ಗದ್ದೆ ಹನ್ನೆರಡು ಕಂಡುಗ. ಆ ಯೋಜನವರೆಯ ಬಿನ್ನಾಣದ ಅರಮನೆಯ ವಿಸ್ತೀರ್ಣದೊಳಗೆ ಲಿಂಗಾರ್ಚನೆಯ ಮಾಡುವ ಮಠದ ಕಟ್ಟಳೆ ಲಕ್ಷದ ಮೇಲೆ ತೊಂಬತ್ತಾಱುಸಾವಿರ. ಇಂತೀ ಬಸವರಾಜದೇವರು ಮುಖ್ಯವಾದ ಅಸಂಖ್ಯಾತರ ಮಠಂಗಳು ಆ ಕಲ್ಯಾಣ

[1] (ದೇಗೂ) ಅವರಿ (ಹ).

ದೊಳಗೆ ಎಷ್ಟೆಂದರೆ : ಹನ್ನೆರಡು ಸಾವಿರ ಕಟ್ಟಣೆಯ ನೇಮದ ಮಠಂಗಳು, ಎಪ್ಪತ್ತೆರಡು ಸಾವಿರ ಮಹಾಮನೆಗಳು, ಹತ್ತು ಸಾವಿರ ನಿತ್ಯನೇಮಿಗಳ ಮಠಂಗಳು. ಹದಿನೈದು ಸಾವಿರ ಚೆಲುಮೆಯಗ್ಘಣಿಯ ವ್ರತಸ್ಥರ ಮಠಂಗಳು, ವೀರವ್ರತನೇಮಿಗಳ ಕಟ್ಟಳೆಯ ಮಠಂಗಳು ಹನ್ನೆರಡು ಸಾವಿರ, ಅಚ್ಚ ಪ್ರಸಾದಿಗಳ ಮಠವೊಂದು ಸಾವಿರ, ನಿತ್ಯಂ ಸಾವಿರ ಜಂಗಮಕ್ಕೆ ಆರೋಗಣೆಯ ಮಾಡಿಸುವ ದಾಸೋಹದ ಮಠಂಗಳು ಮೂವತ್ತೆರಡು ಸಾವಿರ, ನಿತ್ಯಂ ಐನೂರು ಜಂಗಮಕ್ಕೆ ಒಲಿದು ದಾಸೋಹವ ಮಾಡುವ ಸತ್ಯಸದಾಚಾರಿಗಳ ಮಠ ಐವತ್ತೆಂಟು ಸಾವಿರ, ನಿತ್ಯಂ ಸಾವಿರದ ನೂಱು ಜಂಗಮಕ್ಕೆ ಒಲಿದು ದಾಸೋಹವ ಮಾಡುವ ದಾಸೋಹಿಗಳ ಮಠ ಹನ್ನೊಂದು ಸಾವಿರ, ನಿತ್ಯಂ ಅವಾರಿಯಿಂ ಮಾಡುವ ಮಾಟಕೂಟದ ಸದ್‌ಭಕ್ತರ ಮಠವೊಂದು ಲಕ್ಷ, ಜಂಗಮಸಹಿತ ಸಮಯಾಚಾರದಿಂದ ಲಿಂಗಾರ್ಚನೆಯ ಮಾಡುವ ಜಂಗಮಭಕ್ತರ ಮಠ ಎರಡು ಸಾವಿರದ ಏಳುನೂಱಎಪ್ಪತ್ತು. ಅಂತು, ಎರಡು ಲಕ್ಷ ಎಂಬತ್ತೈದು ಸಾವಿರದ ಏಳುನೂಱಎಪ್ಪತ್ತು ಅಸಂಖ್ಯಾತರಿಗೆ ಮುಖ್ಯವಾಗಿ ರುದ್ರಲೋಕದಿಂದಿಳಿತಂದ ಪ್ರಮಥಗಣಂಗಳ ಮಠಂಗಳು ಏಳುನೂಱೆಪ್ಪತ್ತು. ಇಂತೀ ಮಹಾಪ್ರಮಥರಿಗೆ, ಪುರಾತರಿಗೆ, ಅಸ್ಯಂಖ್ಯಾತ ಮಹಾಗಣಂಗಳಿಗೆ ಪ್ರಥಮ ನಾಯಕನಾಗಿ; ಏಕಮುಖ, ದಶಮುಖ, ಶತಮುಖ, ಸಹಸ್ರಮುಖ, ಲಕ್ಷಮುಖ, ಕೋಟಿಮುಖ, ಅನಂತಕೋಟಿಮುಖವಾಗಿ, ಭಕ್ತರಿಗೆ ಒಡನಾಡಿಯಾಗಿಪ್ಪಾತನು ಸಂಗನ ಬಸವಣ್ಣನು. ಜಗದಾರಾಧ್ಯ ಬಸವಣ್ಣ, [ಪ್ರಮಥ?] ಗುರು ಬಸವಣ್ಣ, ಶರಣ ಸನ್ನಿಹಿತ ಬಸವಣ್ಣ, ಸತ್ಯಸಾತ್ವಿಕ ಬಸವಣ್ಣ, ನಿತ್ಯನಿಜೈಕ್ಯ ಬಸವಣ್ಣ, ಷಡುಸ್ಥಲಸಂಪನ್ನ ಬಸವಣ್ಣ, ಸರ್ವಾಚಾರ ಸಂಪನ್ನ ಬಸವಣ್ಣ, ಸರ್ವಾಂಗಲಿಂಗಿ ಬಸವಣ್ಣ, ಸುಜ್ಞಾನಭರಿತ ಬಸವಣ್ಣ, ನಿತ್ಯಪ್ರಸಾದಿ ಬಸವಣ್ಣ, ಸಚ್ಚಿದಾನಂದಮೂರ್ತಿ ಬಸವಣ್ಣ, ಸದ್ಯೋಮುಕ್ತಿರೂಪ ಬಸವಣ್ಣ, ಅಖಂಡಿತ ಪರಿಪೂರ್ಣ ಬಸವಣ್ಣ, ಅಕಾಯ ಚಾರಿತ್ರ ಬಸವಣ್ಣ, ಅಸಾಧ್ಯಸಾಧಕ ಬಸವಣ್ಣ, ಅಭೇದ್ಯಭೇದಕ ಬಸವಣ್ಣ, ಅನಾಮಯಮೂರ್ತಿ ಬಸವಣ್ಣ, ಮಹವ ಮನೆಯ ಮಾಡಿದಾತ ಬಸವಣ್ಣ, ರುದ್ರಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಣ್ಣ, ಶಿವಾಚಾರದ ಘನವ ಮೆಱೆದಾತ ಬಸವಣ್ಣ. ಇಂತಹ ಬಸವಣ್ಣನ ಭಕ್ತಿಯನು ಒರೆದೊರೆದು ನೋಡಿ ಪ್ರಬಲಿತವ ಮಾಡುವ ಅಶ್ವಪತಿ-ಗಜಪತಿ-ನರಪತಿರಾಯ ರಾಜಾಧಿರಾಜ ಬಿಜ್ಜಳರಾಯನೂ ಆ ಬಸವಣ್ಣನೂ ಕಲ್ಯಾಣದಲ್ಲಿ ಸುಖಸಂಕಥಾವಿನೋದದಿಂ ಭಕ್ತಿಸಾಮ್ರಾಜ್ಯಂಗೈವುತ್ತಿರಲು, ಆ ಕಲ್ಯಾಣದ ನಾಮವಿಡಿದು ವಿವಾಹಕ್ಕೆ ಕಲ್ಯಾಣವೆಂಬ ಹೆಸರಾಯಿತ್ತು. ಲೋಕದೊಳಗೆ ಕಲ್ಯಾಣವೇ ಕೈಲಾಸವೆನಿಸಿತ್ತು. ಇಂತಪ್ಪ ಕಲ್ಯಾಣಮಂ ದರುಶನಂ ಮಾಡಿದವರಿಗೆ ಭವಂನಾಸ್ತಿ. ಇಂತಪ್ಪ ಕಲ್ಯಾಣವ ನೆನೆದರೆ ಪಾಪಕ್ಷಯ. ಇಂತಪ್ಪ ಕಲ್ಯಾಣದ ಮಹಾತ್ಮೆಯಂ ಕೇಳಿದರೆ ಕರ್ಮಕ್ಷಯವಹುದು, ಮೋಕ್ಷಸಾಧ್ಯವಹುದು. ಇದು ಕಾರಣ, ಕೂಡಲ ಚೆನ್ನಸಂಗಮದೇವಾ, ನಿಮ್ಮ ಭಕ್ತ ಬಸವಣ್ಣನಿದ್ದ ಠಾವೇ ಮಹಾಕಲ್ಯಾಣವೆಂದಱಿದು, ದಿವ್ಯಶಾಸನವ ಬರೆದು ಪರಿಸಿದ ಕಾರಣ, ಎನ್ನ

ಭವಂ ನಾಸ್ತಿಯಾಯಿತ್ತು. ೧೭೨-ಪುಟ-58-4-34

ಇಂತು ಪ್ರಭುದೇವರು ಕಲ್ಯಾಣಪುರದ ದ್ವಾರವಟ್ಟದ ಮುಂದಣ ಕಲ್ಯಾಣ ಶಾಸನಮಂ ಓದಿ ನೋಡಿ, ಪರಮಹರುಷಿತರಾಗಿ, ಬಸವರಾಜದೇವರ ಮಹಾತ್ಮೆಯ ಸ್ತೋತ್ರಮಂ ಮಾಡುತ್ತ, ಸಿದ್ಧರಾಮತಂದೆಗಳೊಡನೆ ನಿರೂಪಿಸುತ್ತಿರ್ದ ಪ್ರಸ್ತಾವದ ವಚನ:

ಆದಿ-ಆಧಾರವಿಲ್ಲದ ಆಗಮನಾಸ್ತಿಯಾಗಿಪ್ಪ ಸಾಗರ(?)ವಿರಹಿತನನಾರೂ ಅಱಿಯರಲ್ಲಾ! ದಶಮುಖದ ಮಾಣಿಕದೆಸಳ ಕಂಗಳು ಪರ್ಬಿ ಪಸರಿಸಿದುದನಾರೂ ಅಱಿಯರಲ್ಲಾ! ಹಿರಿದೊಂದು ವೃಕ್ಷವು ಅತಿಶಯದ ರೂಪಾಗಿ ಪೃಥ್ವಿಗಿಂಬಾಗಿರ್ದುದ ನಾರೂ ಅಱಿಯರಲ್ಲಾ! ಅಂತರಂಗದ ಭುವನವ ಮೆಟ್ಟಿ ನೋಡುತ್ತ ಬೆಡಗಿನ ತಾವರೆಯ ಮಧ್ಯದ ತಾರಕಿಯನಾರೂ ಅಱಿಯರಲ್ಲಾ! ರವಿ ಶಶಿಗಳಿಬ್ಬರೂ ನಯನ ನೋಟದ ಪುಷ್ಪಪರಿಮಳವಾಗಿರ್ದುದನಾರೂ ಅಱಿಯರಲ್ಲಾ! ಇಂಬು ನಯನದಲ್ಲಿ ಸಂಭ್ರಮವಿಲ್ಲದ ರೂಪು ಮಹತ್ತಾಗಿರ್ದುದನಾರೂ ಅಱಿಯರಲ್ಲಾ! ಸಾಗರದೊಳಗಣ ಜ್ಯೋತಿಯಂತೆ ಗೊಗೇಶ್ವರಲಿಂಗದೊಳಗೆ ಎನ್ನ ಪರಮಾರಾಧ್ಯರು ಸಂಗನ ಬಸವಣ್ಣನು ನಿಂದ ನಿಲವನುಪಮಿಸ ಬಾರದು ಕಾಣಾ ಸಿದ್ಧರಾಮಯ್ಯ. ೧೭೩-೩೪೮—4-35.

ಇಂತು, ಪ್ರಭುದೇವರು ಸಿದ್ಧರಾಮಯ್ಯದೇವರೊಡನೆ ಬಸವರಾಜದೇವರ ಮಹಾತ್ಮೆಯಂ ಕೊಂಡಾಡಿ ಪೇಳುತ್ತಿರಲು, ಆ ಸಿದ್ಧರಾಮಯ್ಯ ದೇವರು—ಆ ಪ್ರಭುದೇವ ರೊಡನೆ ಬಸವರಾಜ ದೇವರ ಮಹಾತ್ಮೆಯನು ಕೊಂಡಾಡಿ ಪೇಳುತ್ತಿರ್ದ ಪ್ರಸ್ತಾವದ ವಚನ:

ಯತ್ರಯತ್ರ ಮಾಹೇಶ್ವರರಿರ್ದ ಗ್ರಾಮ ತತ್ರ ತತ್ರ ಶಿವಲೋಕ ನೋಡಾ, ಎಲೆ ಅಯ್ಯ. ಸತ್ಯವಚನ ತಪ್ಪುವುದೆ ಎಲೆ ಅಯ್ಯ? ಕಪಿಲಸಿದ್ಧ ಮಲ್ಲಿನಾಥ, ನಿಮ್ಮ ಶರಣರು ಮೆಟ್ಟಿ ನಿಂದ ಧರೆ ಪಾವನವೆಂಬುದು ಇಂದೆನಗೆ ಅಱಿಯ ಬಂದಿತ್ತಯ್ಯ. ೧೭೪-೩೪೯—4-36. ಮತ್ತಂ:

ಜಲದಲುದ್ಭವಿಸಿ ಮತ್ತೆ ಜಲವು ತಾನಲ್ಲ. ಜಲವೆಂದಿಪ್ಪರೀ ಲೋಕದವರು. ಪರಮ ಗುರು ಬಸವಣ್ಣ ಜಗವ ಪಾಲಿಸ ಬರಲು ಎನ್ನ ಪರಿಭವದ ದಂದುಗ ಹಱಿಯಿತ್ತಯ್ಯ. ಆ ಸುದ್ದಿಯನಱಿಯದೆ ಬೇಕಾದ ಪರಿಯಲ್ಲಿ ಅನೇಕ ಜಡರೆಲ್ಲರೂ ನುಡಿವುತ್ತಿಹರು. ಸತ್ತ ಪ್ರಾಣವನೆತ್ತಿ ಒಪ್ಪಿಪ್ಪ ನಿಶ್ಚಯವು ಮರ್ತ್ಯದವರಿಗುಂಟೆ ಶಿವಂಗಲ್ಲದೇ? ಶಿವಗುರು ಬಸವಣ್ಣ, ಬಸವಗುರು ಶಿವನಾಗಿ, ದೆಸೆಗೆಟ್ಟ ದೇವತಾಪಶುಗಳಿಗೆ ಪಶುಪತಿ ಯಾದನು. ಬಸವಣ್ಣನ ನೆನಹು ಸುಖದ ಸಮುದ್ರವಯ್ಯ. ಕಪಿಲಸಿದ್ಧ ಮಲ್ಲಿನಾಥ, ಬಸವಣ್ಣನ ತೋಱಿದಿರಾಗಿ ನಾನು ಬದುಕಿದೆನು. ೧೭೫-೩೫೦—4-37.

ಇಂತು ಸಿದ್ಧರಾಮಯ್ಯದೇವರು ಬಸವರಾಜದೇವರ ಮಹಾತ್ಮೆಯಂ ಕೊಂಡಾಡುತ್ತ ಬರಲು, ಆ ಬಸವರಾಜದೇವರ ದ್ವಾರವಟ್ಟದ ಮುಂದೆ ನಿಂದಲ್ಲಿ, ಪ್ರಭುದೇವರು—ಆ ಬಸವರಾಜದೇವರ ಮಠವ ಕೊಂಡಾಡುವ ಪ್ರಸ್ತಾವದ ವಚನ:

ಕರ್ಮವಿಲ್ಲದ ಕಾಯ, ಕರಣವಿಲ್ಲದ ಪ್ರಾಣ, ಮಥನವಿಲ್ಲದ ಶಬ್ದ, ಗಮನವಿಲ್ಲದ ಗಮನ. ಗೊಗೇಶ್ವರನ ಬರವು ಸಂಗನಬಸವಣ್ಣನ ಅಂಗಳವ ಕಂಡಲ್ಲಿ ತರಹರವಾಯಿತ್ತು ಕಾಣಾ ಸಿದ್ಧರಾಮಯ್ಯ. ೨೭೬-೩೫೧-4-38. ಮತ್ತಂ:

ಉಪಪಾತಕ-ಮಹಾಪಾತಕಂಗಳ ಮಾಡಿದ ಕರ್ಮಂಗಳು ಕೋಟ್ಯನುಕೋಟಿ—ಒಬ್ಬ ಶಿವಶರಣನ ಅಂಗಳವ ಕಂಡಲ್ಲಿ ಅಳಿದು ಹೋಹುದು ನೋಡಾ. ಅದೇನು ಕಾರಣ ವೆಂದಡೆ, ಆ ಶರಣನ ಅಂತರಂಗದಲ್ಲಿ ಶಿವನಿಪ್ಪನು. ಶಿವನಿದ್ದಲ್ಲಿ ಕೈಲಾಸವಿಪ್ಪುದು. ಕೈಲಾಸವಿದ್ದಲ್ಲಿ ಸಮಸ್ತರುದ್ರಗಣಂಗಳಿಪ್ಪರು. ಅಲ್ಲಿ ಅಷ್ಟಾಷಷ್ಟಿ ತೀರ್ಥಂಗಳು ನೆಲಸಿ ಪ್ಪವು. ಇಂತಪ್ಪ ಶರಣ ಸಂಗನ ಬಸವಣ್ಣನ ಅಂಗಳವ ಕಂಡೆನಾಗಿ ಗೊಗೇಶ್ವರ ಲಿಂಗಕ್ಕೆ ಕಂಗಳ ತೃಪ್ತಿಯಾಯಿತ್ತು—ಕಾಣಾ ಸಿದ್ಧರಾಮಯ್ಯ. ೨೭೭-೩೫೨—4-39.

ಹೀಂಗೆಂದು ಪ್ರಭುದೇವರು—ಬಸವರಾಜದೇವರ ಮಠವಂ ಕೊಂಡಾಡಿ, ಸಿದ್ಧ ರಾಮಯ್ಯ ದೇವರಿಗೆ ತೋಱಿ ಪೇಳುತ್ತಿರಲು, ಆ ಸಿದ್ಧರಾಮಯ್ಯ ದೇವರು—ತಾವು ಬಸವರಾಜ ದೇವರ ಗೃಹವಂ ಕೊಂಡಾಡಿ, ಪ್ರಭುದೇವರಿಗೆ ಬಿನ್ನೈಸುತ್ತಿರ್ದ ಪ್ರಸ್ತಾವದ ವಚನ:

ನಿಶ್ಚಲ ಶರಣರ ಮನೆಯ ಅಂಗಳದಲ್ಲಿ ಅಷ್ಟಾಷಷ್ಟಿ ತೀರ್ಥಂಗಳು ನೆಲಸಿಪ್ಪವಯ್ಯ. ನೀನು ಇನಿಸುವೆರಸಿ, ಒಲಿದಲ್ಲಿ ನೆಲಸಿಪ್ಪೆಯಯ್ಯ ಕಪಿಲಸಿದ್ಧ ಮಲ್ಲಿನಾಥಯ್ಯ. ೨೭೮-೩೫೩—4-40.

ಇಂತು ಸಿದ್ಧರಾಮಯ್ಯದೇವರು—ಬಸವರಾಜದೇವರ ಅಂಗಳವೆ ಅವಿಮುಕ್ತಿ ಕ್ಷೇತ್ರ ವೆಂದು ಕೊಂಡಾಡುತ್ತಿರಲು, ಆ ಬಸವರಾಜದೇವರ ಮಠದಲ್ಲಿ ಶಿವಗಣಂಗಳು ಕಿಂಥಿಣಿ ಯಾಗಿಪ್ಪುದಂ ಕಂಡು, ಪ್ರಭುದೇವರು—ಸಿದ್ಧರಾಮಯ್ಯ ದೇವರಿಗೆ ತೋಱಿಸಿ, ಕೊಂಡಾಡಿ ಹೇಳುವ ಪ್ರಸ್ತಾವದ ವಚನ:

ಮರ್ತ್ಯಲೋಕದ ಮಹಾಮನೆ ಹಾಳಾಗಿ ಹೋಗಬಾರದೆಂದು ಕರ್ತನಟ್ಟಿದನಯ್ಯ ಒಬ್ಬ ಶಿವಶರಣನ. ಆ ಶರಣ ಬಂದು, ಕಲ್ಯಾಣವೆಂಬ ಶಿವಪುರವ ಕೈಲಾಸವ ಮಾಡಿ, ರುದ್ರಗಣ ಪ್ರಮಥಗಣಂಗಳೆಲ್ಲರ ಹಿಡಿತಂದು ಅಸಂಖ್ಯಾತರೆಂದು ಹೆಸರಿಟ್ಟು ಕರೆದು, ಭಕ್ತಿಯ ಕುಳಸ್ಥಳವ ಶ್ರುತ-ದೃಷ್ಟ-[1]ವಾದದಿಂ[1] ಮೆಱೆದು ತೋಱಿ, ಜಗವಱಿಯಲು

[1] (ಶಿ) ಸವಾಡದಿಂ (ದೇಹಗೂ).

ಶಿವಾಚಾರದ ಧ್ವಜವನೆತ್ತಿಸಿ, ಮರ್ತ್ಯಲೋಕ-ದೇವಲೋಕವೆರಡಕ್ಕೆ ತಾನೆ ನಿಚ್ಚಣಿಗೆಯಾದನು. ಆ ಶರಣನ ಮನೆಯೊಳಗಿಪ್ಪ ಶಿವಗಣಂಗಳ ತಿಂಥಿಣಿಯ ಕಂಡು, ಎನ್ನ ಮನ ಉಬ್ಬಿ-ಕೊಬ್ಬಿ ನೋಡುತ್ತಿರ್ದೆನಯ್ಯ. ನಮ್ಮ ಗೊಗೇಶ್ವರನ ಶರಣ ಸಂಗನ ಬಸವಣ್ಣನ ದಾಸೋಹದ ಘನವನೇನೆಂದೆನಬಹುದು ನೋಡಾ ಸಿದ್ಧರಾಮಯ್ಯ. ೨೭೯-೩೫೪—4-41

ಇಂತು ಪ್ರಭುದೇವರು-ಸಿದ್ಧರಾಮಯ್ಯದೇವರು—ಬಸವರಾಜದೇವರ ಬಾಗಿಲ ಮುಂದೆ ನಿಂದು—ಆ ದ್ವಾರವಟ್ಟದೊಳು ಪೊಗುವ ಪೊಱಮಡುವ ಮಹಾಲಿಂಗವಂತರಂ, ಅಲ್ಲಿ ವಚನಶಾಸ್ತ್ರಂಗಳಂ ಪೇಳುವ ಕೇಳುವ ಶಿವತತ್ವವಿದ್ಯಾಭ್ಯಾಸಿಗಳಂ ; ಮತ್ತಂ, ಶಿವಯೋಗಾರೂಢಿಯೊಳಿಪ್ಪ ಪರಮರಾಜಯೋಗಿಗಳಂ ; ಮತ್ತಂ, ಶಿವಾನುಭಾವ ಗೋಷ್ಠಿಯೊಳು ಕರಣಮಥನವಿಲ್ಲದೆ,ಇತರೇತರ ಭಾವಂಗಳಂಮಱೆದು, ಪ್ರಸಂಗಿಸುತ್ತಿಪ್ಪ ಮಹಾನುಭಾವಿಗಳಂ, ಆಚಾರಲಿಂಗದೊಳು ಸದಾಚಾರವೇ ಪ್ರಾಣವಾಗಿಪ್ಪ ಅಱುವತ್ತು ನಾಲ್ಕು ಶೀಲಂಗಳೊಳು ದೃಢವ್ರತರಾಗಿಪ್ಪ ಶೀಲವಂತರಂ, ತಮ್ಮ ಕರಸ್ಥಳದ ಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವಂ ಮಾಡುವ ಅವಸರಂಗಳೊಳು ನಿರಾಲಸ್ಯಭಾವವೆಡೆಗೊಂಡು ತ್ರಿಕಾಲ ಲಿಂಗಾರ್ಚನೆಯಂ ಮಾಡುವ ಲಿಂಗಾರ್ಚನ ಪರಾಯಣರಂ ; ಮತ್ತಂ, ಆದಿಲಿಂಗದಲ್ಲಿ ವೀರವ್ರತನಿಯಮಮಂ ಕೈಕೊಂಡು ಕಣ್ಣಂ ಕಳೆದೀಱಿಸಿ ಕಣ್ಣಂ ಪಡೆವ, ಜಿಹ್ವೆಯನರ್ಪಿಸಿ ಜಿಹ್ವೆಯಂ ಮರಳಿ ಪಡೆವ, ಶಿರಮಂ ಕಡಿದಾರತಿಯನೆತ್ತಿ ಶಿರಮಂ ಪಡೆವ ವೀರಗಣಂಗಳಂ ; ಮತ್ತಂ, ಇಷ್ಟ ಲಿಂಗದೊಳು ದೃಷ್ಟಿ ಮುಟ್ಟೆ, ಭಾವನಚ್ಚೊತ್ತಿ, ಕಱಗೊಂಡು, ಪರಿಣಾಮ ಕಂಗಳೊಳು ನೆಲಸಿ, ಅನಿಮಿಷ ದೃಷ್ಟಿಯಿಂ ಆ ಲಿಂಗಮಂ ನೋಡಿನೋಡಿ ಪರವಶರಾಗಿಪ್ಪ ಮಹಾಲಿಂಗ ನಿಷ್ಠಾತ್ಮಕರಂ ; ಮತ್ತಂ, ಶ್ರೀ ಗುರುಸೇವೆಯಲ್ಲಿ ತನು ಸವೆದು ಪರಿಚರಿಯಮಂ ಮಾಡಿ ಆ ಶ್ರೀಗುರುಪಾದದೊಳು ಮಗ್ನಚಿತ್ತರಾಗಿಪ್ಪ ಗುರುಭಕ್ತಿಯುಕ್ತರಂ ; ಮತ್ತಂ, [1]ಜಂಗಮವೆ ತನ್ನ ಪ್ರಾಣಲಿಂಗವೆಂದು ನಂಬಿ, ಅರ್ಥ-ಪ್ರಾಣ-ಅಭಿಮಾನಂಗಳಂ ಸಮರ್ಪಿಸಿ, ನಿರ್ವಂಚಕತ್ವವೇ ಪ್ರಾಣವಾಗಿ, ತ್ರಿಕರಣಶುದ್ಧತ್ವಮಂ ಪಡೆದು, ದಾಸೋಹಮಂ ಮಾಡುತ್ತಿಪ್ಪ ಸದ್ಭಕ್ತಿಯುಕ್ತಗಣಂಗಳಂ ; ಮತ್ತಂ[1], ಶಿವಗಣಂಗಳು ಆರೋಗಿಸಿ ಮಿಕ್ಕ ಶಿವಪ್ರಸಾದಮಂ ಕಂಡು, ಉಬ್ಬಿ-ಕೊಬ್ಬಿ ನಲಿನಲಿದಾಡುತ್ತ, ಆ ಪ್ರಸಾದದೊಳು ಅಣುಮಾತ್ರಮಂ ನೆಲಕ್ಕೆ ತಪ್ಪಲೀಯದೆ ಎತ್ತಿ ತಂದು, ಮಹಾ ಪ್ರಸಾದರಾಶಿಯಂ ಮಾಡಿ, ಆ ಪ್ರಸಾದಮಂ ಅಷ್ಟವಿಧಾರ್ಚನೆಯಿಂದರ್ಚಿಸಿ, ಪರಮಾನಂದದಿಂ ಪ್ರಸಾದಮಂ ಸ್ವೀಕಾರಂ ಮಾಡಿ ಪರಮ ಪರಿಣಾಮದೊಳಿಪ್ಪ ಶಿವಗಣ ಪ್ರಸಾದಿಗಳಂ ; ಮತ್ತಂ, ಗುರು-ಲಿಂಗ-ಜಂಗಮದ ಶ್ರೀಚರಣಾಂಬುವಂ ಪರಮಾನಂದ ಜಲವೆಂದು ಕಱಗೊಂಡು ವಿಶ್ವಾಸದಿಂ ಕರಸ್ಥಳದೊಳು ಪಿಡಿದು, ಆ ಪಾದೋದಕಮಂ ತನ್ನ ಮಱೆದು ಸ್ವೀಕಾರಂಮಾಡಿ, ಸರ್ವಾಂಗದೊಳ್ [2]ತಳಿದು[2]. ಮಲತ್ರಯಂಗಳಂ

[1] (ಹದೇ) × (ಶಿ). [2] (ಶಿ) ತಳೆದು (ಹದೇ).

ತೊಳೆದು, ಅಂತರಂಗ ಶುದ್ಧಾತ್ಮರಾಗಿಪ್ಪ ಪಾದೋದಕಪ್ರಾಣಸಂಬಂಧಿಗಳಂ ; ಮತ್ತಂ, ಶಿವಜ್ಞಾನ ಪ್ರಭಾ ಪಂಜರವೆ ಕಾಯವಾಗಿ, ನಿತ್ಯ ನಿಜತತ್ವ [1]ಪ್ರಸಂಗವೇ[1] ಪ್ರಾಣವಾಗಿ, ಒಳಹೊಱಗೆನ್ನದ ಮಹಾಪ್ರಕಾಶದೊಳ್ ಪರವಶರಾಗಿ, ಸದ್ಯೋಮುಕ್ತಿಯೆಂಬ ಸ್ಥಳ ದೊಳು ನೆಲೆವನೆಯಾಗಿಪ್ಪ ಮಹಾಜ್ಞಾನೈಕ ಶರಣರಂ ; ಮತ್ತಂ, ಕಕ್ಷೆ-ಕಂಠ-ಕರಸ್ಥಳ -ಉತ್ತಮಾಂಗ-ಉರಸೆಜ್ಜೆ-ಅಮಳೋಕ್ಯವೆಂಬ ಷಡುಸ್ಥಳವೇ ಪ್ರಾಣವಾಗಿಪ್ಪ ಲಕ್ಷದ ಮೇಲೆ ತೊಂಬತ್ತಾಱು ಸಾವಿರ ಜಂಗಮ[2]ದ ಗಳ[2]ಗರ್ಜನೆಯ ತಿಂಥಿಣಿಯಂ, ಸಮುದ್ರದ ತೆರೆಯಂತೆ ಎಡೆಯಾಡುತ್ತಿಪ್ಪ ಶಿವಭಕ್ತಿ ಪರಿಚಾರಕರಂ ; ಮತ್ತಂ, ಮರ್ತ್ಯ ಲೋಕದ ಮಹಾಮನೆಗೆ ರುದ್ರಲೋಕದ ಶಿವಗಣಂಗಳು ಲಿಂಗಾರ್ಚನೆಗೆ ಬಿಜಯಂಗೆಯಿ ಮೆಂದು, ಭಕ್ತ್ಯಂಗನೆ ಕೈವೀಸಿ ಕರೆವಂತೆ, ಶಿವದ್ವಾರವಟ್ಟದ ಮುಂದೆ ಒಪ್ಪುತ್ತಿಪ್ಪ ಉಪ್ಪರಗುಡಿ-ಸಿಂಧ-ಪತಾಕೆಗಳಂ ; ಮತ್ತಂ, ಬಸವಣ್ಣನ ಭಕ್ತಿ-ಜ್ಞಾನಪ್ರಭೆ ಕುಡಿ ನಿಮಿರ್ದು ಬೆಳೆದುದೆಂಬಂತಿರೊಪ್ಪುತ್ತಿರ್ಪ ಶಿವಗೃಹದ ಸುವರ್ಣಕಳಸಂಗಳಂ ; ಮತ್ತಂ, ಗುರು-ಲಿಂಗ-ಜಂಗಮದ ಬರವಂ ಪಾರ್ದು, ನವರತ್ನ ಖಚಿತಮಯ ತೋರಣಂಗಳಂ ವಿಸ್ತರಿಸಿ, ಅಂಬರಂಗಳಂ ಮೇಲುಕಟ್ಟಂ ಕಟ್ಟಿ, ನಡೆಮಡಿಯಂ ಪಾಸಿಕೊಂಡು, ಪ್ರತ್ಯಕ್ಷ ಭಕ್ತ್ಯಂಗನೆಯ ಹೃದಯಕಮಳವೆಂಬಂತಿರೊಪ್ಪುತಿಪ್ಪ ಭಕ್ತಿಗೃಹವುಂ, ಇಂತನಂತ ಮುಖದೊಳು ಒಪ್ಪುತಿಪ್ಪ ಸಂಗನ ಬಸವಣ್ಣನಿಪ್ಪ ಶಿವಾಲಯಮಂ ಪ್ರಭುದೇವರೂ ಸಿದ್ಧರಾಮಯ್ಯದೇವರೂ ಕಂಡು,ಕಂಗಳು ತುಂಬಿ ನೋಡಿ,ನೋಡಿ ನೋಡಿ ದೃಷ್ಟಿಯೊಳು ತಣಿವಾಗದಿರಲು, ತಲೆದೂಗಿ ಹಾರೈಸಿ, ತಲೆದೂಗಿದಲ್ಲಿ ಅಂಗಮುಖಕ್ಕೆ ತೃಪ್ತಿ ಹಾರವಿಸ ದೆಂದು ದಂಡ ಪ್ರಣಾಮಮಂ ಮಾಡಿ, ದಣಿವಾಗದೆ, ತಮ್ಮೊಳ್ ತಾವೆ ಕರಗಿ ಕೊರಗಿ, ಪೂರೈಸಿ ಹಾರೈಸಿ,ಹೃದಯಕಮಲವರಳ್ದು ಪರಮಾನಂದ ರಸದೊಳ್ ಮುಳುಗಿ ತೇಂಕಾಡಿ, ಜೊಮ್ಮುವಿಡಿದಂತೆ ಪರವಶದೊಳ್ ಪರಮಕಾಷ್ಠೆಯನೆಯ್ದಿರುತ್ತಿಪ್ಪ ಪ್ರಸ್ತಾವದೊಳು ಸಿದ್ಧರಾಮಯ್ಯ ದೇವರೊಡನೆ ಪ್ರಭುದೇವರು—ಬಸವರಾಜದೇವರ ಗೃಹಮಂ ಕೊಂಡಾಡಿದ ವಚನ :

ಆದಿಯ ಲಿಂಗವ ಮೇದಿನಿಗೆ ತಂದು, ಮರ್ತ್ಯಲೋಕದಲ್ಲಿ ಮಹಾಮನೆಯ ಕಟ್ಟಿದನಯ್ಯ ಸಂಗನ ಬಸವಣ್ಣನು. ಆ ಮನೆಯ ನೋಡಲೆಂದು ಹೋದರೆ, ಆ ಗೃಹ ಹೊಗದ ಮುನ್ನವೆ ಎನ್ನ ನುಂಗಿತ್ತಯ್ಯ. ಅದಕ್ಕೆ ಕಂಭ ಒಂದು, ತೊಲೆ ಆಱು. ಜಂತೆ ವಲಗೆ ಮುವ್ವತ್ತಾಱು, ಧರೆಯಾಕಾಶವ ಹೊದ್ದದ ಕೆಸರುಗಲ್ಲು, ಒಂಬತ್ತು ಬಾಗಿಲು ಬಿಯ್ಯಗವಿಕ್ಕಿಪ್ಪವು. ಬೇಱೊಂದು ಬಾಗಿಲು ಉರಿಯನುಗುಳುತ್ತಿಪ್ಪುದು. ಮುತ್ತಿನ ಕಂಭದ ಮೇಲುಕಟ್ಟಿನ ಮೇಲೆ ಮಾಣಿಕ್ಯದ ಶಿಖರಿ. ಆ ಶಿಖರಿಯ ತುದಿಯಲ್ಲಿ ಬಿಳಿಯ ಹೊಂಗಳಸವಿಪ್ಪುದು. ಅದು ಕಾಬವರಿಗೆ ಕಾಣ ಬಾರದು. ಕಾಣಬಾರದವರಿಗೆ ಕಾಣ ಬಪ್ಪುದು. ಅಲ್ಲಿ ಹತ್ತುಮಂದಿ ಪರಿಚಾರಕರು ಎಡೆಯಾಡುತ್ತಿಪ್ಪರು. ಇಬ್ಬರು ದಡಿಕಾಱರು ಬಾಗಿಲ ಕಾಯ್ದಿಪ್ಪರು. ಒಬ್ಬಾಕೆ ಎಡೆಯಾಡುತ್ತಿಪ್ಪಳು.

[1] (ದೇ) ಪ್ರಸಂನನೆ (ಶಿಹ). [2] (ಹದೇ) ಸ್ಥಳದ (ಶಿ).

ಒಬ್ಬಾಕೆ ಲಿಂಗಾರ್ಚನೆಗೆ ನೀಡಿಕೊಡುತ್ತಿಪ್ಪಳು. ಒಬ್ಬಾಕೆ ಸಕಲ ಸಾಧನಂಗಳೆಲ್ಲವನು ಶೋಧಿಸಿ ತಂದು ಕೊಡುತ್ತಿಪ್ಪಳು. ಒಬ್ಬಾಕೆ ಉರಿಯಿಲ್ಲದಗ್ನಿಯಲ್ಲಿ ಪಾಕವ ಮಾಡುತ್ತಿಪ್ಪಳು. ಒಬ್ಬಾಕೆ ಲಿಂಗಜಂಗಮಕ್ಕೆ ನೀಡಿ ಊಡಿಸಿ ಉಣಿಸಿ ತೃಪ್ತಿಯ ಮಾಡುತ್ತಿಪ್ಪಳು. ಒಂದಡ್ಡಣಿಗೆಯ ಮೇಲೆ ಐದಗಲೊಳಿಟ್ಟ ಬೋನವನೊಬ್ಬನುಂಡರೆ ಪ್ರಮಥಗಣಂಗಳೆಲ್ಲರೂ ಅವನೊಕ್ಕುದ ಕೊಂಡಹೆನೆಂದು ಬಂದು, ಆ ಮನೆಯ ಹೊಕ್ಕು ನಿಶ್ಚಿಂತ ನಿವಾಸಿಗಳಾದರು ಗೊಗೇಶ್ವರನ ಶರಣ ಸಂಗನ ಬಸವಣ್ಣನ ಮನೆಯ ಕಂಡು ಧನ್ಯನಾದೆನು ಕಾಣಾ ಸಿದ್ಧರಾಮಯ್ಯ. ೨೮೦-೩೫೫—4-42.

ಇಂತು ಪ್ರಭುದೇವರು—ಬಸವರಾಜದೇವರ ಗೃಹವಂ ಕಂಡು ಪರವಶರಾಗಿ, ಕೊಂಡಾಡಿ, ಸಿದ್ಧರಾಮಯ್ಯ ದೇವರೊಡನೆ ಹೇಳುತ್ತಿರಲು, ಆ ಸಿದ್ಧರಾಮಯ್ಯದೇವರು—ಆ ಗೃಹವಂ ಕೊಂಡಾಡಿ ಪ್ರಭುದೇವರಿಗೆ ಬಿನ್ನಹಂ ಮಾಡುವ ಪ್ರಸ್ತಾವದ ವಚನ :

ಅಯ್ಯ, ನಿಮ್ಮ ಶರಣರಲ್ಲದವರ ಮನೆ ಕೆಮ್ಮನೆ ಕಂಡಾ ಅಯ್ಯ ! ನಿಮ್ಮ ಶರಣರ ಮನೆ ನೆಲೆಮನೆ ನೋಡಾ ಎನಗೆ. ಸಿರಿಯಾಳ ಮನೆಗಟ್ಟಿ ಬೇಱೂರಿಗೆ ಒಕ್ಕಲು ಹೋದ. ದಾಸಿಮಯ್ಯ ಮನೆಗಟ್ಟಿ ಬೆವಹಾರವನಾಡ ಹೋದ. ಸಿಂದ ಬಲ್ಲಾಳ ಮನೆಯ ಕಟ್ಟಿ ಕೈಕೂಲಿಗಾಱನಾಗಿ ಹೋದ. ಗಂಗೆ ವಾಳುಕರು ಮನೆಯ ಕಟ್ಟಿ ಲಿಂಗದ ಹೊಲಬನಱಿಯದೆ ಹೋದರು. ಇವರೆಲ್ಲರೂ ಮನೆಯ ಮಾಡಿ, ಮಹವನಱಿಯದೆ, ಸಾಲೋಕ್ಯ ಸಾಮೀಪ್ಯ-ಸಾರೂಪ್ಯ-ಸಾಯುಜ್ಯವೆಂಬ ಚತುರ್ವಿಧ ಪದವಿಗೊಳಗಾದರು. ನಿಮ್ಮ ಸಂಗನ ಬಸವಣ್ಣ ಬಂದು, ಕಲ್ಯಾಣದಲ್ಲಿ ಮನೆಯ ಕಟ್ಟಿದರೆ, ಮರ್ತ್ಯಲೋಕವೆಲ್ಲವು ಭಕ್ತಿರಾಜ್ಯವಾಯಿತ್ತು. ಆ ಮನೆಗೆ ತಲೆವಾಗಿ ಹೊಕ್ಕವರೆಲ್ಲರೂ ನಿಜಲಿಂಗ ಪದವಂ ಪಡೆದರು. ಆ ಗೃಹವ ನೋಡಬೇಕೆಂದು ನಾನು ಹಲವು ಕಾಲ ತಪಸಿದ್ದೆನು. ಕಪಿಲಸಿದ್ಧ ಮಲ್ಲಿನಾಥ, ನಿಮ್ಮ ಶರಣ ಸಂಗನ ಬಸವಣ್ಣನ ಮಹಾಮನೆಗೆ ನಮೋ ನಮೋ ಎಂದು ಬದುಕಿದೆನು. ೨೮೧-೩೫೬—4-43.

ಪ್ರಭುದೇವರು-ಸಿದ್ಧರಾಮಯ್ಯದೇವರು ಬಸವರಾಜದೇವರ ಮಹಾತ್ಮೆಯಂ ಇಂತು ಕೊಂಡಾಡುತ್ತ ದ್ವಾರವಟ್ಟದ ಮುಂದೆ ನಿಂದಿರ್ದಿರಲು, ಆ ಪ್ರಸ್ತಾವದೊಳು, ಬಸವರಾಜದೇವರು ಲಿಂಗಾರ್ಚನೆಯಂ ಮಾಡುತ್ತಲಾ ಶಿವಲಿಂಗದೊಳಗಾ ಪ್ರಭುದೇವರ ನಿಜಮೂರ್ತಿಯಂ ಕಂಡು ಅತ್ಯಂತ ಭೀತರಾಗಿ ಬಿಜಯಂಗೆಯಿಸಿ ತನ್ನಿಮೆಂದು ಪರಿಚಾರಕರ ಕಳುಹುವ ಪ್ರಸ್ತಾವದ ವಚನ:

ಲಿಂಗದಲ್ಲಿ ಹೊಳೆದು ಹೋಹ ಜಂಗಮವ ಕಂಡು ಕಡೆಗಣಿಸಿದರೆ ಭವ ಹೊದ್ದಿತ್ತಯ್ಯ ಎನ್ನ ಭಕ್ತಿಗೆ! ಹಿಂದೆಯುಗಲಿದ ಕಾರಣ ಬಂದೆನೀ ಜನ್ಮಕ್ಕೆ, ಕೂಡಲ ಸಂಗಯ್ಯ ತಪ್ಪಿ ಹೋಗದ ಮುನ್ನ ಹಿಡಿತನ್ನಿ. ೨೮೨-೩೫೭-×.

ಹೀಗೆಂದು ಬಸವರಾಜದೇವರು ಪರಿಚಾರಕರಂ ನಿರೂಪಿಸಿ ಕಳುಹಲು, ಆ ಪರಿಚಾರಕರು ಪ್ರಭುದೇವರಿಗೆ ವಂದನಂಗೆಯ್ದು; ದೇವಾ, ನಿಮ್ಮಡಿಗಳನು ಸಂಗನ ಬಸವಣ್ಣ ಬಿಜಯಂಗೆಯ್ಯ ಪೇಳಿದನು, ಕರುಣಿಸುವುದೆನೆ—ಬಾರೆವೆಂದು ನಿರೂಪಿಸಿದ ಪ್ರಸ್ತಾವದ ವಚನ:

ಜಂಗಮವೆ ಲಿಂಗವೆಂದು ನಂಬಿದ ಭಕ್ತನ ಕಣ್ಣ ಮುಂದೆ ನಿಂದು ಹೋದಡೆ, ಹಿಂದೆ ಮಾಡಿದ ಭಕ್ತಿಯೆಲ್ಲವು ನೀರಲ್ಲಿ ನೆರೆಯಿತ್ತು. ಮಂದಮತಿಯಾಗಿ ಕಂಡು, ಕಡೆಗಣಿಸಿ ಹೋಹವನಂಗವಿಕಾರಿ ನೋಡಾ. ಮುಂದುವರಿದು ಅವನ ಮನೆಯ ಹೊಗುವ ಜಂಗಮಕ್ಕೆ ಭವ ಹಿಂಗದು. ನಮ್ಮ ಗೊಗೇಶ್ವರಲಿಂಗವು ಅಱಿದಱಿದು ಬಱಿದೊಱೆವೋದವರನೊಲ್ಲನು ಹೋಗಾ ಎಲೆ ಮರುಳೇ. ೨೮೩-೩೫೮— ×

ಹೀಗೆಂದು ಪ್ರಭುದೇವರು ಬಿಜಯಂಗೆಯ್ಯಲೊಲ್ಲದೆ ಆ ಪರಿಚಾರಕರಂ ಮರಳಿ ಕಳುಹಲು, ಆ ಪರಿಚಾರರು ಬಂದು ಬಸವರಾಜದೇವರೊಡನೆ ಬರಲೊಲ್ಲರೆಂಬ [1]ಸಂಸ್ಥೆ [=ಸಂತೆ?]ಯಂ[1] ಬಿನ್ನಪಂಗೆಯ್ಯಲು, ಭಕ್ತನ ಮಠವೇ ತನ್ನ ಮಠವೆಂದು ಇಲ್ಲಿ ಪರಿಯಂತರ ಬಿಜಯಂಗೆಯ್ದು, ಗೃಹಕ್ಕೆ ಬಾರೆನೆಂದೆಂಬುದು ಪ್ರಕೃತಿ ಗುಣವಲ್ಲದೆ ಅಱಿವಿನ ಸಂಬಂಧವಲ್ಲ. ಭಕ್ತ-ಜಂಗಮವೆರಡಕ್ಕು ಒಡಲು-ಪ್ರಾಣವೆಹಗಹಗೆ. [2]ಆ[2] ಶಿರವನರಿದು, ಶಿವನ ಹಿಡಿದು ತನ್ನಿ—ಎಂದು ಮರಳಿಯಾ ಪರಿಚಾರಕರಂ ಕಳುಹುವ ಪ್ರಸ್ತಾವದ ವಚನ:

ಮನವು ಮಹದೊಳಗೆ ಲೀಯವಾಗಿ, ಘಟವಿಡಿದು ಸುಳಿದಾಡುವ ಮಹಾಮಹಿಮಂಗೆ ಅಹುದಾಗದೆಂಬ ಭ್ರಾಂತೇಕೋ? ಹಿಡಿತಹುದು; ಬಾರದಡೆ ಶಿರವನರಿದು ತಹುದು.

---

[1] (ಶಿ) ಸಂಶಯಮಂ (ದೇ). [2] (ಶಿ) × (ದೇ).

ಕೂಡಲಸಂಗಮ ದೇವರು ಬಲ್ಲಂತೆ ಮಾಡಲಿ. ೨೮೪-೩೫೯— ×

ಹೀಂಗೆಂದು ಬಸವರಾಜದೇವರು ಪರಿಚಾರಕರಂ ಕಳುಹಲು, ಅವರು ಬಂದು, ಪ್ರಭುದೇವರ ಬಿಜಯಂಗೆಯಿಮೆನೆ—ಬಾರದಿರಲು, [1]ಉದ್ದೇಶವೆ ಎಂದು ಅವರ[1] ದೇಹದೊಳು ಶಸ್ತ್ರವನಿಟ್ಟು ನೋಡಿ, ಬಯಲೊಳು ಬೀಸಿದಂತಾಗೆ ಚೋದ್ಯಂಬಟ್ಟು, ಅಸಾಧ್ಯವೆಂದು ಮರಳಿ ಬಂದು, ಆ ಬಸವರಾಜದೇವರಿಗೆ ಬಿನ್ನಪಂಗೆಯ್ಯಲು; ಲೋಹಶಸ್ತ್ರಕ್ಕೆ ಅಭೇದ್ಯಮಪ್ಪ ಮಹಾತ್ಮನನು ಭಾವಶಸ್ತ್ರದಿಂದ ಗೆಲಿದು ತನ್ನಿಮೆಂದು ಆ ಪರಿಚಾರಕರಂ ಕಳುಹುವ ಪ್ರಸ್ತಾವದ ವಚನ:

ಮರುಳ ಹಿಡಿದಹೆನೆಂಬವರು ಮರುಳಾಗಿ ಹಿಡಿಯಬೇಕು ಕೇಳಿರೇ. ಬಹುಬುದ್ಧಿಜಡರಿಗೆ ಹಿಡಿಯಬಾರದು. ನಿರವಯದ ಬಯಲ ಹಿಡಿಯಬಹುದೇ? ಕೂಡಲಸಂಗನು ದೇವನ ಭಾವಶಸ್ತ್ರದಿಂದ ಗೆಲಿದುಕೊಂಡು ಬನ್ನಿ. ೨೮೫-೩೬೦— ×.

ಹೀಂಗೆಂದು ಬಸವರಾಜದೇವರು ನಿರೂಪಿಸಿ ಕಳುಹಲು, ಆ ಪರಿಚಾರಕರು ಬಂದು ಭಾವಾತೀತನೆಂದಱಿಯದೆ, ಭಾವಶಸ್ತ್ರದಿಂದ ಮುಟ್ಟಿಸಲು, ಗಹಗಹಿಸಿ ನಗುತ್ತ, ಆ ಬಸವರಾಜದೇವರೆನು ಮರುಳಾಡಿ ಜಱೆವ ಪ್ರಸ್ತಾವದ ವಚನ:

ಹರಿ ಹರಿ ಎಂದರೆ ಹರಿದರಯ್ಯ—ಹನ್ನಿಬ್ಬರು ಪರಿಚಾರಕರು, ಹರಿದು ಚರಣಕ್ಕೆಱಗಿ ಬಿಜಯಂಗೆಯ್ಯದಿರೆ, ನಿರವಯದ ತನು ಕರಗಸಕ್ಕೆ ಸಿಲುಕುವುದೆ? ಹಿರಿಯರಾರೋ ಕಿರಿಯರಾರೋ? ಭಕ್ತಿ ಸಕೀಲವ ಬಲ್ಲ ಭಕ್ತರಾರೋ? ಶಿರ ಹೋದ ಬಳಿಕ ಸರವೆಲ್ಲಿಯದೋ? ಸಬುದವೆಲ್ಲಿಯದೋ? ಶಾಸ್ತ್ರವೆಲ್ಲಿಯದೋ? ಶಿವಶರಣರ [2]ಅಂತರ[2]ವನಱಿಯದೆ ಮರುಳಾದನು ನೋಡಾ ನಮ್ಮ ಗೊಗೇಶ್ವರಲಿಂಗದಲ್ಲಿ ಸಂಗನ ಬಸವಣ್ಣನು. ೨೮೬-೩೬೧— × ಮತ್ತಂ:

ನವಖಂಡ ಪೃಥ್ವಿ ಚತುರ್ದಶಭುವನಗ್ರಾಮದಿಂದತ್ತತ್ತ ಮುನ್ನ, ಅನಾದಿಯಲ್ಲಿ ಜಂಗಮವೆ ಲಿಂಗವೆಂಬಿರಿ! ಇದೇನಿ ಭೋ? ಎಡೆಯಲ್ಲಿ ಕೊಲೆಯಾಯಿತ್ತು! ಭಕ್ತಿ ಹಿಂದು-ಮುಂದಾಯಿತ್ತು! ರಕ್ಕಸರ ಪರಿಯಾಯಿತ್ತು! ಇದ ಕಂಡು ಬೆಱಗಾದೆನು, ಗೊಗೇಶ್ವರ. ೨೮೭-೩೬೨— ×.

ಹೀಂಗೆಂದು ನಿರೂಪಿಸುತ್ತಿರ್ದ ಪ್ರಭುದೇವರ ನಿಲವು ಅಸಾಧ್ಯಮಾಗಲು, ಪರಿಚಾರಕರು ಮರಳಿ ಬಂದು, ಬಸವರಾಜದೇವರಿಗೆ ಬಿನ್ನಪಂಗೆಯ್ಯಲು, ಆ ಪ್ರಸ್ತಾವದೊಳು—ಹಡಪದಪ್ಪಣ್ಣಂಗಳು ಬಂದು, ಪ್ರಭುದೇವರ ಮೂರ್ತಿಯನು ಕಂಡು, ಸಿದ್ಧರಾಮಯ್ಯದೇವರ ಮೂರ್ತಿಯನು ಕಂಡು, ಪರಮಹರುಷಿತನಾಗಿ, ಹೋಗಿ, ಬಸವರಾಜದೇವರು ಲಿಂಗಾರ್ಚನೆಯ ಮಾಡುವ ವೇಳೆಯಲ್ಲಿ ಬಿನ್ನಹಂ ಮಾಡುವ ಪ್ರಸ್ತಾವದ ವಚನ:

ದೇವ ದೇವ ಮಹಾಪ್ರಸಾದ. ಕಂಗಳಲ್ಲಿ ಕರುಳಿಲ್ಲ. ಕಾಯದಲ್ಲಿ ಹೊರೆಯಿಲ್ಲ.

---

[1] (ಶಿ) ಉದ್ದೇಶದಿಂ ಅವರ (ದೇ) ಗುರುಸಿರೂಪದಿಂದ ಅವರ (ಹ). [2] (ಶಿ) ಅಂತರಂಗ (ಹದೇ).

ನುಡಿಯಲ್ಲಿ [1]ಕಡೆಯಿಲ್ಲ[1]. ನಡೆಯಲ್ಲಿ ಗತಿ ಇಲ್ಲ. ಇದೆಂತಹ ಸುಳುಹೆಂದಱಿಯೆ. ಇದೆಂತಹ ನಿಲವೆಂದು ತಿಳಿಯಬಾರದು. ಮರುಳಿಲ್ಲದ ಮರುಳು, ಅಱಿವಿಲ್ಲದ ಅಱಿವು. ಬಸವಪ್ರಿಯ ಕೂಡಲ ಚೆನ್ನಸಂಗನ ಶರಣರ ಬರವು ಕೌತುಕವಾಯಿತು ಚಿತ್ತೈಸಯ್ಯ ಸಂಗನ ಬಸವಣ್ಣ. ೨೮೮-೩೬೩—5-1.

ಇಂತು ಹಡಪದಪ್ಪಣ್ಣಂಗಳು ಬಂದು ಬಸವರಾಜದೇವರಿಗೆ ಬಿನ್ನಹವ ಮಾಡಲು, ಆ ವೇಳೆಯಲ್ಲಿ ಲಿಂಗಾರ್ಚನೆಯ ಪರಮ ಸುಖದೊಳೋಲಾಡುತ್ತ ಪರವಶರಾಗಿರ್ದು, ಸುಜ್ಞಾನಮುಖದಿಂ ವಿವೇಕಿಸಿ ನೋಡಿ, ಲಿಂಗಾರ್ಚನೆಯಂ ಬಿಟ್ಟು ಏಳಲೊಲ್ಲದೆ, "ಎನ್ನ ಕಾಯವೇ ಭಕ್ತ, ಪ್ರಾಣವೇ ಜಂಗಮವಾದ ಬಳಿಕ, ಇಲ್ಲಿ ಅಲ್ಲಿ ಎಂಬ ಭೇದವಿಲ್ಲೆ"ಂದು—ಏಕೋ ಭಾವಮಂ ಕೃತನಿಶ್ಚಯಮಂ ಮಾಡಿ, "ಆ ಜಂಗಮವನೊಡಗೊಂಡು ಬನ್ನಿ" ಎಂದು, ಮರಳಿ ಹಡಪದಪ್ಪಣ್ಣಗಳಿಗೆ ನಿರೂಪಿಸಿ ಕಳುಹುವ ಪ್ರಸ್ತಾವದ ವಚನ:

ಕಾಯದ ಕೈಯಲ್ಲಿ ಕರಸ್ಥಲ, ಪ್ರಾಣದ ಕೈಯಲ್ಲಿ ಜಂಗಮಸ್ಥಲ. ಈ ಉಭಯ ಭಾವದ ಶಿವಲಿಂಗಾರ್ಚನೆ ಪರಮಾನಂದ ಸುಖಸ್ಥಲ. ಕಾಯ ಭಕ್ತ, ಪ್ರಾಣ ಜಂಗಮ ಆವುದು ಘನವೆಂಬೆ ಆವುದು ಕಿಱಿದೆಂಬೆ? ಕೂಡಲಸಂಗನ ಶರಣರು ಬಂದರೆ, ಉಪಚರಿಯಕ್ಕಿಂಬಿಲ್ಲ; ಕರುಣದಿಂದ ಬರಹೇಳಾ ಅಪ್ಪಣ್ಣ. ೨೮೯-೩೬೫-5-2.

ಹೀಗೆಂದು ಬಸವರಾಜದೇವರು ನಿರೂಪಿಸಿ, ಹಡಪದಪ್ಪಣ್ಣಗಳ ಕಳುಹಿ, ಕರೆಯಲಟ್ಟಲು, ಆ ಅಪ್ಪಣ್ಣಗಳು ಬಂದು, ಪ್ರಭುದೇವರ ಬಿಜಯಂಗೆಯಿಮೆಂದು ಕರೆವ ಪ್ರಸ್ತಾವದ ವಚನ:

ಮನ[ಕ್ಕೆ] ಮನವೇಕಾರ್ಥವಾಗಿ, ಕಾಯಕ್ಕೆ ಕಾಯ ಸಂಬಂಧವಾಗಿ, ಪ್ರಾಣಕ್ಕೆ ಪ್ರಾಣ ಏಕಾರ್ಥವಾಗಿದ್ದವರಲ್ಲಿ ತೆಱೆ-ಮಱೆಯೆಂಬುದಿಲ್ಲ ನೋಡಯ್ಯ. ಸಂಗ-ನಿಸ್ಸಂಗವಾಗಿಪ್ಪವರಲ್ಲಿ ಉಪಚರ್ಯಕ್ಕಿಂಬಿಲ್ಲ ಕೇಳಯ್ಯ, ಬಸವಪ್ರಿಯ ಕೂಡಲ ಚೆನ್ನ ಸಂಗನ ಶರಣ ಬಸವಣ್ಣನಟ್ಟಿದನು ಕೃಪೆ ಮಾಡಾ ಗುರುವೆ. ೨೯೦-೩೬೬-5-3.

ಹೀಗೆಂದು ಹಡಪದಪ್ಪಣ್ಣಂಗಳು ಬಿನ್ನಹವ ಮಾಡಿ, ಬಿಜಯಂಗೆಯ್ಯಿಮೆನಲು, ಪ್ರಭುದೇವರು—"ಅಟ್ಟಿಟ್ಟಿಕೆಯಲ್ಲಿ ಕರೆದು ಕಳುಹಿದ"ನೆಂದು, ಮುಳಿಸನೊಳಗಿಟ್ಟುಕೊಂಡು ನುಡಿವ ಪ್ರಸ್ತಾವದ ವಚನ:

ಮನ ಮನ ಒಂದಾಗಿ, ತನು ತನು ಒಂದಾಗಿ ಬೆರಸಿದ ಬಳಿಕ, "ಕರೆಯಲಿಲ್ಲ ಕಾಲುವಿಡಿಯಲಿಲ್ಲ"—ಎಂದಱಿದವರು ಉಪಚರಿಸಿ ಬರಹೇಳಿದರೆ, ಅದೇ ಕೊರತೆ ನೋಡಾ! ಅಂಗದ ಕೈಯಲ್ಲಿ ಕ್ರೀಯಿರಲು, ಮಾತಿನ ಅದ್ವೈತವೇನಪ್ಪುದೋ? ಆಗಾಗದ ಮುನ್ನವೆ ತಾನಾದೆನೆಂಬವರಲ್ಲಿಗೆ ನಮ್ಮ ಗೊಗೇಶ್ವರ ಲಿಂಗವು ಅಡಿಯಿಡುವನಲ್ಲ. ೨೯೧-೩೬೭—5-4.

---

[1] (ದೇಶಿ) ಕವಲಿಲ್ಲ (ಹ).

ಅಂಗದ ಕೈಯಲ್ಲಿ ಕ್ರೀಯಿರಲು, ಮತ್ತೆ ಮಾತಿನಲ್ಲಿ ಅದ್ವೈತವನಾಡುವ ಭೃತ್ಯಾಚಾರ ಹೀನರ ಮನೆಗೆ ಬಾರೆವೆಂದು ಪ್ರಭುದೇವರು ನಿರೂಪಿಸಲು, ಆ ಹಡಪದಪ್ಪಣ್ಣಂಗಳು ಮರಳಿ ಬಂದು, ಬಸವರಾಜ ದೇವರಿಗೆ ಬಿನ್ನಹವ ಮಾಡುವ ಪ್ರಸ್ತಾವದ ವಚನ:

ಅಂಗದ ಕಳೆ ಲಿಂಗದಲ್ಲಿ ಲೀಯವಾಗದು. ಲಿಂಗದ ಕಳೆ ಅಂಗದಲ್ಲಿ ಲೀಯವಾಗದು. ಮಾತಿನ ಮಾಲೆಯ ಬೊಮ್ಮವೇತಕಿದೋ? ಕಾಯ ಭಕ್ತನಾದರೆ ಭೃತ್ಯಾಚಾರ ವಿರಬೇಕು. ಪ್ರಾಣ ಜಂಗಮವಾದರೆ ಅಱಿವಿರಬೇಕು. ಇಂತು ಭಕ್ತಿಜ್ಞಾನ ಉಳ್ಳವ ರಲ್ಲದೆ ಭಕ್ತರಲ್ಲ, ಶರಣರಲ್ಲ. ಹಿರಿಯರು ಬಂದರೆ ಇದಿರೆದ್ದು ಬಾರದವರ ಮನೆಗೆ ಅಡಿಯಿಡೆವೆಂದು ಬಸವಪ್ರಿಯ ಕೂಡಲ ಚೆನ್ನಸಂಗನ ಶರಣರು ಕಾಡಿಹರು ಕೇಳಾ ಸಂಗನ ಬಸವಣ್ಣ. ೨೯೨-೩೬೮—5-5.

ಹೀಗೆಂದು ಅಪ್ಪಣ್ಣಗಳು ಬಿನ್ನೈಸಲು, ಬಸವರಾಜದೇವರು—ಮರಳಿ ಕರೆಯ ಕಳುಹಿದ ಪ್ರಸ್ತಾವದ ವಚನ:

ಭಕ್ತನ ಕಾಯವ ಜಂಗಮ ಧರಿಸಿಪ್ಪ ನೋಡಾ! ಜಂಗಮದ ಪ್ರಾಣವ ಭಕ್ತ ಧರಿಸಿಪ್ಪ ನೋಡಾ. ಭಕ್ತನಲ್ಲಿಯೂ ಭಕ್ತ-ಜಂಗಮವೆರಡೂ ಸನ್ನಿಹಿತ, ಜಂಗಮ ದಲ್ಲಿಯೂ ಭಕ್ತ-ಜಂಗಮವೆರಡೂ ಸನ್ನಿಹಿತ. ಜಂಗಮಕ್ಕಾದರೂ ಭಕ್ತಿಯೆ ಬೇಕು. ಭಕ್ತಂಗೆಂತೂ ಭಕ್ತಿಸ್ಥಲವೆ ಬೇಕು. ಭಕ್ತನ ಅರ್ಥ-ಪ್ರಾಣಾಭಿಮಾನಕ್ಕೆ ತಾನೆ ಕರ್ತನೆಂದು ಬಂದ ಜಂಗಮ—ಆ ಭಕ್ತನ ಮನೆಗೆ ತಾನೆ ಕರ್ತನಾಗಿ ಹೊಕ್ಕು ತನು-ಮನ-ಧನಂಗಳೆಲ್ಲವನೂ ತಾನೆ ಒಳಕೊಂಡು, ಆ ಭಕ್ತನ ಪಾವನವ ಮಾಡ ಬಲ್ಲ, ಆತನ ಜಂಗಮವೆಂಬೆ. ಆ ಜಂಗಮದ ಗಳಗರ್ಜನೆಗೆ ಸೈರಿಸಿ, ಮುಡುಹಿಂಗೆ ಮುನ್ನೂರು ಪಟ್ಟವ ಕಟ್ಟುತ್ತಿದ್ದರೆ, ಆತನ ಭಕ್ತನೆಂಬೆ. ತನ್ನ ಮಠಕ್ಕೆ ತಾ ಬಹಡೆ ಮುನಿಸುಂಟೆ? ಕೂಡಲಸಂಗಮದೇವರ ಶರಣರ ಮನೆಯ ಬಾಗಿಲುಗಾಹಿ ನಾನಾಗಿ ಗೃಹದ ಕರ್ತರು ಗೃಹಕ್ಕೆ ಬಂದರೆ—ಬೇಕೆನ್ನೆ ಬೇಡೆನ್ನೆನು. ೨೯೩-೩೬೯—5-6.

ಹೀಗೆಂದು ಬಸವರಾಜದೇವರು ಬಿನ್ನೈಸಲು, ಹಡಪದಪ್ಪಣ್ಣಗಳು ಮರಳಿ ಬಂದು ಪ್ರಭುದೇವರ ಕರೆವ ಪ್ರಸ್ತಾವದ ವಚನ:

ನಿಮ್ಮ ತನು, ನಿಮ್ಮ ಮನ, ನಿಮ್ಮ ಧನ; ನಿಮ್ಮದಲ್ಲದೆ ಅನ್ಯ ಒಂದಣು ಮಾತ್ರವಿಲ್ಲ ನೋಡಯ್ಯ. ಭಕ್ತನ ಮಠವೆ ತನ್ನ ಮಠವೆಂದು ಮುನ್ನವೆ ಅಱಿದಱಿದು ಬಂದು, ಮತ್ತೊಂದ ಮತ್ತೊಂದ ನೆನೆವರೆ? ಬಸವಪ್ರಿಯ ಕೂಡಲ ಚೆನ್ನಸಂಗನ ಶರಣ ಬಸವಣ್ಣಂಗೆ ಸ್ವತಂತ್ರ ಭಾವವುಳ್ಳಡೆ ನಿಮ್ಮ ಪಾದದಾಣೆ. ೨೯೪-೩೭೦-5-7.

ಹೀಗೆಂದು ಅಪ್ಪಣ್ಣಗಳು ಬಿನ್ನೈಸಲು, ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರದ ವಚನ:

ಭಕ್ತ ಜಂಗಮದ ಸಕೀಲ ಸಂಬಂಧವನಾರು ಬಲ್ಲರು ಹೇಳಾ? ಅರ್ಥವನೊಪ್ಪಿಸಿದಾತ ಭಕ್ತನಲ್ಲ, ಅಭಿಮಾನವನೊಪ್ಪಿಸಿದಾತ ಭಕ್ತನಲ್ಲ. ಪ್ರಾಣವನೊಪ್ಪಿಸಿದಾತ ಭಕ್ತನಲ್ಲ. ಅದೇನು ಕಾರಣವೆಂದರೆ ಸತ್ಯಸದಾಚಾರಕ್ಕೆ ಸಲ್ಲರಾಗಿ, ಆ ಭಕ್ತನ ಮನೆಯ

ಹೊಕ್ಕು ಪಾದಾರ್ಚನೆಯ ಮಾಡಿಸಿಕೊಂಡು, ಒಡಲ ಕಕ್ಕುಲಿತೆಗೆ ಅನ್ನವನುಂಡು, ವ್ಯಸನದ ಕಕ್ಕುಲಿತೆಗೆ ಹಣವ ಬೇಡಿ, ಕೊಟ್ಟಡೆ ಕೊಂಡಾಡಿ, ಕೊಡದಿರ್ದಡೆ ದೂಱ-ಕೊಂಡು ಹೋಹಾತ ಜಂಗಮವಲ್ಲ. ಆದಿಯನಾದಿಯಿಂದತ್ತತ್ತ ಮುನ್ನಲಾದ ಮಹಾಘನವ ಭೇದಿಸಿ ಕಂಡು ಅಱಿದು, ಕಾಯದ ಜೀವದ ಹೊಲಿಗೆಯ ಬಿಚ್ಚಿ ಬಿಸಾಡಿ, ತನ್ನನೆ ಅರ್ಪಿಸಿ ಇರಬಲ್ಲಾತನೇ ಭಕ್ತ. ಸುಳುಹಿನ ಸೂತಕ ವೈದೋಱದೆ, ಒಡಲ ಕಳವಳದ ರುಚಿಗೆ ಹಾರೈಸದೆ, ಅಱಿವೆ ಅಂಗವಾಗಿ, ಆಪ್ಯಾಯನವೆ ಭಕ್ತಿಯಾಗಿ, ಕಿಂಕುರ್ವಾಣವೆಂಬ ಶಿವಮಂತ್ರಕ್ಕೆ ನಮೋ ನಮೋ ಎನ ಬಲ್ಲರೆ ಆತ ಜಂಗಮ. ಆ ಜಂಗಮದ ಆ ಭಕ್ತನ ಸಮೇಳವೇ ಮೇಳ. ಮಿಕ್ಕಿನ ಅರೆಭಕ್ತ-ಅರೆಜಂಗಮ ರೊಡತಣ ಸಂಗ ನಮ್ಮ ಗೊಗೇಶ್ವರ ಲಿಂಗಕ್ಕೆ ಸೊಗಸದು. ೨೯೫-೩೭೧-5-8.

ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಹಡಪದಪ್ಪಂಗಳು ಬಿನ್ನೈಸಿದ ಪ್ರತ್ಯುತ್ತರ :

ಲಿಂಗ ಜಂಗಮ, ಜಂಗಮ ಲಿಂಗವೆಂಬುದನಾರು ಬಲ್ಲರಯ್ಯ. ಮರ್ತ್ಯಲೋಕ ಶಿವಲೋಕದಲ್ಲಿ ಬಸವಣ್ಣನಲ್ಲದೆ ಲಿಂಗಕ್ಕಾಧಾರವಿಲ್ಲೆಂದು ಮರ್ತ್ಯಲೋಕದಲ್ಲಿ ಬಂದವ-ತರಿಸಿದನಯ್ಯ ಬಸವಣ್ಣನು. ಜಂಗಮ ಮುಖಲಿಂಗವೆಂಬುದನಱಿದು; ತನ್ನನರ್ಪಿಸಿ, ಇದಿರ ತಪ್ಪಿಸಿ, ಇರಬಲ್ಲನಯ್ಯ ಬಸವಣ್ಣನು. ಅಂಗಮುಖವೆಲ್ಲವೂ ನಷ್ಟವಾಗಿ ಭೃತ್ಯಾಚಾರವೇ ಅನುವಾಗಿರಬಲ್ಲನಯ್ಯ ಬಸವಣ್ಣನು. ಪ್ರಾಣಕಳೆಯಱತು ಅಂತು ಜಂಗಮವೆ ಪ್ರಾಣವಾಗಿ ಇರಬಲ್ಲನಯ್ಯ ಬಸವಣ್ಣನು. ಫಲಪದಂಗಳ ಹಂಗು-ಹರಿಯಿಲ್ಲದಿರಬಲ್ಲನಯ್ಯ ಬಸವಣ್ಣನು. ಉಪಾಧಿಯೆಂಬ ಕೀರ್ತಿವಾರ್ತೆಯನೆ ಜಱಿದು, ನಿರುಪಾಧಿಕವೆಂಬ ವಿವೇಕಕ್ಕೆ ಅತೀತನಾಗಿ, ಸಹಜ ದಾಸೋಹಿಯಾಗಿರ ಬಲ್ಲನಯ್ಯ ಬಸವಣ್ಣನು. ಬಸವಪ್ರಿಯ ಕೂಡಲ ಚೆನ್ನ ಸಂಗನ ಶರಣ ಬಸವಣ್ಣನೇ ನಿಮಗೆ ಭಕ್ತನಲ್ಲದೆ ಮತ್ತಾರನು ಕಾಣೆನಯ್ಯ. ೨೯೬-೩೭೨-5-9.

ನಿಮಗೆ ಸಂಗನ ಬಸವನಲ್ಲದೆ ಮತ್ತಾರೂ ಭಕ್ತರಿಲ್ಲವೆಂದು ಅಪ್ಪಣ್ಣಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರದ ವಚನ :

ನಿಮ್ಮಲ್ಲಿ ಭಕ್ತಿಯುಂಟು, ತಮ್ಮಲ್ಲಿ ಭಕ್ತಿಯುಂಟು, ಎಮ್ಮಲ್ಲಿ ಭಕ್ತಿಯುಂಟೆಂದರೆ ಶರಣರು ಮೆಚ್ಚುವರೆ? ಹೂಸಿ ಹುಂಡನ ಮಾಡಿ, ಬಾಯ ಸವಿಯ ನುಡಿವರೆಲ್ಲಾ ಭಕ್ತರಪ್ಪರೆ? ಮಾತಿನ ಅದ್ವೈತವ ಕಲಿತು ಮಾಱುಗೋಲ ಬಿಡುವರೆಲ್ಲಾ ಭಕ್ತರಪ್ಪರೆ? [1]ಚೆಳ್ಳಿಗೆಯ ಆಕಳೆಂದರೆ[1] ಬಳ್ಳವಾಲ ಕಱೆವುದೆ? ಮರುಳೆ, ಸಂಗನ ಬಸವಣ್ಣನೆಂದರೆ, ಮಾತಿನ ಮಾತಿಂಗೆಲ್ಲ ಭಕ್ತಿಯುಂಟೆ? ಬಂದ ಜಂಗಮದ ಇಂಗಿತಾಕಾರವನಱಿದು, ಇದಿರೆದ್ದು ವಂದಿಸಿ ಕೈಮುಗಿದು, ನಡನಡನೆ ನಡುಗಿ ಕಿಂಕಿಲನಾಗಿ ಭಯಭೀತಿ ಭೃತ್ಯಾಚಾರವಾಗಿ ಇರಬಲ್ಲಡೆ ಅದು ಭಕ್ತಿ, ಅದು ಮರ್ಮ.

---

[1] (ಗೂ R. ಉ) ಚೆಳ್ಳಿಗೆಯ ಮಕ್ಕಳೆಂದರೆ (ಶಿ) (ಗೂ) ಚೆಳ್ಳಿಗೆಯ ಕರುವೆಂದರೆ (ಹ).

ಬಂದವರಾರೆಂದಱಿಯದೆ, ನಿಂದ ನಿಲವನಱಿಯದೆ, ಕೆಮ್ಮನೆ ಅಹಂಕಾರವ ಹೊತ್ತು ಕೊಂಡಿಪ್ಪವರ ನಮ್ಮ ಗೊಗ್ಗೇಶ್ವರನೊಲ್ಲ ನೋಡಯ್ಯ. ೨೯೭-೩೭೩-5-10.

ಹೀಗೆಂದು ಪ್ರಭುದೇವರು ಬಾರೆವೆಂದು ನಿರೂಪಿಸಲು, ಹಡಪದಪ್ಪಣ್ಣಗಳು ಮರಳಿ ಬಂದು, ಬಸವರಾಜದೇವರಿಗೆ ಬಿನ್ನೈಸುವ ಪ್ರಸ್ತಾವದ ವಚನ:

ದೇವ ದೇವ ಮಹಾಪ್ರಸಾದ. ನಿಮ್ಮ ಶರಣರ ಮನೆಯ ಸಲುಗೆಯ ಬಂಟ ನಾನಲ್ಲಯ್ಯ. ತನು-ಮನ-ಧನವ ಹಿಂದಿಕ್ಕಿಕೊಂಡಿಪ್ಪ ವಂಚಕ ನಾನಯ್ಯ. ನಿಮ್ಮ ಶರಣರು ಎನ್ನಿಚ್ಚೆಗೆ ಬಪ್ಪರೆ? 'ಚಕಿತಮಭಿಧತ್ತೇ ಶ್ರುತಿರಪಿ' ಎನಲು—ಎನ್ನ ನುಡಿ ನಿಮ್ಮ ಶರಣರ ತಾಗಬಲ್ಲುದೇ? ಹಣೆಯ ಹೊಣೆಯ ತೋಱಿ ಉದರವ ಹೊರೆವಂತೆ, ನಿಮ್ಮ ಮಱೆಯಲಡಗಿಪ್ಪ ಹಡಪಿಗ ನಾನಯ್ಯ. ಬಸವಪ್ರಿಯ ಕೂಡಲ ಚೆನ್ನಸಂಗಯ್ಯನ ಶರಣರು ಎನ್ನ ಮಾತಿಂಗೆ ಬಾರರು. ನೀವೇ ಹೋಗಿ ಬಿಜಯಂಗೈಸಿಕೊಂಡು ಬಾರಾ ಸಂಗನ ಬಸವಣ್ಣ. ೨೯೮-೩೭೪-5-11 ಮತ್ತಂ:

ನಿನ್ನಳವಲ್ಲ, ಎನ್ನಳವಲ್ಲ, ಇದಾರಳವಲ್ಲದ ಘನವು ನೋಡಯ್ಯ. ಕಾಬರೆ ಕಂಗಳಿಗ ಸಾಧ್ಯ, ಮುಟ್ಟುವರೆ ಸೋಂಕಿಂಗಸಾಧ್ಯ. ಮಾತಾಡಿಸಿ ನೋಡುವರೆ ವಾಙ್ಮನೋತೀತ. ನಿಂದರೆ ನೆಳಲಿಲ್ಲ, ಸುಳಿದರೆ ಹಜ್ಜೆಯಿಲ್ಲ. ಪ್ರಭುದೇವರೆಂಬ ಭಾವ ತೋಱುತ್ತಿದೆ. ಬಸವಪ್ರಿಯ ಕೂಡಲ ಚೆನ್ನಸಂಗಯ್ಯನ ಶರಣರ ಚರಣವಿಡಿವರೇಳಾ ಸಂಗನ ಬಸವಣ್ಣ. ೨೯೯-೩೭೫-5-12.

ನಾನು ಭಕ್ತನಲ್ಲಾಗಿ ಎನ್ನಿಚ್ಚೆಗೆ ಬಾರರು. ನೀವೇ ಹೋಗಿ ಬಿಜಯಂಗೆಯ್ಸಿ ತನ್ನಿ ಎಂದು ಅಪ್ಪಣ್ಣಗಳು ಬಿನ್ನಹಂ ಮಾಡುವ ಪ್ರಸ್ತಾವದೊಳು—ಚಿಕ್ಕದಣ್ಣಾಯಕರು ಬಂದು—ಪ್ರಭುದೇವರು-ಸಿದ್ಧರಾಮಯ್ಯದೇವರು ಬಂದು ನಿಮ್ಮ ದ್ವಾರವಟ್ಟದ ಮುಂದೆ ನಿಂದೈದಾರೆ, ನೀವೇ ಬಿಜಯಂಗೆಯ್ಸಿ ತನ್ನಿ ಎಂದು ಬಿನ್ನಹಂ ಮಾಡುವ ಪ್ರಸ್ತಾವದ ವಚನ:

ಲಿಂಗವೇ ಜಂಗಮ, ಜಂಗಮವೆ ಲಿಂಗವೆಂದು ನಂಬಿದಲ್ಲಿ—ಹೊರೆ ಹುಟ್ಟಿದ ಬಳಿಕ; ಹಾಲ ಹರವಿಯೊಳಗೆ ಹುಳಿ ಹೊಕ್ಕಂತೆ ನೋಡಯ್ಯ. ಅಂಗದ ಮೇಲೆ ಲಿಂಗವುಳ್ಳುದೆಲ್ಲವೂ ಸಂಗಮನಾಥನೆಂದು ನಂಬಿದ ನಂಬುಗೆಯು—ಬಂದ ಶರಣನ ನಿಲವ ನಱಿಯದಿದ್ದಲ್ಲಿ, ತಪ್ಪಿತ್ತು ನೋಡಾ, ಗುರುವೆ. ಸಂಗಮನಾಥ ಮನೆಗೆ ಅಂಗವಿಡಿದು ನಡೆದು ಬಂದರೆ, ದಿಮ್ಮನೆ ಇದಿರೆದ್ದು ವಂದಿಸಬೇಕಯ್ಯ ಕೂಡಲ ಚೆನ್ನ ಸಂಗನ ಶರಣರು—ಪ್ರಭುದೇವರು ಸಿದ್ಧರಾಮಯ್ಯದೇವರು—ಬಂದು ಬಾಗಿಲಲ್ಲಿರಲು, ಕಣ್ಣಱಿಯದಿದ್ದರೂ ಕರುಳಱಿಯ ಬೇಡಾ, ಸಂಗನ ಬಸವಣ್ಣ? ೩೦೦-೩೭೬-5-13.

ಅಲ್ಲಮಪ್ರಭುದೇವರು-ಸಿದ್ಧರಾಮಯ್ಯದೇವರು ಬಂದು ಬಾಗಿಲೊಳಗಿರಲು ಅಟ್ಟಟ್ಟಕೆಯಲಿಂತು ತೆಱಹು-ಮಱಹಾಗಿಪ್ಪುದು ನಿಮಗುಚಿತವಲ್ಲೆಂದು, ಚಿಕ್ಕದಣ್ಣಾಯಕರು ನಿರೂಪಿಸಲು, ಬಸವರಾಜದೇವರು—ಕೇಳಿದಾಕ್ಷಣವೆ ಹಮ್ಮದಂಬೋಗಿ ನಡನಡುಗಿ ಭಯರಸಾರ್ಣವದೊಳ್ ಮುಳುಂಗಿ, ಕಂಗಳ ಬಾಷ್ಪಾಂಬುವಿನೊಳು

ಮುಂದುಗಾಣದೆ, ಚಿಕ್ಕ ದಣ್ಣಾಯಕರ ಪಾದದ ಮೇಲೆ ಬಿದ್ದು, ಪ್ರಭುದೇವರ ಮುನಿಸ ತಿಳುಹಿ ಕೊಡಿ ಎಂದು ಬಿನ್ನಹಂ ಮಾಡುವ ಪ್ರಸ್ತಾವದ ವಚನ :

ಇನ್ನೇವೆನಿನ್ನೇವೆ ಕೆಮ್ಮನೆ ಕೆಟ್ಟೆನು. ಇನ್ನೇವೆನಿನ್ನೇವೆ ಕೆಮ್ಮನೆ ಕೆಟ್ಟೆನು. ನಿಮ್ಮ ಶರಣರು ಬಂದು ಬಾಗಿಲಲೊಳಗಿರಲು, ದಿಮ್ಮನೆ ಇದಿರೆದ್ದು ವಂದಿಸಲಱಿಯದಿದ್ದರೆ ಕೆಟ್ಟ ಕೇಡನೇನೆಂದುಪಮಿಸುವೆನು. ಕೂಡಲ ಸಂಗಮದೇವ, ನಾನು ಉಭಯ ಭ್ರಷ್ಟ ನೆಂಬುದು ಎನಗಿಂದಱಿಯ ಬಂದಿತ್ತು. ೩೮೧-೫೯೧-5-14. ಮತ್ತಂ :

ಮತಿಗೆಟ್ಟು ಧೃತಿಗುಂದಿ ಬೇಳಾದೆನಯ್ಯ. ಗತಿಗೆಟ್ಟು ಧಾತುಗೆಟ್ಟ ಬಾಹಿರ ನಾನಯ್ಯ. ಕಹಿಸೋರೆ ಮುತ್ತಂತಾಯಿತ್ತು ಎನ್ನ ಭಕ್ತಿ. ನಡೆಲಿಂಗ ಮನೆಗೆ ಬರಲು ಇಂಬು ಗೊಳ್ಳಲಱಿಯದೆ ಕೆಟ್ಟ ಕೇಡನೇನೆಂದುಪಮಿಸುವೆನಯ್ಯ. ನವರತ್ನದ ಕಿತ್ತು ಮಡುವಿ ನೊಳಗೆ ಹಾಯ್ಕಿದ ಕಪಿಯಂತೆ ಆಯಿತ್ತೆನ್ನ ಭಕ್ತಿ. ಕೂಡಲಸಂಗಮದೇವರ ತಂದು ಕೊಟ್ಟರೆ ನಿಮ್ಮ ಚಮ್ಮಾವುಗೆಯ ಹೊತ್ತು ಕುಣಿದಾಡುವೆನು ಕಾಣಾ ಚೆನ್ನಬಸವಣ್ಣ. ೩೦೨-೫೯೨-5-15.

ಹೀಗೆಂದು ಅತ್ಯಂತಭೀತರಾಗಿ ಬಿನ್ನಹಂ ಮಾಡುತ್ತಿರಲು, ಚಿಕ್ಕದಣ್ಣಾಯಕರು ಹಿರಿಯ ದಣ್ಣಾಯಕರ ಶ್ರೀಪಾದಕ್ಕೆ ನಮಸ್ಕಾರಮಂ ಮಾಡಿ ಬಿನ್ನೈಸಿದ ಪ್ರಸ್ತಾವದ ವಚನ :

ಹೋ ಹೋ ಗುರುವೆ, ನಿಮ್ಮ ಚಮ್ಮಾವುಗೆಯ ಬಂಟ ನಾನಾಗಿರಲು ಅಂಜುವರೆ? ಅಳುಕುವರೆ? ಸಂಗಮನಾಥ ಬಂದು, ನಿಮ್ಮ ಮನವ ನೋಡಲೆಂದು, ತಮ್ಮ ಮನವ ಸಡ್ಡಲಿಕ್ಕಿದನೊಂದು ಲೀಲೆಯಿಂದ. ಅದು ನಿಮಗೆ ಸಹಜವಾಗಬಲ್ಲುದೆ? ಮಂಜಿನ ಮೋಹರ ರವಿಯ ಕಿರಣವ ಕೆಡಿಸಲಾಪವೆ? ನಿಮ್ಮ ನೆನೆವರಿಗೆ ಸಂಸಾರವಿಲ್ಲೆಂದು ಶ್ರುತಿ ಹೊಗಳುತ್ತಿರಲು, ನಿಮ್ಮಱಿವಿಂಗೆ ಕೇಡುಂಟೆ? ಕೂಡಲ ಚೆನ್ನಸಂಗನ ಶರಣರ ಕರೆವಡೆ ಎನ್ನ ಮನವೆಂಬ ಚೆಮ್ಮಾವುಗೆಯ ಮೆಟ್ಟಿ ನಡೆಯಾ, ಸಂಗನ ಬಸವಣ್ಣ. ೩೦೩-೫೯೩-5-16.

ಹೀಗೆಂದು ಬಿನ್ನೈಸಲು, ಇದಕ್ಕೆ ಬಸವರಾಜದೇವರು ಚಿಕ್ಕದಣ್ಣಾಯಕರ ಪಾದದ ಕೃಪೆಯಿಂ ಕಂಡು, ನಾನು ಬದುಕಿದೆನೆಂದು ಕೃತನಿಶ್ಚಯವನೆಯ್ದಿದ ಪ್ರಸ್ತಾವದ ವಚನ:

ನಂಬಿದೆನಯ್ಯ ನಾನು, ನಚ್ಚಿದೆನಯ್ಯ ನಾನು, ಬದುಕಿದೆನಯ್ಯ ನಾನು ನಿಮ್ಮ ಕೃಪೆ ಯಿಂದಲಿ. ಹಾಳುಗುಳಿಯಲಿ ಬಿದ್ದ ಪಶುವಿನ ಕಱುವ ತೆಗೆದು, ತಾಯ ಮುಖವ ತೋಱುವಂತೆ—ಪಾಪಕೂಪದಲ್ಲಿ ಬಿದ್ದವನನೆಬ್ಬಿಸಿ, ಕೂಡಲ ಸಂಗನ ಶರಣ ಚರಣವ ತೋಱಿಸಿ ಎನ್ನನುಳುಹಿದನು, ಹೋದ ಜೀವಕ್ಕೆ ತನ್ನ ಕರುಣವೆಂಬ ಮರುಜವಳಿಯ ಹಿಂಡಿ ಎತ್ತಿದನು, ಚೆನ್ನಬಸವಣ್ಣನಿಂದಲೆಂತಕ್ಕೆ ಬದುಕಿದೆನು. ೩೦೪-೫೯೪-5-17.

ಬಸವರಾಜದೇವರು ತಮ್ಮ ತಾವು ಸಂತೈಸಿಕೊಂಬ ಕಾಲದೊಳು, ಸೊಡ್ಡಳ ಬಾಚರಸರು ಬಂದು ಬಿನ್ನಹಂ ಮಾಡುವ ಪ್ರಸ್ತಾವದ ವಚನ:

ತೆಱಹು ಮಱಹೆಂಬವು ನಿಮ್ಮ ವಚನವಲ್ಲ. ಅಮೃತಸಾಗರದೊಳಗೆ ಬೇವಿನ ಬಿಂದುವುಂಟೆ? ಮನವ ನೋಡಲೆಂದು ನಟ ನಾಟಕವನೊಡ್ಡಿದರೆ, ಅದಕ್ಕೆ—ಸಹಜ ವಲ್ಲಾಗಿ—ಹೆದಱಲಿಲ್ಲ. ಮಹಾದಾನಿ ಸೊಡ್ಡಳನ ಮನ ನೊಂದಿತ್ತೆಂದು ಅಂಜಬೇಡ ವೇಳಾ ಸಂಗನ ಬಸವಣ್ಣ. ೩೦೫-೩೯೫-5-18.

ಹೀಗೆಂದು ಸೊಡ್ಡಳ ಬಾಚರಸರು ಬಿನ್ನಹಂ ಮಾಡಲು, ಬಸವರಾಜದೇವರು ನಿರೂಪಿಸಿದ ಪ್ರಸ್ತಾವದ ವಚನ:

ಮಾಱಂಕನಿಱಿವಲ್ಲಿ ಘಾಯಖಂಡಿಯ ತೋಱಿದಾತನೇ ತೆತ್ತಿಗ. ಕೈಯ ಕೈದು ಬಿದ್ದಲ್ಲಿ ಎತ್ತಿ ಕೊಟ್ಟಾತನೇ ಹಿತವ. ಕೂಡಲ ಸಂಗನ ಶರಣ ಸೊಡ್ಡಳ ಬಾಚರಸರ ಕರುಣ ಉಳ್ಳನ್ನಕ್ಕರ ಇನ್ನು ನಾನಂಜುವನಲ್ಲ. ೩೦೬-೩೯೬-5-19.

ಇಂತು ಬಸವರಾಜದೇವರು—ಚಿಕ್ಕದಣ್ಣಾಯಕರು, ಸೊಡ್ಡಳ ಬಾಚರಸರು, ಹಡಪದಪ್ಪಣ್ಣಗಳು ಕರೆವುತ್ತ ಇರಲು—ಲಿಂಗಾರ್ಚನೆಯ ಮಾಡುತ್ತ ಮಾಡುತ್ತಲಾ ಲಿಂಗಮಂ ಕರಸ್ಥಲದೊಳು ಧರಿಸಿಕೊಂಡು ಪೂಜಿಸುಡುವ ಪ್ರಸ್ತಾವದ ವಚನ:

ಲಿಂಗಾರ್ಚನೆಯ ಮಾಡುವೆನಯ್ಯ ಜಂಗಮವೆನ್ನ ಮಠಕ್ಕೆ ಬರಬೇಕೆಂದು, ಆ ಜಂಗಮವೆನ್ನ ಮಠಕ್ಕೆ ಬಂದರೆ, ಲಿಂಗಾರ್ಚನೆಯ ಮಾದು, ಜಂಗಮಾರ್ಚನೆಯ ಮಾಡುವೆನು: ಅದೇನು ಕಾರಣವೆಂದರೆ—ಆ ಲಿಂಗದಲ್ಲಿ ಪದವುಂಟು, ಫಲವುಂಟು, ಭವ ವುಂಟಾಗಿ; ಆ ಜಂಗಮದಲ್ಲಿ ಪದಂ ನಾಸ್ತಿ, ಫಲಂ ನಾಸ್ತಿ, ಭವಂ ನಾಸ್ತಿಯಾದ ಕಾರಣ:

ಲಿಂಗಾರ್ಚನಂ ನ ಕರ್ತವ್ಯಂ ಕರ್ತವ್ಯಂ ಜಂಗಮಾರ್ಚನಂ ।
ಲಿಂಗ-ಜಂಗಮಯೋರ್ಮಧ್ಯೇ ಜಂಗಮಸ್ತು ವಿಶಿಷ್ಯತೇ ॥

ಎಂದುದಾಗಿ, ಕೂಡಲಸಂಗಮದೇವಯ್ಯ, ನಾನಿನ್ನ ಭವಭವಾಂತರ ನಿಮ್ಮ ಜಂಗಮಾರ್ಚನೆಯ ಮಾಡುವೆನು. ೩೦೭-೩೯೭-5-20. ಮತ್ತಂ:

ಎನ್ನ ತನುವಿಡಿದವರ ತನುವ ಬೆರಸುವೆನು. ಎನ್ನ ಮನವಿಡಿದವರ ಮನವ ಬೆರಸುವೆನು. ಎನ್ನ ಶಿರವನವರ ಪಾದಕ್ಕೆ ಪೂಜೆಯ ಮಾಡುವೆನು. ಕೂಡಲ ಸಂಗನ ಶರಣರ ನೊಡಗೊಂಡು ಬಂದೆನ್ನ ಭವವ ಹಱಿವೆನು. ೩೦೮-೩೯೮-5-21.

ಇಂತು, ಬಸವರಾಜದೇವರು ಲಿಂಗಾರ್ಚನೆಯಿಂದೆದ್ದು, ಚೆನ್ನಬಸವರಾಜದೇವರು ಮೊದಲಾದ ಅಸಂಖ್ಯಾತ ಮಹಾಗಣಂಗಳೆಲ್ಲರ ಕರೆಸಿಕೊಂಡು, ವಿಭೂತಿವೀಳೆಯ ಕಾಣಿಕೆಯಂ ಕೊಂಡು, ನವರತ್ನಖಚಿತದ ತೋರಣಮಂ ಕಟ್ಟಿ, ದೇವಾಂಗವಸ್ತ್ರಂಗಳಂ ಮೇಲುಕಟ್ಟಂ ಕಟ್ಟಿ, ನಡೆಮಡಿಯಂ ಹಾಸಿ, ಕಳಶ ಕನ್ನಡಿ ಪಂಚಮಹಾವಾದ್ಯಂಗಳು ಬೆರಸಿ ಇದಿರುಗೊಳಲು ಬರುತ್ತಿಪ್ಪ ಪ್ರಸ್ತಾವದೊಳು; ಇತ್ತಲು, ಪ್ರಭುದೇವರು—ಬಸವ ರಾಜ ದೇವರ ತೆಱಹುಮಱಹಂ ನೋಡಿ ವಿಸ್ಮಯಮಂ ತಾಳ್ದು, ಸಿದ್ಧರಾಮಯ್ಯದೇವರಿಗೆ ಹೇಳುವ ಪ್ರಸ್ತಾವದ ವಚನ:

ನೋಡು ನೋಡು ಸಿದ್ಧರಾಮಯ್ಯ, ಆಗಳೇ ಭಕ್ತರಿಗೆ ಅಹಂಕಾರವಾಯಿತ್ತು. ಭೃತ್ಯನಿದ್ದೆಡೆಗೆ ಕರ್ತನೈತಂದರೆ, ಅಟ್ಟಿಟ್ಟಕೆಯಲ್ಲಿ ಇಂತು ಕರೆದವರುಂಟೆ ? ಸಂಗನ ಬಸವಣ್ಣನೊಳಗೆ ಇಂತು ಮಜಿವೆ ಹುಟ್ಟಿದ ಬಳಿಕ, ಉಳಿದ ಶಿವಭಕ್ತರ ಪಾಡೇನು ಹೇಳಾ ! ಗೊಗೇಶ್ವರಲಿಂಗವನು [1]ಭಕ್ತಿಯಿಂದ[1] ಮನಮುಟ್ಟಿ ಕರೆದರೆ ಹೋಹು ದಲ್ಲದೆ, ವ್ಯರ್ಥಕ್ಕೆ [2]ಹೋಗಲಾಗದು[2] ನೋಡಯ್ಯ. ೩೦೯-೩೯೯-5-22.

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಸಿದ್ಧರಾಮಯ್ಯದೇವರು ಮರಳಿಯಾ ಪ್ರಭುದೇವರೊಡನೆ ಬಿನ್ನಹಂ ಮಾಡುವ ಪ್ರಸ್ತಾವದ ವಚನ:

ನಿಮ್ಮ ಶಕ್ತಿ ಆತನಲ್ಲಿಪ್ಪುದು ಕಂಡಯ್ಯ. ಆತನ ಪ್ರಾಣ ನಿಮ್ಮಲ್ಲಿಪ್ಪುದು. ನಿಮ್ಮ ತನ್ನ ಭೇದವನಾರು ಬಲ್ಲರು ಹೇಳಯ್ಯ ? ಕಪಿಲಸಿದ್ಧ ಮಲ್ಲಿನಾಥಯ್ಯ, ನಿಮ್ಮ ಶರಣ ಬಸವಣ್ಣನ ಅನುವ ನೀವೇ ಬಲ್ಲಿರಿ. ೩೧೦-೪೦೦-5-23.

ಇಂತು ಪ್ರಭುದೇವರು—ಸಿದ್ಧರಾಮಯ್ಯದೇವರು ತಮ್ಮೊಳಗೆ ತಾವು ಬಸವರಾಜ ದೇವರ ಅಂತಸ್ಥಿತಿಗತಿಯಂ ಪ್ರಸಂಗಮುಖದಿಂ ನುಡಿವುತ್ತಿರಲು, ಇತ್ತಲು ಬಸವರಾಜ ದೇವರು—ಅಸಂಖ್ಯಾತ ಮಹಾಗಣಂಗಳು ಸಹಿತ ಬಂದು, ಪ್ರಭುದೇವರ ಶ್ರೀಪಾದವಂ ದರುಶನವಾದ ಪ್ರಸ್ತಾವದ ವಚನ:

ಭವರೋಗ ವೈದ್ಯನೆಂದು ನಂಬಿದೆ ನಾನು. ಒಮ್ಮಿಂಗೆ ಕರುಣಿಸಯ್ಯ. ಭಕ್ತಿ ಫಲದಾಯಕ ನೀನು—ಒಮ್ಮಿಂಗೆ ಕರುಣಿಸಯ್ಯ. ಜಯ ಜಯ ಶ್ರೀಮಹಾದೇವ, ಜಯ ಜಯ ಶ್ರೀಮಹಾದೇವ ಎನುತಿದ್ದೆನು. ಕೂಡಲಸಂಗಮದೇವಯ್ಯ, ನಿಮ್ಮ ಶ್ರೀಪಾದಕ್ಕೆ ನಮೋ ನಮೋ ಎನುತಿದ್ದೆನು. ೩೧೧-೪೦೧-5-24. ಮತ್ತಂ:

ಕಂಡಡೆ ಕಡು ಸುಖವೆನಗೆ, ಕಾಣದಿರ್ದಡೆ ಅವಸ್ಥೆಯಯ್ಯ. ತವಕದ ಸ್ನೇಹ ದರ್ಶನ ದಲ್ಲಿ ತರಹರವಾಯಿತ್ತು. ಕೂಡಲಸಂಗಮದೇವ, ನಿಮ್ಮ ಶ್ರೀಪಾದವ ಕಂಡು ಧನ್ಯ ನಾದೆನು. ೩೧೨-೪೦೨-5-25. ಮತ್ತಂ:

ನಿಮ್ಮ ಶರಣರ ಕಂಡ ಕಡುಸುಖವನೇನೆಂಬೆನಯ್ಯ ! ಅದು ಸಾಲೋಕ್ಯದಂತುಟಲ್ಲ. ಅದು ಸಾಮೀಪ್ಯದಂತುಟಲ್ಲ, ಅದು ಸಾರೂಪ್ಯದಂತುಟಲ್ಲ, ಅದು ಸಾಯುಜ್ಯ ದಂತುಟಲ್ಲ. ಕೂಡಲಸಂಗನ ಶರಣರ ಪಾದಪರುಷವ ಕಂಡು ನಾನು ಧನ್ಯನಾದೆನು. ೩೧೩-೪೦೩-5-26.

ಮತ್ತಂ ನಮಸ್ಕಾರ ಪ್ರಸ್ತಾವದ ವಚನ:

ಮನ ಮುಟ್ಟಿದ ಭಕ್ತಿಗೆ ತನುವೇ ಅರ್ಪಿತ. ತನು ಮುಟ್ಟಿದ ಭಕ್ತಿಗೆ ಮನವೇ ಅರ್ಪಿತ. ಎನ್ನ ತನು-ಮನವೆರಡೂ ನಿಮ್ಮ ಚರಣಕ್ಕೆ ನೇದ್ಯವಯ್ಯ—

ದೀರ್ಘದಂಡ ನಮಸ್ಕಾರಂ ನಿರ್ಲಜ್ಜಂ ಗುರುಸನ್ನಿಧೌ।
ಶರೀರಮರ್ಥಂ ಪ್ರಾಣಂ ಚ ಸದ್ಗುರುಭ್ಯೋ ನಿವೇದಯೇತ್ ॥

[1] (ಶಿ) ಭಕ್ತಿರತಿಯಿಂದ (ದೇಹ). [2] (ದೇಹ) ಹೋಹುದು (ಶಿ).

ಇಂತೆಂದುದಾಗಿ, ತ್ರಾಹಿ ತ್ರಾಹಿ ನೀವೆ ಬಲ್ಲಿರಿ, ಕೂಡಲ ಸಂಗಮದೇವ. ೩೧೪-೪೦೪-5-27. ಮತ್ತಂ :

ಎನ್ನ ಶಿರ ನಿಮ್ಮ ಚರಣವನೊರಸೊರಸಿ ಬೆರಸಿ ಭೇದವಿಲ್ಲಯ್ಯ. ಎನ್ನ ಕಾಯದ ಕಪಟ, ಎನ್ನ ಮನದ ವಿಕಾರ—ನಿಮ್ಮ ಉಂಗುಷ್ಟದ ಮೊನೆಯ ಸೋಂಕಲೊಡನೆ ಹರಿದುಹೋದುದು ನೋಡಯ್ಯ. ಕೂಡಲಸಂಗಮದೇವ, ನಿಮ್ಮ ಪಾದದ ಬೆಳಗ ಕಂಡು, ಎನ್ನ ಅಂತರಂಗದ ಕತ್ತಲೆ ಹೋಯಿತ್ತು. ೩೧೫-೪೦೫-5-28.

ಇಂತು ಬಸವರಾಜದೇವರು ದೀರ್ಘದಂಡ ನಮಸ್ಕಾರವಂ ಮಾಡುತ್ತಿರಲು, ಪ್ರಭುದೇವರ ನಿಜಮೂರ್ತಿ ನಿರಾಕಾರಸ್ಥಲದೊಳು ನಿಂದು, ನಮಸ್ಕಾರಾದಿ ಕ್ರೀಗಳಿಗೆ ಅಸಾಧ್ಯವಾಗಿರ್ದ ಪ್ರಸ್ತಾವದ ವಚನ :

ರೂಪು ಅರೂಪಿನಲ್ಲಿ ನಿಂದಿತ್ತು, ಅರೂಪು ನಿಜರೂಪನವಗ್ರಹಿಸಿತ್ತು. ನಿಜರೂಪು ನಿರ್ಣಯದಲ್ಲಿ ನಿಷ್ಪತ್ತಿಯಾಯಿತ್ತು. ನಿಷ್ಪತ್ತಿಯಾದ ನಿಜಶರಣರ ನಿಲವು—ಕಾಯ ವಿಡಿದು ಕಂಡಹೆನೆಂದರೆ—ಕಾಣಬಹುದೇ ? ಕೂಡಲಸಂಗಮದೇವರ ಶರಣ ಪ್ರಭುದೇವರ ನಿಲವು ಎನಗೆ ಸಾಧ್ಯವಪ್ಪುದೆ ? ೩೧೬-೪೦೯-5-29. ಮತ್ತಂ :

ತೋಱುವನಯ್ಯ ಶಿವನು, ಅಡಗುವನಗಲುವನಯ್ಯ ಶಿವನು. ಕಂಗಳ ಮುಂದೆ ಕಾಯಗೊಂಡು, ಮನದ ಮುಂದೆ ಕನಸಾಗಿ ಕಾಡುವನಯ್ಯ ಶಿವನು. ಒಂದೆಡೆ ಯಲ್ಲಿದ್ದು ಹಲವೆಡೆಯಲ್ಲಿ ತೋಱುವನಯ್ಯ ಶಿವನು. ಹಲವೆಡೆಯಲ್ಲಿದ್ದು ಒಂದೆಡೆಯಲ್ಲಿ ರೂಪಾಗಿಪ್ಪನು. ಕೂಡಲಸಂಗಮದೇವನು ಚಿನುಮಯನಾಗಿ ಎನಗೆ ಅಸಾಧ್ಯನಾದನು. ೩೧೭-೪೨೫-5-30. ಮತ್ತಂ :

ಕಂಡಹನೆಂದು ಕಂಗೆ ಮಱೆಮಾಡಿದ. ಕೇಳಿಹನೆಂದು ಕಿವಿಗೆ ಮಱೆಮಾಡಿದ. ಮುಟ್ಟಿಹನೆಂದೆನ್ನ ಕೈಗೆ ಮಱೆಮಾಡಿದ. ಸೋಂಕಿಹೆನೆಂದೆನ್ನ ತನುವಿಂಗೆ ಮಱೆ ಮಾಡಿದ. ನೆನೆದಹನೆಂದೆನ್ನ ಮನಕ್ಕೆ ಮಱೆ ಮಾಡಿದ. ಅಱಿದಹನೆಂದು ಅಂತರಂಗಕ್ಕೆ ಮಱೆಮಾಡಿದ. ಪೂಜಿಸಿಹನೆಂದೆನ್ನ ಕ್ರೀಗಳಿಗೆ ಮಱೆಮಾಡಿದ. ಕೂಡಲಸಂಗಮ ದೇವರೊಡನೆ ಅಹಂಕಾರವ ಮಾಡಿ ಕೆಟ್ಟ ಕೇಡನೇನೆಂದುಪಮಿಸುವೆನು. ೩೧೮-೪೨೬-5-31.

ಇಂತು,ಬಸವರಾಜದೇವರು—ನಾನಾ ಭೇದ ಕ್ರೀಗಳಿಂದ ಮುಟ್ಟಿ ನೋಡಲು,ಆ ಪ್ರಭು ದೇವರ ನಿಲವು ಅಸಾಧ್ಯವಾಗಿರಲು, ಎನ್ನ ಅಹಂಕಾರದಿಂದ ನಾನೇ ಕೆಟ್ಟೆನೆಂದು ಅನು ತಾಪಾಗ್ನಿಯೊಳು ಕರಗಿ ಕೊರಗಿ ಮನನೊಂದು ಬಿನ್ನಹಂ ಮಾಡಿದ ಪ್ರಸ್ತಾವದ ವಚನ :

ಶರಣೆಂದು ಪಾದವ ಹಿಡಿದಹೆನೆಂದರೆ ಚರಣದ ನಿಲವು ಕಾಣಬಾರದು. ಕುಱುಹು ವಿಡಿದಹೆನೆಂದರೆ ಕೈಗೆ ಸಿಲುಕದು. ಬೆರಸಿ ಹೊಕ್ಕಹೆನೆಂದರೆ ಮುನ್ನವೆ ಅಸಾಧ್ಯ, ಅಕಟಕಟಾ, ಅಹಂಕಾರದಲ್ಲಿ ಕೆಟ್ಟೆನಲ್ಲಾ ! ಗುರುವೇ, ಎನ್ನ ಪರಮಗುರುವೆ ! ಬಾರಯ್ಯ, ಅಱಿಯದ ತರಳನ ಅವಗುಣವ ನೋಡುವರೆ ಕೂಡಲಸಂಗಮದೇವ. ೩೧೯-೪೨೭-5-32.

ತ್ರಿವಿಧ ತ್ರಿವಿಧದಲ್ಲಿ ತಪ್ಪಿದ ತಪ್ಪುಕ ನಾನಯ್ಯಾ. ಒಮ್ಮಿಂಗೆ ಕರುಣಿಸಯ್ಯಾ. ಒಮ್ಮಿಂಗೆ ಕರುಣಿಸಯ್ಯಾ. ಇದನಱಿದು ಇನ್ನು ತಪ್ಪಿದೆನಾದರೆ, ನೀವು ಮಾಡಿತ್ತೆ ಸಲುವುದು, ಕೂಡಲಸಂಗಮದೇವ. ೩೨೦-೪೨೮-5-33. ಮತ್ತಂ :

ಡಂಬು [1]ಡುಳುಹು[1] ಎನ್ನದಯ್ಯ ! ಡಂಬಕವಸದವ ನಾನು. ಎನ್ನಲೇನನಱಿಸುವಿರಿ ? ನಿಮ್ಮ ನಂಬಿಯೂ ನಂಬದ ಡಂಬಕ ನಾನು. ಹಾವ ತೋಱಿ ಹವಿಯ ಬೇಡುವಂತೆ ಎನ್ನ ಭಕ್ತಿ, ಕೂಡಲಸಂಗಮದೇವ. ೩೨೧-೪೨೯-5-34. ಮತ್ತಂ :

ಮಸಿಯನೇಸು ಕಾಲ ಬೆಳಗಿದರೆ ಬಿಳಿದಾಗ ಬಲ್ಲುದೇ? ಕರ್ಮಸ್ಥಿತಿ ಬೆನ್ನ ಬಿಡದು. ಅನಂತ ಕೋಟಿ ಸನ್ಮಾನವ ಮಾಡಿದಡೇನು ? ಒಂದು ನಿಮಿಷದ ಉದಾಸೀನ ಕೆಡಿಸಿತ್ತು. ಕೂಡಲಸಂಗಮದೇವ, ನಿಮ್ಮ ನಂಬಿಯೂ ನಂಬದ ಡಂಬಕ ನಾನು. ೩೨೨-೪೩೦-5-35. ಮತ್ತಂ :

ಸ್ಥಾವರ-ಜಂಗಮ ಒಂದೇ ಎಂದು—ಇದಿರ ನುಡಿವೆ. ನುಡಿದು ನಾನೆಡಹುತ್ತಿರ್ಪೆ. ಆನು ಸಹಜನಲ್ಲ. 'ಆನುಭಯಲಿಂಗ ಸಂಬಂಧಿ' ಎಂಬ ನುಡಿ ಸುಡದಿಹುದೆ, ಕೂಡಲ ಸಂಗಮದೇವಾ. ೩೨೩-೪೩೧-5-36.

ತಂದೆ ನೀವು, ತಾಯಿ ನೀವು ; ಬಂಧು ನೀವು, ಬಳಗ ನೀವು. ನೀವಲ್ಲದೆ ಮತ್ತಾರೂ ಇಲ್ಲಯ್ಯ— ಕೂಡಲಸಂಗಮದೇವ, ಹಾಲಲದ್ದು ನೀರಲದ್ದು. ೩೨೪-೪೪೨-5-37.

ಎನ್ನವರೆನ್ನ ಕೊಂಡಾಡಿ, ಹೊನ್ನ ಶೂಲದಲಿಕ್ಕಿದ್ದರು. ಅಹಂಕಾರದ ಘಾಯದಲ್ಲಿ ನಾನೆಂತು ಬದುಕುವೆನು? ನಾನೆಂತು ಜೀವಿಸುವೆನು? ಜಂಗಮವಾಗಿ ಬಂದು ಶೂಲವನಿಳುಹಿ, ಪ್ರಸಾದದ ಮದ್ದನಿಕ್ಕಿ ಸಲಹಾ, ಕೂಡಲಸಂಗಮದೇವ. ೩೨೫-೪೩೩-5-38.

ಇಂತು ಬಸವರಾಜದೇವರು ಅನುತಾಪದಿಂ ನೊಂದು, ಅತ್ಯಂತ ಕಿಂಕಿಲನಾಗಿ ಬಿನ್ನಹವ ಮಾಡುತ್ತಿರಲು, ಪ್ರಭುದೇವರು ಆಕ್ಷೇಪದಿಂ ನಿರೂಪಿಸಿದ ವಚನ :

ಲಿಂಗದೊಳಗೆ ಜಂಗಮ, ಜಂಗಮದೊಳಗೆ ಲಿಂಗವೆಂದಱಿದು, ಮಱೆದು ಬಱುದೊಱೆವೋದವರು ಜಂಗಮವನಿನ್ನು ಬೇಱೆ ಅಱಿಸಲೇತಕಯ್ಯ ? ಆ ಲಿಂಗ ದೊಳಗೆ ಜಂಗಮವನಱಿಸಿಕೊಂಬುದು. ಲಿಂಗಾರ್ಚನೆಯವಸರಕ್ಕೆ ಜಂಗಮ ಮನೆಗೆ ಬಂದರೆ ಲಿಂಗಾರ್ಚನೆಯ ಮಾದು, ಜಂಗಮಕ್ಕೆ ಇದಿರೆದ್ದು ವಂದಿಸಿ ಭಕ್ತಿಯ ಮಾಡಬಲ್ಲಾತನೇ ಭಕ್ತ. ಆ ಜಂಗಮ ಹೊಱಗಿರಲು ಲಿಂಗಾರ್ಚನೆಯ [2]ಹೊಱಗೆ[2] ಮಾಡುತ್ತಿರ್ಪಾತನೇತಱ ಭಕ್ತ ? ಆ ಜಂಗಮದ ಮುಂದೆ ಲಿಂಗವ ಕೈಯಲ್ಲಿ ಹಿಡಿದುಕೊಂಡು, ಸಹಪಂಕ್ತಿಯಲ್ಲಿ ಕುಳ್ಳಿರ್ದು ಪೂಜಿಸುವಾತನೇ ಭೃತ್ಯಾಚಾರ ದ್ರೋಹನು. ಆ ಭಕ್ತನ ಮನೆಯ ಹೊಗುವ ಜಂಗಮವೆ ಅಜ್ಞಾನಿ. ನಮ್ಮ ಗೊಗೇಶ್ವರನ ಶರಣರ ಕೂಡೆ ಅಹಂಕಾರವ ಹೊತ್ತಿರ್ಪವರ ಕಂಡಡೆ ನಾನೊಲ್ಲೆ ಕಾಣಾ ಸಂಗನ ಬಸವಣ್ಣಾ. ೩೨೬-೪೩೬-5-39. ಮತ್ತಂ :

---

[1] (ಶಿಹ) ಡಳುಹು (ದೇ). [2] (ಶಿ) ಒಳಗೆ (ಹ) × (ಉ) (ಗೂ).

ಜಂಗಮ ಹೊಱಗಿರಲು ಲಿಂಗಾರ್ಚನೆ ಏವುದಯ್ಯ? ಪ್ರಾಣವ ಹೊಱಗಿರಿಸಿ ಎಡೆಯಾಡುವ ದೇಹವುಂಟೆ? ಶರಣರು ಬಂದು ಬಾಗಿಲಲ್ಲಿ ನಿಂದಿರಲು ತನ್ನ ತಾ ಮಱೆದಿಪ್ಪವರ ಕಂಡಡೆ ನಮ್ಮ ಗೊಗೇಶ್ವರಲಿಂಗ ಒಡೆಯಿಕ್ಕದೆ ಮಾಬನೆ? ೩೨೭-೪೩೭-5-40.

ಇಂತು ಬಸವರಾಜದೇವರು ಲಿಂಗಾರ್ಚನೆಯಂ ಮಾಡುತ್ತ ತೆಱಹುಮಱಹಾಗಿರ್ದ ವೃತ್ತಾಂತವನು ಪ್ರಭುದೇವರು ಎಚ್ಚಱಿಸಿ, ಮೂದಲಿಸಿ, ನಿರೂಪವ ಕೊಡುತ್ತಿರಲು —ಆ ಬಸವರಾಜದೇವರು ಮತ್ತಂ ಅತ್ಯಂತ ಮನ ನೊಂದು, ತಮ್ಮ ಲಿಂಗಾರ್ಚನೆಯ ತಾವೆ ಜಱೆದು ನುಡಿದುಕೊಳ್ಳುತಿರ್ದ ಪ್ರಸ್ತಾವದ ವಚನ:

ಮುನ್ನೂಱಱುವತ್ತು ದಿನ ಸರವ ಮಾಡಿ, ಕಳನೇಱಿ ಕೈ ಮಱೆದಂತಾಯಿತ್ತೆನ್ನ ಭಕ್ತಿ! ಇನಿಸು ಕಾಲ ಲಿಂಗಾರ್ಚನೆಯ ಮಾಡಿ ಏವೆನಯ್ಯ, ಎನ್ನ ಮನದಲ್ಲಿ ದೃಢವಿಲ್ಲದನ್ನಕ್ಕರ? ಕೊಡನ ತುಂಬಿದ ಹಾಲನೊಡೆಯ ಹಾಯ್ಕಿ, ಇನ್ನುಡುಗಿಹೆನೆಂದರೆ ಎನ್ನಳವೆ, ಕೂಡಲಸಂಗಮದೇವ? ೩೨೮-೪೫೨-5-41. ಮತ್ತಂ:

ಎನಿಸು ಕಾಲ ಕಲ್ಲು ಜಲದೊಳಗಿದ್ದರೇನು—ನನೆದು ಮೃದುವಾಗಬಲ್ಲುದೇ ಅಯ್ಯ? ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯ? ಎನ್ನ ಮನದಲ್ಲಿ ದೃಢವಿಲ್ಲದನ್ನಕ್ಕರ—ನಿಧಾನವ ಕಾಯ್ದಿರ್ದ ಬೆಂತಱನ ವಿಧಿ ಎನಗಾಯಿತ್ತು, ಕೂಡಲಸಂಗಮದೇವ. ೩೨೯-೪೫೩-5-42. ಮತ್ತಂ:

ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ—ಅರಸಱಿಯದ ಬಿಟ್ಟಯ—ಮಾಡುವೆನು. ಎನ್ನ ತಾಗಿದ ಸುಖವ ಜಂಗಮಕ್ಕರ್ಪಿಸಲಱಿಯದ ಉಪಚಾರಿಯಾನು. ಸ್ಥಾವರ-ಜಂಗಮದ ಭೇದವನಱಿಯದ ಪೂಜಕ ನಾನು. ಮತ್ತೆ ನಾಚದೆ ಕೂಡಲಸಂಗಮದೇವನೆನ್ನ ಪ್ರಾಣಲಿಂಗವೆಂಬ ಡಂಬಕ ನಾನು. ೩೩೦-೪೫೪-5-43. ಮತ್ತಂ:

ನೋಡುವರುಳ್ಳಡೆ ಮಾಡುವೆ ದೇಹಾರವ! ಎನಗೊಂದು ನಿಜವಿಲ್ಲ, ಎನಗೊಂದು ನಿಷ್ಪತ್ತಿಯಿಲ್ಲನಯ್ಯ. ಲಿಂಗವ ತೋಱಿ ಉದರವ ಹೊರೆವ [1]ಭಂಗಾಱ[1] ನಾನಯ್ಯ ಕೂಡಲಸಂಗಮದೇವಯ್ಯ. ೩೩೧-೪೫೫-5-44.

ಲಿಂಗವ ಪೂಜಿಸಿ ಫಲವೇನಯ್ಯ, ಸಮರತಿ ಸಮಕಳೆ ಇಲ್ಲದನ್ನಕ್ಕರ? ಲಿಂಗವ ಪೂಜಿಸಿ ಫಲವೇನಯ್ಯ, ಕೂಡಲಸಂಗಮದೇವರ ಪೂಜಿಸಿ, ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕರ? ೩೩೨-೪೫೬-4-30.

ಲಿಂಗವೆಂತಿರ್ಪುದೆಂದಱಿಯೆನು. ಲಿಂಗದ ನಿಜವೆಂತುಟೆಂಬುದಱ ಹೋದ ಹೊಲಬನಱಿಯೆನು. ಲಿಂಗಾರ್ಚನೆಯ ಮಾತು ಎನಗೇತಕಯ್ಯ? ಜಂಗಮಲಿಂಗವಾಗಿ ಬಂದು ನೀವಿರುತ್ತಿರಲು, ಸ್ಥಾವರಕ್ಕೆ ಮೆಚ್ಚಿ ಮರುಳಾದೆನು. ಕೂಡಲಸಂಗಮದೇವ, [2]ಎನ್ನ ತಪ್ಪನೆಣಿಸಿಹೆನೆಂದರೆ[2] ಕಡೆಯಿಲ್ಲ. ೩೩೩-೪೫೭-5-45. ಮತ್ತಂ:

---

[1] (ಶಿ) (ಗೂ R. ಅ) ಭಂಗಾರ (ಗೂ R. ಆ) (ಹ) ಬಂಗಾಳ (ದೇ). ಭಂಗಗಾಱ (ಉ).
[2] (ಹದೇಗೂ) ಎನ್ನ ತಪ್ಪನಱಸಿಹೆನೆಂದರೆ (ಶಿ).

ಎನ್ನ ತಪ್ಪು ಅನಂತಕೋಟಿ. ನಿಮ್ಮ ಸೈರಣೆಗೆ ಲೆಕ್ಕವಿಲ್ಲನಯ್ಯ. ಇನ್ನು ತಪ್ಪಿದೆನಾದರೆ ನಿಮ್ಮ ಪಾದವೆ ದಿಬ್ಯ. ಕೂಡಲಸಂಗಮದೇವಯ್ಯ, ನಿಮ್ಮ ಪ್ರಮಥರ ಮುಂದೆ ಕಿನ್ನರ ಬೊಮ್ಮಣ್ಣಂಗಳ ಪಾದವೆ ಸಾಕ್ಷಿ. ೩೩೪-೪೫೮-5-46.

ಮುನ್ನ ತಪ್ಪಿದ ತಪ್ಪಲ್ಲದೆ ಇನ್ನು ತೆಱಹು ಮಱಹಾಗಿದ್ದೆನಾದರೆ ಕಿನ್ನರ ಬೊಮ್ಮಣ್ಣಂಗಳು ಸಾಕ್ಷಿಯಾಗಿ ನಿಮ್ಮ ಶ್ರೀಪಾದದಾಣೆಯೆಂದು ಬಸವರಾಜದೇವರು ಬಿನ್ನಹಂ ಮಾಡಲು, ಅಲ್ಲಿ ಕಿನ್ನರಬೊಮ್ಮಿ ತಂದೆಗಳು ಪ್ರಭುದೇವರೊಡನೆ ಬಿನ್ನಹಂ ಮಾಡುವ ಪ್ರಸ್ತಾವದ ವಚನ :

ತನು ಸೆಜ್ಜೆ, ಮನ ಲಿಂಗವಾದ ಬಳಿಕ, ಅನುವ ಮತ್ತೆ ಬೇಱೆ ಅಱಸಲುಂಟೆ ? ತನುವೆ ಬಸವಣ್ಣ, ಮನವೆ ಪ್ರಭುದೇವರೆಂಬ ಘನ ಒಳಕೊಂಡ ಬಳಿಕ, ಗುಣಾವಗುಣವ ಸಂಪಾದಿಸುವರೆ ? ಮಹಾಲಿಂಗ ತ್ರಿಪುರಾಂತಕದೇವ, ಸಂಗನ ಬಸವಣ್ಣನಲ್ಲಿ ನಿಮ್ಮಡಿಗಳಲ್ಲಿ ಸಂದು ಸಂಶಯ ಉಂಟೆ ? ಶರಣು ಶರಣಾರ್ಥಿ ಬಿಜಯಂಗೆಯ್ಯುವುದಯ್ಯ ಪ್ರಭುವೇ. ೩೩೫-೪೫೯-5-47.

ಹೀಗೆಂದು ಕಿನ್ನರಬೊಮ್ಮಣ್ಣಂಗಳು ಬಿನ್ನಹಂ ಮಾಡಲು ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ :

ಜಂಗಮದಿಂಗಿತಾಕಾರವ ನೋಡಿ, ಲಿಂಗವೆಂದಱಿದ ಸದ್ಭಕ್ತರು—ಮನ ಮನ ಬೆರಸಿದ ಕೂರ್ಮನ ಶಿಶುವಿನ ಸ್ನೇಹದಂತೆ—ಕಾಣದ ಮುನ್ನವೆ ತೆಱಹಿಲ್ಲದಿರಬೇಕು ನೋಡಾ. ಬಂದ ಬರವ ನೋಡದೆ, ನಿಂದ ನಿಲವನಱಿಯದೆ, ಕೆಮ್ಮನೆ ಅಹಂಕಾರವ ಹೊತ್ತಿರ್ಪವರ ನಮ್ಮ ಗೊಗೇಶ್ವರಲಿಂಗನೊಲ್ಲ, ಕಿನ್ನರ ಬೊಮ್ಮಣ್ಣ. ೩೩೬-೪೬೦-5-48.

ಹೀಂಗೆಂದು ಪ್ರಭುದೇವರು ಕಿನ್ನರಬೊಮ್ಮಣ್ಣನೊಡನೆ ನಿರೂಪಿಸಲು, ಇದಕ್ಕೆ ಬಸವರಾಜದೇವರು ಕಿಂಕುರ್ವಾಣಭಾವದಿಂ ಬಿನ್ನೈಸಿದ ಪ್ರಸ್ತಾವದ ವಚನ:

ಸತ್ಯಸಂಬಂಧವಾದ ಭೃತ್ಯಾಚಾರ ಎನಗಿಲ್ಲಯ್ಯ. ಅನುದಿನ ನಿಮ್ಮ ನೆನೆಯಲೆನಗೆ ಭಕ್ತಿಯಿಲ್ಲಯ್ಯ. ಕರುಣದಿಂದ ಕೃಪೆಮಾಡಾ ಕೂಡಲ ಸಂಗಮದೇವ. ೩೩೭-೪೬೧-5-49.

ಎನ್ನ ಅಹಂಕಾರದ ಅವಗುಣವ ಕಳೆದು ಕೃತಾರ್ಥನ ಮಾಡೆಂದು ಬಿನ್ನಹಂ ಮಾಡುವ ಪ್ರಸ್ತಾವದ ವಚನ :

ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ. ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ. ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ, ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ, ಸಲಹಯ್ಯ ಕೂಡಲಸಂಗಮದೇವ. ೩೩೮-೪೬೨-5-50.

ಹೀಂಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ :

ತನುವಿನಲ್ಲಿ ತನು ಸವೆಯದು, ಮನದಲ್ಲಿ ಮನ ಸವೆಯದು, ಧನದಲ್ಲಿ ಧನ ಸವೆಯದು. ಭಕ್ತಿ-ಯುಕ್ತಿಯ ಮಾತು ನಿನಗೇಕೆ ಹೇಳಾ ಬಸವ? ಮಾಟ-ಕೂಟವೆಂಬ [1]ಕೀರ್ತಿ-ವಾರ್ತೆಗೆ[1] ಸಿಕ್ಕಿ, ಜಂಗಮ ಲಿಂಗವೆಂಬುದ ಮಱೆದೆಯಲ್ಲಾ ಬಸವಣ್ಣ? ಗೊಗೇಶ್ವರನ ಶರಣರಿಗೆ ತ್ರಿಕರಣವನೊಪ್ಪಿಸಿದಲ್ಲದೆ, ಭಕ್ತನಾಗಬಾರದು ಕಾಣಾ ಸಂಗನ ಬಸವಣ್ಣ. ೩೩೯-೪೬೩-5-51.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಬಸವರಾಜದೇವರು ತನು-ಮನ-ಧನಂಗಳನು ವಂಚನೆಯಿಲ್ಲದೆ ನಿಮಗೆ ಸಮರ್ಪಿಸಿದೆನೆಂಬ ಪ್ರಸ್ತಾವದ ವಚನ:

ಹೊನ್ನಿನೊಳಗೊಂದೊರೆಯು, ಸೀರೆಯೊಳಗೊಂದೆಳೆಯು, ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ನಿಮ್ಮ ಶರಣರಿಗಲ್ಲದೆ ಮತ್ತೊಂದನಱಿಯೆನು, ಕೂಡಲಸಂಗಮದೇವ, ನಿಮ್ಮಾಣೆ. ೩೪೦-೪೬೪-5-52.

ತನುವ ಬೇಡಿದಡೀವೆ, ಮನವ ಬೇಡಿದಡೀವೆ, ಧನವ ಬೇಡಿದಡೀವೆ ನಿಮ್ಮ ಶರಣರಿಗೆ. ಎನಗೆ ಬೇಕೆಂಬ ಭಾವ ಮನದಲ್ಲಿ ಹೊಳೆದರೆ, ಘನಮಹಿಮ, ನಿಮ್ಮ ಶರಣರ ಪಾದದಾಣೆ. ಮನ-ವಚನ-ಕಾಯದಲ್ಲಿ ನೀವಲ್ಲದೆ ಮತ್ತೊಂದನಱಿದರೆ, ಕೂಡಲಸಂಗಮದೇವ, ಭವಘೋರದಲ್ಲಿಕ್ಕಯ್ಯ. ೩೪೧-೪೬೫-5-53.

ತನು-ಮನ-ಧನಂಗಳನು ನಿಮಗರ್ಪಿಸಿ ಶುದ್ಧನಾಗಿಪ್ಪೆನೆಂದು ಬಸವರಾಜದೇವರು ಬಿನ್ನಹಂ ಮಾಡಲು, ಇದಕ್ಕೆ ಪ್ರಭುದೇವರು ಆ ಉತ್ತರವಂ ಖಂಡಿಸಿ, ನಿರೂಪವ ಕೊಟ್ಟ ಪ್ರಸ್ತಾವದ ವಚನ:

ಮೇರುಗಿರಿಗಳೆಲ್ಲವೂ ಪ್ರಮಥರೊಡವೆ, ರಜತಗಿರಿಗಳೆಲ್ಲವೂ ಪುರಾತರೊಡವೆ ಚತುರ್ದಶಭುವನವೆಲ್ಲವೂ ಲಿಂಗದೊಡವೆ. ಪೃಥ್ವಿಯೆಂಬುದು ಕರ್ತಾರನ ಕಮ್ಮಟ, ಅಚ್ಚಿನ ಮೊಳೆ, ಬಾಣಸದ ಮನೆ. ತನು-ಮನ-ಧನಂಗಳೆಲ್ಲವೂ ನಮ್ಮ ಗೊಗೇಶ್ವರ ಲಿಂಗದ ಸೊಮ್ಮು, ನೀನೇನ ಕೊಟ್ಟು ಭಕ್ತನಾದೆ ಹೇಳಾ ಸಂಗನ ಬಸವಣ್ಣ? ೩೪೨-೪೬೬-5-54.

ತನುವರ್ಪಿತವೆಂದರೆ ಗುರುದ್ರೋಹ, ಮನವರ್ಪಿತವೆಂದರೆ ಲಿಂಗದ್ರೋಹ, ಧನವರ್ಪಿತವೆಂದರೆ ಜಂಗಮದ್ರೋಹ. ಇಂತೀ ತನು-ಮನ-ಧನಂಗಳೆಂಬ ಅನಿತ್ಯವನು ನಿತ್ಯಕ್ಕರ್ಪಿಸಿ ಭಕ್ತನಾದಹೆನೆಂದರೆ ಅದು ಅಜ್ಞಾನ ನೋಡಾ! ಒಡೆಯರಿಗೆ ಉಂಡೆಯ ಮುಱಿದಿಕ್ಕಿ ನಾ-ಭಕ್ತನೆಂಬ ಮಾತ ಸಮ್ಯಕ್ ಶರಣರು ಮೆಚ್ಚುವರೆ? ನಮ್ಮ ಗೊಗೇಶ್ವರಲಿಂಗಕ್ಕೆ ನೀನಾವುದಱಲ್ಲಿ ಏನನರ್ಪಿಸಿ ಭಕ್ತನಾದೆ ಹೇಳಾ ಸಂಗನ ಬಸವಣ್ಣ? ೩೪೩-೪೬೮-5-55.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಅನುತಾಪಂಬಟ್ಟು ಬಿನ್ನೈಸಿದ ಪ್ರಸ್ತಾವದ ವಚನ:

ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ! ಉಪ್ಪನಪ್ಪುವಿನಲ್ಲಿ ಅದ್ದಿ

[1] (ಹ) ಭಕ್ತಿಗೆ (ಶಿ) ಕೀರ್ತಿಗೆ (ಗೂದೇ).

ಮೆದ್ದಂತಾಯಿತ್ತೆನ್ನ ಭಕ್ತಿ! ಕೂಡಲ ಸಂಗಮದೇವ, ನಾನು ಮಾಡಿದೆನೆಂಬ ಕಿಚ್ಚಿನ್ನ ಸುಟ್ಟತ್ತು. ಇನ್ನು ಸಾಲದೆ ಹೇಳಾ ಪ್ರಭುವೆ! ೩೪೪-೪೭೯-5-56. ಮತ್ತಂ:

ತನುವ ಕೊಟ್ಟೆನೆಂದು ನುಡಿದು, ಗುರು-ವಚನಕ್ಕೆ ದೂರವಾದೆನು. ಮನವ ಕೊಟ್ಟೆನೆಂದು ನುಡಿದು, ಲಿಂಗ-ವಚನಕ್ಕೆ ದೂರವಾದೆನು. ಧನವ ಕೊಟ್ಟೆನೆಂದು ನುಡಿದು, ಜಂಗಮ-ವಚನಕ್ಕೆ ದೂರವಾದೆನು. ಕೂಡಲಸಂಗಮದೇವಯ್ಯ, ನಿಮಗೆ ಮಾಡಿದೆನೆಂದು ನುಡಿದು, ಕೆಟ್ಟ ಕೇಡಿಂಗೆ ಕಡೆಯಿಲ್ಲ. ೩೪೫-೪೮೦-5-57, ಮತ್ತಂ:

ನಾನು ಭಕ್ತನಲ್ಲಯ್ಯ, ನಾನು ಯುಕ್ತನಲ್ಲಯ್ಯ. ನಾನು ಮುಕ್ತನಲ್ಲಯ್ಯ. ಕಪಟ ವೇಷದ ಡಂಬಕ ನಾನು. ಕೂಡಲಸಂಗಮದೇವ, ಎನ್ನ ಭಕ್ತಿ [1]ಒಳಲೋಟಿ[1] ಎಂಬುದ ನೀವು ತೋಱಿದಿರಾಗಿ, ಎನಗಿಂದಱಿಯ ಬಂದಿತ್ತು. ೩೪೬-೪೮೧-5-58.

ಹೀಂಗೆಂದು ಬಸವರಾಜದೇವರು ಕಿಂಕುರ್ವಾಣದಿಂ ಬಿನ್ನೈಸಲು, ಇದಕ್ಕೆ ಪ್ರಭುದೇವರು ಮತ್ತಂ ವಿಡಂಬಿಸುತ್ತಿರ್ದ ಪ್ರಸ್ತಾವದ ವಚನ:

ಸಜ್ಜನಸನ್ನಿಹಿತವಾದ ಭಕ್ತಿ ಹೊತ್ತಿಂಗೊಂದು ಪರಿಯುಂಟೆ? ಹೇಳಾ! ಒಮ್ಮೆ ಅಹಂಕಾರ, ಒಮ್ಮೆ ಕಿಂಕಿಲವೆ? ಮನಕ್ಕೆ ಮನವೇ ಸಾಕ್ಷಿಯಾಗಿ ಕೂಡುವ ಭಕ್ತನಲ್ಲಿ ಗೊಹೇಶ್ವರನಿಪ್ಪನಲ್ಲದೆ ಪ್ರಪಂಚಿನೊಳಗಿಲ್ಲ ಕಾಣಾ ಸಂಗನ ಬಸವಣ್ಣ. ೩೪೭-೪೮೨-5-59. ಮತ್ತಂ:

ಜಂಗಮವೆ ಲಿಂಗವೆಂದು ನಂಬಿದ ಬಳಿಕ, ಸಂದೇಹವಿಲ್ಲದಿರಬೇಕು ನೋಡಾ. ಸಂದು ಸಂಶಯವಳಿದು ಸಯವಾದ ಭಕ್ತಿ — ಹಿಮ್ಮೆಟ್ಟಿದರೆ ಹೋಯಿತಲ್ಲಾ! ಒಪ್ಪಚ್ಚಿ ಕಿಂಕಿಲನಾಗಿ, ಮತ್ತೊಪ್ಪಚ್ಚಿ ಅಹಂಕಾರಿಯಾದರೆ, ಹೋಗನೂಕುವನು ಕಾಣ ನಮ್ಮ ಗೊಗೇಶ್ವರ ಲಿಂಗವು. ೩೪೮-೪೮೩-5-60.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಬೆದಕದಿರು, ಬೆದಕದಿರು, ಬೆದಕಿದರೆ ಹುರುಳಿಲ್ಲ—[2]ಚಿತ್ತರಟ್ಟೆಯ[2] ಕಾಯಲ್ಲಿ ವತ್ತೇನನಱಿಸುವಿರಿ? ನಿಮ್ಮ ಉತ್ತಮಿಕೆಯ ಮೆಱೆಯಯ್ಯ, ಕೂಡಲಸಂಗಮದೇವ. ೩೪೯-೪೮೪-5-61. ಮತ್ತಂ:

ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯ! ವಿಚಾರಿಸಿ ನೋಡಿದರೆ ಹುರುಳಿಲ್ಲ ಕಂಡಯ್ಯ. ಪ್ರಪಂಚಿನ ಡಂಬಿನಲ್ಲಿ ಎನ್ನನೊಂದು ರೂಪು ಮಾಡಿ ನೀವಿರಿಸಿದರಿ ಕೂಡಲಸಂಗಮದೇವ. ೩೫೦-೪೮೫-5-62.

ಹೀಂಗೆಂದು ಬಸವರಾಜ ದೇವರು ಬಿನ್ನೈಸಲು ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಕೈಯಲ್ಲಿ ಡಾಣೆ, ಮನದಲ್ಲಿ ಕ್ರೋಧ, ವಚನದಲ್ಲಿ ಕಿಂಕಿಲ; ಲಿಂಗದ ವಾರ್ತೆ

---

[1] (ಶಿಗೂ) ಒಳಲಟೆ (ಪ) ಒಳಲೊಟ್ಟೆ (ಗೂ R. ಉ). [2] (ದೇಹಗೂ) ಚಿತ್ತರಟೆ (ಶಿ).

ನಿನಗೇಕೆ ಹೇಳಾ ಬಸವ ?! ಜಂಗಮುವೆ ಲಿಂಗವೆಂಬ ಶಬ್ದಸೂತಕ ಉಂಟಲ್ಲದೆ, ಸಜ್ಜನ ಸದ್ಭಕ್ತಿಯ ಮಾತು ನಿನಗೇಕೆ ಹೇಳಾ ಬಸವ ?! ಕಬ್ಬುನದ ರೂಪು—ಪರುಷ ಮುಟ್ಟೆ ಹೊನ್ನಾಯಿತಲ್ಲದೆ, ಪರುಷವಾಗಬಲ್ಲುದೆ ಹೇಳಾ ಬಸವ ? ಗೊಗೇಶ್ವರನೆಂಬ ಪರುಷದ ಪುತ್ಥಳಿಯನಱಿಯಬಲ್ಲಡೆ, ತಿಳಿದು ನೋಡಾ ಸಂಗನ ಬಸವಣ್ಣ. ೩೫೧-೪೮೬-5-63.

ಹೀಂಗೆಂದು ನಿರೂಪಿಸಿದ ಪ್ರಭುದೇವರೊಡನೆ ಬಸವರಾಜ ದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಆನೆತ್ತ ಬಲ್ಲೆನಯ್ಯ ನಿಮ್ಮ ಭಕ್ತಿಯ ಘನವ ? ನಾನೆತ್ತ ಬಲ್ಲೆನಯ್ಯ ನಿಮ್ಮ ಶ್ರೀ ಪಾದದ ನಿಲವ ? ಕಾಯದ ಕಳವಳದ ಮಱೆವೊಕ್ಕಿದ್ದವರಲ್ಲಿ ನಿಮ್ಮ ನಂಬುಗೆಯುಳ ವಡುವುದೇ ? ಕೂಡಲಸಂಗಮದೇವ, ಎನ್ನವಗುಣವ ನೋಡದೆ ಕರುಣದಿಂದ ಭಕ್ತಿಯ ನಿಲವ ತೋಱಾ ತಂದೆ. ೩೫೨-೪೮೭-5-64.

ಹೀಂಗೆಂದು ಬಸವರಾಜದೇವರು ಬಿನ್ನೈಸಿದ ವಾಕ್ಯಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ:

ಕೂರ್ಮನ ಶಿಶುವಿನ ಸ್ನೇಹದಂತಿರಬೇಡಾ ಬಸವಣ್ಣ ? ಕೊಂಬ ತಪ್ಪದೆ ಹಾಯಿವ ಕಪಿಯಂತಿರಬೇಡಾ ಬಸವಣ್ಣ ? ನೀರ-ಕ್ಷೀರವ ಭೇದಿಸಿ ತೆಗೆವ ಹಂಸೆಯಂತಿರಬೇಡಾ ಬಸವಣ್ಣ ? ಗೊಗೇಶ್ವರಲಿಂಗದಲ್ಲಿ ಅವಧಾನ ತಪ್ಪಿ, ಮರಳಿ ಅಱಿಸಲುಂಟೇ ಹೇಳಾ ಸಂಗನ ಬಸವಣ್ಣ ? ೩೫೩-೪೮೮-5-65.

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಎನ್ನ ತನುವಿಂಗೆ ನೀನೊಡೆಯ, ಎನ್ನ ಮನಕ್ಕೆಯೂ ನೀನೊಡೆಯ, ಎನ್ನ ಧನಕ್ಕೆಯೂ ನೀನೊಡೆಯನಾದ ಬಳಿಕ, ಎನ್ನಱಿವು ನಿನ್ನದು, ಎನ್ನ ಮಱಹು ನಿನ್ನದು. ಕೂಡಲ ಸಂಗಮದೇವ, "ಭೃತ್ಯಾಪರಾಧಃ ಸ್ವಾಮಿನೋ ದಂಡ"ವೆಂಬುದ ವಿಚಾರಿಸಿ ನೋಡಾ ಪ್ರಭುವೆ. ೩೫೪-೪೮೯-5-66.

ಹೀಂಗೆಂದು ಬಸವರಾಜದೇವರು ಬಿನ್ನೈಸಿದ ಬಿನ್ನಪಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ತಾ ಬಾಳಲಾರದೆ ವಿಧಿಯ ಬೈದನೆಂಬ ನಾಣ್ಣುಡಿಯಾಯಿತ್ತಲ್ಲಾ ! ಬಸವಣ್ಣ, ಅವಧಾನ ತಪ್ಪಿ, ಆಚಾರಗೆಟ್ಟು ನಡೆದು, ಶಿವಾಧೀನವೆಂದರೆ ಹೋಹುದೇ ? ಗೊಗೇಶ್ವರ ಲಿಂಗದಲ್ಲಿ ಈ ಬಣ್ಣಿಗೆಯ ಮಾತು ಸಲ್ಲದು ಕೇಳಾ ಸಂಗನ ಬಸವಣ್ಣ. ೩೫೫-೪೯೦-5-67. ಮತ್ತಂ.

ಲಿಂಗ-ಜಂಗಮವ ಪೂಜಿಸಿ ಭಕ್ತನಾದಹೆನೆಂದರೆ, ಭೃತ್ಯಾಚಾರ-ಸದಾಚಾರವೆ ಮೊದಲು ನೋಡಾ ! ವಿಶ್ವಾಸವುಳ್ಳ ಭಕ್ತಿಗೆ ಹೊರೆಯಿಲ್ಲ, ಅಹಂಕಾರವೆಂಬ ಅಲಗ ಹಿಡಿದು ಮಾಡುವ ಭಕ್ತಿ ತನ್ನನೆ ಇಱಿವುದು. ಗೊಗೇಶ್ವರನೆಂಬ ಹಗೆಯ ಗೆಲುವಡೆ

ಅಱಿವೆಂಬ ಅಲಗ ಅವಧಾನ ತಪ್ಪದೆ ಹಿಡಿಯಬೇಕು—ನೋಡಾ ಸಂಗನ ಬಸವಣ್ಣ ೩೫೬-೪೯೧-5-68.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಧ್ಯಾನಮೋನವೆಂಬ ಶಸ್ತ್ರವ ಹಿಡಿಯಲಱಿಯದೆ, ಅಹಂಕಾರವೆಂಬ ಧಾರೆಯ ಮೊನೆಯಲಗೆಂಬ ಶಸ್ತ್ರವ ಹಿಡಿದು ಕೆಟ್ಟೆನಯ್ಯಾ, ಅಂಜುವೆನಂಜುವೆನಯ್ಯಾ; ಜಂಗಮ-ಲಿಂಗವೆಂಬ ಭಾಷೆ ಪಲ್ಲಟವಾಯಿತ್ತು. ಇನ್ನು ಜಂಗಮಲಿಂಗವೆಂಬ ಶಿಕ್ಷಾಶಸ್ತ್ರದಲ್ಲಿ ಎನ್ನ ಹೊಯ್ದು ಬೈದು ರಕ್ಷಿಸುವುದು, ಕೂಡಲಸಂಗಮದೇವ. ೩೫೭-೪೯೨-5-69.

ಹೀಗೆಂದು ಬಸವರಾಜದೇವರು ಬಿನ್ನೈಸಲು, ಪ್ರಭುದೇವರು ಮುಳಿಸ [1]ಮುಟ್ಟಿಸಿ ತೋಱಿ[1] ಬಿನ್ನೈಸುವ ಪ್ರಸ್ತಾವದ ವಚನ:

ಮನಕ್ಕೆ ಮನವೇಕಾರ್ಥವಾಗಿ, ಕಾಯಕ್ಕೆ ಕಾಯ [2]ಸಮರಸವಾಗಿ,[2] ಪ್ರಾಣಕ್ಕೆ ಪ್ರಾಣ ಸಮರಸವಾಗಿ—ಇದ್ದವರಲ್ಲಿ ಮನ-ವಚನ-ಕಾಯದೊಳಗೆ ಶಬ್ದ ಸೂತಕ ಹುಟ್ಟಿದರೆ ಸೈರಿಸಬಾರದು ಕಾಣಾ! ನಮ್ಮ ಗೊಗೇಶ್ವರ ಲಿಂಗಕ್ಕೆ ನೀನೆ ಭಕ್ತನಾದ ಕಾರಣ, ಮುಳಿಸು ಮೊನೆದೋಱಿತ್ತು ಕಾಣಾ ಸಂಗನ ಬಸವಣ್ಣ. ೩೫೮-೪೯೩-5-70. ಮತ್ತಂ:

ಸೂಳೆ ಹಲಬರನುಳಿದಳೆಂದು ನಿಂದಿಸುವರಿಲ್ಲ ಕೇಳಾ! ಪತಿವ್ರತೆ—ತನ್ನ ಪುರುಷನ ಮುಖವಲ್ಲದೆ ಮತ್ತೊಬ್ಬನ ಮುಖವ ನೋಡಿದರೆ, ಅವಳ ಚಂಡಾಲಗಿತ್ತಿ ಎಂಬುದು ಲೋಕವೆಲ್ಲವು. ಕೀರ್ತಿವಾರ್ತೆಗೆ ಮಾಡುವ ಭಕ್ತ ತಪ್ಪಿದರೆ-ಅದ ಮನಕ್ಕೆ ತರಲಿಲ್ಲ. ಸಜ್ಜನಸದ್ಭಕ್ತನೆಡಹಿದರೆ—ಅದ ಸೈರಿಸಬಾರದು ಕೇಳಾ. ನಮ್ಮ ಗೊಗೇಶ್ವರ ಲಿಂಗಕ್ಕೆ ಆದಿಯಿಂದತ್ತತ್ತ ನೀನೆ ಭಕ್ತನಾದ ಕಾರಣ, ಮನ ನೊಂದಿತ್ತು ಕಾಣಾ ಸಂಗನ ಬಸವಣ್ಣ. ೩೫೯-೪೯೪-5-71.

ಹೀಂಗೆಂದು ಪ್ರಭುದೇವರು ಮುನಿಸತೋಱಿ ಹೇಳುತ್ತಿರಲು, ಇದಕ್ಕೆ ಬಸವರಾಜದೇವರು ಅನುತಾಪದಿಂದ ಬಿನ್ನಹಂ ಮಾಡುವ ಪ್ರಸ್ತಾವದ ವಚನ:

ಎನ್ನ ನುಡಿ ಎನಗೆ ನಂಜಾಯಿತ್ತು. ಎನ್ನ ಅಲಗೇ ಎನ್ನ ಕೊಂದಿತ್ತು. ಆನು ಪಾಪಿಯಯ್ಯಾ, ಆನು ಕೋಪಿಯಯ್ಯಾ. ತರಳತನದಲ್ಲಿ ಕೆಟ್ಟೆನಯ್ಯಾ, ಭಕ್ತಿವ್ರತವನಱಿಯದೆ ಆನು ಕೆಟ್ಟೆನಯ್ಯಾ, ಆಳು ಮುನಿದರೆ ಆಳೆ ಕೆಡುವನು, ಆಳ್ದ ಮುನಿದರೂ ಆಳೆ ಕೆಡುವನು. ನೀವು ಮುನಿದರೆ ನಾನೆ ಕೆಡುವೆನಯ್ಯಾ—ಕೂಡಲ ಸಂಗಮದೇವ. ೩೬೦-೪೯೫-5-72.

ಒಲೆ ಹತ್ತಿ ಉರಿದರೆ ನಿಲಬಹುದಲ್ಲದೆ, ಧರೆ ಹತ್ತಿ ಉರಿದರೆ ನಿಲಬಹುದೇ? ಏರಿ ನೀರುಂಬರೆ, ಬೇಲಿ [3]ಕೆಯ್ಯ[3] ಮೇವರೆ, ನಾರಿ ತನ್ನ ಮನೆಯಲ್ಲಿ ಕಳುವರೆ, ತಾಯ

[1] (ಶಿ) (ದೇ) ಮುದ್ದಿ [=ಟ್ಟಿ]ಸಿ ತೋರಿ (ಹ) ತಿದ್ದಿತೋಱು (ಗೂ). [2] (ಶಿಹದೇ) ಸಮದರ್ಶನವಾಗಿ (ಗೂ). [3] (ಶಿ) ಕೈಯ (ಹದೇ).

ಮೊಲೆವಾಲು ನಂಜಾಗಿ ಕೊಲುವರೆ—ಇನ್ನಾರಿಗೆ ದೂಱುವೆನಯ್ಯಾ, ಕೂಡಲಸಂಗಮದೇವ. ನೀವು ಮುನಿದರೆ ನಾನು ಸೈರಿಸಬಲ್ಲೆನೇ ಹೇಳಯ್ಯಾ. ೩೬೧-೪೯೬-5-73. ಮತ್ತಂ :

ಎನ್ನ ಅವಗುಣವ ಸಂಪಾದಿಸುಸೆಯಯ್ಯಾ—ನಿಮಗಾನು ಸರಿಯೆ? ಅಪ್ರತಿಮಹಿಮ, ನಿಮಗಾನು ಸರಿಯೆ ? ಅಪ್ರತಿ ಮಹಿಮ ಕೂಡಲಸಂಗಮದೇವ, ನೀವು ಮಾಡಲಾದವ ನಾನು ! ಎನ್ನೊಡನೆ ಮುನಿವರೆ ಹೇಳಾ ಎಲೆ ಅಯ್ಯ ? ೩೬೨-೪೯೭-5-74.

ಹೀಂಗೆಂದು ಬಸವರಾಜದೇವರು ಬಿನ್ನೈಸಲು, ಮತ್ತಂ ಪ್ರಭುದೇವರು ಆ ಬಸವರಾಜದೇವರ ಮಹಾತ್ಮೆಯನೆತ್ತಿ ತೋಱಿ, ಆಕ್ಷೇಪಂಬಡುತ್ತಿರ್ದ ಪ್ರಸ್ತಾವದ ವಚನ :

ಆರಾಧಿಸಿ ವಿರೋಧಿಸುವರೆ ? ಪೂಜಿಸಿ ಪೂಜೆಯ ಮಱೆವರೆ ? ಜಂಗಮಲಿಂಗವೆಂದಱಿದವರು ಸಂಚ ತಪ್ಪುವರೆ ? ಗಾಳಿಯೂ ಗಂಧವೂ ಕೂಡಿದಂತೆ ಜಗದೊಳಗೆ ಇದೆ. ಕೀರ್ತಿವಾರ್ತೆಯ ಹಡೆಪೆಯಲ್ಲಾ ಬಸವಣ್ಣಾ ! ನಿನ್ನ ಶಿಶುವಿನೊಡತಣ ತೆಱಹು ಮಱಹ ವಸುಧೆಯೊಳಗಣ ಪ್ರಮಥರು ಮೆಚ್ಚುವರೆ ? ತಿಳಿದು ನೋಡುವರೆ, ಗೊಗೇಶ್ವರನ ಶರಣ ಅಲ್ಲಯ್ಯಂಗೆ ನೀನು ಪರಮಾರಾಧ್ಯರಯ್ಯ ಸಂಗನ ಬಸವಣ್ಣಾ. ೩೬೩-೪೯೯-5-76.

ಎನಗೆ ನೀನು ಪರಮಾರಾಧ್ಯರಾಗಿಹುದ ಮಱೆದೆಯೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ :

ಎನ್ನ ಗತಿಮತಿ ನೀನೆ ಕಂಡಯ್ಯಾ. ಎನ್ನ ಗುರು ಪರಮಗುರು ನೀನೆ ಕಂಡಯ್ಯಾ. ಎನ್ನ ಅಂತರಂಗದ ಜ್ಯೋತಿ ನೀನೆ ಕಂಡಯ್ಯಾ. ಕೂಡಲಸಂಗಮದೇವ, ನೀನೇ ಎನಗೆ ಗುರು, ನಾ ನಿಮ್ಮ ಶಿಷ್ಯನೆಂಬುದ, ನಿಮ್ಮ ಶರಣ ಸಿದ್ಧರಾಮಯ್ಯದೇವರು ಬಲ್ಲರು, ಕೃಪೆ ಮಾಡಾ ಪ್ರಭುವೆ. ೩೬೪-೫೦೦-5-77.

ಎನ್ನ ಪರಮಗುರು ನೀನೇ ಎಂಬುದನು, ನಾ ನಿಮಗೆ ಭಕ್ತನೆಂಬುದನು, ಈ ಸಿದ್ಧರಾಮಯ್ಯದೇವರೇ ಬಲ್ಲರು ಎಂದು ಬಸವರಾಜದೇವರು ಬಿನ್ನಹಂ ಮಾಡಿ, ಮಠಕ್ಕೆ ಬಿಜಯಂಗೆಯಿಮೆಂದು ಬಿನ್ನೈಸುತ್ತಿರಲು, ಆ ಸಿದ್ಧರಾಮಯ್ಯದೇವರು—ಪ್ರಭುದೇವರೊಡನೆ ಬಸವರಾಜದೇವರ ಘನವ ಕೊಂಡಾಡಿ, ಆ ಬಸವರಾಜದೇವರ ಮಠಕ್ಕೆ ಬಿಜಯಂಗೆಯ್ವುದೆಂದು ಬಿನ್ನೈಸುವ ಪ್ರಸ್ತಾವದ ವಚನ :

ಕೇಳು ಕೇಳಾ ಎಲೆ ಅಯ್ಯಾ, ಆದಿ-ಅನಾದಿಯಿಲ್ಲದಂದು, ಬಸವಣ್ಣನೆ ಭಕ್ತ, ನಾದ-ಬಿಂದು-ಕಳೆಗಳಿಲ್ಲದಂದು ನೀನೆ ಜಂಗಮ. ಶಿವ-ಶಕ್ತಿಗಳುದಯವಾಗದ ಮುನ್ನ ಬಸವಣ್ಣನೇ ಭಕ್ತ, ಸುರಾಳ-ನಿರಾಳವೆಂಬ ಶಬ್ದ ಹುಟ್ಟದ ಮುನ್ನ ನೀನೆ ಜಂಗಮ. ಉಭಯಭಾವದಲ್ಲಿ ಭೇದ ಉಂಟೆ ? ಕಪಿಲಸಿದ್ಧ ಮಲ್ಲಿನಾಥಯ್ಯಾ, ಬಸವಣ್ಣನಾರೆಂಬುದ ನಿನ್ನ ನೀನೇ ತಿಳಿದುನೋಡಿ ಕೃಪೆಮಾಡಾ ಪ್ರಭುವೇ. ೩೬೫-೫೦೧-5-78.

ಇಂತು ಸಿದ್ಧರಾಮಯ್ಯದೇವರು ಬಸವರಾಜದೇವರ ಘನವ ತೋಱಿ, ಪ್ರಭುದೇವರಿಗೆ ಬಿನ್ನಹಂ ಮಾಡಲು, ಆ ಪ್ರಸ್ತಾವದೊಳು ಚಿಕ್ಕದಣ್ಣಾಯಕರು, ಪ್ರಭುದೇವರಿಗೆ ನಮಸ್ಕಾರಮಂ ಮಾಡಿ, ಬಿನ್ನಹಂ ಮಾಡುವ ವಚನ :

ಶರಣು ಶರಣಾರ್ಥಿ ಮಹಾದೇವರ ದೇವ, ಶರಣು ಶರಣಾರ್ಥಿ ಪರಬ್ರಹ್ಮರೂಪ, ಶರಣು ಶರಣಾರ್ಥಿ ನಿರಾಕಾರತತ್ವವೇ, ನೀವೆ ಗತಿಮತಿ, ನಿಮ್ಮ ಚರಣಕ್ಕೆ ಶರಣಯ್ಯ. ಸತಿಪತಿಯ ಒಲುಮೆಯ ಮುನಿಸು ಅತಿಬೇಟವೆಂಬುದು ತಪ್ಪದು ನೋಡಾ! ನಿಮ್ಮ ಶರಣ ಬಸವಣ್ಣನೊಡತಣ ಮುನಿಸು ಎನ್ನ ಮನಕ್ಕೆ ಸಂಶಯ ತೋಱಿದು ನೋಡಾ ಗುರುವೆ. ಸಂತೆಯ ನೆರವಿಯಲ್ಲಿ ಅಭಿಮಾನದ ಮಾತ ಮಾಱಬಹುದೇ? ಬೀದಿಯಲ್ಲಿ ನಿಂದು ನುಡಿವ ಅನುಭಾವ ಜಿಚ್ಚೈಗೆ ನಗೆಗೆಡೆ ನೋಡಯ್ಯ! ಸಂಗನ ಬಸವಣ್ಣನೊಳಗೆ ನಿಮ್ಮೊಳಗೆ ಭೇದವಿಲ್ಲೆಂಬುದ ನೀವೆ ಅಱಿದಱಿದು, ಮತ್ತೆ ಬಾರೆನೆಂಬುದುಚಿತವೆ? ಕೂಡಲಚೆನ್ನ ಸಂಗನ ಶರಣ ಬಸವಣ್ಣನೇ ನಿಮ್ಮ ಪ್ರಾಣವಾಗಿ ಇರಲು, ಇನ್ನಾರೊಡನೆ ಮುನಿವಿರಿ? ಕೃಪೆ ಮಾಡಾ ಪ್ರಭುವೆ. ೩೬೬–೫೧೫–5–79. ಮತ್ತಂ:

ಭಕ್ತರ ಹೆಚ್ಚು-ಕುಂದು—ಜಂಗಮದ ಹೆಚ್ಚು-ಕುಂದೆಂಬುದನಱಿಯಾ ಪ್ರಭುವೆ. ನಿನ್ನ ಪ್ರಾಣವೆ ಬಸವಣ್ಣನ ಪ್ರಾಣ, ಬಸವಣ್ಣನ ಪ್ರಾಣವೆ ನಿನ್ನ ಪ್ರಾಣ; ನಿನ್ನ ಕಾಯವೆ ಬಸವಣ್ಣನ ಕಾಯ, ಬಸವಣ್ಣನ ಕಾಯವೆ ನಿನ್ನ ಕಾಯ; ನೀವಿಲ್ಲದಿರೆ ಬಸವಣ್ಣನಿಲ್ಲ, ಬಸವಣ್ಣನಿಲ್ಲದಿರೆ ನೀವಿಲ್ಲ. ಇಂತೊಂದನೊಂದ ಬಿಚ್ಚಿ ಬೇಱುಮಾಡಬಾರದೆಂಬುದನಱಿದು ಮತ್ತೆ ಬರಿದೆ ಮುನಿವರೆ ಬಲ್ಲವರು? ನಡೆವ ಮಾರುವ ಮುಗ್ಗಿದರೆ ನಡೆಸಿಕೊಂಬುದಲ್ಲದೆ, [1]ಮಿಡಿ[1] ಹಱಿಯ ಹೊಯ್ವವರುಂಟೆ ಲೋಕದೊಳಗೆ? ಮಱಹಿಂದ ಬಂದ ಗುಣವ ಸಂಪಾದಿಸದೆ, ಬಿಜಯಂಗೆಯ್ವುದಯ್ಯ ನಿಮ್ಮ ಗೃಹಕ್ಕೆ. ಕೂಡಲಚೆನ್ನ ಸಂಗಮದೇವ, ನಿಮ್ಮ ಶರಣ ಬಸವಣ್ಣನಾರೆಂಬುದ ನೀನೊಂದು ಬಾರಿ ತಿಳಿದು ನೋಡಾ ಪ್ರಭುವೆ. ೩೬೭–೫೧೬–5–80.

ಇಂತು ಚಿಕ್ಕದಣ್ಣಾಯಕರು ಬಿನ್ನಪಂಗೆಯ್ದಲ್ಲಿ ಮಡಿವಾಳತಂದೆಗಳು ಪ್ರಭುದೇವರಿಗೆ ಬಿನ್ನೈಸಿದ ಪ್ರಸ್ತಾವದ ವಚನ:

ಶರಣು ಶರಣಾರ್ಥಿ, ಎನ್ನ ಬಿನ್ನಪವನವಧರಿಸಯ್ಯ. ಬಸವಣ್ಣನೆ ಗುರುರೂಪಾಗಿ ಮರ್ತ್ಯಕ್ಕೆ ಬಂದನು. ಚೆನ್ನಬಸವಣ್ಣನೆ ಲಿಂಗರೂಪಾಗಿ ಮರ್ತ್ಯಕ್ಕೆ ಬಂದನು. ಪ್ರಭುವೆ, ನೀವು ಜಂಗಮರೂಪಾಗಿ ಮರ್ತ್ಯಕ್ಕೆ ಬಂದಿರಿ. ಭಕ್ತಿಯ [2]ಬೆಳವಿಗೆಗೆ[2] ಬಸವಣ್ಣ ಕಾರಣಿಕನಾದ. ಅಱಿವಿನ [2]ಬೆಳವಿಗೆಗೆ[2] ಚೆನ್ನಬಸವಣ್ಣ ಕಾರಣಿಕನಾದ. ಈ ಇಬ್ಬರನೂ ಒಳಕೊಂಬ ಮಹಾಘನಕ್ಕೆ ನೀವು ಕಾರಣರಾದಿರಿ. ಇಂತು ಗುರು-ಲಿಂಗ-ಜಂಗಮ ಒಂದೆ ಭಾವವಲ್ಲದೆ ಭಿನ್ನಭಾವವುಂಟೆ? ಬಸವಣ್ಣ-ಚೆನ್ನಬಸವಣ್ಣನ ಬಿನ್ನಪವ ಮೀಱದೆ ಬಿಜಯಂಗೆಯ್ವುದಯ್ಯ ಕಲಿದೇವರದೇವ. ೩೬೮–೫೧೭–5–81.

ಇಂತು ಚಿಕ್ಕದಣ್ಣಾಯಕರೂ, ಮಡಿವಾಳ ತಂದೆಗಳೂ ಬಿನ್ನಹಂ ಮಾಡಲು, ಪ್ರಭುದೇವರು ಆ ಬಿನ್ನಪಕ್ಕೆ ಪ್ರಸನ್ನರಾಗಿ—ನಿತ್ಯ ಬಸವಣ್ಣ, ನಿರಂಜನ ಬಸವಣ್ಣ, ಸಚ್ಚಿದಾನಂದ ಪರಿಪೂರ್ಣ ಬಸವಣ್ಣ, ಅಖಂಡಪಿಂಡ ಬಸವಣ್ಣ, ಅನಂತಕೋಟ

[1] (ಹಗೂ) ಮಿಡಿಯ (ದೇಶಿ). [2] (ಹದೇಗೂ) ಬೆಳಗಿಗೆ (ಶಿ).

ಬ್ರಹ್ಮಾಂಡಂಗಳಿಗೆ ಆಧಾರರೂಪ ಬಸವಣ್ಣ, ಸಚರಾಚರಂಗಳೆಲ್ಲವ ರಕ್ಷಿಸುವ ಸದ್ಧರ್ಮ ರೂಪ ಬಸವಣ್ಣ, ಶಿವಾಚಾರ ಚಕ್ರವರ್ತಿ ಬಸವಣ್ಣ, ಸರ್ವಾಚಾರ ಸಂಪನ್ನ ಬಸವಣ್ಣ, ಷಡುಸ್ಥಲ ಬ್ರಹ್ಮರೂಪ ಬಸವಣ್ಣ, ಸರ್ವಾಂಗಲಿಂಗಮೂರ್ತಿ ಬಸವಣ್ಣ, ಸ್ವಾನುಭಾವ ಸಾರೋದ್ಧಾರ ಬಸವಣ್ಣ, ಜಂಗಮಪ್ರಾಣಲಿಂಗೈಕ್ಯ ಬಸವಣ್ಣ, ಆರೂಢ ದಾಸೋಹಿ ಬಸವಣ್ಣ, ನಿಸ್ಸಂಗ ನಿಜರೂಪ ಬಸವಣ್ಣ, ಶಿವಸಮಯ ಪ್ರತಿಷ್ಠಾಚಾರ್ಯ ಬಸವಣ್ಣ— ಎಂದು ಆ ಬಸವರಾಜದೇವರ ಮಹಾತ್ಮೆಯನು ನಾನಾ ವಿಧದಿಂ ಸ್ತೋತ್ರಮಂ ಮಾಡಿ ಆ ಪ್ರಭುದೇವರು ತಾವು ನಮಸ್ಕಾರಮಂ ಮಾಡುತ್ತಿರ್ದ ಪ್ರಸ್ತಾವದ ವಚನ :

ಗುರುಸ್ಥಲ-ಲಿಂಗಸ್ಥಲ-ಜಂಗಮಸ್ಥಲ ಪ್ರಸಾದಿಸ್ಥಲವಡಗಿದ ಕರಸ್ಥಲವಿನ್ನಾರಿಗೆ ಸಾರಿತ್ತು ಬಸವಣ್ಣಂಗಲ್ಲದೆ? ನಿರ್ವಂಚಕತ್ವದ ನಿತ್ಯನಿಜಮಾಟದ ಭಕ್ತಿಸ್ಥಲವಿನ್ನಾರಿಗೆ ಸಾರಿತ್ತು ಬಸವಣ್ಣಂಗಲ್ಲದೆ? ಗೊಗೇಶ್ವರ, ನಿಮ್ಮ ಶರಣ ಸಂಗನ ಬಸವಣ್ಣನ ಮಱೆಯ ಹೊಕ್ಕು ನಾನು ಬದುಕಿದೆನು. ೩೯-೫೩-5-83. ಮತ್ತಂ :

ಕುಲದೊಳಗೆ ಹುಟ್ಟಿ, ಕುಲವ ಬೆರಸದೆ, ತನ್ನ ನಿಲವ ಬಲಿದಿಪ್ಪವರಾರು ಹೇಳಾ? ಹಬ್ಬಿದ ಮೂಱು ಬೆಟ್ಟಕ್ಕೆ ತನ್ನ ಮನವ ಹಬ್ಬಲೀಯದೆ, ಲಿಂಗ-ಜಂಗಮಕ್ಕೆ ಸವೆಸಿ ಸ್ವಯಲಿಂಗವಪ್ಪರಿನ್ನಾರು ಹೇಳಾ ? ಸ್ವಯೋಲಿಂಗ, ಸ್ವಯೋಶರಣ, ಸ್ವಯೋ ಭೋಗವೆಂದುದಾಗಿ,ಗೊಗೇಶ್ವರ, ನಿಮ್ಮ ಶರಣ ಸಂಗನ ಬಸವಣ್ಣಂಗೆ ನಮೋ ನಮೋ ಎಂಬೆನು. ೩೭೦-೫೪-5-84. ಮತ್ತಂ :

ತನುವ ಗೆಲಲಱಿಯದೆ, ಮನವ ಗೆಲಲಱಿಯದೆ, ಧನವ ಗೆಲಲಱಿಯದೆ, ಭ್ರಮೆಗೊಂಡಿತ್ತು ಲೋಕವೆಲ್ಲವೂ. ತನುವ ದಾಸೋಹಕ್ಕೆ ಸವೆಸಿ, ಮನವ ಲಿಂಗಧ್ಯಾನದಲ್ಲಿ ಸವೆಸಿ, ಧನವ ಜಂಗಮದರ್ಪಿತದಲ್ಲಿ ಸವೆಸಿ ಗೆಲಬಲ್ಲಡೆ, ಸಂಗನ ಬಸವಣ್ಣನಲ್ಲದೆ ಮತ್ತಾರನೂ ಕಾಣೆ, ಗೊಗೇಶ್ವರ, ನಿಮ್ಮ ಶರಣ ಸಂಗನ ಬಸವಣ್ಣಂಗೆ ನಮೋ ನಮೋ ಎನುತ್ತಿರ್ದೆನು. ೩೭೧-೫೫-5-85. ಮತ್ತಂ :

ಬಯಲ ಮೂರ್ತಿಗೊಳಿಸಿದನೊಬ್ಬ ಶರಣ, ಆ ಮೂರ್ತಿಯಲ್ಲಿ ಭಕ್ತಿಸ್ವಾಯತವ ಮಾಡಿದನೊಬ್ಬ ಶರಣ, ಆ ಭಕ್ತಿಯನೆ ಸುಜ್ಞಾನಮುಖವ ಮಾಡಿದನೊಬ್ಬ ಶರಣ, ಆ ಸುಜ್ಞಾನವನು ಲಿಂಗವಾಗಿ ಧರಿಸಿದನೊಬ್ಬ ಶರಣ, ಆ ಲಿಂಗವನೆ ಸರ್ವಾಂಗದಲ್ಲಿ ವೇಧಿಸಿಕೊಂಡನೊಬ್ಬ ಶರಣ, ಆ ಸರ್ವಾಂಗವನೆ ನಿರ್ವಾಣಸಮಾಧಿಯಲ್ಲಿ ನಿಲಿಸಿದನೊಬ್ಬ ಶರಣ ; ನಾನು ನಿರ್ವಾಣದಲ್ಲಿ ನಿಂದು ಅಗಮ್ಯನಾದೆನೆಂದರೆ, ಭಕ್ತಿಕಂಪಿತನೆನಿಸಿ ಎನ್ನ ತನ್ನಲ್ಲಿಗೆ ಬರಿಸಿಕೊಂಡನೊಬ್ಬ ಶರಣ. ಗೊಗೇಶ್ವರ, ನಿಮ್ಮ ಶರಣ ಸಂಗನ ಬಸವಣ್ಣನ ಶ್ರೀಪಾದವ ಕಂಡು ಶರಣೆಂದು ಬದುಕಿದೆನು. ೩೭೨-೫೬-5-86.

ಇಂತು ಪ್ರಭುದೇವರು ಪ್ರಸನ್ನರಾಗಿ ಬಸವರಾಜದೇವರಸ್ತೋತ್ರಮಂಮಾಡುತ್ತಿರಲು, ಆ ಬಸವರಾಜದೇವರು ಪ್ರಭುದೇವರ ಸ್ತೋತ್ರಮಂ ಮಾಡುತ್ತಿಪ್ಪ ಪ್ರಸ್ತಾವದ ವಚನ :

ಕಾಲಿಲ್ಲದೆ ನಡೆವನು, ಕೈಯಿಲ್ಲದೆ ಹಿಡಿವನು, ಕಣ್ಣಿಲ್ಲದೆ ನೋಡುವನು ಸಹಜವಾಗಿ. ಮೈಯಿಲ್ಲದ ಬಣ್ಣ, ಮಥನವಿಲ್ಲದ ಕೂಟ, ಅಲ್ಲಿ ಸೈವೆಱಗಾಗಿ ಶಿಲೆಯ ಮೇಲೆ— ಒಡಲು

ತನ್ನನಱಿಯದು, ಒಡಲ ತಾನಱಿಯನು. ಬಿಡದೆ ಎನ್ನ ಬೆಂಬತ್ತಿದ ಪರಿಯ ನೋಡಾ. ಜಡವಿಡಿದ ಎನ್ನ ಕಾಯದ ಕಳವಳವ ತಿಳುಹಲೆಂದು ಅಡಿಗಡಿಗೆ ಅನುಭಾವವ ತೋಱುತ್ತಲಿದಾನೆ. ಕುಳ್ಳಿದ್ದೆಡೆಯಲ್ಲಿ ಕುಂಟ, ನಿಂದಿದ್ದೆಡೆಯಲ್ಲಿ ಹೆಳವ, ಎಲ್ಲಿ ನೋಡಿದಡಲ್ಲಿ ಪರಿಪೂರ್ಣನು. ಮೆಲ್ಲಮೆಲ್ಲನೆ ಒಳಗನೊರೆದು ತೋಱುತ್ತೈದಾನೆ—ಬಲ್ಲವರೆಲ್ಲಾ ಬದುಕಿ ಎಂದು. ಝುಲ್ಲರಿಯ ಮೇಲೊಂದು ಬಲುಗೊಡೆಯು ಹಿಡಿದುಕೊಂಡು ಬಲ್ಲಿದನಾನೆಯ ತಡೆದು ನಿಲ್ಲಿಸ ಬಲ್ಲನು, ಕೂಡಲ ಸಂಗಮದೇವರ ಮಹಾಮನೆಯಲ್ಲಿ ಪ್ರಭುದೇವರ ಮಱೆಯ ಹೊಕ್ಕು ಬದುಕಿದೆ ನಾನು. ೩೭೩-೫೨೭-5-87. ಮತ್ತಂ:

ಆದಿಯನಱುಹಿದ, ಅನಾದಿಯ ತೋಱಿದ. ಇಹವ ಕೆಡಿಸಿದ, ಪರವನಿರಿಸಿದ. ಘನವ ತೋಱಿದ, ಮನವ ಸಂತವಿಟ್ಟ. ಅನುವ ತೋಱಿ ಆಯತವಮಾಡಿ, ತನುವ ಮಱೆಸಿ ಮಹವನಱುಪಿ, ಹಿಂದಣ ಪೂರ್ವಾಶ್ರಯವ ಹಿಂದಕ್ಕೆ ತೋಱಿ, ಮುಂದಣ ಗತಿಯ ಸಂದೇಹವ ಬಿಡಿಸಿದ. ಕೂಡಲ ಸಂಗಮದೇವರಲ್ಲಿ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎನುತ್ತಿರ್ದೆನು ೩೭೪-೫೨೮-5-88.

ಮತ್ತಂ ಬಸವರಾಜದೇವರು ಪ್ರಭುದೇವರನು ಸ್ತೋತ್ರವ ಮಾಡಿದ ಪದಂಗಳು:

### ರಾಗ : ಗುಜ್ಜರಿ

ಗುರುಚರಣವೆ ಗತಿ ಗುರುಚರಣವೆ ಮತಿ
ಗುರು ಶಬ್ದ ಸ್ಪರುಶಪಾವನವೆನಗೆ
ನ ಗುರೋರಧಿಕಂ ನ ಗುರೋರಧಿಕಂ
ನ ಗುರೋರಧಿಕವೆಂದೆನುತಿರ್ದವು ಶ್ರುತಿ ॥ ಪಲ್ಲವ ॥

ಜಾತನಲ್ಲ ಅಜಾತಜನಿತನಲ್ಲ
ಖೇಚರನಲ್ಲ ಭೂಚರನಲ್ಲ
ಆಚರಿಸುವನಲ್ಲ ಅನ್ಯಸುಖಂಗಳ
ಭ್ರಾಂತುವಿಲ್ಲದ ನಿಭ್ರಾಂತ ಲಿಂಗೈಕ್ಯನು ॥ ೧ ॥

ಯತ್ರ ತತ್ರ ಶಿವತತ್ವ ಸಾಧಕನಲ್ಲ,
ಅಷ್ಟತನುಮೂರುತಿಯಲ್ಲ, ಎನ್ನ
ಅಷ್ಟಮದಂಗಳ ಕಟ್ಟಿ ನಿಲಿಸಿದ
ಅಷ್ಟದಳ ಕಮಳ ಪೂಜಿತ ನೀನೆ ಗುರುವೆ ॥ ೨ ॥

ಆಕಾರ-ನಿರಾಕಾರ-ಸಾಕಾರಸನುಮತ
ಮಾಕರಿಸುವನಲ್ಲ ಮನದಿಚ್ಛೆಗೆ
ಆಕಾರ ನಿರಾಕಾರ ಸಾಕಾರಸನುಮತ
ಏಕಾಂತದಲಿಪ್ಪ ನಿಜಲಿಂಗೈಕ್ಯನು ಗುರುವೆ ॥ ೩ ॥

ಜೀವ-ದೇಹ ದೇಹ-ಜೀವದೊಳಗಣ
ಅನ್ಯ ಭಿನ್ನ ಭಾವಕನಲ್ಲ
ಸಮಸ್ಥಾನದ ಸುಖದ ಸುಖ ಭೋಗಿ
ಅಣು-ರೇಣು-ಸ್ಥೂಲ-ಸೂಕ್ಷ್ಮಭರಿತನು ನೀನೆ ಗುರುವೆ || ೪ ||

ಭೃಂಗ ಕುಸುಮ ಪರಿಮಳಕೆಱಗುವಂತೆ
ಲಿಂಗ ಸಂಗ ಸುಖ ನಿರ್ಲೇಪ
ಅಂಗಲಿಂಗ ಸಂಗಿಯಾಗಿಪ್ಪ ಶಿವಯೋಗಿ
ಸಂಗ ಕೂಡಲ ಸಂಗಯ್ಯನಲ್ಲಿ ಪ್ರಭುದೇವರು || ೫ ||

ಪದಸಹ ಲೆಕ್ಕ. ೩೭೯-೫೩೪-5-88.

ಇಂತು ಬಸವರಾಜದೇವರು ಪ್ರಭುದೇವರನು ನಾನಾ ಮುಖದಿಂ ಸ್ತೋತ್ರಮಂ ಮಾಡುತ್ತಿರೆ, ಆ ಪ್ರಭುದೇವರು— ಇನ್ನು ಸ್ತೋತ್ರವ ಮಾಡಬೇಡವೆಂದು— ಬಸವರಾಜ ದೇವರಿಗೆ ನಿರೂಪಿಸಿದ ಪ್ರಸ್ತಾವದ ವಚನ :

ಮನ ಮನ ಒಂದಾಗಿ, ಅಱಿವು ಸಮವಾದ ಬಳಿಕ, ಕೊಂಡಾಡಲಿಂಬುಂಟೆ ಹೇಳ? ಶಬ್ದಕ್ಕೆ ತೆಱಹಿಲ್ಲ, ಗೊಗೇಶ್ವರ ಲಿಂಗದಲ್ಲಿ ಬೆರಸಿಬೇಱಿಲ್ಲ ಕಾಣಾ ಸಂಗನ ಬಸವಣ್ಣ. ೩೮೦-೮೯೪-6-1.

ಮತ್ತಂ, ಪ್ರಭುದೇವರು-ಬಸವರಾಜದೇವರೊಡನೆ ನಿರೂಪಿಸುತ್ತಿರಲು-ಮತ್ತೊಂದ ತಿಶಯುವಮಂ ಕಂಡು ನುಡಿವ ಪ್ರಸ್ತಾವದ ವಚನ :

ನೀರ-ಕ್ಷೀರದಂತೆ ಕೂಡಿದ ಭೇದವನಾರಿಗೂ ಹೇಳಲಿಲ್ಲ, ಹೇಳಿ ಹೊಗಳಲಿಲ್ಲ. [1]ಖಾರ[1] ಬೆರಸಿ ಬೆಚ್ಚ ಭಂಗಾರಕ್ಕೆ ಸಂದುಂಟೆ ಹೇಳಾ ? ಉರಿಯುಂಡ ಕರ್ಪುರದ ಪರಿಯಂತಿರ್ದುದ ನಿದಿರಿಂಗೆ ಕೊಂಡಾಡಿ ಹೇಳಲುಂಟೆ ? ಅಂತಿರಲಿ-ನಮ್ಮ ಗೊಗೇಶ್ವರ ಲಿಂಗದ ಕಣ್ಣ ಮುಂದೆ ನಿನ್ನ ಧರ್ಮದಿಂದಲೊಂದತಿಶಯವ ಕಂಡೆ ನೋಡಾ ಸಂಗನ ಬಸವಣ್ಣ. ೩೮೧-೮೯೫-6-2.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಬಸವರಾಜದೇವರು—ಅತ್ಯಂತ ಆರ್ತದಿಂದ, ಮತ್ತೊಂದತಿಶಯುವೆಂಬುದೇನೆಂದು ಆ ಪ್ರಭುದೇವರ ಬೆಸಗೊಂಬ ಪ್ರಸ್ತಾವದ ವಚನ :

ದೇವ ದೇವ ಮಹಾಪ್ರಸಾದ. ನೀವೆಂದಂತೆ ನಿಮ್ಮ ಚರಣದಲ್ಲಿ ಸಂದು-ಭೇದವಿಲ್ಲದೆ ಇಪ್ಪೆನಲ್ಲದೆ, ಬೇಱೆ ಮತ್ತೊಂದು ಭೇದವಾಗಿರ್ದೆನಾದರೆ ನೀವೇ ಸಾಕ್ಷಿ. ನಿಮ್ಮ ಶ್ರೀಪಾದವ ಕಂಡೆನ್ನ ಭವಂ ನಾಸ್ತಿಯಾಯಿತ್ತು. ಕೂಡಲ ಸಂಗಮದೇವ, ನಿಮ್ಮಿಂದತಿ ಶಯವಿಲ್ಲವೆಂದು ಶ್ರುತಿಗಳು ಹೊಗಳುತ್ತಿರಲಾಗಿ, ನೀವು ಕಂಡ ಅತಿಶಯವೇನು ಹೇಳಾ ಪ್ರಭುವೆ ? ೩೮೨-೮೯೬-6-3.

ಇಂತು, ಪ್ರಭುದೇವರೊಡನೆ ಅತಿಶಯುವೆಂಬುದನೆನಗೆ ನಿರೂಪವಕೊಟ್ಟು, ಕೃತಾರ್ಥನಂ ಮಾಳ್ಪುದೆಂದು, ಬಸವರಾಜದೇವರು ಬಿನ್ನಪಂಗೆಯ್ಯಲು, ಪ್ರಭುದೇವರು-ಮರುಳು ಶಂಕರ ದೇವರು ಆ ಬಸವರಾಜದೇವರ ಪ್ರಸಾದದ ಕುಳಿಯೊಳಗೆ ಒಕ್ಕುಮಿಕ್ಕ ಶೇಷ ಪ್ರಸಾದವಮಂ ಸ್ವೀಕಾರವಮಂ ಮಾಡಿ, ಹನ್ನೆರಡು ವರುಷಪರಿಯಂತರ ತನ್ನ ನಿಜ ಸ್ವರೂಪವಮಂ ಮಱಿಸಿ ಕೊಂಡು ಇರುತ್ತಿರಲು, ಆ ಭೇದವಮಂ ಬಸವರಾಜ ದೇವರೊಡನೆ ನಿರೂಪಿಸಿದ ಪ್ರಸ್ತಾವದ ವಚನ :

---

[1] (ಶಿ) ಕಾರ (ದೇ) ಭಾರ (ಹ) ಬೆಳುಗಾರ (ಗೂ). Note : ಇಲ್ಲಿ ಖ ಮತ್ತು ಭ ಅಕ್ಷರಗಳನ್ನು ಬೇರ್ಪಡಿಸಿ ಓದುವುದು ಕಷ್ಟಸಾಧ್ಯ.

ಬೀದಿಯಲ್ಲಿ ಬಿದ್ದ ಮಾಣಿಕ್ಯವ, ಹೂಳಿರ್ದ ನಿಧಾನವ ಆರಿಗೂ ಕಾಣಬಾರದು ನೋಡಾ. ಮರಣವುಳ್ಳವರಿಗೆ ಮರುಜೆವಣಿಗೆ ಸಿಕ್ಕುವುದೇ ? ಪಾಪಿಯ ಕಣ್ಣಿಂಗೆ ಪರುಷ ಕಲ್ಲಾಗಿಪ್ಪಂತೆ ಇಪ್ಪರಯ್ಯ ಶಿವಶರಣರು. ಗೊಗೇಶ್ವರನ ಶರಣ ಮರುಳು ಶಂಕರದೇವರ ನಿಲವ ನೋಡಾ, ಸಂಗನ ಬಸವಣ್ಣ. ೩೮೩-೮೯೭-6-7 ಮತ್ತಂ :

ಆದಿಯನಂಗಮುಖದಲ್ಲಿ ಅರ್ಪಿತಮಾಡಿ, ಅನಾದಿಯ ಪ್ರಾಣಮುಖದಲ್ಲಿ ಅರ್ಪ್ಪಿತವ ಮಾಡಿ,ಮನವೆಂಬುದ ಅಱಿವಿನ ಮುಖಕ್ಕರ್ಪಿಸಿ, ತಾನೆಂಬುದ ನಿರಾಕಾರದಲ್ಲಿ ನಿಲಿಸಿ, ಪರಿಣಾಮ ಪ್ರಸಾದದಲ್ಲಿ ತದುಗತವಾಗಿ ; ಪ್ರಸಾದವೇ ಪ್ರಾಣ, ಪ್ರಸಾದವೇ ಕಾಯ, ಪ್ರಸಾದವೇ ಜ್ಞಾನ, ಪ್ರಸಾದವೇ ಧ್ಯಾನ, ಪ್ರಸಾದವೇ ಭೋಗವಾಗಿಪ್ಪ ನಮ್ಮ ಗೋಗೆಶ್ವರಲಿಂಗದಲ್ಲಿ ನಿಜ ಪ್ರಸಾದಿ ಮರುಳು ಶಂಕರದೇವರ ನೋಡಾ ಸಂಗನ ಬಸವಣ್ಣ. ೩೮೪-೯೧೭-6-9.

ಇಂತು ಪ್ರಭುದೇವರು ಮರುಳು ಶಂಕರದೇವರ ಮಹಾತ್ಮೆಯಂ ಕೊಂಡಾಡಿ ತೋಱಿಸಿ ಪೇಳಲು, ಬಸವರಾಜದೇವರು ಕೇಳಿ ನಡನಡುಗಿ ಚಿಂತಾಕ್ರಾಂತರಾಗಿ–ಇನಿತು ದಿನವೆನ್ನ ದ್ವಾರವಟ್ಟದ ಮುಂದೆ ಮಹಾಲಿಂಗೈಕ್ಯನಪ್ಪ ಶರಣನಿರುತ್ತಿರಲು, ಈತನ ನಿಲವನಱಿಯದೆ ಕೆಟ್ಟೆನೆಂದು ಅನುತಾಪಂಬಟ್ಟ ಪ್ರಸ್ತಾವದ ವಚನ :

ಅಯ್ಯ, ನಿಮ್ಮ ಶರಣರು ಬಂದೆನ್ನ ಬಾಗಿಲೊಳಗಿರಲು ನಾನು ತೆಱಿಹು-ಮಱಿಹಾಗಿರ್ದು ಕೆಟ್ಟೆನಯ್ಯ, ನಾನು ಕೆಟ್ಟ ಕೇಡಿಂಗೆ ಕಡೆಯಿಲ್ಲಯ್ಯ. ಕೂಡಲ ಸಂಗಮದೇವ, ಎನ್ನ ಭಕ್ತಿ–ಸಾವಿರ ನೋಂಪಿಯ ನೋಂತು ಒಂದು ಹಾದರದಲ್ಲಿ ಅಳಿದಂತಾಯಿತ್ತು. ೩೮೫-೮೯೮-6-16. ಮತ್ತಂ :

ಕಾಯದ ಕಪಟವು ಬಿಡದೆನಗಿನ್ನೆಂತೋ !? ಮಾಯಾಪ್ರಪಂಚಿನ ಬಲೆಯಲ್ಲಿ ಸಿಲುಕಿದೆ. ವಾಯುದ ಸಂಭ್ರಮ ಹಿರಿದೆನಗೆ. ಇದಾವ ಭಾವದ ಮುಖವೆಂದಱಿಯದೆ ಜ್ಞಾನಶೂನ್ಯವಾಗಿರ್ದೆನಯ್ಯ. ಎನ್ನ ಅಷ್ಟಮದಂಗಳ ಸೃಷ್ಟಿಸಿದಿರಾಗಿ ಕಟ್ಟುಗ್ರದಿಂದ ನಿಮ್ಮ ಕಾಣಲೀಯವು. ಎನ್ನ ತನುವಿನ ಅವಗುಣ, ಮನದ ಮರ್ಕಟತನ ಬಿಡದಿನ್ನೇನು ಗತಿ ?! ಕೂಡಲ ಸಂಗಮದೇವ, ನಿಮ್ಮ ಶರಣರ ನಿಲವನಱಿಯದೆ ಭವದುಃಖಿಯಾದೆನಯ್ಯ. ೩೮೬-೮೯೯-6-17.

ಮತ್ತಂ, ಬಸವರಾಜದೇವರು–ಈ ಮರುಳಶಂಕರದೇವರ ಕೃಪೆ ಎನಗೆಂದಪ್ಪುದೆಂದು ಪ್ರಭುದೇವರ ಬೆಸಗೊಂಬ ಪ್ರಸ್ತಾವದ ವಚನ :

ನಡುದೊಱೆಯೊಳಗೆ ಹಱುಗೋಲನಿಳಿದಂತಾಯಿತ್ತೆನ್ನ ಭಕ್ತಿ. ಮರನೇಱಿ ಕೈಯ ಬಿಟ್ಟಂತಾಯಿತ್ತೆನ್ನ ಭಕ್ತಿ. ಶಿವ ಶಿವಾ ಕೆಟ್ಟೆನಲ್ಲಾ ಗುರುವೆ. ಕೂಡಲ ಸಂಗಮದೇವ, ಈ ಮರುಳು ಶಂಕರದೇವರ ಕೃಪೆ ಎನಗಿನ್ನೆಂದಪ್ಪುದೆಂದು ಹೇಳಾ ಪ್ರಭುವೆ. ೩೮೭-೯೦೧ 6-18.

ಹೀಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪವ ಕೊಟ್ಟ ಪ್ರಸ್ತಾವದ ವಚನ :

ಹೂವಿಡಿಯ ಹಱಿದು ಒತ್ತಿ ಹಣ್ಣ ಮಾಡಿಹೆನೆಂದರೆ ಹಣ್ಣಾಗ ಬಲ್ಲುದೆ? ಪರಿಮಳವಿಲ್ಲದ ನನೆಯನರಳಿಸಿ ಮುಡಿದಹೆನೆಂದರೆ ಸೌರಭ್ಯ ಉಂಟೆ! ಶಿವಶರಣರ ನಿಲವ ಕಾಬ ಕಾಲಕ್ಕೆ ಕಾಣ ಬಹುದಲ್ಲದೆ, ಎಲ್ಲಾ ಹೊತ್ತು ಕಾಣಬಹುದೆ? ಅಹ ಕಾಲಕ್ಕೆ ತಾನೆಯಪ್ಪುದು. ಗೊಗೇಶ್ವರನ ಶರಣರ ನಿಲವ ಕಂಡ ಬಳಿಕ, ಮಱಹು— ಬೆಳಗ ಕಂಡ ಕತ್ತಲೆಯಂತೆ- ನೋಡ ನೋಡ ಹರೆವುದು ನೋಡಾ ಸಂಗನ ಬಸವಣ್ಣ. ೩೮೮-೯೦೨-6 19.

ಹೀಗೆಂದು ಪ್ರಭುದೇವರು ನಿರೂಪಿಸುತ್ತಿರಲು, ಇದಕ್ಕೆ ಬಸವರಾಜದೇವರು ಮರುಳು ಶಂಕರದೇವರ ಶ್ರೀಪಾದಕ್ಕೆ ಶರಣೆಂಬ ಪ್ರಸ್ತಾವದ ವಚನ:

ಮುಗಿಲ ಮಱೆಯ ಮಿಂಚಿನಂತೆ, ಒಡಲ ಮಱೆಯ ಆತ್ಮನಂತೆ, ನೆಲದ ಮಱೆಯ ನಿಧಾನದಂತೆ ಇಪ್ಪ ನಿಮ್ಮ ನಿಲವನಾರು ಬಲ್ಲರು? ದೇವ, ನಿಮ್ಮ ನಿಲವ ಹಲಕಾಲದಿಂದ ಕಂಡು ಕಂಡು ಕಡೆಗಾಣಿಸಿ, ಮಱೆದು ಮತಿಗೆಟ್ಟು ಮರುಳಾದೆನು. ಎನ್ನ ತಪ್ಪಿಂಗೆ ಕಡೆಯಿಲ್ಲ, ತ್ರಾಹಿ ತ್ರಾಹಿ ಕಾಯಯ್ಯ ಕೂಡಲಸಂಗಮದೇವ. ೩೮೯-೯೦೦-6-20.

ಮತ್ತಂ, ಆ ಬಸವರಾಜದೇವರು—ಮರುಳು ಶಂಕರದೇವರ ಘನವನು ಚಿಕ್ಕದಣ್ಣಾಯಕರ ಕೂಡೆ ನಿರೂಪಿಸಿ ಸ್ತುತಿಯಿಸುತ್ತಿರ್ದ ಪ್ರಸ್ತಾವದ ವಚನ:

ಕಂಗಳೊಳಗೆ ಕರುಳಿಲ್ಲ, ಕಾಯದೊಳಗೆ ಮಾಯವಿಲ್ಲ, ಮನದೊಳಗೆ [1]ಮಱವೆಯಿಲ್ಲ.[1] ದೇಹವೆಂದಱಿಯ, ನಿರ್ದೇಹವೆಂದಱಿಯ. ಜಂತ್ರದ ಸೂತ್ರದಂತಿಪ್ಪ ನಿಬ್ಬೆಱಗಿನ ಮೂರ್ತಿಯ ನೋಡಾ! ಲಿಂಗಜಂಗಮದ ಒಕ್ಕುಮಿಕ್ಕ ಪ್ರಸಾದವ ಕೊಂಡು, ಮಿಕ್ಕು ಮೀಱಿ ನಿಂದ ಮಹಾಪ್ರಸಾದಿಯ ನೋಡಾ! ತನ್ನನಱಿದಹರೆಂದು, ಜಗದ ಕಣ್ಣಿಂಗೆ ಮಾಯದ ಮಂಜ ಕವಿಸಿ, ನಿತ್ಯನಿಜಪದದಲ್ಲಿ ತದುಗತವಾದನು! ಕೂಡಲ ಸಂಗಮದೇವರಲ್ಲಿ ಮರುಳು ಶಂಕರದೇವರ ನಿಲವ ನೋಡಾ ಚೆನ್ನಬಸವಣ್ಣ! ೩೯೦-೯೦೭-6-22.

ಹೀಗೆಂದು ಬಸವರಾಜದೇವರು ನಿರೂಪಿಸಲು, ಇದಕ್ಕೆ ಚೆನ್ನಬಸವರಾಜದೇವರು ಆ ಬಸವರಾಜದೇವರೊಡನೆ ಮರುಳು ಶಂಕರದೇವರ ನಿಲವ ಕೊಂಡಾಡಿ ಹೇಳುವ ಪ್ರಸ್ತಾವದ ವಚನ:

ಅಂಗವನಾಚಾರಕ್ಕರ್ಪಿಸಿ, ಆಚಾರವನಂಗಕ್ಕರ್ಪಿಸಿ, ಆಚಾರಲಿಂಗಪ್ರಸಾದಿಯಾದ. ಪ್ರಾಣವ ಲಿಂಗಕ್ಕರ್ಪಿಸಿ, ಆ ಲಿಂಗವ ಪ್ರಾಣಕ್ಕರ್ಪಿಸಿ, ಪ್ರಾಣಲಿಂಗಪ್ರಸಾದಿಯಾದ. ದೇಹಭಾವದಹಂಕಾರ ದಾಸೋಹಭಾವದೊಳಗಲ್ಲದೆ ಅಳಿಯದೆಂದು, ಲಿಂಗಜಂಗಮಕ್ಕೆ ತೊತ್ತುವೊಕ್ಕು, ಜಂಗಮಲಿಂಗಪ್ರಸಾದಿಯಾದ. ಸತ್ಯಶರಣರ ಅಂಗಳದೊಳಗೆ ಬಿದ್ದಗುಳನೆತ್ತಿಕೊಂಡಿಪ್ಪೆನೆಂದು ನಿಮ್ಮ ಪ್ರಸಾದದ ಕುಳಿಯೊಳಗೆ ಹನ್ನೆರಡು ವರುಷ ನಿರಂತರಪ್ರಸಾದಿಯಾದ. ಕೂಡಲ ಚೆನ್ನಸಂಗಮದೇವರಲ್ಲಿ ಮರುಳು ಶಂಕರದೇವರ

[1] (ಹ) ತನುವಿಲ್ಲ (ದೇ) (ಶಿ) ಅಹಂಕಾರವಿಲ್ಲ (ಗೂ).

ಶ್ರೀಪಾದದ ಘನವನು ನಿಮ್ಮಿಂದಱಿದು ಬದುಕಿದೆನು ಕಾಣಾ ಸಂಗನಬಸವಣ್ಣ. ೩೯೦-೯೦೮-6-23.

ಇಂತು ಚಿಕ್ಕದಣ್ಣಾಯಕರು ಹಿರಿಯದಣ್ಣಾಯಕರು—ತಮ್ಮೊಳಗೆ ತಾವು ಮರುಳು ಶಂಕರ ದೇವರ ಘನವನು ಕೊಂಡಾಡಿ ಪರಿಣಾಮಿಸುತ್ತಿರಲು, ಆ ಮರುಳು ಶಂಕರದೇವರು ತಮ್ಮ ನಿಲುಕಡೆಯ ಗುಪ್ತಭಾವ ಪ್ರಕಟವಾಗಲು, ಆ ಕಾಲಕ್ಕೆ ತಮ್ಮ ಮುಕ್ತಾಯ ಕಾಲ ಸಮನಿಸಲು, ನಿತ್ಯನಿರವಯದೊಳಗೆ ನಿರವಯವಾಗಲು, ಆ ಪ್ರಸ್ತಾವದೊಳು ಪ್ರಭು ದೇವರು ಬಸವರಾಜದೇವರೊಡನೆ ನಿರೂಪಿಸಿದ ಪ್ರಸ್ತಾವದ ವಚನ:

ಕಾಮನ ಕಣ್ಣ ಮುಳ್ಳ ಕಳೆದು, ಭೂಮಿಯ [1]ನೆಲದ[1] ಸೀಮೆಯ ಕೆಡಿಸಿ, ಹೋಮದ ನುರುಹಿ ದದಕ್ಷನ ತಲೆಯನರಿದ ನಿಸ್ಸೀಮ ಶಿವಶರಣರ ನಿಲವನಱಿಯ ಬಹುದೇ? ಅಱಿವಿಂಗಸಾಧ್ಯವು, ಉಪಮೆಗೆ ಕಡೆಮುಟ್ಟದು. ಗೊಗೇಶ್ವರನ ಶರಣರೆಂತಹ ರೆಂಬುದ ಕಂಡಾ, ಸಂಗನ ಬಸವಣ್ಣ. ೩೯೧-೯೩೯-6-41.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು—ನಿರಾಕಾರ ವಾಗಿರ್ದ ಪ್ರಾಣವನು[= ದು ?] ನಿರವಯುವನೆಯ್ದುವುದು ಸಾಮ್ಯವಲ್ಲದೆ, ಕಾಯ ವೆಂಬ ಜಡನು ನಿರವಯವಹ ಭೇದವೆಂತೆಂದು ಆ ಪ್ರಭುದೇವರ ಬೆಸಗೊಂಬ ಪ್ರಸ್ತಾವದ ವಚನ:

ಲಿಂಗದಲ್ಲಿ ಅರ್ಪಿತವಾದ ಕಾಯದ ಸುಖವು ಲಿಂಗದಲ್ಲಿ ಲೀಯವಾಯಿತ್ತೆಂದಪೆ, ಅಂಗವ ಲಿಂಗದಲ್ಲಿ ಮತ್ತೆ ನಿಕ್ಷೇಪಿಸಿಹೆನೆಂಬ ಕಾರಣವೇಕಯ್ಯ ? ಶರಣಂಗೆ ಪ್ರಾಣನ ಲಿಂಗದಲ್ಲಿ ಸವೆಸಿ ನಿರವಯವಾಗಬಹುದಲ್ಲದೆ,ಕರ್ಮದಿಂದಾದ ಕಾಯವ ಸವೆಸಿ ಸಯವಪ್ಪ ಪರಿಯೆಂತು ಹೇಳಾ? ಕೂಡಲಸಂಗಮದೇವಯ್ಯ, ನಿಮ್ಮ ಶರಣರು ಕಾಯಗೊಂಡಿರ್ದು ನಿರ್ಮಾಯರಾಗಿಪ್ಪುದನೆನಗೊಮ್ಮೆ ಹೇಳಯ್ಯ, ನಿಮ್ಮ ಧರ್ಮ. ೩೯೨-೯೪೦-6-42.

ನಿಮ್ಮ ಶರಣರು ಶರೀರವಿಡಿದಿರ್ದೂ ನಿಜದಲ್ಲಿ ನಿಂದ ಭೇದವ ನಿರೂಪಿಸಿ ಎಂದು ಬಸವರಾಜದೇವರು ಬಿನ್ನಹಂ ಮಾಡಲು, ಇದಕ್ಕೆ ಪ್ರಭುದೇವರು ಶರಣಮಹಾತ್ಮೆಯ ನಿರೂಪಿಸಿದ ಪ್ರಸ್ತಾವದ ಪದಂಗಳು:

### ರಾಗ-ಗೌಳ

ಕರ್ಮಕಾಯನು ಅಲ್ಲ ಕರ್ಮಮೂರುತಿಯಲ್ಲ
ಪರಬ್ರಹ್ಮನ ನುಡಿವಲ್ಲಿ ತಾನಿಲ್ಲದ ನಿರ್ಮೋಹಿ || ಪಲ್ಲವ ||

ಮಾತೆ ಪಿತರುಗಳುದರ ಜಾತ ಜನಿತನು ಅಲ್ಲ
ಶ್ವೇತ ಪೀತ ಕಪೋತ ಪಡುವರ್ಣರಹಿತ
ನವಮಾಸ ತುಂಬಿದ ಮೂರುತಿ ತಾನಲ್ಲ
ಅವಿರಳ ಲಿಂಗದ ಕಳೆಯ [2]ಬೆಗು ತಾ ಶರಣ[2] || ೧ ||

[1] (ದೇ) ಕೆಲಸದ (ಕಿ) ಕೆಲದ (ಪ) ತೈಲದ (ಗೂ). [2] (ಪಗೂದೇ) ಜಿಂದು ತಾನೆ (ಕಿ).

ನಡೆಯು ಕಲಿವಲ್ಲಿ ನೋಡಿಳೆಯ ಹಂಗಿಗನಲ್ಲ
ನುಡಿಯು ಸೆಡಗರದ [1]ನಾದ[1] ಬಿಂದುವಲ್ಲ
ಪದುಮಪರಿಮಳಕೆಱಗುವ ಭ್ರಮರ ತಾನಲ್ಲ
ಭವಕುಳವ ಗೆಲಿದು ನಿಭ್ರಾಂತ ಶರಣ ||೨||

ಜಾಗ್ರಸ್ವಪ್ನಸುಸುಪ್ತಿಯಾಗು ಆವಿಷ ತಾನಲ್ಲ
ಆಗಮದ ಕುಳದಲಾದ ಭೋಗಿಯಲ್ಲ
ತೇಜಸರಂಜನೆಯ ಗಣಿತಗುಣಿತನು ಅಲ್ಲ
ಸಹಜನಿತ್ಯನು ತಾನಭೇದ್ಯ ಶರಣ ||೩||

ಬಿಂದು ಕಳೆಯಾದ ಸುಖದ ಶಯನ ಸಂಪರ್ಕನಲ್ಲ
ಒಂದು ಛಂದದಲಿ ಕಂದ ಮೂಲವ ಗೆಲಿದು
ಸಂದಳಿದ ಸಯದ ಸುಖವನೊಂದು ಮಾಡಿ ತ್ರಿ-
ಬಂಧಭೇದವ ಗೆಲಿದ ನಿಷ್ಕಾಮಿ ಶರಣ ||೪||

ಚಂದ್ರಧರನೂ ಅಲ್ಲ ಚಂದ್ರರೂಪನಲ್ಲ
ಇಂದ್ರಚಾಪದ ಪಱಿಯ ಪ್ರಭಾವನಲ್ಲ
ಭೃಂಗಿ ನುಂಗಿದ ರುಚಿಯನೊಂದು ಮಾಡಿ
ಗೊಗೇಶ್ವರ ಲಿಂಗದಲ್ಲಿ ಹಂಗನಳಿದ ಶರಣ ||೫||

ಪದಂಗಳು ಸಹವಚನ ೩೯೭

ಇಂತು ಪ್ರಭುದೇವರು ಮರುಳು ಶಂಕರದೇವರ ಶರಣತ್ವದ ಮಹಾತ್ಮೆಯನು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವನ ವಚನ :

ಅಯ್ಯ, ನಿಮ್ಮ ಶರಣರು ಪರಮಸುಖಿಗಳಯ್ಯ. ಅಯ್ಯ, ನಿಮ್ಮ ಶರಣರು ಕಾಯವೆಂಬ ಕರ್ಮಕ್ಕೆ ಹೊದ್ದದ ನಿಷ್ಕರ್ಮಿಗಳಯ್ಯ, ಅಯ್ಯ, ನಿಮ್ಮ ಶರಣರು ಮನದಲ್ಲಿ ನಿರ್ಲೇಪಜ್ಞಾನಿಗಳಯ್ಯ. ಕೂಡಲಸಂಗಮದೇವ, ನಿಮ್ಮ ಶರಣರ ಘನವನೆನಗೆ ಹೇಳಲು, ನಾನು ಕೇಳಲಮ್ಮದೆ, ನಮೋ ನಮೋ ಎನುತಿರ್ದೆನು ಕಾಣಾ ಪ್ರಭುವೆ! ೩೯೮-೯೩೧-6-48.

ಅಯ್ಯ, ನಿಮ್ಮ ಶರಣರ ನಿಲವ ಸ್ವರ್ಗ-ಮರ್ತ್ಯ-ಪಾತಾಳದೊಳಗೆ ಬಲ್ಲವರಿಲ್ಲಯ್ಯ. ಅಘಟಿತಘಟಿತರು, ಅಖಂಡಿತಮಹಿಮರು, ನಿಜದಲ್ಲಿ ನಿರ್ಲೇಪಭಾವಕರು. ಕೂಡಲಸಂಗಮದೇವ, ನಿಮ್ಮ ಶರಣರ ನಿಲವನಱಿವಡೆ ನಾನೇತಱವನಯ್ಯ? ೩೯೯-೯೫೧-6-49.

[1] (ಶಿ) ಲಾದ (ಹದೀ) ಲಾಹ [=ಲಹ] (ಗೂ).

ಇಂತು ಮರುಳು ಶಂಕರದೇವರ ಘನವನು ಪ್ರಭುದೇವರು-ಬಸವರಾಜದೇವರು ಕೊಂಡಾಡುತ್ತಿರಲು, ಅಲ್ಲಿ ಚಿಕ್ಕದಣ್ಣಾಯಕರು ಬಿನ್ನೈಸಿದ ಪ್ರಸ್ತಾವದ ವಚನ:

ಕಾಯವಳಿದರೇನು ? ಕಾಯ ಉಳಿದರೇನು ? ಕಾಯ ಬಯಲಾದರೇನು ? ಮನ ಮನ ಲಯವಾಗಿ, ಘನಕ್ಕೆ ಘನವಾದ ಶರಣರ ಕಂಡಡೆ, ಕೂಡಲ ಚೆನ್ನಸಂಗಮನೆಂದು ಶಬುದ ಮುಗುದವಾಗಿರಬೇಕಲ್ಲದೆ, ಚೋದ್ಯಕ್ಕೆ ಕಾರಣವೇನು ಹೇಳಾ ಸಂಗನ ಬಸವಣ್ಣ? ೪೦೦-೯೫೭-6-50. ಮತ್ತಂ:

ಆದಿಯಲ್ಲಿ ಹುಟ್ಟಿತಲ್ಲ, ಅನಾದಿಯಲ್ಲಿ ಬೆಳೆಯಿತಲ್ಲ. ಮೂರ್ತಿಯಲ್ಲಿ ನಿಂದುದಲ್ಲ, ಅಮೂರ್ತಿಯಲ್ಲಿ ಭಾವಿಯಲ್ಲ. ಅಱಿವಿನೊಳಗೆ ಅಱಿದುದಲ್ಲ, ಮಱಹಿನೊಳಗೆ ಮಱೆದುದಲ್ಲ. ಎಂತಿರ್ದುದಂತೆ ಬ್ರಹ್ಮ ನೋಡಾ! ಮನ ಮನ ಲೀಯವಾಗಿ, ಘನ ಘನ ಒಂದಾದರೆ, ಮತ್ತೆ ಮನಕ್ಕೆ ವಿಸ್ಮಯವ ಮಾಡಲುಂಟೆ? ಕೂಡಲಚೆನ್ನಸಂಗನ ಶರಣರು ಕಾಯವೆಂಬ ಕಂಥೆಯ ಕಳೆಯದೆ ಬಯಲಾದರೆ, ನಿಜವೆಂದು ಪರಿಣಾಮಿಸ ಬೇಕಲ್ಲದೆ, ಅಂತಿಂತೆನಲುಂಟೆ ಸಂಗನ ಬಸವಣ್ಣ! ೪೦೧-೯೫೮-6-51.

ಇಂತು ಮರುಳು ಶಂಕರದೇವರು ನಿರ್ವಯಲ ಸಮಾಧಿಯನೆಯ್ದಿದ ಮಹಾತ್ಮೆಯನು ಪ್ರಭುದೇವರು, ಬಸವರಾಜದೇವರು, ಚೆನ್ನಬಸವಣ್ಣನು ಮೊದಲಾದ ಎಲ್ಲಾ ಶಿವಗಣಂಗಳು ಕೊಂಡಾಡುತ್ತ ಪರಮಹರುಷಿತರಾಗೆ, ಆ ಪ್ರಭುದೇವರು ಬಸವರಾಜದೇವರು ಪರಿಮಿತದ ಗೃಹಕ್ಕೆ ಬಿಜಯಂಗೆಯ್ದ ಪ್ರಸ್ತಾವದ ವಚನ:

ಮನದೊಡೆಯನೆನ್ನ ಮನೆಗೆ ಬಂದರೆ ಕನಕದ ತೋರಣವ ಕಟ್ಟಿ, ಷಡುಸಮ್ಮಾರ್ಜನೆಯ ಮಾಡಿ, ರಂಗವಾಲಿಯನಿಕ್ಕಿ, ಉಘೇ ಚಾಂಗು ಬೊಲ್ಲಾ ಎಂಬೆನು. ಕೂಡಲಸಂಗಮದೇವಾ, ನಿಮ್ಮ ಶರಣ ಪ್ರಭುದೇವರು ಬಂದರೆ, ಉಬ್ಬಿ ಕೊಬ್ಬಿ ನಲಿದಾಡುವೆನು. ೪೦೨-೯೬೮-11-1.

ಇಂತು ಪ್ರಭುದೇವರು ಬಸವರಾಜದೇವರ ಮಠಕ್ಕೆ ಬಿಜಯಂಗೆಯ್ಯಲು, ಮುತ್ತಿನ ತೋರಣಮಂ ಕಟ್ಟಿ, ದೇವಾಂಗಮಂ ನಡೆಮಡಿಯಂ ಹಾಸಿ, ನವರತ್ನ ಖಚಿತದಿಂ ದೆಸೆವ ಮೇಲುಕಟ್ಟಂ ಕಟ್ಟಿ, ಷಡುಸಮಾರ್ಜನೆ ರಂಗವಾಲಿಯನಿಕ್ಕಿ, ಪಂಚ ಮಹಾವಾದ್ಯಂಗಳೊಡನೆ ಕಳಸಕನ್ನಡಿಯಿಂದಿದಿರುಗೊಂಡು, ಮುತ್ತು ಮಾಣಿಕದಾರತಿಗಳಂ ಪಿಡಿದೆತ್ತಿ ಮಂಗಳಸ್ವರದಿಂ ಪಾಡಿ, ಪರಮಹರ್ಷದಿಂ ಆ ಬಸವರಾಜದೇವರು ಕೈಗುಡೆ, ಮಡಿವಾಳ ಮಾಚಿತಂದೆಗಳು ಪಾಯವಧಾರೆಂದು ಉಗ್ಘಡಿಸೆ, ಸೊಡ್ಡಳ ಬಾಚರಸರ ಹೆಗಲ ಮೇಲೆ ಹಸ್ತಮಂ ಮಡಗಿ, ಚೆನ್ನಬಸವರಾಜದೇವರೊಡನೆ ನಸುನಗೆಯಿಂ ಪ್ರಸಂಗಿಸುತ್ತ ಏಕಾಂತದ ಮಠಕ್ಕೆ ಬಿಜಯಂಗೆಯ್ದು ಮೂರ್ತಿಗೊಂಡಲ್ಲಿ, ಬಸವರಾಜದೇವರು ಆ ಪ್ರಭುದೇವರ ಶ್ರೀ ಪಾದಾರ್ಚನೆಯಂ ಮಾಡಿದ ಪ್ರಸ್ತಾವದ ವಚನ:

ಪರಿಮಿತಕೆ ನಡೆತಂದು, [1]ಹರುಷದ[1] ಸಿಂಹಾಸನದ ಮೇಲೆ ಪರಮಗುರು ಮೂರ್ತಿಗೊಂಡಿರಲು, ಪರಮಾನಂದ ಜಲದಿಂದ ಪಾದಾರ್ಚನೆಯಂ ಮಾಡಿ, ದಿವ್ಯಗಂಧವೆಂಬ ಸುಗಂಧಮಂ ಲೇಪಿಸಿ, ಅಕ್ಷಯವೆಂಬ ಅಕ್ಷತೆಯನಿಟ್ಟು, ಹೃದಯಕಮಲಪುಷ್ಪದಿಂದ ಪೂಜೆಯಂ ಮಾಡಿ, ಜ್ಞಾನವಾಸನೆಯೆಂಬ ಧೂಪಮಂ ಬೀಸಿ, ಸುಜ್ಞಾನವೆಂಬ ದೀಪಾರತಿಯನೆತ್ತಿ, ಭಕ್ತಿರಸಾಯನವೆಂಬ ನೈವೇದ್ಯಮಂ ಸಮರ್ಪಿಸಿ, ಪರಮಹರುಷೋದಕವನೆ ಹಸ್ತಮಜ್ಜನಕ್ಕೆಱೆದು, ತ್ರಿಕರಣಶುದ್ಧವೆಂಬ ತಾಂಬೂಲಮಂ ಕೊಟ್ಟು, ಸಮರಸಸಂಗದಿಂದ ಕೂಡಲಸಂಗಮದೇವರ ಶರಣ ಪ್ರಭುದೇವರ ಕರುಣವೆನಗಾಯಿತ್ತು. ೪೦೩-೯೬೯-11-2.

ಆ ಪ್ರಸ್ತಾವದೊಳು ಬಸವರಾಜದೇವರು ನಿವಾಳಿಯನೆತ್ತುತ್ತ ಪಾಡಿದ ಪ್ರಸ್ತಾವದ ಪದಗಳು:

---

[1] (ಶಿ) ಪರುಷದ (ಅನ್ಯತ್ರ).

ರಾಗ : ಲಳಿತೆ

ಜಯ ಜಯ ಶ್ರೀ ಮಹಾದೇವ ಜಯ ಜಯ ಶ್ರೀ ಮಹಾದೇವ
ಜಯ ಜಯ ಶ್ರೀ ಮಹಾದೇವಗೆ ಶರಣೆಂಬುದೆನ್ನ ಮನವು || ಪಲ್ಲವ ||

ಓಂ ಭೂಃ ಓಂ ಭುವಃ ಎನುತಿಹುದೆನ್ನ ಮನವು
ಭರ್ಗೋದೇವಸ್ಯ ಧೀಮಹಿ ಶರಣೆಂಬುದೆನ್ನ ಮನವು || ೧ ||

ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ
ತಸ್ಮೈ ಶ್ರೀ ಗುರುಲಿಂಗವೇ ಶರಣೆಂಬುದೆನ್ನ ಮನವು || ೨ ||

ಹರರೂಪಂ ಕಾಯಸಂಬಂಧಂ ಗುರುರೂಪಂ ಪ್ರಾಣ ಸಂಯುತಂ
ಅಶರೀರಾತ್ಮ ಸಂಬಂಧಂ ಗುರುಶಿಷ್ಯಮನುಗ್ರಹವೆಂದುದಾಗಿ || ೩ ||

ದೀರ್ಘದಂಡನಮಸ್ಕಾರಂ ನಿರ್ಲಜ್ಜಂ ಗುರುಸನ್ನಿಧೌ
ಶರೀರಪ್ರಾಣಮರ್ಥಂಚ ಸದ್‌ಗುರುಭ್ಯೋ ನಿವೇದಯೇತ್ || ೪ ||

ಭವರೋಗವೈದ್ಯನೆಂದು ನಂಬಿ ಮಱವೊಕ್ಕೆನು
ಕೂಡಲಸಂಗಮದೇವಗೆ ಶರಣೆಂಬುದೆನ್ನ ಮನವು || ೫ ||

ಅಂತು ಪದಂಗಳು ಸಹ ವಚನ ೪೦೮.

ಇಂತು ಬಸವರಾಜದೇವರು ಪ್ರಭುದೇವರಿಗೆ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಿಂದ ಅಭಿವಂದಿಸಲು, ಅಲ್ಲಿ ಚಿಕ್ಕದಣ್ಣಾಯಕರು ಪ್ರಭುದೇವರಿಗೆ ಶರಣೆಂದು ಪಾದಾರ್ಚನೆಯಂ ಮಾಡಿ, ಆ ಪಾದೋದಕವಂ ಕೊಂಬ ಪ್ರಸ್ತಾವದ ವಚನ :

ನಿತ್ಯನೆಂಬ ಭಕ್ತನ ಮನೆಗೆ ಘನಚೈತನ್ಯನೆಂಬ ಜಂಗಮ ಬಂದರೆ, ಜಲವಿಲ್ಲದ ಜಲದಲ್ಲಿ ಪಾದಾರ್ಚನೆಯ ಮಾಡಿದರೆ, ಆ ಪಾದೋದಕವೆ ಮಹಾಪಾದೋದಕವಯ್ಯ :

ಸ್ವೇಚ್ಛಾನಂದಂ ಜಲಂ ನೀತ್ವಾ ಪ್ರಕ್ಷಾಲ್ಯ ಚರಪಾದುಕಾಂ
ತತ್‌ಪಾದೋದಕಂ ಪೀತ್ವಾ ಸ ಮುಕ್ತೋ ನಾತ್ರ ಸಂಶಯಃ

ಇಂತೆಂದುದಾಗಿ, ಆ ಪಾದೋದಕವ ಕೊಂಡು, ಪರಿಣಾಮಿಸಿದೆನಯ್ಯ ಕೂಡಲ ಚೆನ್ನಸಂಗಮದೇವ. ೪೦೯-೯೮೫-11-8.

ಮತ್ತಂ ಅಷ್ಟವಿಧಾರ್ಚನೆಯ ಮಾಡುವ ಪ್ರಸ್ತಾವದ ವಚನ :

ಅಂಗದ ಮೇಲೆ ಲಿಂಗವುಳ್ಳುದೆಲ್ಲವೂ ಸಂಗಮನಾಥನೆಂಬ ಭಾವ ಸಂಗನ ಬಸವಣ್ಣಂಗಾಯಿತ್ತಲ್ಲದೆ—ಎನಗಾ ಭಾವವಿಲ್ಲ ನೋಡಾ. ಲಿಂಗೈಕ್ಯ ಶರಣರ ಕಂಡರೆ, ನಂಬಿ ನಚ್ಚಿ ಅವರ ಪಾದಕ್ಕೆಱಗುವುದೆನ್ನ ಮನವು. ಅವರ ಕಂಡರೆ ಕರುಣಾಮೃತ ಸುರಿವುದೆನಗೆ. ಅವರ ಪಾದಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವುದೆನ್ನ ಮನವು. ಕೂಡಲ

ಚೆನ್ನಸಂಗಮದೇವ, ನಿಮ್ಮ ಪ್ರಭುವೆಂಬ ಜಂಗಮವ ಕಂಡು ಪೂಜಿಸಿ ಪೂಜಿಸಿ ದಣಿಯದು ಎನ್ನ ಮನವು. ೪೧೧೦-೯೪೭-11-9.

ಚಿಕ್ಕದಣ್ಣಾಯಕರು ಅಷ್ಟವಿಧಾರ್ಚನೆಯಂ ಮಾಡುತ್ತ ಪ್ರಭುದೇವರಿಗೆ ಮಂಗಳಾರತಿಯನೆತ್ತುವ ಪ್ರಸ್ತಾವದ ಪದಂಗಳು :

ರಾಗ : ಲಳಿತೆ

ಮಂಗಳವ ಪಾಡುವೆ ಚೆನ್ನಸಂಗಮದೇವಂಗೆ
ಶರಣ ಮುಖಲಿಂಗವ ಸುಖದಿಂದ ನೋಡುತ || ಪಲ್ಲವ ||

ತನ್ನಹಂಕಾರಾದಿ ಗುಣಂಗಳೆಲ್ಲವ ಮಱೆದು ಕಳೆದು
ಲಿಂಗದಲ್ಲಿ ಸಂಗಿಯಾಗಿ ಸಂಗನಾದ ಆ ಲಿಂಗವು
ತನ್ನ ಸರ್ವಾಂಗ ತತ್ವವು ಮಹತ್ತ್ವಾದಿ ಗುಣಂಗಳೆಲ್ಲವ
ಮಱೆದು ಆ ಶರಣನಲ್ಲಿಗೆ ಸಂಗನಾದ || ೧ ||

ತಾನಾಗೇನುವ ಕಾಮಿಸುವನಲ್ಲ ಲಿಂಗ-
ಪ್ರೇರಣೆಯಿಂದಲ್ಲಿ ಬಂದಡೆ ಬಂದಿತ್ತು
ಏನಾದಡೆಯೂ ಸಕಲಸಂಬಂಧ ಸಹಿತ-
ಲಿಂಗದಲ್ಲಿ ಅನುಗ್ರಹಿಸಿ ಸಂಗನಾದ || ೨ ||

ಆವಾದ ಪದಾರ್ಥ ತನ್ನ ಕಾಮಿಸಿ
ಬಂದುದ ಲಿಂಗದೇವಂಗತ್ತವೇ ಮುನ್ನವೇ
ತಿದ್ದುವ ತಾನು ಲಿಂಗದಲ್ಲಿ ಮುನ್ನವೆ
ಸಂದು ಬಂದುದನೆಲ್ಲವನಾನಂದದಿಂದಲ್ಲಲ್ಲಿಯೆ ಸಂಗಿಸುವ || ೩ ||

ತನ್ನ ಮನವು ಲಿಂಗ ಸಂಗ, ನಯನಾದಿಗಳಿಗೆ
ಅಲ್ಲಿಯೇ ಸಂಗ, ಪ್ರಾಣಕ್ಕೆ ಲಿಂಗ ನಿಕ್ಷೇಪಸಂಗ
ಆತನೆಲ್ಲಿಗೆ ಸಂಗವ ಮಾಡಿದಲ್ಲಿಗೆ ಕೂಡೆ
ಸಂಗ, ಲಿಂಗದಲ್ಲಿ ನಿರಂತರ ಸಂಗನಾದ || ೪ ||

ನಿರುಪಾಧಿಕ ಲಿಂಗದಲ್ಲಿ ತಾನುಪಾಧಿಯವಧಿಯೆಂಬ
ಸೋಪಾಧಿಕ ಸಂಗವ ಸಮನಿಸುವನಲ್ಲ
ದೇವಲೋಕ ಮರ್ತ್ಯಲೋಕವೆಂಬಸತ್ಯವಱಿಯದನ್ಯ
ಸೀಮೆ [+ ಯ] ಶರಣ ಕೂಡಲಚೆನ್ನಸಂಗನಾದ || ೫ ||

ಅಂತು ಪದಂಗಳು ಸಹಿತ ವಚನ ೪೧೫.

ಇಂತು ಚಿಕ್ಕದಣ್ಣಾಯಕರು ಪ್ರಭುದೇವರಿಗೆ ಅಷ್ಟವಿಧಾರ್ಚನೆ ಷೋಡಶೋಪಚಾರ ದಿಂದ ಪೂಜೆಯ ಮಾಡಿ ಪರಮಹರುಷಿತೆಯನೆಯ್ದಿದ ತದನಂತರ, ಮಡಿವಾಳ ಮಾಚಿ ತಂದೆಗಳು ಪ್ರಭುದೇವರ ಶ್ರೀ ಪಾದಾರ್ಚನೆಯಂ ಮಾಡುವ ಪ್ರಸ್ತಾವ :

ಸತ್ತು-ಚಿತ್ತು-ಆನಂದ-ನಿತ್ಯ-ಪರಿಪೂರ್ಣವೆಂಬರು. ನಾನದ ಮನದಲ್ಲಿ ಹಿಡಿದು ಮಾತಾಡುವನಲ್ಲ. ಸತ್ತೇ ಗುರು, ಚಿತ್ತೇ ಲಿಂಗ, ಆನಂದವೇ ಜಂಗಮ; ನಿತ್ಯವೇ ಪ್ರಸಾದ, ಪರಿಪೂರ್ಣವೇ ಪಾದೋದಕವೆಂಬುದನವಗ್ರಹಿಸಿ, ನಿಮ್ಮ ಜಂಗಮಕ್ಕೆ ಭಕ್ತನಾದೆನಯ್ಯ. ನಿತ್ಯನಾಗಿ ನಿಮ್ಮ ಜಂಗಮಕ್ಕೆ ವಂದಿಸುವೆ, ಆನಂದದಿಂದ ನಿಮ್ಮ ಜಂಗಮದ ಪಾದೋದಕವ ಕೊಂಬೆ, ಪರಿಪೂರ್ಣನಾಗಿ ನಿಮ್ಮನರ್ಚಿಸಿ ಪೂಜಿಸಿ ಪರವಶನಪ್ಪೆ ನಾನು. ಭಕ್ತಿಪ್ರಸಾದ-ಮುಕ್ತಿಪ್ರಸಾದ-ನಿತ್ಯಪ್ರಸಾದವ ನಿಮ್ಮ ಜಂಗಮದಲ್ಲಿ ವರವ ಹಡೆದೆ, ಕಲಿದೇವರದೇವ, ನಿಮ್ಮ ಶರಣ ಪ್ರಭುದೇವರ ಶ್ರೀಪಾದದಲ್ಲಿ ಮನಮಗ್ನವಾಗಿರ್ದೆನಯ್ಯ. ೪೧೬-೯೧-11-15.

ಇಂತು ಮಡಿವಾಳಮಾಚಿ ತಂದೆಗಳು ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಪ್ರಭುದೇವರನರ್ಚಿಸಿದ ತದನಂತರದಲ್ಲಿ, ಸೊಡ್ಡಳಬಾಚರಸರು ಬಂದು ಪೂಜಿಸುವ ಪ್ರಸ್ತಾವದ ವಚನ :

ಏಕಮೇವ ನ ದ್ವಿತೀಯಂ ಬ್ರಹ್ಮವೆಂಬ ಘನಮಹಿಮನ ಕಂಡ ಕಾಣಿಕೆಯಲ್ಲಿ ಮನ ಮನ ಬೆರಸಿ, ತನುತನು ಕರಗಿ, ಕರಣಂಗಳೆಲ್ಲಾ ತರಹರವಾದವಯ್ಯ—

> ದೀರ್ಘದಂಡ ನಮಸ್ಕಾರಂ ನಿರ್ಲಜ್ಜಂ ಗುರುಸನ್ನಿಧೌ।
> ಶರೀರಮರ್ಥಂ ಪ್ರಾಣಂ ಚ ಸದ್‍ಗುರುಭ್ಯೋ ನಿವೇದಯೇತ್ ॥

ಎಂದುದಾಗಿ ನಿಮಗೆ ಶರಣುವೊಕ್ಕೆ ನಾನು. ಎನ್ನ ಶಿರ ನಿಮ್ಮ ಚರಣದಲ್ಲಿ ಬಿಡಿಸ ಬಾರದ ಸಂಗ. ಮಹಾದಾನಿ ಸೊಡ್ಡಳನ ಶರಣ ಪ್ರಭುದೇವರ ಕಂಡು-ಎನ್ನ ಭವದ ಬಳ್ಳಿಯ ಬೇರು ಹಱಿಯಿತ್ತಯ್ಯ. ೪೧೭-೯೨-11-16. ಮತ್ತಂ :

ನಿತ್ಯನಿಜತತ್ವವು ಭಕ್ತಿಕಂಪಿತವಾಗಿ ಎನ್ನತ್ತ ತಿರುಗಿತ್ತು. ವತ್ಸಂ ಗೌರಿವ ಗೌರೀಶಃ ಎಂಬ ಶ್ರುತಿಯ ತೋಱಲೆಂದು, ಎನಗೆ ಕೃಪೆಯಾಗಿ, ತನ್ನ ಶ್ರೀಪಾದವ ತೋಱಿ ದನು. ಜಯ ಜಯ ಶ್ರೀ ಮಹಾದೇವ, ಜಯ ಜಯ ಶ್ರೀ ಮಹಾದೇವ, ಗುರುವೇ ನಮೋ ನಮೋ. ಎನ್ನ ಪರಮಗುರುವೇ ನಮೋ ನಮೋ. ಎನ್ನ ಭವಬಂಧನಂಗಳ ಬಿಡಿಸಿದೆಯಾಗಿ— ಗುರುವೇ ನಮೋ ನಮೋ. ಎನ್ನ ಮಹಾದಾನಿ ಸೊಡ್ಡಳ—ನಿಮ್ಮ ಶರಣ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನು. ೪೧೮-೯೩-11-17.

ಇಂತು ಸೊಡ್ಡಳಬಾಚರಸರು ಪ್ರಭುದೇವರ ಶ್ರೀಪಾದವನರ್ಚಿಸಿ ಪೂಜಿಸಿ ಆಡಿ ಹಾಡಿ ಮನದಣಿಯ ಭಕ್ತಿಯ ಮಾಡಿದ ತದನಂತರ, ಹಡಪದಪ್ಪಣ್ಣಂಗಳು ಬಂದು ಪೂಜಿಸುವ ಪ್ರಸ್ತಾವದ ವಚನ :

ಮನಕ್ಕೆ ಮನೋಹರ ಒಂದಾಗಿ, ಭಾವಕ್ಕೆ ಭಾವ ಒಂದಾಗಿ, ನಚ್ಚಿಮಚ್ಚಿದ ಶರಣರ ದರುಶನವಾದ ಬಳಿಕ ಎತ್ತಲೆಂದಱಿಯೆನಯ್ಯ—ಲೌಕಿಕವ. ಬಸವಪ್ರಿಯ ಕೂಡಲಚೆನ್ನಸಂಗ, ನಿಮ್ಮ ಶರಣ ಪ್ರಭುದೇವರಿಗೆ ಶರಣು ಶರಣೆಂಬುದಲ್ಲದೆ, ಅನ್ಯವನೇನೆಂದೂ ಅಱಿಯೆನು. ೪೧೯-೯೯೪-11-18.

ಇಂತು ಅಸಂಖ್ಯಾತರೆಲ್ಲರೂ ಬಂದು ಪ್ರಭುದೇವರ ದರುಶನವಾಗಿ, ಪಾದಾಕ್ರಾಂತರಾಗಿ ಅರ್ಚಿಸಿ, ಪೂಜಿಸಿ, ವರಂಬಡೆದು ಸುಖಸಂಕಥಾ ವಿನೋದದಿಂದ ಪ್ರಭುದೇವರಿಂಗೋಲಗಂಗೊಟ್ಟು ಇರೆ—ಆ ಮಹಾಗಣಂಗಳ ತಿಂಥಿಣಿಯನು ಬಸವರಾಜದೇವರು ನೋಡಿ ಹೃದಯಕಮಲವರಳಿ, ಹಾರೈಸಿ ಪೂರೈಸಿ, ಪರಮಾನಂದದಿಂದ ಕುಣಿದಾಡುತ್ತಿದ್ದ ಪ್ರಸ್ತಾವದ ವಚನ :

[1]ಶಶಿಯ[1] ಮೇಲೆ ಸಾಗರವರಿದಂತಾಯಿತಯ್ಯ—ಎನ್ನ ಭಕ್ತಿ. ಆನಂದದಿಂದ ಕುಣಿಕುಣಿದಾಡುವೆ. ಕೂಡಲಸಂಗನ ಶರಣರು ಬಂದರೆ ಉಬ್ಬಿ ಕೊಬ್ಬಿ ನಲಿದಾಡುವೆ. ೪೨೦-೯೯೫-7-1. ಮತ್ತಂ :

ನಿಮ್ಮ ಶರಣರ ಸಂಗದ ಸುಖವನೇನೆಂದೆಂಬೆನು! ನಿಮ್ಮ ಶರಣರ ಕೂಡೆ ಸುಖಸಮಗೋಷ್ಠಿಯ ಮಾಡುವ ಸುಖವನುಪಮಿಸಲಮ್ಮೆನಯ್ಯ. ಕೂಡಲ ಸಂಗ, ನಿಮ್ಮ ಪ್ರಮಥರೆಲ್ಲರೂ ನೆರೆದ ಗಣತಿಂಥಿಣಿಯೊಳಗೆನ್ನನೆಂದೂ ಅಗಲದಂತಿರಿಸಯ್ಯ. ನಾ ನಿಮ್ಮ ಧರ್ಮದ ಕವಿಲೆ. ೪೨೧-೧೦೦೪-7-2. ಮತ್ತಂ :

ಅಯ್ಯ, ನಿಮ್ಮ ಮಹಾನುಭಾವಿಗಳ ಸಂಗದಿಂದೆನ್ನ ತನು ಶುದ್ಧವಾಯಿತ್ತು, ಮನಶುದ್ಧವಾಯಿತ್ತು, ಎನ್ನ ಸರ್ವಾಂಗ ಶುದ್ಧವಾಯಿತ್ತು. [2]ಆಲಿಕಲ್ಲ[2] ಪುತ್ಥಳಿಯ ನಪ್ಪಿದಂತಾಯಿತ್ತು. ಕೂಡಲಸಂಗಮದೇವ, ನಿಮ್ಮ ಶರಣ ಪ್ರಭುದೇವರ ಕೃಪೆಯಿಂದ ಎನಗೊದಗಿದ ಘನವನೇನೆಂದು ಹೇಳುವೆನು. ೪೨೨-೧೦೦೫-7-3.

ಹೀಂಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರದ ವಚನ :

ಕಾಯಗೊಂಡು ಹುಟ್ಟಿದವರು ದೇವರಾದಡಾಗಲಿ, ಈವರಾದಡಾಗಲಿ, ಮಾಯೆಯ ಸಾಧಿಸಿ ಗೆಲುವುದರಿದು ನೋಡಾ. ಮನದ ತಮಂಧವ ಗೆಲಿದು ಸುಖಿಯಾದ ಹೆಸೆಂಬವರ ಬೆಂಬತ್ತಿ ಕಾಡಿತ್ತು ಕರ್ಮ, ಗೊಗೇಶ್ವರ ಲಿಂಗವ ಕಿಱುಕಿಱಿದಾಗಿ ನೆನೆದರೆ, ಹಿರಿಹಿರಿದಾಗಿ [3]ಕಾಡಿಹುದು[3] ಮಱಹು. ಸಂಗನ ಬಸವಣ್ಣ, ನೀ ನೆನೆದನೆನಹು ಆರಂತಹುದೂ ಅಲ್ಲ ನೋಡಾ. ೪೨೩-೧೦೦೬-7-4.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ :

---

[1] (ಶಿ) (ಗೂ) ಸಸಿಯ (ದೇ) ಸಾಸವೆಯ (ಹ). [2] (ಶಿ) ವಾರಿಕಲ್ಲ (ಹದೇ) (ಗೂ).
[3] (ಶಿ) ಕಾಡೂದು (ದೇ) ಕಾಡದು (ಹ).

ಕರಿ ಘನ, ಅಂಕುಶ ಕಿಱಿದೆನ್ನಬಹುದೇ ಅಯ್ಯ? ಗಿರಿ ಘನ, ವಜ್ರ ಕಿಱಿದೆನ್ನಬಹುದೇ ಅಯ್ಯ? ತಮಂಧ ಘನ, ಜ್ಯೋತಿ ಕಿಱಿದೆನ್ನಬಹುದೇ ಅಯ್ಯ? ಮಱಹು ಘನ, ನಿಮ್ಮ ನೆನಹು ಕಿಱಿದೆನ್ನಬಹುದೇ ಅಯ್ಯ? ಕೂಡಲಸಂಗಮದೇವ, ನಿಮ್ಮ ಕೃಪೆಯ ಘನವ ನೀವೇ ಬಲ್ಲಿರಿ. ೪೨೪-೧೦೦೭-7-5.

ನಿಮ್ಮ ಸ್ಮರಣೆಯ ಘನದ ಮುಂದೆ ಮಾಯೆ ನಿಲಲಱಿಯದು. ನಿಮ್ಮ ನೆನಹ ಮೀಱಿಹ ಘನವಿಲ್ಲೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ನೆನೆದಹೆನೆಂದರೆ ಮನಕ್ಕೆ ಸಿಲುಕದು, ಅಱಿದಹೆನೆಂದರೆ ಕುಱುಹಿಂಗೆ ಬಾರದು. ಕಂಡಹೆನೆಂದರೆ ಮೂರ್ತಿಯಲ್ಲ. ತನುವಿನೊಳಗಿಲ್ಲ. ಮನದೊಳಗಿಲ್ಲದ ಘನವು ನಿಮ್ಮ ಮನಕ್ಕೆ ವೇದ್ಯವಾದ ಪರಿಯೆಂತಯ್ಯ? ಗೊಗೇಶ್ವರನೆಂಬ ಲಿಂಗವು ಜಗದ ಕಣ್ಣಲಿ ಕತ್ತಲೆಯ ಕವಿಸಿ, ತನ್ನ ತಪ್ಪಿಸಿ ಕೊಂಡಿಪ್ಪ ಭೇದ-ನಿನ್ನೊಳಡಗಿದ ಪರಿ ಎಂತು ಹೇಳಾ ಸಂಗನ ಬಸವಣ್ಣ? ೪೨೫-೧೦೦೮-7-6.

ವಾಙ್ಮನೋತೀತವಾದ ವಸ್ತು ನಿನ್ನ ಮನದೊಳಡಗಿದ ಪರಿ ಎಂತೆಂದು ಪ್ರಭುದೇವರು ಬೆಸಗೊಳಲು, ಅಲ್ಲಿ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯ. ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯ. ನೀನು ಜಗಕ್ಕೆ ಬಲ್ಲಿದನು, ನಿನಗೆ ನಾನು ಬಲ್ಲಿದನು ಕಂಡಯ್ಯ. ಕರಿಯು ಕನ್ನಡಿಯೊಳಡಗುವಂತೆಯಯ್ಯ—ಎನ್ನೊಳಡಗಿದೆ ಕೂಡಲಸಂಗಮದೇವ. ೪೨೬-೧೦೦೯-7-7.

ನೀನು ಮಹಾಘನಪರತತ್ವವಾದಡೇನು, ಎನ್ನ ಸೂಕ್ಷ್ಮವಪ್ಪ ಅಂತರಂಗದೊಳಗೆ ಅಡಗಿದಿರೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಅಂತರಂಗದಲಡಗಿತ್ತೆಂದರೆ ಭಾವಕ್ಕೆ ಪೂಜ್ಯವಲ್ಲ. ಬಹಿರಂಗದಲಡಗಿತ್ತೆಂದರೆ ಕ್ರಿಯಾಬದ್ಧವಲ್ಲ. ಅಱಿವಿನಲಡಗಿತ್ತೆಂದರೆ [1]ಮತಿಗೆ[1] ಹವಣಲ್ಲ. ಭಾವ-ನಿರ್ಭಾವ-ನಿಶ್ಶೂನ್ಯವನು ಕಾಬ ಪರಿಯೆಂತು ಹೇಳಾ? ಕಂಡು ತನ್ನೊಳಗಿಂಬಿಟ್ಟುಕೊಂಬ ಪರಿಯೆಂತು ಹೇಳಾ? ಗೊಗೇಶ್ವರನೆಂಬ ಲಿಂಗವನಱಿದು ಕೂಡಿ ಸುಖಿಯಹ, ಪರಿಯೆಂತು ಹೇಳಾ ಸಂಗನ ಬಸವಣ್ಣ. ೪೨೭-೧೦೧೦-7-8.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಎನ್ನ ತನು-ಮನವೆಂಬೆರಡನೂ ಗುರು ಕಳೆದು ಏಕವ ಮಾಡಿದನಾಗಿ, ಎನ್ನಂತರಂಗ-ಬಹಿರಂಗವೆಂಬೆರಡೂ ನಿಮ್ಮವು ನೋಡಾ. ನಿಮ್ಮ ಅಂತರಂಗದೊಳಗೆ ನಿಮ್ಮ ನಿಂಬಿಟ್ಟುಕೊಂಬೆ. ನಿಮ್ಮ ಬಹಿರಂಗದಲ್ಲಿ ನಿಮ್ಮನೇ ನೀವಾಗಿ ಪೂಜಿಸುವೆ.

[1] (ಶಿಗೂ) ಮಾತಿಗೆ (ಹ).

ನಿಮ್ಮ ಅಱುವಿನಿಂದ ನಿಮ್ಮನೇ ಅಱುವೆ—ಕಾಣಾ ಕೂಡಲಸಂಗಮದೇವ. ೪೨೮-೧೦೧೧-7-9.

ಹೀಂಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಸಂಗವಿಂದಾಯಿತ್ತು ತನು. ಆ ತನುವಿನಿಂದಾಯಿತ್ತು ಮಱವೆ. ಆ ಮಱವೆಯಿಂದಾಯಿತ್ತು ನೋಡಾ ನೀ-ನಾನೆಂಬುದು. ನೀನೆಂಬ ಬಹಿರಂಗನಂತಿರಲಿ, ನಾನೆಂಬ ಅಂತರಂಗನಂತಿರಲಿ—ಈ ಉಭಯ ಭಾವವಲ್ಲನೆ, ನಿನ್ನಿಂದ ನಿನ್ನನಱುದೆನೆಂಬುದು ವಿಪರೀತ ಭಾವ. ಈ ಅಱುವು-ಮಱವೆಯಾಟದ ಭ್ರಾಂತು ಬಿಡದು. ಗೊಗೇಶ್ವರ ಲಿಂಗವು ನಿನ್ನಲ್ಲಿ ನಿಂದ ಪರಿಯೆಂತು ಹೇಳಾ ಸಂಗನ ಬಸವಣ್ಣ? ೪೨೯-೧೦೧೨-7-10.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

[1]ಮರುಳು[1]-ತಲೆ, [2]ಹುರುಳು[2]-ತಲೆ ನೀನೆ ದೇವ. ಹೆಂಗೂಸು ಗಂಡುಗೂಸು ನೀನೆ ದೇವ. ಎಮ್ಮಕ್ಕನ ಗಂಡನೂ ನೀನೆ ದೇವ—ಕೂಡಲಸಂಗಮದೇವ, ಭ್ರಾಂತಳಿದು ಭಾವ ನೆಲೆಗೊಂಡಿತ್ತಾಗಿ. ೪೩೦-೧೦೧೩-7-11.

ಎನ್ನಱುವು ಮಱವೆಯೂ, ಎನ್ನ ಶಕ್ತಿ-ಶಿವಾತ್ಮ ತತ್ತ್ವವೂ ನೀನೆಯಲ್ಲದೆ ಅನ್ಯತ್ರವಿಲ್ಲ. ಎನ್ನ ಸುಜ್ಞಾನಶಕ್ತಿಯಲ್ಲಿ ಭೋಗೋಪಭೋಗಿಯಾಗಿ ನೀನಲ್ಲದೆ ಇಲ್ಲ. ಎನ್ನ ಭ್ರಾಂತಳಿದ ಭಾವವು ನೀನೆಯಲ್ಲದೆ ಇಲ್ಲವೆಂದು ಬಸವರಾಜದೇವರು ಬಿನ್ನೈಸಲು ಇವಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಅಜ್ಞಾನ-ಸುಜ್ಞಾನಂಗಳೆರಡೂ ಶಿವನೆಂದರೆ, ಶಿವಜ್ಞಾನಿಗಳು ಮೆಚ್ಚುವರೆ? ಶಿವ-ಶಕ್ತಿಗಳೆರಡೂ ನೀನೆ ಎಂದರೆ, ಮಹಾನುಭಾವಿಗಳು ಪರಿಣಾಮಿಸುವರೇ? ತನ್ನ ತಾನಾರೆಂಬುದನಱಯದೆ, ಅನ್ಯವೆಲ್ಲವೂ ಬೊಮ್ಮವೆಂಬ ಈ ಕರ್ಮದ ನುಡಿಯನು ಮೆಚ್ಚುವನೇ ನಮ್ಮ ಗೊಗೇಶ್ವರ ಲಿಂಗವು? ೪೩೧-೧೦೧೪-7-12.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಅಱುವುವಿಡಿದು, ಅಱುವನಱುದು, ಅಱುವೆ ನೀನೆಂಬ ಭ್ರಾಂತು ಎನಗಿಲ್ಲವಯ್ಯ. ಅಱುವುವಿಡಿದು, ಮಱಹ ಮಱೆದು, ಮಱಹು ನೀನೆಂಬ ಮಱಹಿನವ ನಾನಲ್ಲವಯ್ಯ. ದೇಹ-ಪ್ರಾಣಂಗಳ ಹಿಂಗಿ, ದೇಹವಿಡಿದು, ದೇಹ ನಿಮ್ಮದೆಂಬ ಭ್ರಾಂತುಸೂತಕಿ ಆನಲ್ಲವಯ್ಯ. ನಿಮ್ಮ ಅಱುದ ಅಱುವ ಭಿನ್ನವಿಟ್ಟು ಕಂಡೆನಾದರೆ, ನಿಮ್ಮಾಣೆ ಕಾಣಾ ಕೂಡಲಸಂಗಮದೇವ. ೪೩೨-೧೦೧೫-7-3.

ಈ ವಚನದ ತಾತ್ಪರ್ಯಾರ್ಥವ ಕೇಳಿದ ಪ್ರಭುದೇವರು—ದೇವ-ಭಕ್ತನೆಂಬ

[1] (ದೇಗೂ) ಮರುಳ (ಶಿಪ). [2] (ದೇಗೂ) ಹುರುಳ (ಶಿಪ).

ನಾಮಂಗಳೆರಡೂ ನಿಮ್ಮಲ್ಲಿ ತೋಱುತ್ತಿದಾವೆ, ಇವು ಅಡಗಿದ ಪರಿ ಎಹಂಗೆಂದು ಬೆಸಗೊಂಬ ಪ್ರಸ್ತಾವದ ವಚನ:

ಕಾಯವಿಡಿದು ಲಿಂಗವಿದೆ, ಲಿಂಗವಿಡಿದು ಕಾಯವಿದೆ. ಅಱಿವುವಿಡಿದು ವಚನವಿದೆ, ವಚನದಿಂದ ತೋಱುವ ಅಱಿವಿದೆ. ಲಿಂಗಾಂಗವೆರಡೂ ನಿಮ್ಮಲ್ಲಿ ಐಕ್ಯವಾದ ಪರಿ ಎಂತು ಹೇಳಾ? ಸ್ವರವಿಡಿದು ಶಬುದ ಸಮರಸವಾದ ಪರಿ ಎಂತು ಹೇಳಾ? ದೇವ-ಭಕ್ತನೆಂಬ ನಾಮ-ಸೀಮಯಡಗಿ, ಗೊಗೇಶ್ವರಲಿಂಗದಲ್ಲಿ ತದುಗತವಾಗಿದ್ದ ಪರಿ ಎಂತು ಹೇಳಾ ಸಂಗನ ಬಸವಣ್ಣ. ೪೩೩-೧೦೧೬-7-14.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಘನಗಂಭೀರ ಮಹಾಘನದೊಳಗೆ ಘನಕ್ಕೆ ಘನವಾಗಿರ್ದೆನಯ್ಯ. ಕೂಡಲಸಂಗಯ್ಯನೆಂಬ ಬೆಳಗಿನೊಳಗೆ ಬೆಳಗಾಗಿ ಇದ್ದು, ಶಬ್ದಮುಗ್ಧವಾದುದನೇನೆಂಬೆನಯ್ಯ. ೪೩೪-೧೦೧೭-7-15.

ಹೀಂಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ಪ್ರಸನ್ನರಾಗಿ, ಆ ಬಸವರಾಜದೇವರ ಸ್ತೋತ್ರವ ಮಾಡುವ ಪ್ರಸ್ತಾವದ ವಚನ :

ಆದಿಯ ಲಿಂಗವ ತೋಱಿದ ಅನಿಮಿಷನ ಕಂಡೆನಯ್ಯ-ಇಂದು. ಕೃತಯುಗದ ಸ್ಕಂದನೆಂಬ ಗಣೇಶ್ವರನ ಕಂಡೆನಯ್ಯ ಇಂದು. ತ್ರೇತಾಯುಗದ ನೀಲಲೋಹಿತನೆಂಬ ಗಣೇಶ್ವರನ ಕಂಡೆನಯ್ಯ ಇಂದು. ದ್ವಾಪರಯುಗದ ವೃಷಭನೆಂಬ ಗಣೇಶ್ವರನ ಕಂಡೆನಯ್ಯ ಇಂದು. ಕಲಿಯುಗದಲ್ಲಿ [1]ಜಂಗಮದಲ್ಲಿ[1] ಅನಿಮಿಷ ಬಸವನೆಂಬ ಗಣೇಶ್ವರನ ಕಂಡೆನಯ್ಯ ಇಂದು. ಎನ್ನ ಕಂಡವರನು, ನಿನ್ನ ಕಂಡವರನು, ಇಂದು ಕಂಡೆನು ಕಾಣಾ ಗೊಗೇಶ್ವರ. ೪೩೫-೧೦೧೮-7-16.

ಇಂತು ಪ್ರಭುದೇವರು ಬಸವರಾಜದೇವರ ಸ್ತೋತ್ರಮಂ ಮಾಡಲು, ಆ ಬಸವರಾಜದೇವರು ಪ್ರಭುದೇವರ ಸ್ತೋತ್ರಮಂ ಮಾಡುತ್ತಿದ್ದ ಪ್ರಸ್ತಾವದ ವಚನ:

ಮರುಗದ ಗಿಡುವಿನಂತೆ ಹುಟ್ಟುತ್ತವೆ ಪರಿಮಳ. [2]ಎರವಿನ ಬಣ್ಣವ ದೊರೆಗೇಱಿಸಿದ[2] ಪರಿಯ ನೋಡಾ. ಹರನ ಪ್ರೇರಣೆಯೊಳಗೆ, ಹಿರಿದೊಂದು ವಾರಿಧಿಯೊಳಗಣ ಕಮಲ ಬಾಡಿ, ಕಮಲದೊಳಗೆ ಸುಳಿವ ಭ್ರಮರನ ಪಕ್ಕ ಮುಱಿದುರುಳಿದರೆ, ನಿರಂಜನವಾಯಿತು ನೋಡಾ! ಹಱಿಗೊಯ್ದು ಮಿಂಚಿನ ಗೊಂಚಲ ನೆಱೆ ಓತು, ಇಂದು-ಕೋಟಿ ಪ್ರಭೆಯ ಶಾಂತಿಯನೊಳಕೊಂಡು, ಕೂಡಲಸಂಗಮದೇವರ ನೆಱೆ ಓತು, ಪ್ರಭುದೇವರ ಶ್ರೀಪಾದ ಪದ್ಮದಲ್ಲಿ ನಾನು ಭೃಂಗನಾಗಿ ಬದುಕಿದೆನು. ೪೩೬-೧೦೧೯-7-17.

ಹೀಂಗೆಂದು ಬಸವರಾಜದೇವರು ಸ್ತೋತ್ರಮಂ ಮಾಡುತ್ತಿರಲು, ಇದಕ್ಕೆ ಪ್ರಭುದೇವರು—ಆ ಬಸವರಾಜದೇವರ ಕೊಂಡಾಡಿ ನಿರೂಪಿಸಿದ ಪ್ರಸ್ತಾವದ ವಚನ :

---

[1] (ಶಿಹ) X (ಗೂ) ಜಂಗಮಲಿಂಗದಲ್ಲಿ (ದೇ). [2] (ಶಿ) ಎರವಿನ ಬಣ್ಣ ದೊರೆಗೆಡಿಸಿದ (ದೇ) (ಗೂ) ಇರವಿನ ಬಣ್ಣ ದೊರೆಗೆಡಿಸಿದ (ಹ).

ಆಯಿತ್ತು ಬಸವ, ನಿನ್ನಿಂದ ಗುರುಸ್ವಾಯತವೆನಗೆ. ಆಯಿತ್ತು ಬಸವ, ನಿನ್ನಿಂದ ಲಿಂಗಸ್ವಾಯತವೆನಗೆ. ಆಯಿತ್ತು ಬಸವ, ನಿನ್ನಿಂದ ಜಂಗಮಸ್ವಾಯತವೆನಗೆ. ಆಯಿತ್ತು ಬಸವ, ನಿನ್ನಿಂದ ಪ್ರಸಾದ ಸ್ವಾಯತವೆನಗೆ. ಇಂತೀ ಚತುರ್ವಿಧ ಸ್ವಾಯತವನೂ ನೀನೆ ಮಾಡಿವೆಯಾಗಿ, ನಮ್ಮ ಗೊಗೇಶ್ವರಲಿಂಗಕ್ಕೆ ವಿಳಾಸವಾದೆಯಲ್ಲೈ ಸಂಗನ ಬಸವಣ್ಣಾ. ೪೩೭-೧೦೨೦-7-18.

ಇಂತು ಪ್ರಭುದೇವರು—ಬಸವರಾಜದೇವರಿಂದ ಸರ್ವಸ್ವಾಯತವನು ಪಡೆದು ಕೃತಾರ್ಥನಾದೆನೆಂದು, ಆ ಬಸವರಾಜದೇವರೊಡನೆ ನಿರೂಪವ ಕೊಡಲು, ಇದಕ್ಕೆ ಬಸವರಾಜದೇವರು—ನಾನು ನಿಮ್ಮಿಂದ ಸರ್ವವನೂ ಅಱಿದೆನೆಂದು, ಬಿನ್ನಹಂ ಮಾಡುವ ಪ್ರಸ್ತಾವದ ವಚನ:

ಅಯ್ಯ, ನಿಮ್ಮ ಮುಟ್ಟಿದ ಗುಣದಿಂದಲಾನು ಪೂರ್ವಾಚಾರಿಯಾದೆನಯ್ಯ. ಅಯ್ಯ, ನಿಮ್ಮ ಮುಟ್ಟಿದ ಗುಣದಿಂದಲಾನು ವೃಷಭನಾದೆನಯ್ಯ. ಅಯ್ಯ, ನಿಮ್ಮ ಮುಟ್ಟಿದ ಗುಣದಿಂದಲಾನು—ಸಂಗನ ಬಸವಣ್ಣನಾಗಿ, ಗೊಗೇಶ್ವರನ ಶರಣನ ಮಹಾ ಬಸುಱೊಳಗೆ ಕಂದನಾಗಿ ಇದ್ದೆನು ಕಾಣಾ ಕೂಡಲಸಂಗಮದೇವ. ೪೩೮-೧೦೨೧-7-19.

ಹೀಂಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ಗುರು-ಲಿಂಗ-ಜಂಗಮ-ಪ್ರಸಾದವೆಂಬ ಮಹಾಘನವನು ಎನಗೆ ಕರತಳಾಮಳಕವ ಮಾಡಿ ನೀನೆ ತೋಱಿಸಿಕೊಟ್ಟೆಯೆಂದು ನಿರೂಪಿಸಿದ ಪ್ರಸ್ತಾವದ ವಚನ:

ಗುರು ಒಂದೆ ಬಸಿಱು. ಲಿಂಗ ಒಂದೆ ಬಸಿಱು. ಜಂಗಮ ಒಂದೆ ಬಸಿಱು. ಪ್ರಸಾದ ಒಂದೆ ಬಸಿಱು. ಇದನಾರಯ್ಯ ಅಮಳೋಕ್ಯವ ಮಾಡಿ ತೋಱಿದವರು ? ಇದನಾರಯ್ಯ ಪ್ರಜ್ವಲಿತವ ಮಾಡಿ, ಬೇಱೆಬೇಱೆ, ಕರತಲಾಮಲಕವ ಮಾಡಿ ತೋಱಿದವರು? ಪೂರ್ವಾಚಾರಿ ಭಕ್ತಿಭಂಡಾರಿ ಬಸವಣ್ಣ, ನೀನೆನಗೆ ಗೊಗೇಶ್ವರಲಿಂಗವ ತೋಱಿದೆಯಾಗಿ ಲೋಕಾದಿಲೋಕವೆಲ್ಲವೂ ಕಿಂಚಿತು. ೪೩೯-೧೦೨೨-7-20.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಎನ್ನಂತರಂಗದೊಳಗೆ ಅಱಿವಾಗಿ, ಎನ್ನ ಬಹಿರಂಗದೊಳಗಾಚಾರವಾಗಿ ನೀನೆಡೆಗೊಂಡು, ಎನ್ನ ಮನದೊಳಗೆ ಘನ ನೆನಹಾಗಿ ಮೂರ್ತಿಗೊಂಡು, ಗುರುಸ್ಥಲ-ಲಿಂಗಸ್ಥಲ-ಜಂಗಮಸ್ಥಲ-ಪ್ರಸಾದಸ್ಥಲವೆಂಬ ಚತುರ್ವಿಧವನು ಎನಗೆ ಸ್ವಾಯತವ ಮಾಡಿ ತೋಱಿ, ಪ್ರಾಣಲಿಂಗವೆಂಬ ಹಾದಿಯ ಸೆಱಗ ತೋಱಿಸಿ, ಎಲ್ಲಾ ಅಸಂಖ್ಯಾತರನು ಪಾವನವ ಮಾಡಿದಿರಾಗಿ, ಕೂಡಲಸಂಗಮದೇವ, ನಿಮ್ಮಿಂದ ಸಕಲ ಸಸುಮತವ ನಾನಱಿದೆನಲ್ಲದೆ—ಎನ್ನಿಂದ ನೀನಾದೆಯೆಂಬುದ ನಿಮ್ಮ ಪ್ರಮಥರು ಮೆಚ್ಚರು ನೋಡಯ್ಯ. ೪೪೦-೧೦೨೩-7-21.

ಇದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ಆದಿಯ ಲಿಂಗ ನಿನ್ನಿಂದೆನಗಾಯಿತ್ತು. ಅನಾದಿಯ ಜ್ಞಾನ ನಿನ್ನ ನೆನೆದಡೆನಗಾ

ಯಿತ್ತು. ನಿನ್ನ ಕೃಪೆಯಿಂದ ಪ್ರಾಣಲಿಂಗವೆಂದಱಿದೆನೆಂಬುದ ನಿಮ್ಮ ಪ್ರಮಥರೆ ಬಲ್ಲರು. ಗೊಗೇಶ್ವರ ಸಾಕ್ಷಿಯಾಗಿ, ಸಂಗನ ಬಸವಣ್ಣ, ನಿಮ್ಮ ಪ್ರಸಾದದ ಶಿಶು ನಾನು ನೋಡಯ್ಯ. ೪೪೧–೧೦೨೪–7–22.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಆದಿ ಭಕ್ತ, ಅನಾದಿ ಜಂಗಮ; ಆದಿಶಕ್ತಿ, ಅನಾದಿ ಶಿವ ನೋಡಾ. ಎನ್ನ ಆದಿ-ಪಿಂಡಕ್ಕೆ ನೀನೆ ಆಧಾರವಾಗಿ, ಬೆಳಗ ತೋಱಿದರೆ, ನಿನ್ನ ಹೃದಯಕಮಲದಲ್ಲಿ ನಿಮ್ಮ ಕಂಡೆನು. ಆ ಕಾಬ ಜ್ಞಾನವೆ ಜಂಗಮ. ಆ ಜಂಗಮವಿಡಿದಲ್ಲದೆ ಲಿಂಗವ ಕಾಣಬಾರದು. ಆ ಜಂಗಮವಿಡಿದಲ್ಲದೆ ಗುರುವ ಕಾಣಬಾರದು. ಆ ಜಂಗಮವಿಡಿದಲ್ಲದೆ ಪ್ರಸಾದವ ಕಾಣಬಾರದು. ಕಾಯ ಭಕ್ತ, ಪ್ರಾಣ ಜಂಗಮವೆಂಬ ವಚನವ ತಿಳಿಯಲು ಎನ್ನ ಪ್ರಾಣ ನೀನಲ್ಲದೆ ಮತ್ತಾರು ಹೇಳಯ್ಯ? ಇದು ಕಾರಣ, ನಿಮ್ಮ ಘನವ ಕಿಱಿದು ಮಾಡಿ, ಎನ್ನನೊಂದು ಘನವ ಮಾಡಿ ನುಡಿವಿರಿ, ಕೂಡಲಸಂಗಮದೇವ. ೪೪೨–೧೦೨೫–7-23.

ಹೀಂಗೆಂದು ಬಸವರಾಜದೇವರು ಬಿನ್ನೈಸಲು ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ:

ಆದಿ ಜಂಗಮ, ಅನಾದಿ ಭಕ್ತನೆಂಬುದನಾರು ಬಲ್ಲರು ಹೇಳಾ ಬಸವಣ್ಣ? ನಿತ್ಯ ನಿರಾಕಾರ ಘನವು ಶಕ್ತಿಯಿಲ್ಲದೆ ಇದ್ದರೆ [1]ನಾಳೆಯು[1] ಬಯಲಾದಹುದೆಂದು, ನೀನು ಘನಚೈತನ್ಯವೆಂಬ ಕಾಯವ ಧರಿಸಿದರೆ—ಆ ಬಯಲು ಪರಬ್ರಹ್ಮವೆಂಬ ನಾಮವ ನೆಯ್ದಿತ್ತು ನೋಡಾ. ಆ ಮಹಾಘನವು ತನ್ನ ವಿನೋದದಿಂ ಸಾಕಾರವನೆಯ್ದಿದರೆ-ಧರ್ಮವೆಂಬ ಕಾಯವ ಧರಿಸಿ, ಆ ಮೂರ್ತಿಗೆ ಆಧಾರವಾದೆಯಾಗಿ, ಜಗದ ಕರ್ತ ಶಿವನೆಂಬ ನಾಮವಾಯಿತ್ತಲ್ಲಾ ಬಸವಣ್ಣ. ಜಂಗಮವೆ ಲಿಂಗವೆಂದು, ನೀ ಭಾವಿಸಲಾಗಿ, ನಿನ್ನ ಸನ್ನಿಧಿಯಿಂದ ಪ್ರತಿನಿಧಿಯಾಯಿತ್ತು, ನೋಡಾ ಬಸವಣ್ಣ. ಲಿಂಗವನು ನೀನು ಹಿಡಿದು ಪೂಜಿಸಲಾಗಿ, ಹೆಸರುವಡೆಯಿತ್ತು ನೋಡಾ ಬಸವಣ್ಣ. ಪ್ರಸಾದವ ನೀನು ಕೊಂಡು ಪಥವ ತೋಱಿದೆಯಾಗಿ, ಪ್ರಸಾದವು ನಿನ್ನಿಂದ ಹೆಸರುವಡೆಯಿತ್ತು ನೋಡಾ ಬಸವಣ್ಣ. ಇದು ಕಾರಣ, ನೀನೆ ಅನಾದಿಭಕ್ತ, ನಾನೆ ಅನಾದಿಯಿಂದಿತ್ತಿತ್ತು. ನೀನು ಮಾಡಲಾಗಿ ಆದವ [ನಾ] ನೆಂಬುದ ನಮ್ಮ ಗೊಗೇಶ್ವರನೆ ಬಲ್ಲ ಕಾಣಾ ಸಂಗನ ಬಸವಣ್ಣ. ೪೪೩–೧೦೨೬–7–24.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಜಂಗಮವೆ ಜ್ಞಾನರೂಪು, ಭಕ್ತನೆ ಆಚಾರರೂಪೆಂಬುದು ತಪ್ಪದು ನೋಡಯ್ಯ. ನಾನು ನಿಮ್ಮಲ್ಲಿ ಆಚಾರಿಯಾದಡೇನಯ್ಯ, ಜ್ಞಾನವಿಲ್ಲದನ್ನಕ್ಕರ? ತಲೆ ಇಲ್ಲದ

[1] (ಶಿಹ) ನಾಣೆಯ (ದೇ) ಆಗಳೆ (ಗೂ).

ಮುಂಡದಂತೆ ಜ್ಞಾನ ಉದಯವಾಗದ ಮುನ್ನವೇ ತಲೆದೋಱುವ ಆಚಾರವುಂಟೇ ಜಗದೊಳಗೆ? ಜ್ಞಾನದಿಂದ ಆಚಾರ, ಜ್ಞಾನದಿಂದ ಅನುಭಾವ, ಜ್ಞಾನದಿಂದ ಪ್ರಸಾದವಲ್ಲದೆ, ಜ್ಞಾನವನುಳಿದು ತೋಱುವ ಘನವ ಕಾಣೆನು! ಎನ್ನ ಆಚಾರಕ್ಕೆ ನೀನು ಜ್ಞಾನರೂಪನಾದ ಕಾರಣ, ಸಂಗನ ಬಸವನೆಂಬ ಪೆಸರುವಡೆದೆನು. ಅನಾದಿ ಪರಶಿವನು ನೀನೆಯಾಗಿ, ಘನಚೈತನ್ಯಾತ್ಮಕನೆಂಬ ಮಹಾಜ್ಞಾನವು ನೀನೆಯಾದೆಯಲ್ಲದೆ ನಾನೆತ್ತ? ಶಿವನೆತ್ತಲಯ್ಯ? ಅಯ್ಯ, ಕೂಡಲಸಂಗಮದೇವರು ಸಾಕ್ಷಿಯಾಗಿ, ನಾನು ಪ್ರಭುದೇವರ ತೊತ್ತಿನ ಮಗನೆಂಬುದ ಮೂಱುಲೋಕವೆಲ್ಲವು ಬಲ್ಲುದು ಕಾಣಾ ಪ್ರಭುವೆ. ೪೪೪-೧೦೨೭-7-25.

ಹೀಂಗೆಂದು ಬಸವರಾಜದೇವರು ಬಿನ್ನೈಸಲು, ಇವಕ್ಕೆ ಪ್ರಭುದೇವರು ಪ್ರಸನ್ನರಾಗಿ [1]ನಿರೂಪಿಸಿದ[1] ಪ್ರತ್ಯುತ್ತರ:

ತನು ದಾಸೋಹ, ಅವಯವಂಗಳೆಲ್ಲವು ಆಚಾರ, ಮನ-[2]ಪವನ-ಪ್ರಾಣವೆಂಬವೆಲ್ಲಾ[2] ಅಱಿವಿನ ಮೂರ್ತಿ ನೋಡ. ಒಳ ಹೊಱಗು, ಹೊಱ ಒಳಗೆಂಬುದನಱಿಯದ ಸತ್ಯ ಸದಾಚಾರಿ ನೀನು. [3]ನಿನ್ನಳವ[3]ನಱಿಯಲಾನೇತಱವನಯ್ಯ? ಅಂತರಂಗದಲ್ಲಿ ಅಱಿವುಂಟಾದ[4]ರೇನು?[4] ಎನ್ನ ಕಾಯದಲ್ಲಿ ಭಕ್ತಿಸ್ವಾಯತವಿಲ್ಲ. ಆಚಾರವೆಂಬುದು ಅತ್ತತ್ತಲಿಲ್ಲ. [5]ಸರ್ವಾಚಾರಸಂಪನ್ನ,[5] ನಿನ್ನಳವ ನಾನೆತ್ತ ಬಲ್ಲೆನಯ್ಯ. ಗೊಗೇಶ್ವರ ಸಾಕ್ಷಿಯಾಗಿ, ನಿನ್ನ ಮಹಾಮನೆಯ [6]ಕಾವಲ[6] ಬಂಟ ನಾನೆಂಬುದ ನಿಮ್ಮ ಪ್ರಮಥರೆಲ್ಲರೂ ಬಲ್ಲರು ಕಾಣಾ ಸಂಗನ ಬಸವಣ್ಣ. ೪೪೫-೧೦೨೮-7-26.

ಈ ಹಿಂಗೆಂದು ಪ್ರಭುದೇವರು ನಿರೂಪಿಸಲು, [7]ಇದಕ್ಕೆ ಬಸವರಾಜದೇವರು ಬಿನ್ನೈಸಿದ[7] ಪ್ರಸ್ತಾವದ ವಚನ:

ನಿಮ್ಮ ಕಂಡು ಕೈಮುಗಿದು ನಿಮಗೆ ಭಕ್ತನಾದೆನಲ್ಲದೆ, ನಿಮ್ಮ ಕಾಣದಲೆ ಕೈಮುಗಿವ ಭಕ್ತಿಯುಂಟೆ, ಅಯ್ಯ? ನಿಮ್ಮ ಮುಟ್ಟಿ ಪೂಜಿಸಿ [8]ಆಚಾರಿ[8]ಯಾದೆನಲ್ಲದೆ, ನಿಮ್ಮ ಮುಟ್ಟದಲೆ ಎನಗಾಚಾರವೆಲ್ಲಿಯದಯ್ಯ? ನಿಮ್ಮ ಘನ[9]ವನು ಮನದಲ್ಲಿ[9] ಧರಿಸಿದ ಕಾರಣ ಜ್ಞಾನೋದಯವಾಯಿತ್ತಲ್ಲದೆ, [10]ನೀವಿಲ್ಲದಡೆ ಎನಗೆ[10] ಜ್ಞಾನವೆಲ್ಲಿಯದಯ್ಯ? ಇಂತು[11]ಆವ[11]ಮುಖದಲ್ಲಿಯೂ [12]ಎನಗಾಗು[12] ಮಾಡಲೆಂದು ನೀನು ಮುಂದುಗೊಂಡಿದ್ದ ಕಾರಣ, ನಿನ್ನ ಸನ್ನಿಧಿಯಿಂದಲಾನು ಸದಾಚಾರಿಯಾದಡೆ ನಿಮಗಾನು ಸರಿಯೆ? ಕೂಡಲ ಸಂಗಮದೇವ, ಜಂಗಮ ಮುಖದಿಂದ ಸಂಗನ ಬಸವಣ್ಣ ಬದುಕಿದನೆಂಬುದ ಮೂಱುಲೋಕವೆಲ್ಲವು ಬಲ್ಲುದು ಕಾಣಾ ಪ್ರಭುವೆ. ೪೪೬-೧೦೨೯-7-27.

---

[1] (ಶಿ) ಕೊಂಡಾಡಿ ಬಿನ್ನೈಸುವ (ಹ). [2] (ಶಿ) (ಗೂ) ಪ್ರಾಣಾದಿಗಳೆಂಬವೆಲ್ಲಾ (ಹ). [3] (ಶಿ) ನಿನ್ನುವ (ಹ). [4] (ಹ ಗೂ) ರೆ (ಶಿ). [5] (ಶಿ) ನೀನು ಸರ್ವಾಚಾರಸಂಪನ್ನನು (ಹ). [6] (ಶಿ) ಬಾಗಿಲ ಕಾಯ್ವ (ಹ). [7] (ಶಿ) (ಹ) ಕೊಂಡಾಡಿ ಬಿನ್ನೈಸಿದ (ಹ). [8] (ಶಿಗೂ) ಆಚಾರ್ಯ (ಹ). [9] (ಶಿ) ವನು ಮನದಲ್ಲಿ ನೆನೆದು (ಗೂ) ರೂಪನು ಮನದಲ್ಲಿ ನೆನೆದು (ಹ) [10] (ಶಿ ಗೂ) ನಿಮ್ಮ ಚಿನ್ಮೂರ್ತಿಯಿಲ್ಲದೆಡೆ ನನಗೆ (ಹ) [11] (ಶಿಗೂ) ಆವಾವ (ಹ) [12] (ಶಿ) ಎನ್ನನಾಗು (ಗೂ ಹ)

ಹಿಂಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಬಸವಣ್ಣ, ನಿನ್ನ ಕಂಡು ಕಂಡು ಎನ್ನ ತನು ಬಯಲಾಯಿತ್ತು. ಬಸವಣ್ಣ, ನಿನ್ನ ಮುಟ್ಟಿ ಮುಟ್ಟಿ ಎನ್ನ ಕ್ರೀ ಬಯಲಾಯಿತ್ತು. ಬಸವಣ್ಣ, ನಿನ್ನ ನೆನೆನೆನೆದು ಎನ್ನ ಮನ-ವಚನ-ಕಾಯಬಯಲಾಯಿತ್ತು. ಬಸವಣ್ಣ, ನಿನ್ನ ಮಹಾನುಭಾವವ ಕೇಳಿ ಕೇಳಿ ಎನ್ನ ಭವಂ ನಾಸ್ತಿಯಾಯಿತ್ತು. ನಮ್ಮ ಗೊಗ್ಗೇಶ್ವರಲಿಂಗದಲ್ಲಿ ನೀನು ಅಜಾತನೆಂಬುದ ನೆಲೆ ಮಾಡಿ ಭವಪಾಶಂಗಳ ಹಱಿದಿಪ್ಪೆಯಾಗಿ ನಿನ್ನ ಸಂಗದಿಂದಲಾನು ಬದುಕಿದೆನು. ೪೪೭-೧೦೩೦-7-28.

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಜನನವಿಲ್ಲದ ಜನಿತನು ನೀನು ನೋಡಯ್ಯ. ಜನಿಸಿ ಸಂಸಾರವನಱಿಯದ ನಿರ್ವಿಕಾರಿ ನೀನು ನೋಡಯ್ಯ. ಭವಬಂಧನಂಗಳಿಲ್ಲದ ನಿತ್ಯನಿಜತತ್ವ ನೀನು ನೋಡಯ್ಯ. ನಿನ್ನ ಚರಣಸೇವೆಯ ಮಾಡಿ, ಎನ್ನ ಭವ ಹಱಿಯಲೆಂದಿಪ್ಪೆನಲ್ಲದೆ, ನಿಮ್ಮ ಘನವೆಂತೆಂದೂ ಅಱಿಯೆ ನೋಡಯ್ಯ. ಕೂಡಲಸಂಗಮದೇವ, ನೀನು ಕೊಂಡಾಡಲಾನು ಪ್ರಾಪ್ತನೆ ಹೇಳಾ ಪ್ರಭುವೆ? ೪೪೮-೧೦೩೧-7-29.

ಹೀಂಗೆಂದು ಬಸವರಾಜದೇವರು ಬಿನ್ನೈಸಲು, ಅದಕ್ಕೆ ಪ್ರಭುದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಆಚಾರವಂಗಲೇಪವಾಗಿ ಕಾಯಮುಕ್ತನು [1]ನೀನು[1] ನೋಡಯ್ಯ. ಅಱಿವು ಅಂತರಂಗದಲ್ಲಿ ಭರಿತವಾಗಿಪ್ಪುದಾಗಿ ಮನೋಮುಕ್ತನು ನೀನು ನೋಡಯ್ಯ. ಅರ್ಪಿತ ಪರಿಣಾಮದಲ್ಲಿ ಅವಿರಳವಾಗಿಪ್ಪುದಾಗಿ ಸರ್ವಾಂಗಲಿಂಗೈಕ್ಯ [ನೀನು] ನೋಡಯ್ಯ. ಮುಕ್ತನಲ್ಲೆಂಬ ಬಳಕೆಯ ಮಾತದಂತಿರಲಿ. ಬಯಲ ಭ್ರಮೆಯನೆ ಕಳೆದು, ಭವದ ಬಟ್ಟೆಯ ಹಱಿದಿಪ್ಪುದ ನಮ್ಮ ಗೊಗ್ಗೇಶ್ವರ ಬಲ್ಲನು. [2]ಮಱೆಮಾಡಿ[2] ನುಡಿವರೇ ಸಂಗನ ಬಸವಣ್ಣ. ೪೪೯-೧೦೩೨-7-30.

ನೀನು ಭವಬಂಧನಂಗಳ ಹಱಿದು ನಿರ್ಭಯನಾಗಿಪ್ಪ ಮಾತು ಸತ್ಯವೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಜ್ಞಾನದ ಬಲದಿಂದ ಅಜ್ಞಾನ ಕೆಡುವುದು ನೋಡಯ್ಯ. ಜ್ಯೋತಿಯ ಬಲದಿಂದ ಕತ್ತಲೆ ಕೆಡುವುದು ನೋಡಯ್ಯ. ಸತ್ಯದ ಬಲದಿಂದ ಅಸತ್ಯ ಕೆಡುವುದು ನೋಡಯ್ಯ. ಪರುಷದ ಬಲದಿಂದ ಅವಲೋಹ ಕೆಡುವುದು ನೋಡಯ್ಯ. ಕೂಡಲಸಂಗಮದೇವಯ್ಯ, ನಿಮ್ಮ ಅನುಭಾವದಿಂದ ಎನ್ನ ಭವ ಕೆಟ್ಟುದನಿಲ್ಲೆನಬಹುದೇ ಪ್ರಭುವೆ? ೪೫೦-೧೦೩೩-7-31.

[1] (ಹಗೂ) × (ಶಿ). [2] (ಹ) ನೀನು ಮಱೆಯಾಗಿ (ಗೂ) ಮಱೆಮಾಡಿ (ಶಿ).

ಹೀಂಗೆಂದು ಬಸವರಾಜದೇವರು ಬಿನ್ನಹವ ಮಾಡಲು, ಇದಕ್ಕೆ "ಬಸವ, ನಿನ್ನ ಮಹಾತ್ಮೆಯನು ನಾಲ್ಕು ಯುಗದಿಂದ ಬಲ್ಲೆನಾಗಿಯೂ ಆಚಾರ ಸ್ವಾಯತವಾಗಿದ್ದ ಈ ಅವತಾರದಲ್ಲಿ ನಿಮ್ಮ ಮಹಿಮೆಯನಱಿಯದೆ ಇದ್ದೆ"ನೆಂದು ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಕೃತಯುಗದಲ್ಲಿ ನೀನು ಸ್ಕಂದನೆಂಬ ಗಣೇಶ್ವರನಾಗಿರ್ದುದ ನಾನು ಬಲ್ಲೆ. ತ್ರೇತಾಯುಗದಲ್ಲಿ ನೀನು ನೀಲಲೋಹಿತನೆಂಬ ಗಣೇಶ್ವರನಾಗಿರ್ದುದ ನಾನು ಬಲ್ಲೆ. ದ್ವಾಪರದಲ್ಲಿ ನೀನು ವೃಷಭನೆಂಬ ಗಣೇಶ್ವರನಾಗಿರ್ದುದ, ನಾನು ಬಲ್ಲೆ. ಕಲಿಯುಗದಲ್ಲಿ ನೀನು ಬಸವನೆಂಬ ಗಣೇಶ್ವರನಾಗಿ, ಸರ್ವಾಚಾರ ಸಂಪನ್ನನಾಗಿ ಭಕ್ತಿ-ಜ್ಞಾನ [1]ವೈರಾಗ್ಯ[1]ದ ಕಂದೆಱೆವೆಯ ಮಾಡಿ, ಶಿವಾಚಾರದ ಘನವ ಬೆಳವಿಗೆಯ ಮಾಡಿ, ಶಿವಭಕ್ತಿಧ್ವಜವನೆತ್ತಿಸಿ ಮರ್ತ್ಯಲೋಕದೊಳಗೆ ಹರಹಿದ ಭೇದವ ಭೇದಿಸಿ ನೋಡಿ, ಆನು A ಅಱಿಯದೆA— ಗೊಗೇಶ್ವರ ಸಾಕ್ಷಿಯಾಗಿ ನಿಮ್ಮ ಮಹಾತ್ಮೆಗೆ ನಮೋ ನಮೋ ಎನುತಿರ್ದೆನು ಕೂಡಲ ಸಂಗನ ಬಸವಣ್ಣ. ೪೫೧-೧೦೩೪-7-32.

ಮರ್ತ್ಯದಲ್ಲಿ ಬಂದವತರಿಸಿ, ಶಿವಾಚಾರದ ಘನವನು ಪ್ರತಿಷ್ಠಿಸಿ ತೋಱಿ ಜಗದೊಳಗೆ ಮೆಱೆವಲ್ಲಿ, ನಿಮ್ಮ ಮಹಾತ್ಮೆಯನಱಿಯೆನೆಂದು ಪ್ರಭುದೇವರು ನಿರೂಪಿಸಲು ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ:

ಕಕ್ಷೆ-ಕರಸ್ಥಲ—ಉತ್ತಮಾಂಗ-ಉರಸೆಜ್ಜೆ-ಅಂಗಸೋಂಕು—ಅಮಳೋಕ್ಯವೆಂಬುದ ನಾನು ಮನದಲ್ಲಿ ಅಱಿದಂತು, ಭಾವ-ನಿರ್ಭಾವವೆಂಬುದನಱಿದು, ಆಯತ-ಸ್ವಾಯತವ ಮಾಡಲ್ಕೆ ಬಂದ ಪದಾರ್ಥವು ಲಿಂಗದಲ್ಲಿ ಅರ್ಪಿತವಾಗದೆಂದು, ಜಂಗಮಮುಖದಲ್ಲಿ ಬಂದ ಪದಾರ್ಥವಲ್ಲದಾಗದೆಂದು, ಆ ಜಂಗಮವನೆನ್ನ ಮನದಲ್ಲಿ ನೆನೆದುಕೊಂಡು, ಆ ಜಂಗಮದಾಸೋಹಕ್ಕೆ ಎನ್ನ [2][ತನು ವೇದ್ಯವಾದಲ್ಲಿ][2] ಅಂಗದ ಮೇಲೆ ಲಿಂಗವುಳ್ಳವರೆಲ್ಲರೂ ಸಂಗಮನಾಥನೆಂದಱಿದಲ್ಲಿ—ಲಿಂಗವೂ ಹುಸಿ, ಜಂಗಮವೂ ಹುಸಿ ಎಂದು ಪರವಾದಿ ಬಿಜ್ಜಳನು ಸಂಪಾದಿಸುವಲ್ಲಿ, ಅವನು-ಆದಿಗಣೇಶ್ವರನೆಂದಱಿಯದೆ ತರ್ಕಿಸುವಲ್ಲಿ, ಅವನೆನ್ನ ಭಕ್ತಿಗೆ ಒರೆಗಲ್ಲಾದಲ್ಲಿ, ಆತನು ಭಕ್ತಿಯ ಪಥವ ಅಲ್ಲೆಂಬುದ, ನಾನು ಅಹುದೆಂಬುದ— ಈ ಎರಡನೂ ನೀನು ಸೂತ್ರಧಾರಿಯಾಗಿ ಆಡಿಸುವಲ್ಲಿ, ಶಿವಭಕ್ತಿಯ ಮುಸುಕ ತೆಗೆವಲ್ಲಿ ಮೂವತ್ತಾಱು ಕೊಂಡೆಯವ ಪರಿಹರಿಸಿ ಎಂಬತ್ತೆಂಟು ಪವಾಡವ ಮೆಱೆವಲ್ಲಿ, ಮೂನೂಱಱುವತ್ತು ಸತ್ತ ಪ್ರಾಣವನೆತ್ತುವಲ್ಲಿ-ಅಂದು ನೀನೇನಾಗಿದ್ದೆ ಹೇಳಾ ಕೂಡಲ ಸಂಗಮದೇವ ? ೪೫೨-೧೦೩೫-7-33.

ಹೀಂಗೆಂದು ಬಸವರಾಜದೇವರು ತಮ್ಮ ಪೂರ್ವಾಪರ ಸಂಬಂಧದ ವೃತ್ತಾಂತಮಂ ಬಿನ್ನಪಂಗೆಯ್ಯಲು, ಪ್ರಭುದೇವರು ತಮ್ಮ ಪೂರ್ವಸಾಂಗತ್ಯಮಂ ಬಸವಣ್ಣನಿಂದಱಿದೆನೆಂದು ಪರಿಣಾಮಿಸಿ ನಿರೂಪಿಸಿದ ಪ್ರಸ್ತಾವದ ವಚನ:

---

[1] (ಹ) × (ಗೂಉಶಿ) A (ಶಿಹ) ಅಱಿದೆ (ಗೂಉ). [2] ಮನ ವೇದ್ಯವಾಗದಲ್ಲಿ (ಶಿ) ತನು ವೇದ್ಯವಾಗದೆಂದು (ಹ) ಮನವು ವೇದ್ಯವಾದಲ್ಲಿ (ಗೂ).

ಆದಿ ಗುರುಸ್ಥಲ, ಲಿಂಗಸ್ಥಲ, ಜಂಗಮಸ್ಥಲ, ಪ್ರಸಾದಸ್ಥಲ, ಪಾದೋದಕಸ್ಥಲಂಗಳ ನಾರು ಬಲ್ಲರಯ್ಯ? ಆದಿಯ ತೋಱಿದ, ಅನಾದಿಯನಱಿಪಿದ, ನಾದಬಿಂದುಕಳೆಗಳ ಭೇದವಂ ಭೇದಿಸಿ ತೋಱಿದ, ಹುಟ್ಟುವುದ ಮುಟ್ಟದೆ ತೋರಿದ, ಮುಟ್ಟದೆ ಇಪ್ಪುದ ಮುಟ್ಟಿ ತೋಱಿದ. ಎನ್ನ ಅಂತರಂಗವನನು ಮಾಡಿ ನಿಜಲಿಂಗವ ನೆಲೆಗೊಳಿಸಿದ. ಗೊಗೇಶ್ವರ, ನಿಮ್ಮ ಶರಣ ಸಂಗನ ಬಸವಣ್ಣನಿಂದ ಸಕಲಸನುಮತವನಿಂದಱಿದೆನಯ್ಯ. ೪೫೩-೧೦೩೬-7-34.

ಮತ್ತಂ ಸ್ತೋತ್ರ:

ಭಾವಕರಿಗೆ ಮೂರ್ತಿಯಾರಾಧನೆ ಸಂಸಾರಕ್ಕೆ ಬೀಜ, ಲಿಂಗಾರಾಧನೆ ಭಾವಕ್ಕೆ ಬೀಜ. ಲಿಂಗಸ್ವಾಯತ ಜಂಗಮವೇ ಪ್ರಾಣಲಿಂಗ; ಇದು ಕಾರಣ, ಗೊಗೇಶ್ವರ, ಸಂಗನಬಸವಣ್ಣನ ಮಱೆಯ ಹೊಕ್ಕು ಬದುಕಿದೆನು. ೪೫೪-೧೦೩೭-7-35.

ಹೀಂಗೆಂದು ಪ್ರಭುದೇವರು ಬಸವರಾಜದೇವರ ಸ್ತೋತ್ರವಂ ಮಾಡಲು, ಆ ಬಸವರಾಜದೇವರು ಪ್ರಭುದೇವರೊಡನೆ, ನಿಮ್ಮಿಂದಲಾನು ಸಕಲಸನುಮತವನಱಿದೆನೆಂದು ಬಿನ್ನಪಂಗೆಯ್ವ ಪ್ರಸ್ತಾವದ ವಚನ:

ಲಿಂಗ ಜಂಗಮ, ಜಂಗಮ ಲಿಂಗವೆಂಬುದ ಎನಗೆ ತೋಱಿದವರಾರಯ್ಯ? ಲಿಂಗವ ಪೂಜಿಸಿದರೆ ಭವ ಹಱಿಯದೆಂದು ಜಂಗಮಮುಖಲಿಂಗವಾಗಿ ಬಂದು, ಶಿಕ್ಷಿಸಿ ರಕ್ಷಿಸಿ, ಎನ್ನ ಆದಿ ಅನಾದಿಯ ತೋಱಿ, ಪ್ರಾಣಲಿಂಗ ಜಂಗಮವೆಂದು ಎನಗೆ ಪ್ರತಿಷ್ಠಿಸಿ ತೋಱಿದಿರಾಗಿ, ಕೂಡಲಸಂಗಮದೇವ, ನಿಮ್ಮಿಂದಲಾನು ಬದುಕಿದೆನು ಕಾಣಾ ಪ್ರಭುವೆ. ೪೫೫-೧೦೩೮-7-36.*

* ಹಲಗೆದೇವರ ಶೂ. ಸಂ. ಯಲ್ಲಿ ಇದೇ ಪ್ರಸಂಗ ಇನ್ನು ಸ್ವಲ್ಪ ಮುಂದುವರಿದು ಆಮೇಲೆ 'ನುಲಿಯ ಚಂದಯ್ಯಗಳ ಸಂಪಾದನೆ' ಬರುವುದು.

ಇಂತು, ಬಸವರಾಜದೇವರು-ಪ್ರಭುದೇವರು ತಮ್ಮೊಳಗೆ ಮಹಾನುಭಾವ ಗೋಷ್ಠಿಯ ಮಾಡುತ್ತಿಪ್ಪ ಪ್ರಸ್ತಾವದೊಳು, ಚಿಕ್ಕದಣ್ಣಾಯಕರು— ಇಬ್ಬರನೂ [1]ಪರೀಕ್ಷಿಸಿ[1] ನೋಡುವ ಪ್ರಸ್ತಾವದ ವಚನ :

ಒಂದಱೊಂದಱ ಸಬುದ ಮತ್ತೊಂದಕಳವಡದು. ಕಂದನೊಳಗಣ ಸ್ವಪ್ನ ಮುಂದು ದೋಱುವುದೆ? ಚಂದ್ರಕಾಂತದ ಶಿಲೆಯಲಿ ರತ್ನವ ಕಂಡೆನೆಂಬ ಅಹಂಕಾರ ನಿನಗೇಕೆ ಶರಣ? ಕೈಯ ಕುಱುಹಳಿಯದು, ಬಾಯ ಮೊಱೆ[3] ಮಿಗೆವರಿಯುತ್ತಿದೆ; ಕೂಡಲ ಚನ್ನ ಸಂಗಯ್ಯನಲ್ಲಿ ಬಸವ-ಪ್ರಭು ಇಬ್ಬರೂ ಮರುಳಾದರು. ೪೫೬-೫೩೫-8-1.

ಹೀಂಗೆಂದು ಚಿಕ್ಕದಣ್ಣಾಯಕರು [1]ಪರೀಕ್ಷಿಸಿ[1] ನೋಡಲು, ಇದಕ್ಕೆ ಪ್ರಭು ದೇವರು— ಚಿಕ್ಕದಣ್ಣಾಯಕರೊಡನೆ ನಿರೂಪಿಸಿದ ಪ್ರಸ್ತಾವದ ವಚನ :

ಅಂಗಸಂಸಾರ ಲಿಂಗದಲ್ಲಿ ಅಱತು, ಕಾಯವೆಂಬ ಸಂಬಂಧ-ಸಂಶಯವಳಿದು ನಿಸ್ಸಂದೇಹಿಯಾಗಿಪ್ಪನು ನೋಡಾ ಬಸವಣ್ಣನು. ಪ್ರಾಣ-ಭಾವವೆಂಬ [2]ಶಂಕೆ ತಲೆದೋಱದೆ[2] ನಿಶ್ಶಂಕ ನಿಜೈಕ್ಯನಾಗಿಪ್ಪ ನೋಡಾ ಬಸವಣ್ಣನು! ಆ ಬಸವಣ್ಣನ ಅಂತರಂಗದಲ್ಲಿ ನಿಶ್ಚಿಂತ ನಿವಾಸಿಯಾಗಿದ್ದೆನು. ಆ ಬಸವಣ್ಣನ ಬಹಿರಂಗದಲ್ಲಿ ನಿರಾಲಂಬ ಜ್ಞಾನಿಯಾಗಿದ್ದೆನು. ನಾನು ಬಸವಣ್ಣನೊಳಗೆ ಅಳಿದುಳಿದೆನು. ಬಸವಣ್ಣನೆನ್ನ ಅಂತರಂಗ ದೊಳಗೆ ನಿಜನಿವಾಸಿಯಾಗಿದ್ದನು. ಇಂತು ಒಂದಕೊಂದ ಬಿಚ್ಚಿ ಬೇಱುಮಾಡಬಾರದು ಕೇಳಾ. ಗೊಗೇಶ್ವರನ ಶರಣ ಸಂಗನಬಸವ-ಪ್ರಭುವೆಂಬ ಎರಡು ಭಾವಭ್ರಾಂತಿ [3]ಯಳಿದು[3], ನಿಭ್ರಾಂತಿ ಎಡೆಗೊಂಡಿತ್ತು ನೋಡಾ ಚನ್ನಬಸವಣ್ಣ. ೪೫೭-೫೩೬-8-3.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಚಿಕ್ಕದಣ್ಣಾಯಕರು ಬಿನ್ನೈಸಿದ ಪ್ರಸ್ತಾವದ ವಚನ :

ಭಕ್ತ-ಜಂಗಮದ [4]ಸಂಬಂಧ ಸಕೀಲವೆಂತಿಪ್ಪುದೆಂಬುದನಾರು[4] ಬಲ್ಲರಯ್ಯಾ? ಅದು ಉಪಮಾತೀತ. ಭಕ್ತನೊಳಗೆ ಜಂಗಮವಡಗಿದರೆ, ಭಕ್ತನಾಗಿ ಕ್ರಿಯಾನಿಷ್ಪತ್ತಿಯಲ್ಲಿ ಸಮರಸ ಸುಖಿಯಾಗಿಪ್ಪನು ನೋಡಯ್ಯಾ. ಜಂಗಮದೊಳಗೆ ಭಕ್ತನಡಗಿದರೆ, ಕರ್ತೃ-ಭೃತ್ಯಭಾವವಳಿದು, ಸಂಬಂಧ-ಸಂಶಯ ತಲೆದೋಱದೆ, ಅಱುವಱತು, ಮಱಹು ನಷ್ಟವಾಗಿ, ಸ್ವತಂತ್ರ ಶಿವಾಚಾರಿಯಾಗಿರಬೇಕು ನೋಡಯ್ಯಾ. ಈ ಉಭಯ ಭಾವದ

---

1 (ಗೂ ದೇ) ಹರ್ಷಿಸಿ (ಶಿ). 2 (ಹ ಗೂ) ಸಂಕೇತ ನೆಲೆದೋಱದೆ (ಶಿ). 3 (ಶಿ ಹ) ಯುಳಿದುಳಿದು. 4 (ಶಿ) ಸಕೀಲ ಸಂಬಂಧವೆಂತಿರ್ಪುದೆಂಬುದನಾರು (ಹ) ಸಕೀಲ ಸಂಬಂಧವೆಂತಿರ್ಪುದ ನಾರು (ಗೂ).

ಸಂಗದ ಪರಿಣಾಮವ ಕಂಡು, ಕೂಡಲ ಚೆನ್ನ ಸಂಗನಲ್ಲಿ ಬಸವ-ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನು. ೪೫೮–೫೩೭-8-4. ಮತ್ತಂ :

ಎನ್ನ ಅಱಿವಿನ ಕಂಗಳ ಕತ್ತಲೆಯ ಕಳೆಯಬಲ್ಲರೆ ಸಂಗನ ಬಸವಣ್ಣನಲ್ಲದೆ ಮತ್ತಾರನೂ ಕಾಣೆನು. ಎನ್ನ ಭಾವವ ನಿರ್ಭಾವದಲ್ಲಿ ನಿಲಿಸಿ, ನಿಶ್ಶೂನ್ಯವ ಮಾಡಿ, ಪರಮಸುಖದೊಳಿರಿಸುವರೆ, ಅಲ್ಲಮ ಪ್ರಭುವಲ್ಲದೆ ಮತ್ತಾರನೂ ಕಾಣೆನು. ಕೂಡಲ ಚೆನ್ನಸಂಗಮದೇವರಲ್ಲಿ ಬಸವ-ಪ್ರಭುದೇವರ ಶ್ರೀಪಾದಕ್ಕೆ ಶರಣೆಂದು ಬದುಕಿದೆನು. ೪೫೯-೫೩೮-8-5.

ಇಂತು ಚಿಕ್ಕದಣ್ಣಾಯಕರು-ಬಸವರಾಜದೇವರನೂ ಪ್ರಭುದೇವರನೂ ಸ್ತೋತ್ರಮಂ ಮಾಡಲು, ಆ ಪ್ರಭುದೇವರು—ಬಸವರಾಜದೇವರನೂ ಚೆನ್ನಬಸವರಾಜ ದೇವರನೂ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ :

ಬಸವಣ್ಣ ಎಂಬಲ್ಲಿ ಎನ್ನ ಕಾಯ ಬಯಲಾಯಿತ್ತು. ಚೆನ್ನಬಸವಣ್ಣ ಎಂಬಲ್ಲಿ ಎನ್ನ ಪ್ರಾಣ ಬಯಲಾಯಿತ್ತು. ಈ ಉಭಯಸ್ಥಳ ನಿರ್ಣಯದ ನಿಷ್ಪತ್ತಿ ಗೊಗೇಶ್ವರಲಿಂಗ ಸಾಕ್ಷಿಯಾಗಿ ಚೆನ್ನಬಸವಣ್ಣನಿಂದ ಸಾಧ್ಯವಾಯಿತ್ತು ಕಾಣಾ ಸಂಗನಬಸವಣ್ಣ. ೪೬೦–೫೩೯–8–6

ಹೀಗೆಂದು ಚಿಕ್ಕದಣ್ಣಾಯಕರು ಸ್ತೋತ್ರಮಂ ಮಾಡಲು, ಬಸವರಾಜದೇವರು—ಪ್ರಭುದೇವರನೂ ಚಿಕ್ಕದಣ್ಣಾಯಕರನೂ ಸ್ತೋತ್ರವ ಮಾಡಿದ ಪ್ರಸ್ತಾವದ ವಚನ :

ಅಂಗದ ಮೇಲೆ ಲಿಂಗಸ್ವಾಯುತವಾಗಿ, ಲಿಂಗಾರ್ಚನೆಯ ಮಾಡಿದರೆ, ಭವ ಹಿಂಗ ದೆಂದು—ಪ್ರಾಣದ ಮೇಲೆ ಲಿಂಗಸ್ವಾಯತವ ಮಾಡಿ, ಎನ್ನ ಅಂತರಂಗವ ಶುದ್ಧವ ಮಾಡಿ, ಲಿಂಗೈಕ್ಯದ ಹೊಲಬ ತೋರಿದನಯ್ಯ ಚೆನ್ನಬಸವಣ್ಣನು. ಕಾಯದ ಕಳವಳ ದಾಸೋಹಮುಖದಲ್ಲಿಯಲ್ಲದೆ ಹಱಿಯದೆಂದು, ಜಂಗಮಮುಖಲಿಂಗವಾಗಿ ಬಂದು, ಎನ್ನ ಶಿಕ್ಷಿಸಿ, ರಕ್ಷಿಸಿ, ಎನ್ನ ಸಂಸಾರಪ್ರಕೃತಿಯ ಹಱಿದನಯ್ಯ ಪ್ರಭುದೇವರು. ಕೂಡಲ ಸಂಗಮದೇವರಲ್ಲಿ ಪ್ರಭುದೇವರ ಚೆನ್ನಬಸವಣ್ಣನ ಕರುಣದಿಂದಲಾನು ಬದುಕಿದೆನು. ೪೬೧-೫೭೭-8-7

ಮತ್ತಂ ಬಸವರಾಜದೇವರು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ :

ಭೂಮಿಯ ಸಾರಾಯದಲೊಂದು ತರು ಬೆಳೆಯಿತ್ತು, ನವರಸಫಲವನಿತ್ತಿತ್ತು ನೋಡಾ! ಏನೆಂದಱಿಯದೆ, ಎಂತೆಂದಱಿಯದೆ ಮರುಳಾದೆ ನಾನು. ಮಾರಾರಿಯ ಬಲೆಯಲ್ಲಿ ಸಿಲುಕಿದೆನಯ್ಯ. ಕೂಡಲಸಂಗಮದೇವಯ್ಯ, ಚೆನ್ನಬಸವಣ್ಣನ ಸನ್ನಿಧಿಯಿಂದ ಲಾನು ಬದುಕಿದೆನು. ೪೬೨-೫೭೮-8-8

ಪ್ರಭುದೇವರು ಆ ಚೆನ್ನಬಸವರಾಜದೇವರ ಸ್ತೋತ್ರವ ಮಾಡಿದ ಪ್ರಸ್ತಾವದ ವಚನ :

ಬೆಳಗುವ ಜ್ಯೋತಿಯ ತಿರುಳಿನಂತೆ-ಹೊಳೆವ ಕಂಗಳ ಕಾಂತಿ ಒಳಹೊಱಗೆನ್ನದೆ ಅಳವಟ್ಟ ಶಿವಯೋಗಿಯ ಕಂಡೆ ನೋಡ! ನಿಜ ಉಂಡ ನಿರ್ಮಳದ ಘನವ ಕಂಡು

ಬೆಱಗಾದೆ ನಾನು. ಗೊಗೇಶ್ವರಲಿಂಗದಲ್ಲಿ ಚೆನ್ನಬಸವಣ್ಣನಿಂದಲಾನು ಬದುಕಿದೆನು.
೪೬೩-೫೭೯-8-9

ಚೆನ್ನಬಸವರಾಜದೇವರೊಡನೆ ಬಸವರಾಜದೇವರು ಪ್ರಭುದೇವರ ಕೊಂಡಾಡುವ ಪ್ರಸ್ತಾವದ ವಚನ :

[1]ಕಂಗಳಲ್ಲಿ ಕರಸ್ಥಲದ ನೋಟ[1], ಅಂಗವಿಕಾರವೆಂಬುದನಱಿಯ ನೋಡಾ ! ಮನದ ಕೊನೆಯ ಮೊನೆಯ ಮೇಲಣ ಅನುಭಾವ ಗಮನಗೆಟ್ಟು, ಭಾವನಿರ್ಭಾವನೆಂಬುದ ನಱಿಯ ನೋಡಾ ! ಕೂಡಲ ಸಂಗಮ ದೇವರಲ್ಲಿ ಪ್ರಭುದೇವರಿಂದಲಾನು ಬದುಕಿದೆನು ಕಾಣಾ ಚೆನ್ನಬಸವಣ್ಣ. ೪೬೪-೫೮೦-8-10.

ಇದಕ್ಕೆ ಪ್ರಭುದೇವರು ಚೆನ್ನಬಸವರಾಜ ದೇವರೊಡನೆ ಬಸವರಾಜದೇವರ ಸ್ತೋತ್ರವ ಮಾಡಿದ ಪ್ರಸ್ತಾವದ ವಚನ :

ಅಂಗದಲಳವಟ್ಟ ಲಿಂಗೈಕ್ಯನ ಸಂಗವನಾರಿಗೆಯೂ ಕಾಣಬಾರದು ನೋಡಾ ! ಪ್ರಾಣದ ಕೊನೆಯ ಮೊನೆಯ ಮೇಲೆ, ಭಾವಸೂತಕದ ಹೊದಕೆಯ ಕಳೆದು, ನಿರ್ಭಾವ ನಿಸ್ಸೂತಕಿಯಾಗಿಪ್ಪ ನಿಜಲಿಂಗಸಮಾಧಿಯ ಘನವನಾರಿಗೆಯೂ ಕಾಣಬಾರದು ನೋಡಾ ! ಗೊಗೇಶ್ವರ ಲಿಂಗದಲ್ಲಿ ಸಂಗನ ಬಸವಣ್ಣನ ನಿಲವ ಕಂಡು, ನಾನು ಬದುಕಿದೆನು ಕಾಣಾ ಚೆನ್ನಬಸವಣ್ಣ. ೪೬೫-೫೮೧-8-11.

ಹೀಂಗೆಂದು ಪ್ರಭುದೇವರು ಚೆನ್ನಬಸವರಾಜದೇವರೊಡನೆ ಬಸವರಾಜದೇವರ ಮಹಾತ್ಮೆಯಂ ಕೊಂಡಾಡಲು, ಆ ಚೆನ್ನಬಸವರಾಜದೇವರು ಆ ಪ್ರಭುದೇವರೊಡನೆ ಬಸವರಾಜದೇವರ ಮಹಾತ್ಮೆಯ ಕೊಂಡಾಡಿ ಬಿನ್ನಪಂಗೆಯ್ದ ಪ್ರಸ್ತಾವದ ವಚನ :

ಹರನಟ್ಟಿದಾಗ್ರಹ-ನಿಗ್ರಹದ ಬೆಸನ ಗುರುನಿರೂಪವೆಂದು ಕೈಕೊಂಡು, ಕರುಣಿ ಬಸವಣ್ಣ—ಕೈಲಾಸದಿಂದ, ಗುರುಲಿಂಗ ಜಂಗಮಕೆ ಭಕ್ತಿಮಾಡಬೇಕೆಂದು, ಏಳುನೂಱ ಎಪ್ಪತ್ತು ಅಮರಗಣಂಗಳು ಸಹಿತ, ಮರ್ತ್ಯಲೋಕಕ್ಕೈತಂದನಯ್ಯ. ಶಿವಸಮಯ ಕ್ಕಾಧಾರವಾದನಯ್ಯ. ಲೋಕಾದಿಲೋಕಂಗಳಿಗೆ ಪರಮ ಗುರುವಾದನಯ್ಯ ಬಸವಣ್ಣನು. ಜಡರುಗಳ ಮನದ ಕತ್ತಲೆಯ ಕಳೆಯಬೇಕೆಂದು ಕಟ್ಟಿತ್ತು ಕಲ್ಯಾಣದಲ್ಲಿ ಮಹಾಮಠವು. ಪರಮನಟ್ಟಿದ ಓಲೆ ಬಂದಿಳಿಯಿತ್ತು ಮಹಾರಾಯನ ಸಿಂಹಾಸನದಲ್ಲಿ. ಅದ ತಂದು ಓದಿಸಿದರೆ, ಶಿಷ್ಟ ಸೇನಬೋವರಿಗೆ ತಿಳಿಯದು. ಛಪ್ಪನ್ನ ಭಾಷೆಯ ಲಿಪಿ ಮುನ್ನವಲ್ಲ. ಇದನೋದಿದವರಿಗೆ ಆನೆ-ಸೇನೆ-ಕುದುರೆ ಭಂಡಾರ ಅಱುವತ್ತಾಱು ಕರಣಕ್ಕೆ ಮುಖ್ಯನ ಮಾಡುವೆನೆಂದು, ಬಿಜ್ಜಣ ಭಾಷೆಗೊಡುತ್ತಿರಲು, ಹರನ ನಿರೂಪವ ಶಿರದ ಮೇಲಿಟ್ಟು, ಶಿವಶರಣೆಂದು ಬಸವಣ್ಣನೋದಿ [+ ನೋಡಿ ?] ಮೆಟ್ಟಿ ತೆಗೆಸಿದನಯ್ಯ ಅಱುವತ್ತು ಕೋಟಿ ವಸ್ತುವ. ಅರಮನೆಗೆ ರಾಜ್ಯಕ್ಕೆ ಶಿರಪ್ರಧಾನನಾಗಿ, ಹರಗಣಂಗಳಿಗೆ ಗತಿ-ಮತಿ-

[1] (ಗೂ) ಕಂಗಳ ಲಿಂಗ ಕರಸ್ಥಲದ ನೋಟ (ಶಿ) (ದೇ) ಕಂಗಳು ಕರಸ್ಥಲದ ಲಿಂಗದಲ್ಲಿ ಹಿಂಗದ ನೋಟ (ಹ).

ಚೈತನ್ಯನಾಗಿ, ಕೂಡಲ ಚೆನ್ನ ಸಂಗಯ್ಯನಲ್ಲಿ ಅಂಡಜದೊಳಗಿದ್ದು, ಶಿವನ ಭಂಡಾರಿಯಾದನಯ್ಯ ಎನ್ನ ತಂದೆ ಪೂರ್ವಾಚಾರ್ಯ ಸಂಗನ ಬಸವಣ್ಣನು. ೪೬೬-೫೮೨-8-12

ಮತ್ತಂ :

ಶಿವಭಕ್ತಿಯ ಕುಳಸ್ಥಳವ ಮರ್ತ್ಯಲೋಕದಲ್ಲಿ ಹರಹಲೆಂದು ಬಂದನಯ್ಯ ಬಸವಣ್ಣನು. ಆಚಾರ ಶಿವಾಚಾರದ ಮುಂದಣ ಕಣ್ಣ ಡನ ಕಳೆದು ಕರತಳಾಮಳಕವ ಮಾಡಿದನಯ್ಯ ಬಸವಣ್ಣನು. ಪರವಾದಿ ಬಿಜ್ಜಳನು ಒರೆಗಲ್ಲ ಹಿಡಿದು ಶಿವಭಕ್ತಿಯ ಸಂಪಾದನೆ[1]ಯ[1] ಮಾಡುವಲ್ಲಿ, ಮೂವತ್ತಾಱು ಕೊಂಡೆಯರ ಪರಿಹರಿಸಿ, ಶಿವಾಚಾರದ ಧ್ವಜವನೆತ್ತಿಸಿದನಯ್ಯ ಬಸವಣ್ಣನು. ಕೂಡಲ ಚೆನ್ನ ಸಂಗಮದೇವರಲ್ಲಿ ಬಸವಣ್ಣನ ನಿಲವ ಹೊಗಳುವರೆ ಎನ್ನವಳಲ್ಲ, ಕೇಳಾ ಪ್ರಭುವೆ. ೪೬೭-೫೮೩-8-13.

ಮತ್ತಂ ಆ ಪ್ರಸ್ತಾವದೊಳು ಹಾಡಿ ಹೊಗಳ್ದ ಪದಂಗಳು :

ರಾಗ: [[2]ಧನ್ಯಾಸಿ[2]]

ಆಚಾರ[3]ದುಂದುಮ್ಮಿಯೇನೆಂದುಪ[3]ಮಿಸುವೆ
ಬೆಳಗಿನೊಳಗೆ ತೊಳ ತೊಳಗುತಲಿದ್ದುದಯ್ಯ ‖ ಪಲ್ಲವ ‖

ಅಱಿವಿನಾಚರಣೆಯ ತೆಱನ ಹೇಳುತಿದ್ದುದು ।
[4]ಭೇದಾಭೇದದೊಳಗಣ[4] ಮಹಾಘನದಾಚಾರ ‖ ೧ ‖

ಸ್ಫಟಿಕದ ಗಿರಿಯ [5]ತಟದಲ್ಲಿ ನಿಂದಿದ್ದರೆ[5]
ಘಟಹೊಳೆದುದು ಒಳಹೊಱಗೆನ್ನದೆ ‖ ೨ ‖

ಪರುಷದ ಗಿರಿಯ ಕಡಿಯಲೆಂದು ಹೋದರೆ
ಹಿಡಿದುಳಿ ಕೊಡತಿ ಪರುಷವಾದ ಬಳಿಕ ‖ ೩ ‖

ಮಾಣಿಕವ ಹಿಡಿದವನ ಕೈಯ ಸೆಱೆ [6]ಮುಟ್ಟುವುದೆ[6]
ಲಿಂಗ-ಜಂಗಮದ ಪ್ರಸಾದವೆಂದಱಿತವಂಗೆ ‖ ೪ ‖

ಸಂಪಗೆಯ ಪುಷ್ಪದಲಿ ಕಂಪುಂಡ ಭ್ರಮರನಂತೆ
ಕೂಡಲಚೆನ್ನಸಂಗನಲ್ಲಿ ಶರಣ ಬಸವಣ್ಣಗೆ ‖ ೫ ‖

ಪದಂಗಳು ಸಹ ವಚನ. ೪೬೨-೫೮೮-8-18.

ಮತ್ತಂ ಸ್ತೋತ್ರ

---

[1] (ಹ.ಗೂ) × (ಶಿ). [2] ಧನ್ನಾಸಿ (ಶಿಹ) ಆಹಿರ (ಗೂ) ಆಹರಿ (ಗೂ R ಉ) ಆಹಾರಿ (ಉ). [3] (ಶಿ) ದುಂದುಭಿಯ ನಾೀನೆನೆಂದು (ಹ ಗೂ) ದುಂದುಭಿಯನಾನೇನೆಂದು (ಉ) ದುಂದುಭಿಯ ನಾನೇನೆಂದು (ದೇ). [4] ಭೇದದಾಭೇದದೊಳಗಣ (ಶಿ) ಭೇದದ ಭೇದದ (ಹ) ಭೇದಾಭೇದದ (ಗೂ). [5] (ಹ) (ದೇ) ತಳದಲ್ಲಿ ನಿಂದಿತಿದ್ದಾರೆ (ಶಿ) ತಟದಲ್ಲಿರ್ದರೆ (ಗೂ). [6] (ಶಿ) (ದೇ)ಹತ್ತುವುವೆ (ಹ, ಗೂ, ಉ).

ನಚ್ಚು ಬಿಚ್ಚದೆ ಮನದಲ್ಲಿ ಅಚ್ಚೊತ್ತಿದಂತಿದ್ದಿತ್ತು. ಲಿಂಗವೆನ್ನದು, ಜಂಗಮವೆನ್ನದು, ಪ್ರಸಾದವೆನ್ನದು. ಅದು ತನ್ನಲ್ಲಿ ತಾನಾಗಿ ತಾನೆ ಭರಿತ. ಕೂಡಲ ಚೆನ್ನ ಸಂಗಯ್ಯ, ನಿಮ್ಮ ಶರಣ ಬಸವಣ್ಣನ ನಿಲವನುಪಮಿಸ ಬಾರದು. ೪೭೩-?-8-19.

ಇಂತು ಚಿಕ್ಕದಣ್ಣಾಯಕರು— ಪ್ರಭುದೇವರೊಡನೆ ಬಸವರಾಜದೇವರ ಮಹಾತ್ಮೆಯಂ ಸ್ತೋತ್ರಮುಖದಿಂ ಕೊಂಡಾಡಲು, ಆ ಪ್ರಭುದೇವರು—ಚೆನ್ನಬಸವರಾಜದೇವರೊಡನೆ ಆ ಬಸವರಾಜದೇವರ ಮಹಾತ್ಮೆಯಂ ಕೊಂಡಾಡಿ ಹೇಳಿದ ಪ್ರಸ್ತಾವದ ವಚನ :

ಆದಿ ಅನಾದಿಯೆಂಬೆರಡಱ ಮೂಲವನೆತ್ತಿ, ಆದಿಲಿಂಗ ಅನಾದಿಜಂಗಮವೆಂಬ ಭೇದವ ವಿವರಿಸಿ ತೋಱಿದನಯ್ಯ ಬಸವಣ್ಣನು. ಕಾಯದ ಜೀವದ ಸಂಬಂಧವ ಅಸಂಬಂಧವ ಮಾಡಿ ತೋಱಿದನಯ್ಯ ಬಸವಣ್ಣನು. ಎನ್ನ ಆದಿ-ಅನಾದಿಯನು ಬಸವಣ್ಣನಿಂದ ತಿಳಿದು, ಗೊಗೇಶ್ವರ ಲಿಂಗದಲ್ಲಿ ಸುಖಿಯಾದೆನು ಕೇಳಾ ಚೆನ್ನಬಸವಣ್ಣ. ೪೭೪-೫೪೦-8-20

ಆದಿ ಲಿಂಗ ಅನಾದಿ ಜಂಗಮವೆಂಬ ಭೇದವನು ಎನಗೆ ಬಸವಣ್ಣ ತೋಱಿಸಿ, ಕೃತಾರ್ಥನ ಮಾಡಿದನೆಂದು, ಪ್ರಭುದೇವರು ಚೆನ್ನವಸಬರಾಜದೇವರೊಡನೆ ನಿರೂಪಿಸಲು, ಆ ಚೆನ್ನಬಸವರಾಜದೇವರು-ಆ ಪ್ರಭುದೇವರನು, ನಿನಗೆ ಆದಿ-ಅನಾದಿಗತೀತವಾದ ಲಿಂಗವೆಂತು ಸಾಧ್ಯವಾಯಿತ್ತೆಂದು, ಕೇಳುವ ಪ್ರಸ್ತಾವದ ವಚನ :

ಆದಿಯಲ್ಲಿ ಬಂದುದಲ್ಲ, ಅನಾದಿ ಬಿಂದುವಿನಲ್ಲಿ ಆದುದಲ್ಲ. ನಾದವನು ಕಳೆ ನುಂಗಿ, ಕಳೆಯ ನಾದ ನುಂಗಿ, ಹೊಳೆವ ಲಿಂಗ ನಿನಗೆಂತು ಸಾಧ್ಯವಾಯಿತ್ತು ಹೇಳಾ ? ಅಪ್ಪಣೆ ಯಿಲ್ಲದ ಅಪ್ಪಣೆ ಸಲುವುದೆ ಜಗದೊಳಗೆ ? ಇದು ಕಾರಣ ಕೂಡಲ ಚೆನ್ನಸಂಗಮದೇವ ರಲ್ಲಿ ಆದಿಸೋಂಕು ನಿನಗೆಂತು ಸಾಧ್ಯವಾಯಿತ್ತು ಹೇಳಾ ಪ್ರಭುವೆ ? ೪೭೫-೫೪೧-8-21

ಹೀಂಗೆಂದು ಚಿಕ್ಕದಣ್ಣಾಯಕರು ಬೆಸಗೊಳಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ :

ಆದಿ-ಅನಾದಿಗೆ ಭೇದವುಂಟೆ ? ಆದಿ ಲಿಂಗ ಅನಾದಿ ಶರಣನೆಂಬುದ ತನ್ನಿಂದ ತಾ ಮಾಡಲಾಯಿತ್ತು -ಕೇಳಾ ! ಧರೆಯಾಕಾಶ ಭುವನ ಭವನಂಗಳು ಹುಟ್ಟದ ಮುನ್ನ, ಅನಾದಿ ಪರಶಿವನು ತಾನೆ ತನ್ನ ಲೀಲೆಗೆ ಸಾಕಾರವ ಧರಿಸಿದರೆ, ಆ ಸಾಕಾರವೆ ಈ ಸಾಕಾರವಾಯಿತ್ತು. ಎನ್ನ ಸಾಕಾರದ ಆದಿಯನೂ, ಎನ್ನ ನಿರಾಕಾರದ ಅನಾದಿಯನೂ ಬಸವಣ್ಣ ಬಲ್ಲನಾಗಿ, ಗೊಗೇಶ್ವರಲಿಂಗದ ಘನವು ಬಸವಣ್ಣನಿಂದೆನಗೆ ಸಾಧ್ಯವಾಯಿತ್ತು ಕಾಣಾ ಚೆನ್ನಬಸವಣ್ಣ. ೪೭೬-೫೪೨-8-22.

[1]ಅನಾದಿ ಶಿವತತ್ವದ[1] ಘನವು ಸಾಧ್ಯವಾದ ಭೇದವನು ಪ್ರಭುದೇವರು ನಿರೂಪಿಸಲು, ಚಿಕ್ಕದಣ್ಣಾಯಕರು ಪರಿಣಾಮಿಸಿ, ಆ ಪ್ರಭುದೇವರ ಸ್ತುತಿಯಿಸಿದ ಪ್ರಸ್ತಾವದ ವಚನ :

ಆಯತವಿಲ್ಲದ ಅನುಭಾವ, ಸ್ವಾಯತವಿಲ್ಲದ ಸಮಾಧಾನ, ಸನ್ನಿಹಿತವಲ್ಲದ ಸಂಬಂಧವ ನೇನೆಂತೆನಬಹುದು ? ಘನಮನವ ಭೇದಿಸಿ, ಆದಿ-ಅನಾದಿಯನೊಳಕೊಂಡು, ಆಧಾರ

---

[1] (ಹ) ಅನಾದಿ ಪರಶಿವತತ್ವದ (ಗೂ). ಆದಿ ಶಿವತತ್ವದ (ಶಿ).

ವಿಲ್ಲದ ನಿಲವು ಸಾಧ್ಯವಾಯಿತ್ತು ನೋಡಾ! ಕೂಡಲ ಚೆನ್ನ ಸಂಗಮದೇವ, ಶರಣ ಪ್ರಭುದೇವರು ಅಜಾತನೆಂಬ ಭೇದವೆನಗಿಂದು ತಿಳಿಯಿತ್ತು. ೪೭೭-೫೪೩-8-23.

ಇಂತು ಪ್ರಭುದೇವರನು ಅಜಾತಪರಶಿವನೆಂದರಿತ ಚೆನ್ನಬಸವಣ್ಣನು, ಮತ್ತಂ ಆ ಪ್ರಭುದೇವರಿಂದ ಸಮಸ್ತ ತತ್ವಂಗಳೆಲ್ಲಾ ಉತ್ಪತ್ತಿಯಾದವೆಂಬ ಭೇದವನಱಿದು, ಸ್ತುತಿಯಿಸುತ್ತಿದ್ದ ಪ್ರಸ್ತಾವದ ವಚನ:

ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ. ಆತನ ವಿದ್ಯಾ-ಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿ ಸೈರಣೆಯಿಂದ ಹುಟ್ಟಿದಾತ ವಿಷ್ಣು. ಆತನ [1]ಕೋಪ[1] ಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂಱು ಪೀಠವಂತಿರಲಿ. ಈ ತತ್ವತ್ರಯಂಗಳಿಗೆ ಕಾರಣವಾಗಿಪ್ಪ ಶರಣನ ನಿಲವನಱಿತು ಶರಣೆನುತ್ತಿದ್ದೆನು ಕೂಡಲ ಚೆನ್ನ ಸಂಗಮದೇವ. ೪೭೮-೫೭೪-8-24.

ಇಂತು ಚಿಕ್ಕದಣ್ಣಾಯಕರು ಪ್ರಭುದೇವರ ಮೂಲ ಸಂಭೂತಿತ್ವವನೂ, ಆತನ ಮಹಾಘನವನೂ ವಿವೇಕದಿಂದಱಿದು ಸ್ತುತಿಸುತ್ತಿರಲು, ಆ ಪ್ರಭುದೇವರು— ಚಿಕ್ಕದಣ್ಣಾಯಕರ ಪೂರ್ವಾಪರ ಸಂಬಂಧವನಱಿದೆನೆಂದು ಸ್ತುತಿಯಿಸುತ್ತಿದ್ದ ಪ್ರಸ್ತಾವದ ವಚನ:

ಅಯ್ಯಾ, ತತ್ವ-ವಿತತ್ವಗಳಿಲ್ಲದಂದು, ಪ್ರಕೃತಿ-ಪುರುಷರಿಲ್ಲದಂದು, ಜೀವ-ಪರಮರೆಂಬ ಭಾವ ತಲೆದೋಱದಂದು, ಏನೂ ಏನೂ ಇಲ್ಲದಂದು, ಬಯಲು ಬಲಿದೊಂದು ಬಿಂದುವಾಯ್ತು ನೋಡಾ. ಆ ಬಿಂದು ಅಕ್ಷರತ್ರಯದ ಗದ್ದುಗೆಯಲ್ಲಿ ಕುಳ್ಳಿರಲು ಓಂಕಾರ ಉತ್ಪತ್ತಿಯಾಯಿತ್ತು. ಆ ನಾದ ಉತ್ಪತ್ತಿಯಾದಲ್ಲಿ ಮೂರ್ತಿಗೊಂಡನೊಬ್ಬ ಶರಣ. ಆ ಶರಣನಿಂದಾಯಿತ್ತು ಪ್ರಕೃತಿ ಆ ಪ್ರಕೃತಿಯಿಂದಾಯಿತ್ತು ಲೋಕ. ಲೋಕ-ಲೌಕಿಕವ ನತಿಗಳೆದು ನಿಜದಲ್ಲಿ ನಿವಾಸಿಯಾಗಿಪ್ಪ ಗೊಗೇಶ್ವರನ ಶರಣ ಚೆನ್ನಬಸವಣ್ಣನ ಘನವನು ಬಸವಣ್ಣನ ಕೃಪೆಯಿಂದಱಿದು ನಮೋ ನಮೋ ಎನುತ್ತಿದ್ದೆನು. ೪೭೯-೫೭೬-8-25.

ಇಂತು ಬಸವರಾಜದೇವರ ಕೃಪೆಯಿಂದ ಚೆನ್ನ ಬಸವರಾಜದೇವರ ನಿಜವನಱಿದೆನೆಂದು ಪ್ರಭುದೇವರು ನಿರೂಪಿಸಲು, ಆ ಚೆನ್ನಬಸವರಾಜದೇವರು ಆ ಪ್ರಭುದೇವರೊಡನೆ ಬಸವರಾಜದೇವರ ಘನವನು ಎನಗೆ ಅಱುಹಿಸಿ ಕೊಡಿ ಎಂದು ಬಿನ್ನೈಸುತ್ತಿದ್ದ ಪ್ರಸ್ತಾವದ ವಚನ:

ನಿರಾಲಂಬದಲ್ಲಿ ನಿಜಲಿಂಗ ನಾನೆಂಬ ಮಹದಹಂಕಾರವೆ ಸಂಸಾರಿಯಾಗಿ ಬಂದು ಬಳಲುವ ಭ್ರಾಂತು ಇನ್ನಾರಿಗೆ ತಿಳಿವುದಯ್ಯ? ಇನ್ನಾರು ಪರಿಹರಿಸುವರಯ್ಯ ಬಸವಣ್ಣನಲ್ಲದೆ? ಇದು ಕಾರಣ, ಕೂಡಲ ಚೆನ್ನ ಸಂಗಮದೇವ, ಬಸವಣ್ಣನ ಶ್ರೀಪಾದದ ಘನವನೊಮ್ಮೆ ಎನಗೆ ಅಱುಹಾ ಪ್ರಭುವೆ. ೪೮೦-೫೮೯-8-26. ಮತ್ತಂ:

ಎನಗಿಲ್ಲದ ಘನವನೇಱಿಸಿ ನುಡಿದರೆ ಅದು ನಿಮ್ಮ ಲೀಲೆ. ನಾನದ ಬೇಕೆನ್ನೆ ಬೇಡೆನ್ನೆ

---

[1] (ಶಿಗೂ) × (ಹ).

ನದಂತಿರಲಿ. ನಿಮ್ಮ ಶ್ರೀಪಾದದ ಕೃಪೆಯಿಂದ ನಿಮ್ಮ ನಿಲವನಱಿದೆನು. ಕೂಡಲ ಚೆನ್ನ ಸಂಗಮದೇವ, ಎನಗೊಮ್ಮೆ ಬಸವಣ್ಣನ ಪರಿಯನಱುಹಾ ಪ್ರಭುವೆ. ೪೮೧-೫೯೦-8-27

ಬಸವಣ್ಣನ ಪರಿಯನಱುಹೆಂದು, ಚಿಕ್ಕದಣ್ಣಾಯಕರು ಪ್ರಭುದೇವರ ಬೆಸಗೊಳಲು, ಆ ಪ್ರಭುದೇವರು—ಮರಳಿ ಚಿಕ್ಕದಣ್ಣಾಯಕರ ಬೆಸಗೊಂಬ ಪ್ರಸ್ತಾವದ ವಚನ :

ಅದ್ವೈತವೆಂಬ ಶಿಶುವೆನ್ನ ಕರಸ್ಥಲಕ್ಕೆ ಬಂದು ಸೋಂಕಲೊಡನೆ, ಎನ್ನ ತನ್ನಂತೆ ಮಾಡಿತ್ತಾಗಿ, ಎನ್ನ-ನಾನೆಂಬ ವಿಚಾರವು ಅಱತು ಹೋಯಿತ್ತು ಕೇಳಾ ! ಮತ್ತೆ ಅನ್ಯ ವಿಚಾರವನೆಂತೂ ಅಱಿಯೆ. ಎನ್ನ ಪೂರ್ವಾಪರವ ನಿಮ್ಮಿಂದಲಱಿಯಲೆಂದು ಬಂದು, ನಿಮ್ಮ ಮಱೆವೊಕ್ಕೆನಾಗಿ, ಸಂಗನ ಬಸವಣ್ಣನ ಮಹಿಮೆಯ ನಾನೆತ್ತ ಬಲ್ಲೆನು ? ಗೊಗೇಶ್ವರ ಸಾಕ್ಷಿಯಾಗಿ, ಸಂಗನ ಬಸವಣ್ಣ ನಿನ್ನಂತರಂಗದೊಳಗೆ ಬೆಳಗುತ್ತೈದಾನೆ. ಎನಗೊಮ್ಮೆ ಬಸವಣ್ಣನ ಘನವ ತಿಳುಹಿ ಕೊಡಾ ಚೆನ್ನಬಸವಣ್ಣ. ೪೮೨-೫೯೧-8-28. ಮತ್ತಂ :

ಆದಿಯ ತೋಱಿದೆ, ಅನಾದಿಯನಱುಹಿದೆ; ಇಹವ ಕೆಡಿಸಿದೆ, ಪರವ ನಿಲಿಸಿದೆ ; ಕಾಯ-ಪ್ರಸಾದ ಭಾವ-ಪ್ರಸಾದ ಜ್ಞಾನ-ಪ್ರಸಾದವನೇಕವ ಮಾಡಿ ತೋಱಿದೆ. ಪರವನೊಳಕೊಂಡು ಪರಿಣಾಮದಲ್ಲಿರಿಸಿದೆ. ಗೊಗೇಶ್ವರನ ಶರಣ ಸಂಗನ ಬಸವಣ್ಣನ ಪೂರ್ವಾಪರವ ಹೇಳಿ, ಎನ್ನನುಳುಹಿಕೊಳ್ಳಾ ಚೆನ್ನಬಸವಣ್ಣ. ೪೮೩-೫೯೨-8-29.

ಇಂತು ಬಸವರಾಜದೇವರ ನಿಲವನಱುಹೆಂದು ಪ್ರಭುದೇವರು ಬೆಸಗೊಳಲು, ಆ ಚಿಕ್ಕದಣ್ಣಾಯಕರು ಪ್ರಭುದೇವರೊಡನೆ ಬಸವರಾಜದೇವರ ಪೂರ್ವಾಪರ ಸಂಬಂಧಮಂ ಸುಜ್ಞಾನದೃಷ್ಟಿಯಿಂದೀಕ್ಷಿಸಿ ಬಿನ್ನೈಸುತ್ತಿದ್ದನು. ಅದೆಂತೆಂದೆನೆ – ಆ ಪ್ರಸ್ತಾವದ ವಚನ :

ಒಂದೂ ಒಂದೂ ಇಲ್ಲದಂದು, ನಂದಿವಾಹನರಿಲ್ಲದಂದು, ಹಿಂದೆ ಹದಿನಾಲ್ಕು ಭುವನಂಗಳಿಲ್ಲದಂದು, ಅಂದಾರೂ ಲಿಂಗವ ಕಂಡವರಿಲ್ಲ. ಅಂದು ಲಿಂಗವ ಕಂಡು ಹೇಳಿದರೆ ಅವನೆ [1]ಅದ್ವಿತೀಯ[1] ಎಂಬೆ. ಅಂದು ಕೂಡಲಚೆನ್ನಸಂಗನಲ್ಲಿ ಬಸವಣ್ಣನೊಬ್ಬನೆ ಉದಯವಾದನು ಕೇಳಾ ಪ್ರಭುವೆ. ೪೮೪-೫೯೩-8-30.

[2]ಮತ್ತಂ ಬಸವಣ್ಣನ ಅವತಾರಂಗಳನಱಿದು ಪ್ರಭುವಿಂಗೆ ಬಿನ್ನೈಸುತ್ತಿರ್ದ ಪ್ರಸ್ತಾವದ ವಚನ[2] :

ಕೃತಯುಗದಲ್ಲಿ [3]ದೇವರು[3] ದೇವಾಸುರನ ಕೊಲುವಲ್ಲಿ, ಪ್ರಮಥನೆಂಬ ಗಣೇಶ್ವರನಾಗಿದ್ದನು. ಗಜಾಸುರನ ಚರ್ಮವ ಬಿಚ್ಚಿ [4]ಅಜಾರಿ[4] ಹೊದೆವಲ್ಲಿ, ಉಗ್ರನೆಂಬ ಗಣೇಶ್ವರನಾಗಿದ್ದನು. ಅಸುರರ ಶಿರೋಮಾಲೆಯ ಕೊರಳಲ್ಲಿ ಉರದಲ್ಲಿ ಹಾರವಾಗಿ ಧರಿಸಿ ಜಗಕ್ಕೆ ಜೂಬಾಗಿ ಇಪ್ಪಲ್ಲಿ, ಶಂಕೆಯಿಲ್ಲದೆ ನಿಶ್ಶಂಕನೆಂಬ ಗಣೇಶ್ವರನಾಗಿದ್ದನು.

---

[1] (ದೇ) ಅದ್ವೈತಿ (ಗೂಹ) ಅದ್ವೈತಿಯ (ಶಿ). [2] (ಶಿ) × (ಹಗೂ). [3] (ಶಿಗೂ) × (ಹ). [4] (ದೇ) (ಗೂ) ಅಜಾತಿ (ಶಿ) (ಗೂ R ಅ) ಅಜಾರ (ಗೂ R ಉ) ಗಜಾರಿ (ಹ).

ಸಮಸ್ತ ದೇವರ್ಕಳಿಗೆ ಕರುಣಾಮೃತರಸವ ಸುರಿದು ಸುಖವನಿತ್ತು ರಕ್ಷಿಸುವಲ್ಲಿ, ಶಂಕರನೆಂಬ ಗಣೇಶ್ವರನಾಗಿದ್ದನು. Aತ್ರೇತಾಯುಗದಾದಿಯಲ್ಲಿ ಕಾಳಾಂಧರದೊಳಗೆ ಶಿವನು ನಿಜಮಂದಿರನಾಗಿಪ್ಪಲ್ಲಿ, ಕಾಲಾಗ್ನಿರುದ್ರನೆಂಬ ಗಣೇಶ್ವರನಾಗಿದ್ದನು.A Bಜಾಲಾಂಧ್ರನೆಂಬ ಅಸುರನ ಕೊಲುವಲ್ಲಿ, ಜಾಣರಿಗೆ ಜಾಣನಾಗಿ ವಿಚಿತ್ರನೆಂಬ ಗಣೇಶ್ವರನಾಗಿರ್ದನು.B ಪಿತಾಸುರನೆಂಬ ದೈತ್ಯನ ಕೊಂದು ಜಗವ ರಕ್ಷಿಸುವಲ್ಲಿ, ಮಾತಾಪಿತನೆಂಬ ಗಣೇಶ್ವರನಾಗಿದ್ದನು. ತಾಳಾಸುರನೆಂಬ ದೈತ್ಯನ ಕೊಂದು ಜಗವ ರಕ್ಷಿಸಿ [1]ಸೃಷ್ಟಿಸಿ[1] ಬ್ರಹ್ಮಾಂಡದ ಭಾರವ ಧರಿಸುವಲ್ಲಿ, ತಾಳಸಮೇಳನೆಂಬ ಗಣೇಶ್ವರ ನಾಗಿರ್ದನು. ಜಲಪ್ರಳಯದಲ್ಲಿ ಜಗನ್ನಾಥನು ಅಳಿಯದೆ ಇಪ್ಪಲ್ಲಿ, ಜನನ-ಮರಣ ವರ್ಜಿತನೆಂಬ ಗಣೇಶ್ವರನಾಗಿರ್ದನು. ಜಗವೆಲ್ಲಾ ಶೂನ್ಯವೆಂದರೆ ನಾನೆ ಹುಟ್ಟಿಸಿದೆ ನೆಂದು ಆದಿಗಣನಾಥನೆಂಬ ಗಣೇಶ್ವರನಾಗಿರ್ದನು. ಸುರಾಸುರರು ಅಹಂಕಾರದಲ್ಲಿ ಹೆಚ್ಚಿ ಮೇರೆದಪ್ಪಿದಲ್ಲಿ, ಗೂಳಿಯಾಗಿ ಹೋರಿ ಎಲ್ಲರಂ ತೊತ್ತಳಂದುಳಿದು ಒಕ್ಕಲಿಕ್ಕು ವಲ್ಲಿ, ಮಿಕ್ಕುಮೀಱಿ ನಂದಿಮಹಾಕಾಳನೆಂಬ ಗಣೇಶ್ವರನಾಗಿರ್ದನು. ಉರಿಗಣ್ಣ ತೆಱೆದರೆ [2]ಉರಿದಾವು[2] ಲೋಕಂಗಳೆಂದು ಜಗವ ಹಿಂದಿಕ್ಕಿಕೊಂಡು ವಂದ್ಯನೆಂಬ ಗಣೇಶ್ವರನಾಗಿರ್ದನು. ಉಮೆಯ ಕಲ್ಯಾಣದಲ್ಲಿ ಕಾಲಲೋಚನನೆಂಬ ಗಣೇಶ್ವರ ನಾಗಿರ್ದನು. ಅಂಧಕಾಸುರನ ಕೊಲ್ಲುವಲ್ಲಿ, ನೀಲಲೋಹಿತನೆಂಬ ಗಣೇಶ್ವರ ನಾಗಿರ್ದನು. ತ್ರಿಪುರದಹನವ ಮಾಡುವಲ್ಲಿ, ಸ್ಕಂದನೆಂಬ ಗಣೇಶ್ವರನಾಗಿರ್ದನು. ಬ್ರಹ್ಮ ಕಪಾಲ ವಿಷ್ಣು [3]ಕಂಕಾಳ[3]ವನಿಕ್ಕುವಲ್ಲಿ, ನೀಲಕಂಠನೆಂಬ ಗಣೇಶ್ವರನಾಗಿರ್ದನು. ದ್ವಾಪರಯುಗದಲ್ಲಿ ಲಿಂಗ-ಪ್ರಾಣ ಸಂಯೋಗವಾಗಿ ವೃಷಭನೆಂಬ ಗಣೇಶ್ವರ ನಾಗಿರ್ದನು. ಇಂತಿವು ಮೊದಲಾದ ನಾಲ್ಕುಯುಗ ಹದಿನೆಂಟು ಯು[=ಜು ?]ಗಂಗಳು ಮಡಿವಲ್ಲಿ ಹುಟ್ಟುವಲ್ಲಿ ನಂದಿಕೇಶ್ವರನೆಂಬ ಗಣೇಶ್ವರನಾಗಿರ್ದನು. ಕಲಿಯುಗದಲ್ಲಿ ಗುರು-ಲಿಂಗ-ಜಂಗಮ-ಪಾದೋದಕ-ಪ್ರಸಾದದ ಪೂರ್ವಾಶ್ರಯವ ಕಳೆದು ಲಿಂಗವಾಗಿ ಕುಳಸ್ಥಳವನಱಿತ ಮಹಂತ ಕೂಡಲಚೆನ್ನಸಂಗನ ಮಹಾಮನೆಯಲ್ಲಿ ಸರ್ವಾಚಾರ ಸಂಪನ್ನ ಸಂಗನಬಸವಣ್ಣನೆಂಬ ಗಣೇಶ್ವರನಾಗಿರ್ದನು ಕೇಳಾ ಪ್ರಭುವೆ. ೪೮೫-೫೯೪- 8-31.

ಮತ್ತಂ ಬಸವಣ್ಣನು ಮರ್ತ್ಯಕ್ಕೆ ಬಿಜಯಂಗೆಯ್ದ ಕಾರಣವನು ಆ ಪ್ರಭುದೇವ ರೊಡನೆ ಬಿನ್ನೈಸುತ್ತಿರ್ದ ಪ್ರಸ್ತಾವದ ವಚನ :

ಲಿಂಗದ ಪೂರ್ವಾಶ್ರಯವ ಕಳೆದು, ಇದು ಪ್ರಾಣಲಿಂಗವೆಂಬುದ ತೋಱಿ ಬಂದನಯ್ಯ ಬಸವಣ್ಣನು. ಲಾಂಛನದ ಪೂರ್ವಾಶ್ರಯವ ಕಳೆದು, [4]ಇದು [ಜಂಗಮ ಲಿಂಗ]ವೆಂದು ತೋಱಿಬಂದನಯ್ಯ ಬಸವಣ್ಣನು.[4] ಪ್ರಸಾದದ ಪೂರ್ವಾಶ್ರಯವ ಕಳೆದು

A + B (ಶಿಹ) B + A (ಗೂ). [1] (ಶಿ) ಸೃಷ್ಟಿಯ ಕಲ್ಪಿಸಿ (ಹಗೂ). [2] (ಶಿ) ಉರಿದಹವು (ಗೂಹ). [3] (ಹಗೂ) ಕಂಕಣ (ಶಿ). [4] ಇದು ಲಿಂಗಜಂಗಮವೆಂದು....(ಹ) ಮಹಾಪಾದೋದಕವನಱುಹಲೆಂದು ಬಂದನಯ್ಯ ಬಸವಣ್ಣನು. (ಶಿ).

ಇದು ಮಹಾಪ್ರಸಾದವೆಂದು ಸಯುವ ಮಾಡಿ ತೋಱಿ ಬಂದನಯ್ಯ ಬಸವಣ್ಣನು. ಪಾದೋದಕದ ಪೂರ್ವಾಶ್ರಯುವ ಕಳೆದು, ಮಹಾಪಾದೋದಕವನಱುಹಲೆಂದು ಬಂದನಯ್ಯ ಬಸವಣ್ಣನು. ಇಂತೀ [1]ಚತುರ್ವಿಧದ[1] ಪೂರ್ವಾಶ್ರಯುವ ಕಳೆದು, [2]ಸ್ವಾಯತವ[2] ಮಾಡಲೆಂದು ಕೂಡಲಚೆನ್ನಸಂಗಯ್ಯನಲ್ಲಿ ಮರ್ತ್ಯಕ್ಕೆ ಜನಿಸಿದನಯ್ಯ ಸಂಗನ ಬಸವಣ್ಣನು. ೪೮೬-೫೯೫-×

ಇಂತು ಚಿಕ್ಕದಣ್ಣಾಯಕರು ಬಸವರಾಜದೇವರ ಪೂರ್ವ ಸಾಂಗತ್ಯಮಂ ಬಿನ್ನೈಸಲು, ಆ ಪ್ರಭುದೇವರು ಆ ಚಿಕ್ಕದಣ್ಣಾಯಕರ ಅಱಿವ ಕೊಂಡಾಡುತ್ತಿದ್ದ ಪ್ರಸ್ತಾವದ ವಚನ:

ಅಂದಂದಿನ ಮಾತನಂದಂದಿಗೆ ಅಱಿಯಬಾರದು. ಹಿಂದೆ ಹೋದ ಯುಗ ಪ್ರಳಯಂಗಳ ಬಲ್ಲವರಾರಯ್ಯ? ಮುಂದೆ ಬಪ್ಪ ಯುಗಪ್ರಳಯಂಗಳ ಬಲ್ಲವರಾರಯ್ಯ? ಆ ಬಸವಣ್ಣನು ಆದಿಯಲ್ಲಿ ಲಿಂಗಶರಣನೆಂಬುದ ಭೇದಿಸಿ ನೋಡಿ, ಅಱಿವರಿನ್ನಾರಯ್ಯ? [3]ಲಿಂಗ[3]-ಜಂಗಮದ ಪ್ರಸಾದದ ಮಹಾತ್ಮೆಗೆ ಬಸವಣ್ಣನೆ ಆದಿಯಾದನೆಂಬುದನಱಿದ ಸ್ವಯಂಭುಜ್ಞಾನಿ ಗೊಗೇಶ್ವರಲಿಂಗದಲ್ಲಿ ಚೆನ್ನಬಸವಣ್ಣ ನೀನೊಬ್ಬನೆ. ೪೮೭-೫೯೬-8-32.

ಬಸವಣ್ಣನೆ ಆದಿ ಶರಣ, ಆತನ ಮಹಿಮೆಯನಱಿದ ನಿನ್ನ ಜ್ಞಾನಕ್ಕೆ ಪ್ರತಿಯಿಲ್ಲ ವೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚೆನ್ನಬಸವರಾಜದೇವರು—ಬಸವಣ್ಣನು ಆದಿಶರಣನೆಂಬುದ ನುಡಿಯಲಾಗದೆಂದು ಆ ಪ್ರಭುದೇವರೊಡನೆ ಬಿನ್ನೈಸುವ ಪ್ರಸ್ತಾವದ ವಚನ:

ಆದಿ ಬಸವಣ್ಣನು, ಅನಾದಿ ಲಿಂಗವೆಂಬ ಮಾತು ಹುಸಿ-ಹುಸಿ: ಈ ನುಡಿಯ ಕೇಳಲಾಗದು. [4]ಆದಿ ಲಿಂಗ[4], ಅನಾದಿ ಬಸವಣ್ಣನು. ಲಿಂಗವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು. ಜಂಗಮವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು. ಪ್ರಸಾದವು ಬಸವಣ್ಣ ನನುಕರಿಸಲಾಯಿತ್ತು. ಇಂತೀ ತ್ರಿವಿಧಕ್ಕೆ ಬಸವಣ್ಣನೆ ಕಾರಣನೆಂದಱಿದೆನಯ್ಯ ಕೂಡಲಚೆನ್ನಸಂಗಮದೇವ. ೪೮೮-೫೯೭-8-33.

ಹೀಂಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ:

[5]ಕಾಯವಿಡಿದು ಹುಟ್ಟಿದಾತ ಕಾಲಾಗ್ನಿರುದ್ರನಾಗಲಿ, ಕಾಯವಿಡಿದು ಹುಟ್ಟಿದಾತ ಕಾಮಸಂಹಾರಿಯಾಗಲಿ, ಕಾಯವಿಡಿದು ಹುಟ್ಟಿದಾತ ಅನಾದಿಪರಮೇಶ್ವರನಾಗಲಿ, ಅಱಿವು ಸಾಧ್ಯವಾಗದು ಆರಿಗೂ. ಗೊಗೇಶ್ವರಲಿಂಗದಲ್ಲಿ ನೀನು ಕಾಯವಿಡಿದು ಕಲ್ಪಿತವ ಹೊದ್ದೆ ಎಂಬುದು ಕಾಣಬಂದಿತ್ತು, ನೋಡಾ ಚೆನ್ನಬಸವಣ್ಣ[5]. ೪೮೯-೫೯೮-8-34.

---

[1] (ಶಿ) ಪಂಚಬ್ರಹ್ಮದ (ಹ) (ಶ್ರೀ). [2] ಸರ್ವಾಂಗದಲ್ಲಿ ಸ್ವಾಯತವ (ಹ). [3] (ಶಿಗೂ) ಗುರುಲಿಂಗ (ಹ). [4] (ಶಿಗೂ) ಆದೇಕೆಂದಡೆ (ಹ). [5] ಕಾಯವಿಡಿದು ಹುಟ್ಟಿದಾತ ಕಾಲಾಗ್ನಿ

ಶರೀರವಿಡಿದು ದಿವ್ಯಜ್ಞಾನಿ ನೀನೊಬ್ಬನೆ ಎಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು—ಕಾಯವಿಡಿದು ನಿಮ್ಮ ಕಂಡೆನೆಂದು ಬಿನ್ನೈಸಿದ ಪ್ರಸ್ತಾವದ ವಚನ :

ಕಾಯದಿಂದ ಲಿಂಗದರ್ಶನ, ಕಾಯದಿಂದ ಜಂಗಮದರ್ಶನ, ಕಾಯದಿಂದ ಪ್ರಸಾದ ಸಂಪತ್ತು, ಕೂಡಲಚೆನ್ನ ಸಂಗಯ್ಯ, ಕಾಯದಿಂದ ನಿಮ್ಮ ಕಂಡೆನು. ೪೯೦–೫೯೯–8–35.

ಇಂತು, ಶರೀರವಿಡಿದು ನಿಮ್ಮ ಕಂಡೆನೆಂದು ಬಿನ್ನೈಸಲು, ಇದಕ್ಕೆ ಪ್ರಭುದೇವರು ಆಚಾರವೇ ಅಂಗವಾಗಿಪ್ಪಡೆ, ನೀವಲ್ಲದೆ ಮತ್ತಾರೂ ಇಲ್ಲವೆಂದು ಆ ಚಿಕ್ಕದಣ್ಣಾಯಕರ ಕೊಂಡಾಡಿದ ವಚನ :

ಅಂಗವಿಡಿದು ಅಂಗ-ಅನಂಗವೆಂಬೆರಡನೂ ಹೊದ್ದದ ಮಹಿಮನು ನೋಡ. ಅಂಗವೆ ಆಚಾರವಾಗಿ ಇರಬಲ್ಲ, ಆಚಾರವೆ ಅಂಗವಾಗಿರಬಲ್ಲನಾಗಿ, ಅಂಗವಿಲ್ಲದ-ಪ್ರತಿಮನು ನೋಡ. ಆಚಾರವೆ ಸ್ವಾಯತ, ಆಚಾರವೆ ಪ್ರಾಣ. ಗೊಗೇಶ್ವರಲಿಂಗದಲ್ಲಿ ನಿನ್ನ ಆಚಾರಭಿಕ್ಷವನಿಕ್ಕಾ ಚೆನ್ನಬಸವಣ್ಣ. ೪೯೧–೬೦೦–8–36.

ನೀನು ಸದಾಚಾರವೆ ಸರ್ವಾಂಗವಾಗಿಪ್ಪೆಯಾಗಿ, ಎನಗೆ ನಿನ್ನ ಸರ್ವಾಚಾರಸಂಪತ್ತಿನ ಕಾರುಣ್ಯಪ್ರಸಾದವನಿಕ್ಕೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಆಚಾರವೆಂಬುದು ಸಂಗನ ಬಸವಣ್ಣಂಗುಂಟಲ್ಲವೆ ಎನಗೆ ಇಲ್ಲೆಂದು ಬಿನ್ನೈಸುವ ಪ್ರಸ್ತಾವದ ವಚನ : *

[1]ಆಯತ[1]ಲಿಂಗದಲ್ಲಿ ಆಗಾಗಿ, ಆಚಾರಲಿಂಗಪ್ರಾಣಿಯಾದ. ಆಚಾರಲಿಂಗದಲ್ಲಿ ಅವಧಾನಿಯಾಗಿ, ಸರ್ವಾಚಾರಸಂಪನ್ನನಾದ. ಸರ್ವಾಚಾರಸಂಪತ್ತಿನಲ್ಲಿ ಲಿಂಗೈಕ್ಯವಾಗಿಪ್ಪನು. ಕೂಡಲ ಚೆನ್ನ ಸಂಗಯ್ಯನಲ್ಲಿ ಸಂಗನ ಬಸವಣ್ಣನು ಆಚಾರವ ಬಲ್ಲನಲ್ಲದೆ ನಾನೆತ್ತ ಬಲ್ಲೆನಯ್ಯ ಪ್ರಭುವೆ. ೪೯೨–೬೩೭–8–37. ಮತ್ತಂ :

ಆಚಾರವೆಂಬುದು ಅಗೋಚರ ನೋಡಯ್ಯ, ಮಾಡಿದಲ್ಲದೆ ಇಲ್ಲ. ಒಡಲುವಿಡಿದರೆ ಹಿಡಿಯಲಿಲ್ಲವಯ್ಯ. ಮಾಟ-ಕೂಟವೆಂಬ [2]ಈಸುವ ಕಳೆದಿಪ್ಪ[2], ಕೂಡಲ ಚೆನ್ನ ಸಂಗಯ್ಯನಲ್ಲಿ, ಆಚಾರದ ಅನುವ ಸಂಗನ ಬಸವಣ್ಣ ಬಲ್ಲ ನೋಡಾ ಪ್ರಭುವೆ. ೪೯೩–೬೦೨–8–38.

---

ರುದ್ರನಾಗಲಿ, ಕಾಮಸುಹಾರಿಯಾಗಲಿ, ಆದಿಪರಶಿವನಾಗಲಿ ಅಜುವು ಸಾಧ್ಯವಾಗದು. ಮತ್ತಾರಿಗೆಯೂ ಗೊಗೇಶ್ವರ ಲಿಂಗದಲ್ಲಿ ನೀನು ಕಾಯವಿಡಿದು ಹುಟ್ಟಿ ಕಾಲಕಲ್ಪಿತವ ಹೊದ್ದನೆಂಬುದು ಎನಗೆ ಕಾಣಬಂದಿತ್ತು ನೋಡಾ ಚೆನ್ನಬಸವಣ್ಣ (ಹ).

[1] (ಶಿ) ಗುರು (ಗೂ) × (ಹ). * ಇಲ್ಲಿಂದ ಮುಂದೆ "ಹ" ಪ್ರತಿಯಲ್ಲಿ ವೀರಶೈವದ ಅರ್ಪಣ-ಮಿಶ್ರಾರ್ಪಣ ಮುಂತಾದ ಹಲವಾರು ವಿಷಯಗಳ ದೀರ್ಘ ಪ್ರಸ್ತಾಪ ಬರುವುದು. ಇದಾವುದೂ "ಶಿ" "ಗೂ" ಗಳಲ್ಲಿಲ್ಲ. [2] (ಗೂ ಉ) ಈ ಸುಖವ ಕಳೆದಿಪ್ಪ (ಶಿ) ಉಭಯದ ಮರ್ಮವನಂದು ಮಾಡುತಿಪ್ಪ (ಹ).

ಆಚಾರದನುವ ಬಸವಣ್ಣ ಬಲ್ಲನೆಂದು ಚಿಕ್ಕದಣ್ಣಾಯಕರು ಬಿನ್ನೈಸಲು ಬಸವಣ್ಣನ ಆಚಾರವೆಂತಿಪ್ಪುದೆಂದು ಪ್ರಭುದೇವರು ಆ ಚಿಕ್ಕದಣ್ಣಾಯಕರ ಬೆಸಗೊಂಬ ವಚನ:

ಆಯುತ-ಸ್ವಾಯತ ಸನ್ನಿಹಿತನಾಗಿ, ಆರಾಧ್ಯಲಿಂಗದಲ್ಲಿ ಅನುಭವಿಯಾಗಿಪ್ಪನು. ಜಂಗಮಲಿಂಗಪ್ರಾಣಿಯಾಗಿ, ಪ್ರಾಣ-ನಿಃಪ್ರಾಣವಾಗಿಪ್ಪನು. ಗೊಗೇಶ್ವರ ಲಿಂಗದಲ್ಲಿ ಸಂಗನ ಬಸವಣ್ಣನ ಆಚಾರದ ಪರಿ ನಿನಗಲ್ಲದೆ ಅಱಿಯ ಬಾರದು; ಎನಗೊಮ್ಮೆ ತಿಳುಹಿಕೊಡಾ ಚೆನ್ನಬಸವಣ್ಣ. ೪೯೪-೬೦೩-8-39.

ಇಂತು ಬಸವರಾಜದೇವರ ಆಚಾರದನುವನು ಎನಗೊಮ್ಮೆ ತಿಳುಹಿಕೊಡೆಂದು ಪ್ರಭುದೇವರು ನಿರೂಪಿಸಲು, ಚಿಕ್ಕದಣ್ಣಾಯಕರು ಆ ಬಸವರಾಜದೇವರ ಸದಾಚಾರ ವರ್ತನೆಯ ಪ್ರಭುದೇವರೊಡನೆ ಬಿನ್ನೈಸಿದ ಪ್ರಸ್ತಾವದ ವಚನ:

ಆಚಾರವಂಗಸಂಬಂಧವಾದಲ್ಲಿ ಶ್ರೀಗುರು ಸನ್ನಿಹಿತ. ಅಱಿವುಮನಸಂಬಂಧ ವಾದಲ್ಲಿ ಶಿವಲಿಂಗ ಸನ್ನಿಹಿತ. ಈ ಉಭಯ ಸನ್ನಿಹಿತವಾದಲ್ಲಿ ಜಂಗಮ ಸನ್ನಿಹಿತ. ಇದು ಕಾರಣ, ಕೂಡಲಚೆನ್ನಸಂಗ, ^A^ನಿಮ್ಮಲ್ಲಿ ತ್ರಿವಿಧಸಂಪನ್ನ^A^ ಶರಣ ಸಂಗನ ಬಸವಣ್ಣನು. ೪೯೬-೬೦೪-8-40. ಮತ್ತಂ:

ಮರಕ್ಕೆ ಬಿತ್ತು ಹುಟ್ಟಿದರೇನಯ್ಯ? ಬಿತ್ತಿಂಗೆ ಮರ ಹುಟ್ಟಿದರೇನಯ್ಯ? ಮರದ ಬೆಳಸಿನ ಫಲದ ಪರಿಯ ಬೆಸಗೊಳಲಿಲ್ಲ. ಸಸಿ ಪಲ್ಲವಿಸಿ ತ್ರಿವಿಧವಾಯಿತ್ತು—ಕೂಡಲ ಚೆನ್ನಸಂಗ, ನಿಮ್ಮ ಶರಣ ಬಸವಣ್ಣಂಗೆ. ೪೯೭-೬೩೫-8-42.

ಇಂತು ಚೆನ್ನಬಸವರಾಜದೇವರು ಸಂಗನ ಬಸವಣ್ಣನ ಸರ್ವಾಚಾರಸಂಪತ್ತ ಕೊಂಡಾಡಿ ಪ್ರಭುದೇವರಿಗೆ ಬಿನ್ನೈಸಲು, ಆ ಪ್ರಭುದೇವರು--ಬಸವರಾಜದೇವರು ಮಾಡುವ ದಾಸೋಹವನು ಮಥನಿಸಿ ನೋಡುವ ಪ್ರಸ್ತಾವದ ವಚನ:

ಲಿಂಗದಲ್ಲಿ ಆಗಾಗಿ, ಅಂಗವಿರಹಿತನಾಗಿ; ಫಲವೇನಯ್ಯ? ಜಂಗಮದಲ್ಲಿ ಸನ್ನಿಹಿತ ವಾಗಿ, ದಾಸೋಹವ ಮಾಡಿ; ಫಲವೇನಯ್ಯ? ನೀ—ನಾನೆಂಬ ಭಾವವುಳ್ಳನ್ನಕ್ಕರ, ಜಂಗಮದಲ್ಲಿ ಸಮಯಾಚಾರಿಯಾಗಿಪ್ಪನ್ನಕ್ಕರ, ಮಾಡುವ ಭಕ್ತಿಗೆ ಭಿನ್ನವಿದೆ. ಗೊಗೇಶ್ವರಲಿಂಗದಲ್ಲಿ ಸಂಗನ [1][ಬಸವಣ್ಣನ][1] ಆಚರಣೆ ತಿಳಿಯದು ನೋಡಾ, ಚೆನ್ನ ಬಸವಣ್ಣ! ೪೯೮-೬೩೭-8-43.

ಇಂತು ಪ್ರಭುದೇವರು ಬಸವರಾಜ[2]ದೇವರ[2] ವರ್ತನೆ ತಿಳಿಯದೆಂದು ನಿರೂಪಿಸಲು ಚಿಕ್ಕದಣ್ಣಾಯಕರು ಆ ಬಸವರಾಜದೇವರ ವರ್ತನೆಯ ನಿಲವನು ಆ ಪ್ರಭುದೇವ ರೊಡನೆ ಬಿನ್ನೈಸುತ್ತಿದ್ದ ಪ್ರಸ್ತಾವದ ವಚನ:

ಸಂಗವಿಡಿದಂತೆ ಸಂಗವಿಡಿದು [3]ನೋಡದಿರಯ್ಯ[3]! ಶರಣ ಸಂಗಸೂತಕಿಯಲ್ಲ. ಲಿಂಗಪರಿಚಿತನ ಸಂಗವಂತನೆನ್ನದಿರಯ್ಯ! ಶರಣ ಮನ ಬಂದಂತೆ ಮಾಡುವ. ಅಱಿಸಿ ಸಕಲಾಗಮಾಚಾರ್ಯನಪ್ಪ. ಅಹುದಾಗದೆಂಬುದಿಲ್ಲ ನೋಡಯ್ಯ. ಕೂಡಲ ಚೆನ್ನಸಂಗ,

[1] ಬಸವಣ್ಣಂಗೆಸೂ (ಶಿ) ಬಸವಣ್ಣಂಗಿನ್ನೂ (ಹ) ಬಸವಣ್ಣಂಗೆ (ಗೂಉ). [2] (ಶಿಹ) ದೇವರಿಗೆ (ಗೂಉ). [3] (ಹಗೂ) ನೋಡದಿಪ್ಪರಯ್ಯ (ಶಿ).

ನಿಮ್ಮ ಶರಣ ಬಸವಣ್ಣನು ಸಂಗಿಯಲ್ಲ ನಿಸ್ಸಂಗಿಯಲ್ಲ. ೪೯೯-೬೩೮-8-44. ಮತ್ತಂ:

ಆನೆಂಬುದಿಲ್ಲಯ್ಯ ಲಿಂಗವೆಂಬ ಮಹಂತಂಗೆ. ಅಳಿಯನುಳಿಯ ನೋಡಾ! ಮಿಂಚಿನ ಗೊಂಚಲಂತೆ ಹಿಂದೆ ರೂಪಾಗಿ ತೋರುತ್ತಿಪ್ಪುದು. ಶರಣನೊಡಲುಗೊಂಡೊಡೆ ಸಾಮಾನ್ಯನೆ? ಪ್ರಕೃತಿಗುಣಭಿನ್ನಭಾವಿಯಲ್ಲ, ಕೂಡಲ ಚೆನ್ನಸಂಗ, ನಿಮ್ಮ ಶರಣ ಬಸವಣ್ಣನ ಪರಿ ಬೇಱೆ. ೫೦೦-೬೩೯-8-45. ಮತ್ತಂ:

ಅನಾಯಾಸದಿಂದ ಮನೆಯ ಮಾಡಿ, ನಿರಾಯಾಸದಿಂದ ಪರಮಸುಖಿ; ರೂಪಿಸುವಲ್ಲಿ ರೂಪಾಧಿಕ, ನೋಡುವಲ್ಲಿ ನೋಟ ಘನ. ಇಂತಹ ಸಹಜಸಂಗಿಯ ನಿಲವಿನ ಪರಿ-ಉದಕದೊಳಗಣ ಬಿಂದು ಉದಯರತ್ನದಂತೆ, ಕೂಡಲಚೆನ್ನಸಂಗ, ನಿಮ್ಮ ಶರಣನ ಪರಿ! ೫೦೧-೬೪೦-8-46. ಮತ್ತಂ:

ಶರಣನು ಅದೃಷ್ಟ-ದೃಷ್ಟವನಱಿಯನು. ಸಾವಯ-ನಿರವಯವನೇನೆಂದು ವಿವರಿಸಿ ನುಡಿಯನು. ತಾ ಸ್ವತಂತ್ರನಾಗಿ ಭಾವರಹಿತನು. [1]ಕೃತಕ[1]ವೇಷದಿಂ ಸುಕೃತವ ಬೋಧಿಸುವನಲ್ಲ. ಪ್ರಕೃತಿಗುಣವಿಡಿದು ಮೂರ್ತಿಯಾದ ಉಪಜೀವಕ ತಾನಲ್ಲ. ಕೂಡಲಚೆನ್ನಸಂಗ, ನಿಮ್ಮ ಶರಣ ಸಾರಾಯಸನುಮತನು. ೫೦೨-೬೪೧-8-47. ಮತ್ತಂ:

ದೇಹಿಯಲ್ಲ, ನಿರ್ದೇಹಿಯಲ್ಲ. ಬೋಧನಲ್ಲ, ನಿರ್ಬೋಧನಲ್ಲ. [2]ಕಾಮಿಯಲ್ಲ, ನಿಃಕಾಮಿಯಲ್ಲ.[2] ಆಶೆವಿಡಿದು ಬಂದ [3][ಆಮಿಷ ತಾನಲ್ಲ][3]. ಅವಗುಣವಿಲ್ಲದ ನಿರ್ಗುಣಿ ನೋಡಯ್ಯ, ಕೂಡಲಚೆನ್ನಸಂಗ, ನಿಮ್ಮ ಶರಣ [4]ನೋಡಯ್ಯ[4]. ೫೦೩-೬೪೨-8-48. ಮತ್ತಂ:

ಮೂರ್ತನಲ್ಲ, ಅಮೂರ್ತನಲ್ಲ. ಲಿಂಗವಲ್ಲಿ ಪ್ರಾಣಸಂಚಿತ, ಪ್ರಾಣದಲ್ಲಿ ಪ್ರಸಾದ ಸಂವರಣೆ. ಪ್ರಸಾದದಲ್ಲಿ ಕಾಯಾಶ್ರಿತನು. ಲೋಕಲೌಕಿಕಪ್ರಕಾರದುದಯನಲ್ಲ ಕೂಡಲಚೆನ್ನ [5]ಸಂಗನ ಶರಣನು[5]. ೫೦೪-೬೪೩-8-49. ಮತ್ತಂ:

ಶರಣನು ದೃಷ್ಟ-ಅದೃಷ್ಟ ಕಾಣಯ್ಯ! [6]ಮುಟ್ಟದ ಮುಟ್ಟು ಕಾಣಯ್ಯ[6]! ಆಗಿನ ಆಗು ಕಾಣಯ್ಯ! ಭೇದದ ಭೇದ ಕಾಣಯ್ಯ! ಅಱಿವಿನ ಅಱಿವು ಕಾಣಯ್ಯ! ಲಿಂಗದಲ್ಲಿ [7]ಹಿಂಗ ಸಂದು[7], ಕೂಡಲಚೆನ್ನಸಂಗ, ನಿಮ್ಮಲ್ಲಿ ಬಸವಣ್ಣ ಕಾಣಯ್ಯ. ೫೦೫-೬೪೪-8-50. ಮತ್ತಂ:

ಸಕಳ-ನಿಃಕಳನಯ್ಯ. ನಿಃಕಳ-ಸಕಳನಯ್ಯ. ಸಕಳನಾಗಿ ಸಂಸಾರಿಯಲ್ಲ. ನಿಃಕಳ

[1] (ಶಿ) ವಿಕೃತ (ಹಗೂ). [2] (ಶಿಗೂ) ಕಾಯನಲ್ಲ ನಿಃಕಾಯನಲ್ಲ (ಹ). [3] ಅನುಮಿಷ ತಾನಲ್ಲ (ಶಿ) ಅನಿಮಿಷನಲ್ಲ (ಗೂ) ಆಮಿಷನಲ್ಲ (ಹ). [4] (ಶಿಗೂ) ಬಸವಣ್ಣನು (ಹ). [5] (ಶಿ) ಸಂಗಾ ನಿಮ್ಮ ಶರಣನು (ಗೂ) ಸಂಗಾ ನಿಮ್ಮ ಶರಣ ಬಸವಣ್ಣನು (ಹ). [6] (ಹ) ಮುಟ್ಟದ ಮುಟ್ಟ ಕಾಣಯ್ಯ (ಶಿ) ಮುಟ್ಟದೆ ಮುಟ್ಟುವ ಕಾಣಯ್ಯ (ಗೂ). [6] (ಹ) ಹಿಂಗದ ಸಂದು (ಶಿ) ಹಿಂಗದ ಬಿಂದು (ಗೂ).

ನಾಗಿ ವೈರಾಗಿಯಲ್ಲ. ಸಂಸಾರಿಯಲ್ಲದ ಸಂಗ; ವೈರಾಗಿಯಲ್ಲದ ನಿಸ್ಸಂಗ. ಸಂಗದಿಂದ ಮಹತ್ತನೆಯ್ದಿಪ್ಪನಾಗಿ, "ಸ್ಥಾವರಂ ಜಂಗಮಂ ಚೈವ ದ್ವಿವಿಧಂ ಲಿಂಗಮುಚ್ಯತೇ" ಎಂದುದಾಗಿ, ಕೂಡಲಚೆನ್ನಸಂಗನೆಂತಿದ್ದನಂತೆ ಇಪ್ಪನಲ್ಲದೆ ನಿಮ್ಮ ಶರಣ ಕ್ಷೀಣನಲ್ಲ. ೫೦೬–೬೪೫–8–51.

ಇಂತು ಚಿಕ್ಕದಣ್ಣಾಯಕರು ಬಸವರಾಜದೇವರ ನಿಲವಿನ ಮಹಾತ್ಮೆಯನು ನಾನಾ ವಿಧದಿಂ ಸ್ತೋತ್ರವ ಮಾಡುತ್ತ ಪ್ರಭುದೇವರಿಗೆ ಬಿನ್ನಪಂಗೆಯ್ಯಲು, ಆ ಪ್ರಭುದೇವರು ಪ್ರಸನ್ನರಾಗಿ ಚಿಕ್ಕದಣ್ಣಾಯಕರನು ಕೊಂಡಾಡಿದ ಪ್ರಸ್ತಾವದ ವಚನ:

ಅಂಗವೆಂಬ ಸಂಸಾರದೊಳಗೆ ಸನೆದವರೆಲ್ಲರೂ ಶಿವನನಱಿವರೆ? ಮನವೆಂಬ ಸಂಕಲ್ಪದ [1]ಕುಣಿಕೆಗೆ[1] ಒಳಗಾದವರೆಲ್ಲರೂ ಮಾಯದ ಹೊಡೆಗಿಚ್ಚ ಗೆಲಬಲ್ಲರೆ? ಗೊಗೇಶ್ವರಲಿಂಗದಲ್ಲಿ ಸರ್ವಸಂದೇಹವ ಕಳೆದಿಪ್ಪ ಚೆನ್ನಬಸವಣ್ಣಂಗೆ ನಮೋ ನಮೋ ಎಂಬೆನು. ೫೦೭–೬೬೯–8–52. ಮತ್ತಂ:

ತಾನೆಂದೆನಲೊಲ್ಲದೆ ಗುರುವೆಂದು ಹಿಡಿದವನ, ಗುರುವೆಂದಲ್ಲಿ ನೀನೆಂದು ನಡೆದವನ ನೀನೆಂದಲ್ಲಿಯೇ ಲಿಂಗ-ಜಂಗಮದ ಸಕೀಲ-ಸಂಬಂಧನ ನೆಲೆಗೊಳಿಸಿದವನ, ಲಿಂಗ-ಜಂಗಮದಲ್ಲಿ ತನ್ನ ಮಱೆದು ಕಱಿಗೊಂಡ ಲಿಂಗೈಕ್ಯನ, ಗೊಗೇಶ್ವರಲಿಂಗದಲ್ಲಿ ಚೆನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತ್ತಿದ್ದೆನು. ೫೦೮–೬೭೦–8–53.

ಇಂತು ಪ್ರಭುದೇವರು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡಲು, ಆ ಚಿಕ್ಕದಣ್ಣಾಯಕರು—ತಮ್ಮ ಸಂಸಾರಭ್ರಾಂತಿಯ ಪ್ರಭುದೇವರಿಂದಳಿದು ಕೃತಾರ್ಥನಾದೆನೆಂದು ಸ್ತೋತ್ರವ ಮಾಡಿದ ಪ್ರಸ್ತಾವದ ವಚನ:

ಇಲ್ಲದ ಸಂಸಾರ ಕಣ್ಣ ಮುಂದೆ ಬಂದು ರೂಪಾಗಿ ಕಾಡುತ್ತಿದ್ದರೆ, ಸುಜ್ಞಾನವೆಂಬ ಅಂಜನವನೆಚ್ಚಿ ಸಕಲಭ್ರಮೆಯೆಂಬ ಕತ್ತಲೆಯ ಕಳೆದು, [2]ನಿಜಲಿಂಗ[2] ಸಂಬಂಧನ ನೆಲೆಗೊಳಿಸಿ, ನಿತ್ಯದಲ್ಲಿ ಅಚ್ಯೋತ್ತಿದನಾಗಿ ಕೂಡಲಚೆನ್ನಸಂಗನಲ್ಲಿ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂಬೆನು. ೫೦೯–೬೭೧–8–54.

ಹೀಂಗೆಂದು ಬಿನ್ನಪಂಗೆಯ್ದು ಸ್ತೋತ್ರಮಂ ಮಾಡಲು, ಮರಳಿ ಪ್ರಭುದೇವರು ಚಿಕ್ಕದಣ್ಣಾಯಕರ ಕೊಂಡಾಡಿದ ಪ್ರಸ್ತಾವದ ವಚನ:

ನರಲೋಕದ ನರರುಗಳೆಲ್ಲರು [3]ನರಕ[3]ಸಂಸಾರಕ್ಕೊಳಗಾದರು. ಸುರಲೋಕದ ಸುರರುಗಳೆಲ್ಲರು ಸುರಸಂಸಾರಕ್ಕೊಳಗಾದರು. ಮುನಿಲೋಕದ ಋಷಿಗಳೆಲ್ಲರು ತಪೋಸಂಸಾರಕ್ಕೊಳಗಾದರು. ರುದ್ರಲೋಕದ ರುದ್ರಗಣಂಗಳೆಲ್ಲರು ರುದ್ರಪದವೆಂಬ ಸಂಸಾರಕ್ಕೊಳಗಾದರು. ಲಿಂಗವ ಧರಿಸಿದವರೆಲ್ಲರು ಲಿಂಗಸಂಸಾರಕ್ಕೊಳಗಾದರು. ಜಂಗಮವ ಪೂಜಿಸಿದವರೆಲ್ಲರು ಸಾಯುಜ್ಯಸಂಸಾರಕ್ಕೊಳಗಾದರು. ಪ್ರಸಾದ-ಪಾದೋದಕ ಸಂಬಂಧಿಗಳೆಲ್ಲರು ಪ್ರಸಾದಸಂಸಾರಕ್ಕೊಳಗಾದರು. ಗೊಗೇಶ್ವರಲಿಂಗದಲ್ಲಿ ಸರ್ವಸಂಸಾರ

[1] (ಶಿಹ) ಕುಣಿಗೆ (ಗೂ). [2] (ಶಿಗೂ) ನಿಜಲಿಂಗಾಂಗ (ಹ). [3] (ಶಿ) ನರ (ಹಗೂ).

ವಿರಹಿತನು ಚೆನ್ನಬಸವಣ್ಣಂಗೆ ನಮೋ ನಮೋ ಎಂಬೆನು. ೫೧೦-೫೪೪, ೬೭೨-8_55.

ಇಂತು ಪ್ರಭುದೇವರು ಸ್ತೋತ್ರವಂ ಮಾಡಲು, ಚಿಕ್ಕದಣ್ಣಾಯಕರು ತಾವು ಪ್ರಭುದೇವರ [1]ಕೂಡಿ[1] ಕೃತಾರ್ಥರಾದ ಭಾವವ ತೋಱಿ, ಆ ಪ್ರಭುದೇವರ ಕೊಂಡಾಡಿದ ಪ್ರಸ್ತಾವದ ವಚನ:

ಎನ್ನ ಸಂಸಾರಸೂತಕವ ತೊಡೆದು, ನಿಜಲಿಂಗದಲ್ಲಿ ನಿರಹಂಕಾರವೆಂಬ ಘನವ ತೋಱಿದನಯ್ಯ ಒಬ್ಬ ಶರಣನು. ಎನಗಾರೂ ಇಲ್ಲವೆಂದು ಪ್ರಭುದೇವರೆಂಬ ಒಬ್ಬ ಶರಣನ [2]ಕೃತಾರ್ಥನ[2] ಮಾಡಿ ಎನ್ನ ಕಣ್ಣ ಮುಂದೆ ಸುಳಿಯಿಸಿದನಯ್ಯ ಒಬ್ಬ ಶರಣನು. ಆ ಶರಣನ ಕೃಪೆಯಿಂದ ಪ್ರಭುವೆಂಬ ಘನವ ಕಂಡು, ಮನ ಮನ ಲೀಯವಾಗಿ, ಘನ ಘನ ಒಂದಾದ ಕಾರಣ, ಕೂಡಲಚೆನ್ನಸಂಗಯ್ಯನಲ್ಲಿ ಅಲ್ಲಯ್ಯನೆಂಬ ಮಹಿಮಂಗೆ ನಮೋ ನಮೋ ಎನುತಿರ್ದೆನು. ೫೧೧-೫೪೫-8-56.

ಇಂತು ಚಿಕ್ಕದಣ್ಣಾಯಕರು ತನುಗೂ ಪ್ರಭುವಿಂಗೂ ಒಂದೆ ಸಂಪ್ರದಾಯದಲ್ಲಿ ನಿಜಪದ ಸಾಧ್ಯವಾಯಿತ್ತೆಂದು ಬಿನ್ನಪಂಗೆಯ್ಯಲು, ಇದಕ್ಕೆ ಆ ಪ್ರಭುದೇವರು ಚಿಕ್ಕದಣ್ಣಾಯಕರೊಡನೆ ಇಬ್ಬರಿಗೂ ಒಂದೆ-ಠಾವಿನಲ್ಲಿ, ಸಂಪ್ರದಾಯದಲ್ಲಿ ನಿಜವಳವಟ್ಟ ಪರಿ ಎಂತೆಂದು ಬೆಸಗೊಂಬ ಪ್ರಸ್ತಾವದ ವಚನ:

ತಿಂಬ ಗಂಡೆಯ ಮೇಲೆ ಉಗುರು ಬಿದ್ದಂತಾಯಿತ್ತು. ಅಱಸುವ ಬಳ್ಳಿ ಕಾಲ ಸುತ್ತಿದಂತಾಯಿತ್ತು. ನಾನು ಬಯಸುವ ಬಯಕೆ ತಾರ್ಕಣೆಗೆ ಬಂದಿತ್ತು. ಗೊಗೇಶ್ವರ ಲಿಂಗದಲ್ಲಿ ಎನಗೂ ನಿನಗೂ [3]ಒಂದಾದ[3] ಪರಿ ಎಂತು ಹೇಳಾ, ಚೆನ್ನಬಸವಣ್ಣಾ ? ೫೧೨-೫೪೬-8-57.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಬಿನ್ನೈಸಿದ ಪ್ರಸ್ತಾವದ ವಚನ:

ಕಾಯ ಒಂದು, ಪ್ರಾಣ ಒಂದು; ಭಾವ ಒಂದು, ನಿರ್ಭಾವ ಒಂದು! ಒಂದಲ್ಲದೆ ಎರಡುಂಟೆ? ಗುರು ಒಂದು, ಲಿಂಗ ಒಂದು, ಉಪದೇಶ ಒಂದು! ಕೂಡಲಚೆನ್ನ ಸಂಗಯ್ಯನ ಶರಣ ಬಸವಣ್ಣನ ಗರುಡಿಯಲ್ಲಿ ಇಬ್ಬರಿಗೂ ಅಭ್ಯಾಸ ಒಂದೆ ಕಾಣಾ ಪ್ರಭುವೆ. ೫೧೩-೫೪೭-8-58.

ಹೀಂಗೆಂದು ಚಿಕ್ಕದಣ್ಣಾಯಕರು ಬಿನ್ನಪಂಗೆಯ್ಯಲು ಪ್ರಭುದೇವರು—ಬಸವಣ್ಣಂಗೆ ನಾವಿಬ್ಬರೂ ಶಿಷ್ಯರಾದ ಭೇದವೆಂತೆಂದು ಬೆಸಗೊಂಬ ಪ್ರಸ್ತಾವದ ವಚನ:

ಒಂದ ಮಾಡ ಹೋದಲ್ಲಿ ಮತ್ತೊಂದಾಯಿತ್ತೆಂಬುದು ದಿಟವಾಯಿತ್ತು ನೋಡಯ್ಯ. ನಿನ್ನ ಒಡತಣ ಅನುಭಾವದಿಂದ ಗುರುಮುಖ ಸಾಧ್ಯವಾದುದಯ್ಯ. ಗೊಗೇಶ್ವರ

---

[1] (ಶಿಹ) ಬೆರಸಿ (ಗೂ). [2] (ಶಿಗೂ) ಕರೆಮು ಕೃತಾರ್ಥನ (ಹ). [3] (ಶಿಗೂ) ಒಂದೆ ಸಾಂಪ್ರದಾಯವಾದ (ಹ).

ಲಿಂಗದಲ್ಲಿ ನಿನಗೂ ನನಗೂ ಉಪದೇಶ ಒಂದಾದ ಭೇದವ ಹೇಳಾ ಚೆನ್ನಬಸವಣ್ಣ. ೫೧೪–೫೪೮-8-59.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಇಬ್ಬರಿಗೂ ಸಂಪ್ರದಾಯ ಒಂದಾದ ಭೇದವ ಬಿನ್ನೈಸುವ ಪ್ರಸ್ತಾವದ ವಚನ:

ಅಂಗ-ಸಂಸಾರವಿರಹದೊಳು ಸವೆದು, [1][ಲಿಂಗವ ಅವಗ್ರಹಿಸಿಕೊಂಡ][1] ಮೃತ್ತಿಕಾ ಪಂಜರದೊಳಗೆ ಭುಜಂಗ ತಲೆ ಎತ್ತಿ ನೋಡಲು, ಥಳಥಳನೆ ಹೊಳೆವ ಮಾಣಿಕ್ಯದ ಬೆಳಗುಗಳೆಸೆಯಲು, ಸದ್ಯೋಜಾತನ ಜಟಾಮುಕುಟವ ಸುತ್ತಿರ್ದ ಫಣೀಂದ್ರನಲ್ಲದೆ ಮತ್ತಾರೂ ಅಲ್ಲೆಂದು ಶಿಖರನ ಮೊದಲುಗೊಂಡಗುಳಿಸಲು ಸುತ್ತಿರ್ದ [2]ಪಡಿ[2]ಸೂತ್ರವ ಕಂಡು ಚಕ್ಕನೆ ಕದವ ತೆಱೆ[3]ಯಲು, ದೃಷ್ಟಿಗೆ ದೃಷ್ಟವಾದನಿಮಿಷನ ಕರಸ್ಥಲವ ಕಂಡು ದೃ[= ದು]ಷ್ಟತನದಲ್ಲಿ ಲಿಂಗವ ತೆಗೆದುಕೊಂಡರೆ, ಸಂದು-ಕಳಾಸಂಗಳು ತಪ್ಪಿ, ಅಸ್ತಿಗಳು ಜೊಳಬೊಳನುದುರಲು—ಆತನ ಬೆಱಗು ನಿಮ್ಮ ಹೊಡೆದು ಖ್ಯಾತಿಯಾಯಿತ್ತು ನೋಡಯ್ಯ-ಅಲ್ಲಮಪ್ರಭುವೆಂಬ ನಾನು ನಿನಗೆ. ಭಕ್ತಿ ದಳದುಳದಿಂದ ಬಂದಿಕಾಱರಾಗಿ ಬಂದು ಹೊಕ್ಕಡೆ ಬದಣೆಯ ಕಾಯಿಗಳು ಬಾಣಲಿಂಗವಾಗವೆ ನಮ್ಮ ಬಸವಣ್ಣನ ದೃಷ್ಟಿ ತಾಗಲು? ಇದು ಕಾರಣ ಕೂಡಲಚೆನ್ನಸಂಗನಲ್ಲಿ—ಅನಿಮಿಷಪ್ರಭುವಿಂಗೆ ಬಸವಣ್ಣ ಗುರುವಾದ ಕಾರಣ ನಾನು ನಿಮಗೆ ಚಿಕ್ಕ ತಮ್ಮ ಕೇಳಾ ಪ್ರಭುವೆ. ೫೧೫-೫೪೯-8-60. ಮತ್ತಂ:

ಅನಿಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ. ಆ ಲಿಂಗ ನಿನಗೆ ಸೇರಿತ್ತಾಗಿ ಬಸವಣ್ಣನ ಸಂಪ್ರದಾಯದ ಕಂದ ನೋಡಾ ನೀನು. ಭಕ್ತಿದಳದುಳದಿಂದ ಚೆನ್ನ ಸಂಗಮನಾಥನೆಂಬ ಲಿಂಗವನವಗ್ರಹಿಸಿಕೊಂಡೆನಾಗಿ ಬಸವಣ್ಣನ ಸಂಪ್ರದಾಯದ ಕಂದ ನೋಡಾ ನಾನು. ಇಂತಿಬ್ಬರಿಗೂ ಒಂದೇ ಕುಳಸ್ಥಳವಾದ ಕಾರಣ, ಕೂಡಲ ಚೆನ್ನ ಸಂಗಯ್ಯನಲ್ಲಿ ಬಸವಣ್ಣನ ಮಹಾಮನೆಯ ಪ್ರಸಾದ ಇಬ್ಬರಿಗೂ ಒಂದೆ ಕಾಣಾ ಪ್ರಭುವೆ. ೫೧೬-೫೫೦-8-61.

ಹೀಂಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಕಿಱಿಯರಾದಡೇನು? ಹಿರಿಯರಾದಡೇನು? ಅಱಿವಿಂಗೆ ಹಿರಿದು ಕಿಱಿದುಂಟೆ? ಆದಿ-ಅನಾದಿ ಇಲ್ಲದಂದು, ಅಜಾಂಡ—ಬ್ರಹ್ಮಾಂಡಕೋಟಿಗಳುದಯವಾಗದಂದು, ಗೊಗ್ಗೇಶ್ವರಲಿಂಗದಲ್ಲಿ ನೀನೊಬ್ಬನೇ ಮಹಾಜ್ಞಾನಿ ಎಂಬುದು ಕಾಣಬಂದಿತ್ತು ನೋಡ ಚೆನ್ನಬಸವಣ್ಣ. ೫೧೭-೫೫೧-8-62.

ಇದಕ್ಕೆ ಚಿಕ್ಕಬಸವರಾಜದೇವರ ಪ್ರತ್ಯುತ್ತರ:

ಹಾಲುಂಡ ಸವಿಯ ಮೇಲುಪಂಕ್ತಿಯ ಹೇಳಬಹುದಲ್ಲದೆ, ಸುಖದ ಸೋಂಕಿನ

1 ಲಿಂಗವು ಅವಗ್ರಹಿಸಿಕೊಂಡ. (ಗೂ) ಲಿಂಗವ ಅವಗ್ರಹಿಸಿಕೊಂಡ (ಹ) ಲಿಂಗವು ಅವಗ್ರಹಿಸಿಕೊಂಡು (ಶಿ). 2 (ಶಿ) ಫಣಿ (ಹಗೂ).

ಸ್ವಾನುಭಾವವ ಹೇಳ ಬಾರದು, ಕೇಳ ಬಾರದು. ಇಂಬಿನ ಸೋಂಕು-ಸಂಬಂಧವಳಿದ ಬಳಿಕ ಉಪಚಾರ ಉಂಟೆ? ಕೂಡಲಚೆನ್ನಸಂಗಯ್ಯನಱುಹಿದಡೆ ಅಱಿದೆನಲ್ಲದೆ ಎನಗೆ ಬೇಱೆ[3] ಸ್ವತಂತ್ರಜ್ಞಾನವಿಲ್ಲ ಕೇಳಯ್ಯ. ೫೧೮-೫೫೨-8-63.

ನಾನು ನೀವುವಿಡಿದು ಅಱಿದೆನಲ್ಲದೆ ಸ್ವತಂತ್ರಜ್ಞಾನವಿಲ್ಲವೆಂದು ಚಿಕ್ಕದಣ್ಣಾಯಕರು ಬಿನ್ನಪಂಗೆಯ್ಯಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ:

ಲಿಂಗವಿಡಿದ ಅಱಿವು ಅಱಿವಲ್ಲ, ಗುರುವಿಡಿದ ಅಱಿವು ಅಱಿವಲ್ಲ. ಗುರುವಿಡಿದು ಲಿಂಗ ಉಂಟೆಂಬುದು ಕಲ್ಪಿತ, ತನ್ನಿಂದ ತಾನಹುದಲ್ಲದೆ ಗೊಗ್ಗೇಶ್ವರಲಿಂಗದಲ್ಲಿ ಹಂಗುಹಱಿಯದನ್ನಕ್ಕರ ತಾನಾಗಬಾರದು ಕಾಣ ಚೆನ್ನಬಸವಣ್ಣ. ೫೧೯-೫೫೩-8-64.

ಈ ಹಿಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚೆನ್ನಬಸವರಾಜದೇವರ ಪ್ರತ್ಯುತ್ತರ:

[1]ಗುರು[2]ವಿಲ್ಲದ ಲಿಂಗ ನಿನಗೆಲ್ಲಿಯದಯ್ಯ? ಕೊಂದೆ ನಿಮ್ಮಯ್ಯನ,ಕೊಂಡೆ ಲಿಂಗವನು! ಅಂದು ಅನಿಮಿಷ ನಿನಗೆ ಗುರುವಾದುದನಱಿಯಾ? ಕೂಡಲಚೆನ್ನಸಂಗಯ್ಯನಲ್ಲಿ ಮೂಱು ಲೋಕವಱಿಯೆ ಅಲ್ಲನು ವ್ರತಗೇಡಿ. ೫೨೦-೫೫೪-8-65.

ಅನಿಮಿಷನ ಕೊಂದು ಲಿಂಗವ ಕೊಂಡ ಕಾರಣ ನೀನು ಗುರುದ್ರೋಹಿಯೆಂದು ಚಿಕ್ಕದಣ್ಣಾಯಕರು ಬಿನ್ನೈಸಲು ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ:

ಗುರುವಿನ ಪ್ರಾಣಲಿಂಗದಲ್ಲಿ ಲೀಯವಾದ ಬಳಿಕ, ಆ ಲಿಂಗವೆನ್ನ ಕರಸ್ಥಲಕ್ಕೆ ಬಂದಿತ್ತು ನೋಡಾ. ಇದಾನೆ ನೋಡಾ ಎನ್ನ ಗುರು ಅನುಮಿಷನೆನ್ನ ಕರಸ್ಥಲದಲ್ಲಿ. ಇದಾನೆ ನೋಡಾ ಎನ್ನ ಗುರು ಅನಿಮಿಷನೆನ್ನ ಜ್ಞಾನದೊಳಗೆ. ಇದಾನೆ ನೋಡಾ ಎನ್ನ ಗುರುವಿನ ಗುರು ಪರಮಗುರು ಬಸವಣ್ಣನೆನ್ನ ಕಂಗಳ ಮುಂದೆ. ಗೊಗ್ಗೇಶ್ವರ ಸಾಕ್ಷಿಯಾಗಿ ಎನ್ನ ಮೇಲೆ ಗುರುದ್ರೋಹವಿಲ್ಲ ಕಾಣಾ ಚೆನ್ನಬಸವಣ್ಣ. ೫೨೧-೫೫೫-8-66.

ಹೀಂಗೆಂದು ಪ್ರಭುದೇವರು ನಿರೂಪಿಸಲು ಇದಕ್ಕೆ ಚಿಕ್ಕದಣ್ಣಾಯಕರು ಬಿನ್ನೈಸಿದ ಪ್ರತ್ಯುತ್ತರ:

ನೋಡುವುದೊಂದು, ನೋಡಿಸಿಕೊಂಬುದೊಂದು: ಇನ್ನೂ ನಿನ್ನಲ್ಲಿ ಎರಡುಂಟಲ್ಲಾ! ಕರಸ್ಥಲದಲ್ಲಿ ಒಂದು, ಮನಸ್ಥಲದಲ್ಲಿ ಒಂದು; ಇನ್ನೂ ನಿನ್ನಲ್ಲಿ ಎರಡುಂಟಲ್ಲಾ! ಕೂಡಲಚೆನ್ನಸಂಗಯ್ಯನಲ್ಲಿ ಗೊಗ್ಗೇಶ್ವರನೆಂಬ ಲಿಂಗವು ನಿನಗೆಂತು ಸಾಧ್ಯವಾಯಿತ್ತು ಹೇಳಾ ಪ್ರಭುವೆ? ೫೨೨-೫೫೬-8-67.

ಈ ಹಿಂಗೆಂದು ಬಿನ್ನೈಸಿದ ಚಿಕ್ಕದಣ್ಣಾಯಕರ ಉತ್ತರಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ:

ಕರಸ್ಥಲದ ಲಿಂಗ ಮನಸ್ಥಲದಲ್ಲಿ ವೇದ್ಯವಾಗಿ, ಮನಸ್ಥಲದ ಲಿಂಗ ಮಹಾಸ್ಥಲದಲ್ಲಿ ವೇದ್ಯವಾಗಿ, ಆ ಮಹಾಸ್ಥಲವೆನ್ನ ಸರ್ವಾಂಗ ವೇದ್ಯವಾದ ಬಳಿಕ, ಇನ್ನು ಭಿನ್ನಭಾವಕ್ಕೆ

ತೆಱಹುಂಟೆ ಗೊಗೇಶ್ವರನೆಂಬ ಪ್ರಾಣಲಿಂಗ ಬೆರಸಿ ಸಮಧಾತುವಾದ ಬಳಿಕ ಎರಡೆಂಬು ದಿಲ್ಲ ನೋಡಾ ಚೆನ್ನಬಸವಣ್ಣ. ೫೨೩-೫೫೭- 8-68. ಮತ್ತಂ :

ಲಿಂಗ ಪ್ರಾಣಲಿಂಗವಾಯ್ತು, ಅಂಗ ಲಿಂಗಾಂಗವಾಯ್ತು. ಗೊಗೇಶ್ವರಲಿಂಗದಲ್ಲಿ ಸರ್ವಾಂಗವೂ ಪ್ರಾಣಲಿಂಗಸ್ವಾಯತವಾಯ್ತು, ಕೇಳಾ ಚೆನ್ನಬಸವಣ್ಣ. ೫೨೪-೫೫೮-8-69.

ಮತ್ತಂ ಆ ಪ್ರಸ್ತಾವದೊಳು ಪ್ರಭುದೇವರು ಪ್ರಾಣಲಿಂಗ ಸಂಬಂಧದ ಭೇದವಂ ನಿರೂಪಿಸಿದ ಪದಂಗಳು :

**ರಾಗ : ಮಧುಮಾಧವಿ**

ನುಡಿಯ ಗಡಣದ ಬೆಳಗು ಮರುತ ಪರಿಮಳದಂತೆ
ಭಾವವಿಲ್ಲದ ಬಯಲು ಪರವು ತಾನೆ
ಅಱಿವು ಕುಱುಹಿನ ಮಱಹು ತೆಱಹಿಲ್ಲದ ಘನವು
ನಿಂದ ನಿಜಪದದಿಂದ ಪ್ರಭೆಯಾದುದು || ಪಲ್ಲವ ||

ಎಳೆಯ ಮಾಣಿಕದಂತೆ ಹೊಳೆವ ಜ್ಞಾನದ ಜ್ಯೋತಿ
ನವನಾಳದಲಿ ಪ್ರಾಣಲಿಂಗ ಭರಿತ
ಪಿಂಡಬ್ರಹ್ಮಾಂಡವನು ಮೀಱಿ ತೋಱುವ ವಚನ
ಗಗನದುದಯದ ಮೇಲೆ [1]ಘನದ[1] ಗಮನ || ೧ ||

ಆಕಾಶದಿಂದತ್ತಲಾರು ಬಲ್ಲವರಿಲ್ಲ
ಪಾತಾಳದ ಘನವ ಬಲ್ಲರಾರೋ ?
ಆತುಮನವಿಡಿದು ಪರಮಾತುಮನ ಪರಿಭಾವ ನೋಡ
ನೋಡ ನೋಡ ಘನಕೆ ಗಮನ || ೨ ||

ಇರುಳು ಮನವನೆ ನುಂಗಿ, ಹಗಲು ಘನವನೆ ನುಂಗಿ
ಮಾತು ಮಥನವ ನುಂಗಿದಾತ ಭರಿತ
ನೀತಿ-ನಿಜ ನಿಂದಲ್ಲಿ ನಿಜದ ನಿರ್ಮಳ ತೇಜ
ಪ್ರಾಣಲಿಂಗದ ಘನಕೆ ಪವಣಾವುದೋ || ೩ ||

ಆಱು ದರುಶನದೊಡೆಯನಂತರಂಗದೊಳಿಪ್ಪ-
ನಾರಿಗಾದಡೆ ಗಗನ-ಪವನ ಒಂದೆ
ಹೃದಯಕಮಲದ ಬೆಳಗು ಪರಬ್ರಹ್ಮದಲಿ ತುಂಬಿ
ಪರಿಣಾಮ ಪರಮ ಪದವಿಯ ತೋಱಿತು || ೪ ||

---

[1] (ಶಿ) ಘನಕೆ (ಗೂ) ಘನಕ್ಕೆ (ಹ).

ಧರೆಗೆ ನಿಸ್ರೆಯು ಇಲ್ಲ, ಉದಕಕ್ಕೆ ಕನಸಿಲ್ಲ
ಅಗ್ನಿ ಕಳವಳಕೆ ಒಳಗಾಗದೆಂತೋ
ಸುಳಿವ ಪವನನು [1]ತಾನೆ[1] ತಾಮಸಕ್ಕೊಳಗಾಗ
ಬಯಲಿಂಗೆ ಭ್ರಮೆಯುಂಟೆ ಗೊಗೇಶ್ವರ ‖ ೫ ‖

ಅಂತು ಪದಸಹಿತ ವಚನ. ೫೪೯-೫೬೩-8-74.

ಹೀಂಗೆಂದು ಪ್ರಭುದೇವರು ತಮ್ಮ ಪ್ರಾಣಲಿಂಗದ ನಿರ್ಣಯಮಂ ನಿರೂಪಿಸಲು, ಇದಕ್ಕೆ ಚೆನ್ನಬಸವರಾಜದೇವರು ಬಿನ್ನೈಸಿದ ಪ್ರತ್ಯುತ್ತರ:

ಮುಟ್ಟದ ಮುನ್ನ ಗುರು ಉಂಟು, ಲಿಂಗ ಉಂಟು, ಜಂಗಮ ಉಂಟು, ಪ್ರಸಾದ ಉಂಟು. ಮುಟ್ಟಿದ ಬಳಿಕ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪ್ರಸಾದವಿಲ್ಲ. ಕೂಡಲಚೆನ್ನಸಂಗಯ್ಯನಲ್ಲಿ ಸ್ವಯವಲ್ಲದೆ ಪರವಿಲ್ಲವೆಂಬುದು ನಿನ್ನಲ್ಲಿ ಕಾಣಬಂದಿತ್ತು ನೋಡಾ ಪ್ರಭುವೆ. ೫೩೦-೫೬೪-8-75.

ಹೀಂಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ:

ಮನ-ಮನ ಬೆರಸಿದನುಭಾವ—ಘನ ಘನ ಒಂದಾಯಿತ್ತು ನೋಡಾ. ಅಂದು ತನ್ನಲ್ಲಿ ತಾನು ತೃಪ್ತಿಯಾದ ನಿಜವು ನಿರ್ಣಯದ ಮೇಲೆ ನಿರ್ಧರವಾಯಿತ್ತು ನೋಡಾ. ಗೊಗೇಶ್ವರಲಿಂಗದಲ್ಲಿ ಚೆನ್ನಬಸವಣ್ಣನಿಂದ ಸುಖಿಯಾದೆನು. ೫೩೧-೫೬೫-8-76.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚೆನ್ನಬಸವರಾಜದೇವರು ಆ ಪ್ರಭುದೇವರ ಸ್ತೋತ್ರಮಂ ಮಾಡಿ ತಮ್ಮ ಪರಿಣಾಮವ ಹೇಳಿದ ಪ್ರಸ್ತಾವದ ವಚನ:

ಅಱಿವಿನ ತೃಪ್ತಿಗೆ ಅನುಭಾವವಾಶ್ರಯ. ಲಿಂಗದ ಅನುಭಾವದಿಂದ ನಿಮ್ಮ ಕಂಡೆನು. ನಿಮ್ಮ ಕಂಡೆನ್ನ ಮಱೆದೆನು ಕಾಣಾ ಪ್ರಭುವೆ, ಕೂಡಲ ಚೆನ್ನಸಂಗಮದೇವ. ೫೩೨-೬೭೩-8-77.

ನಿಮ್ಮ ಸಂಗದಿಂದಾನು ಲಿಂಗೈಕ್ಯನಾದೆನೆಂದು ಚಿಕ್ಕದಣ್ಣಾಯಕರು ಬಿನ್ನೈಸಲು ಇದಕ್ಕೆ ಪ್ರಭುದೇವರು [2]ಲಿಂಗಸಂಗಿಗಳ ಸಂಗದಿಂ[2] ಲಿಂಗೈಕ್ಯರಾದೆವೆಂದು ನಿರೂಪಿಸುವ ಪ್ರಸ್ತಾವದ ವಚನ:

[3]ನಚ್ಚು ಮಚ್ಚಿನ ಲಿಂಗವ ಗ್ರಹಿಸುವಲ್ಲಿ[3] ಮಚ್ಚು ಒಳಕೊಂಡಿತ್ತು—ನೋಡಾ. ಕರ್ಪುರದ ಕರಡಗೆಯ ಘಾಸಿ ಮಾಡಿದಂತಾಯಿತ್ತು. ಲಿಂಗಾನುಭಾವಿಗಳ ಸಂಗದಿಂದ ಕಂಡೆಱೆದು ಗೊಗೇಶ್ವರಲಿಂಗದಲ್ಲಿ ತಲ್ಲೀಯವಾದೆನು ಕಾಣಾ ಚೆನ್ನಬಸವಣ್ಣ. ೫೩೩-೬೭೪-8-78.

ಅನುಭಾವಿಗಳ ಸಂಗದಿಂದ ಕೃತಾರ್ಥನಾದೆನೆಂದು ಪ್ರಭುದೇವರು ನಿರೂಪಿಸಲು,

---

[1] (ಶಿ) ತಾನು (ಹಗೂ). [2] (ಹ) ಲಿಂಗದಿಂದ (ಶಿ) ನಿಮ್ಮಿಂದ (ಗೂ). [3] (ಹಗೂ) ನಚ್ಚು ಮಚ್ಚಿ ಅನುಗ್ರಾಹಕವಾಗಿ (ಶಿ).

**ಇದಕ್ಕೆ ಚಿಕ್ಕದಣ್ಣಾಯಕರು ಆ ಪ್ರಭುದೇವರ ಬಸವರಾಜದೇವರ ಸಂಗ-ಸುಖವ ಕೊಂಡಾಡಿದ ಪ್ರಸ್ತಾವದ ವಚನ :**

ಸಮ-ಸುಖ ಸಮ-ಸಂಧಾನವಿಲ್ಲದ ಸಂಗವ ನೋಡ, ತಾಗು-ನಿರೋಧವಿಲ್ಲದ ಸಂಗವ ನೋಡ. ಆವಂಗೆ ಅನುಭಾವವಿಲ್ಲದ ಸಂಗವ ನೋಡ. ಕೂಡಲ ಚೆನ್ನ ಸಂಗಯ್ಯನಲ್ಲಿ ಲಿಂಗಲೀಯವಾದ ಸಂಗವ ನೋಡಾ. ೫೩೪-೬೭೫ 8-79.

ಹೀಂಗೆಂದು ಚಿಕ್ಕದಣ್ಣಾಯಕರು ಪ್ರಭುದೇವರನು ಬಸವರಾಜದೇವರನು ಸಮರಸ ಭಾವದಿಂದ ಕೊಂಡಾಡಲು, ಆ ಬಸವರಾಜದೇವರು ಚಿಕ್ಕದಣ್ಣಾಯಕರೊಡನೆ ನಾನು ಶರಣರ ಸಂಗಕ್ಕೆ ಸಮವೇದಿಯಲ್ಲೆಂದು ಭೀತಿಯಿಂದ ನುಡಿದ ಪ್ರಸ್ತಾವದ ವಚನ :

ಅಯ್ಯ ನಿಮ್ಮ ಶರಣರೆನ್ನ ಪಾವನವ ಮಾಡಿ ತಿಳುಹಿ ತಮ್ಮಂತೆ ಎನ್ನ ಮಾಡಿದ ಬಳಿಕ, ನಾನು, ಅವರು ಮಾಡಿದಂತಾದೆನಯ್ಯ. ನಾನೊಬ್ಬನು ನಿಮ್ಮ ಶರಣರ ಬಳಿ-ಬಳಿಯವನು. ಕೂಡಲ ಸಂಗನ ಶರಣರು ಮೆಚ್ಚಿ ಎನಗೊಲಿದರೆ ನಾನು ಬದುಕಿದೆನಲ್ಲದೆ ಸಮಸಂಗಕ್ಕೆ ಸರಿಯೆ ಹೇಳಾ ಚೆನ್ನಬಸವಣ್ಣ. ೫೩೫-೬೭೬-8-80

ಇದಕ್ಕೆ ಚೆನ್ನಬಸವರಾಜದೇವರ ಪ್ರತ್ಯುತ್ತರ :

ತೆಱಹಿಲ್ಲದ ಘನವು ಮನದೊಳಗೆ ನಿಂದು ನೆಲೆಗೊಂಡ ಬಳಿಕ, ಆ ಘನವ ತೆರೆಯು ಮಱೆಯಲಡಗಿಸಿಹೆನೆಂದರೆ ಅಡಗುವುದೆ? ಹೇಮಗಿರಿಯ ಕದ್ದು ಭೂಮಿಯಲಡಗಿಸಿಹೆನೆಂದರೆ ಆ ಕಳವು ಸಿಕ್ಕದೆ ಮಾಬುದೇ? ಕೂಡಲ ಚೆನ್ನಸಂಗನ ಶರಣ ಪ್ರಭುವಿನಲ್ಲಿ ಬೆರಸಿದ ಸುಖವ [1]ಮಱಸಿಹೆ[1]ನೆಂದರೆ ನಿನ್ನಳವೆ ಹೇಳಾ ಸಂಗನ ಬಸವಣ್ಣ ? ೫೩೬-೬೭೭-8-81.

ಹೀಂಗೆಂದು ಚೆನ್ನಬಸವರಾಜದೇವರು ಬಿನ್ನೈಸಲು, ಇದಕ್ಕೆ ಬಸವರಾಜದೇವರು ನಿರೂಪಿಸಿದ ಪ್ರತ್ಯುತ್ತರ :

ಸಮರತಿಯ ಸಮಸಂಧಾನದ ಸಂಗಸುಖವು ನಿನ್ನಿಂದಲೆನಗೆ ಸಾಧ್ಯವಾಯಿತ್ತಲ್ಲದೆ, ಎನಗೆ ತೋಱಿದವರಾರು ಹೇಳಾ ಲಿಂಗೈಕ್ಯದ ಹೊಲಬ ? ಕೂಡಲಸಂಗಮದೇವರ ಶರಣ ಪ್ರಭುದೇವರಲ್ಲಿ ನೀನೆನ್ನನಿರಿಸದನ್ನಕ್ಕರ ನಾನು ಬಲ್ಲೆನೆ ಹೇಳಾ ಚೆನ್ನಬಸವಣ್ಣ. ೫೩೭-೬೭೮-8-82.

ಹೀಂಗೆಂದು ಬಸವರಾಜದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಬಿನ್ನೈಸಿದ ಪ್ರಸ್ತಾವದ ವಚನ :

ಧರೆಯಾಕಾಶವಿಲ್ಲದಂದು, ಅನಲ-ಪವನ-ಜಲ-ಕೂರ್ಮರಿಲ್ಲದಂದು, ಚಂದ್ರ ಸೂರ್ಯರೆಂಬವರು ಕಳೆದೋಱಿದಂದು, ಆತ್ಮಸ್ಥಲ ಅನುಭಾವಕ್ಕೆ ಬಾರದಂದು, ನಿತ್ಯ ನಿಜಲಿಂಗವ ಬಲ್ಲವರಾರಯ್ಯ ನೀವಲ್ಲದೆ ? ಮಹಾಘನಕ್ಕೆ ಘನವಾಹನವಾಗಿ, ಅಗಮ್ಯಸ್ಥಲದಲ್ಲಿ ನಿಂದು ಭರಿತನಾಗಿರಬಲ್ಲವರಾರಯ್ಯ ನೀವಲ್ಲದೆ ? ಒಕ್ಕು ಮಿಕ್ಕ ಶೇಷಪ್ರಸಾದದ ಕಾರುಣ್ಯದ ಶಿಶುವಾಗಿ ಒಡಲೊಳಗೆ ಇದ್ದಲ್ಲಿ, ವಿಭೂತಿಯ ಪಟ್ಟವ ಕಟ್ಟಿ, ಹಸ್ತ-

---

[1] (ಹ) (ಗೂ) ಮಱದೆಹೆ (ಶಿ).

ಮಸ್ತಕಸಂಯೋಗವ ಮಾಡಿ, ಎನ್ನನುಳುಹಿದವರಾರಯ್ಯ ನೀವಲ್ಲದೆ ? ಕೂಡಲ ಚೆನ್ನ ಸಂಗಮದೇವರು ಸಾಕ್ಷಿಯಾಗಿ, ನಾನು ನಿಮ್ಮ ಕರುಣದ ಕಂದನೆಂಬುದು ಮೂಱು ಲೋಕವೆಲ್ಲವೂ ಬಲ್ಲುದು ಕಾಣ ಸಂಗನ ಬಸವಣ್ಣ. ೫೩೮-೬೭೯-8-83.

ಹೀಂಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು ಇದಕ್ಕೆ ಬಸವರಾಜದೇವರು ನಿರೂಪಿಸಿದ ಪ್ರಸ್ತಾವದ ವಚನ :

ಕೃತಯುಗ ತ್ರೇತಾಯುಗ ದ್ವಾಪರ ಕಲಿಯುಗಂಗಳು ಭವಱಾಟಳದಲ್ಲಿ ತಿರುತಿರುಗಿ ಬರುತ್ತಿಪ್ಪಲ್ಲಿ, ಅನಂತ ಕೋಟ್ಯನುಕೋಟಿ ಯುಗಂಗಳು ಮಡಿದು ಹೋದವು. ಅನಂತ ಜಲಪ್ರಳಯಂಗಳು ಸುರಿಸುರಿದು ಹೋದವು. ಹದಿನಾಲ್ಕು ಲೋಕಂಗಳೆಂಬ ಅನಂತ ಕೋಟಿ ಬ್ರಹ್ಮಾಂಡಂಗಳೆಲ್ಲವೂ ಲಯವಾಗಿ ಹೋದವು. ಇವಱೊಳಗೆ ಆವ ಲೋಕದಲ್ಲಿ ಆವ ಯುಗದಲ್ಲಿ ಪ್ರಾಣ ಲಿಂಗ, ಲಿಂಗ ಪ್ರಾಣವೆಂಬ ಭೇದವನಱುಹಿದವರಾರು ಹೇಳಾ ? ಗಂಗೆ-ಗೌರೀವಲ್ಲಭರು ಮೊದಲಾದ ಅನಂತಕೋಟಿ ರುದ್ರಾದಿಗಳೆಲ್ಲರೂ ಪ್ರಾಣಲಿಂಗ-ಸಂಬಂಧದ ಹೊಲಬನಱಿಯದೆ ಅಣಿಮಾದಿ—ಚತುರ್ವಿದಫಲಪ್ರಾಪ್ತಕ್ಕೆ ಒಳಗಾದರು. ಶಿವಾಚಾರದ ವಿಚಾರವನಱಿಯದೆ ಜಗವು ಕೆಟ್ಟಹುದೆಂದು ಪರಪುರುಷಾರ್ಥ ಕಾರಣವಾಗಿ ಮರ್ತ್ಯದಲ್ಲಿ ಅವತರಿಸಿ ಗುರು-ಲಿಂಗ-ಜಂಗಮ-ಪಾದೋದಕ-ಪ್ರಸಾದವೆಂಬ ಪಂಚಾಚಾರವ ಸ್ಥಲವೆಂಬ ಮಹಾನುಭಾವಮಂ ಕರತಲಾಮಲಕವಾಗಿ ಸ್ಥಳಗೊಳಿಸಿ ಪ್ರಾಣಲಿಂಗ,ಲಿಂಗ ಪ್ರಾಣವೆಂಬ ಭೇದವನೆನಗೆ ತಿಳುಹಿ ಎನ್ನ ಭ್ರಾಂತುಸೂತಕವ ಬಿಡಿಸಿ, ಲಿಂಗೈಕ್ಯವೆಂಬುದನೆನಗೆ ತೋಱಿದೆಯಾಗಿ ನಿನ್ನಿಂದಲಾನು ಸಂಗನ ಬಸವಣ್ಣನೆಂಬ ಹೆಸರುವಡೆದೆನು. ಕೂಡಲ ಸಂಗಮದೇವರು ಸಾಕ್ಷಿಯಾಗಿ ಎನಗೆ ನೀನು ಪರಮಾರಾಧ್ಯರು ಕಾಣಾ ಚೆನ್ನಬಸವಣ್ಣ. ೫೩೯-೬೮೦-8-84.

ಇಂತು ಬಸವರಾಜದೇವರು ಚಿಕ್ಕದಣ್ಣಾಯಕರೊಡನೆ ಸ್ವಾನುಭಾವನುಂ ಮಾಡು ತ್ತಿರಲಾ ಚೆನ್ನಬಸವರಾಜದೇವರನು ಪ್ರಭುದೇವರು ಕೊಂಡಾಡಿದ ಪ್ರಸ್ತಾವದ ವಚನ :

ತನುವ ಗುರುವಿಂಗರ್ಪಿಸಿ, ಮನವ ಲಿಂಗಕ್ಕರ್ಪಿಸಿ, ಭಾವನ ಜಂಗಮಕ್ಕರ್ಪಿಸಿ ; ನಿಜವ ತೃಪ್ತಿಯಲರ್ಪಿಸಿ, ಘನವಱಿವಿಂಗರ್ಪಿಸಿ; ಅರ್ಪಿತವೆ ಅನರ್ಪಿತವಾಗಿ,ಅನರ್ಪಿತವೇ ಅರ್ಪಿತ, ವಾಗಿ ; ಅರ್ಪಿತ-ಅನರ್ಪಿತಂಗಳಳಿದು ನಿತ್ಯ ಪ್ರಸಾದಿಯಾಗಿ— ಪ್ರಸಾದದ ಹಾದಿಯು ನೆಲ್ಲರಿಗೆ ತೋಱಿ ಮಹಾಪ್ರಸಾದದ ಬೆಳವಿಗೆಯ ಮಾಡಿದನು ಗೊಗೇಶ್ವರನ ಶರಣ ಚೆನ್ನಬಸವಣ್ಣನು. ೫೪೦-೬೮೧-9-1.

ಹೀಂಗೆಂದು ಪ್ರಭುದೇವರು ಚಿಕ್ಕದಣ್ಣಾಯಕರಂ ಸ್ತೋತ್ರವಂ ಮಾಡಲು, ಆ ಚಿಕ್ಕ ದಣ್ಣಾಯಕರು— ಎನ್ನ ಶಿವಜ್ಞಾನದ ಕಂದೆಱವೆಯೂ, ಎನ್ನ ಮಹಾಪ್ರಸಾದಿತ್ವವೂ ಮಡಿವಾಳಮಾಚಿತಂದೆಯಿಂದವೂ ಸಂಗನ ಬಸವಣ್ಣನಿಂದವೂ ಆಯಿತ್ತೆಂದು ಬಿನ್ನಹಂ ಮಾಡುವ ಪ್ರಸ್ತಾವದ ವಚನ :

ನಿರವಯವಾದಡೆ ಭಕ್ತಿ ತನುವಿನ ಮೇಲೆ ಸ್ವಾಯತವಾಯಿತ್ತು. ಮಹಾಪ್ರಸಾದ ವಾದಡೆ ಸಂಗನ ಬಸವಣ್ಣನ ಕರಸ್ಥಲದಲ್ಲಿ ಮೂರ್ತಿಯಾಯಿತ್ತು. ಮಹಾಪ್ರಸಾದವ ನಾನೆತ್ತ ಬಲ್ಲೆನಯ್ಯ. ಮಡಿವಾಳ ತೋಱಲಿಕೆ ಅಱಿವು ಕಂದೆಱವಾದುದ ಕಂಡೆನು. ಬಸವಣ್ಣನಿಂದ ಭಕ್ತಿಯ ಮುಸುಕು ಕಂದೆಱವಾಯಿತ್ತ ಕಂಡೆನು. ಕೂಡಲ ಚೆನ್ನ ಸಂಗಮದೇವಯ್ಯ, ಮಡಿವಾಳನೂ ಬಸವಣ್ಣನೂ ಪದಾರ್ಥವನಾರೋಗಿಸಿ ಕೊಡುತ್ತ ಕರುಣಿಸಿದ ಪ್ರಸಾದಿಯಾನು ಕಾಣಾ ಪ್ರಭುವೆ. ೫೪೧-೬೮೨-9-2.

ಹೀಂಗೆಂದು ಚಿಕ್ಕದಣ್ಣಾಯಕು ನಿರೂಪಿಸಲು, ಇದಕ್ಕೆ ಮಡಿವಾಳತಂದೆಗಳು ಚೆನ್ನ ಬಸವಣ್ಣನ ಸ್ತುತಿಯಿಸುವ ಪ್ರಸ್ತಾವದ ವಚನ :

ಅಂಗವೇ ಲಿಂಗವಾಗಿ, ಲಿಂಗವೇ ಪ್ರಾಣವಾಗಿ ; ಜಂಗಮವೆ ಸಂಗವಾಗಿ, ಸಂಗವೆ ಸುಸಂಗವಾಗಿ ; ಪ್ರಾಣವೆ ಪ್ರಸಾದವಾಗಿ, ಪ್ರಸಾದವೆ ಪ್ರಾಣವಾಗಿ— ಇಂತೀ ತ್ರಿವಿಧ ದಲ್ಲಿ ಸಂಪನ್ನನಾದ ಸಮತಾಪ್ರಸಾದಿ, ಸನ್ನಿಹಿತಪ್ರಸಾದಿ, ಸಮಾಧಾನಪ್ರಸಾದಿ, ಕಲಿದೇವಯ್ಯ, ಚೆನ್ನಬಸವಣ್ಣನ ಪ್ರಸಾದವ ಕೊಂಡು ನಾನು ಬದುಕಿದೆನು ಕಾಣಾ ಪ್ರಭುವೆ. ೫೪೨-೬೮೩-9-4.

ಹೀಗೆಂದು ಮಡಿವಾಳ ಮಾಚಿತಂದೆಗಳು ಪ್ರಭುದೇವರೊಡನೆ ಬಿನ್ನಪಂಗೆಯ್ಯಲು ಆ ಪ್ರಭುದೇವರು ಮಡಿವಾಳ ತಂದೆಗಳ ಒರೆದು ನೋಡುವ ಪ್ರಸ್ತಾವದ ವಚನ:

ಎಂತಯ್ಯ, ನೊಸಲಲ್ಲಿ ಕಣ್ಣು, ಮನದಲ್ಲಿ ವಿರಸ, ನುಡಿವುದೆಲ್ಲವು ಭಕ್ತಿರಸ! ಜ್ಞಾನ ವೆಂತು ಹೇಳ? ನಿರಹಂಕಾರವೆಂತು ಹೇಳ? ಅಱುಹಿನ ಕುಱುಹಿನ ಮಱವೆ ಮಾತಿನೊಳ ಗದೆ. ನಿನ್ನಿಂದ ನಿಜಪದವೆಂತು ಸಾಧ್ಯವಪ್ಪುದು ಹೇಳಾ ? ಕುಱುಹಳಿದ ಕುಱುಹನಱಿಯ

ಬಲ್ಲರೆ—ಗೊಗೇಶ್ವರಲಿಂಗದಲ್ಲಿ ಉಭಯುಗೆಟ್ಟಲ್ಲದೆ ಪ್ರಸಾದವಿಲ್ಲ ಕಾಣಾ ಮಡಿವಾಳ ಮಾಚಯ್ಯ. ೫೪೩-೬೮೪-9-5.

ಹೀಂಗೆಂದು ಪ್ರಭುದೇವರು ಮಡಿವಾಳತಂದೆಗಳ ಸ್ಥಿತಿಗತಿಯನೊರೆದು ನೋಡುಲು, ಇದಕ್ಕೆ ಮಡಿವಾಳತಂದೆಗಳು ತಮ್ಮ ಪೂರ್ವಾಪರಸಂಬಂಧದ ವೃತ್ತಾಂತಮಂ ಪ್ರಭುದೇವರಿಗೆ ಬಿನ್ನಹಂ ಮಾಡುವ ಪ್ರಸ್ತಾವದ ವಚನ:

ಎನ್ನ ಆದಿಯನೆತ್ತುವೆನೆ? ಅದ ನೀನೆ ಬಲ್ಲೆ — ಘನಗಂಭೀರದಲ್ಲಿ ಹುಟ್ಟಿದನೆಂಬುದ! ಎನ್ನ ಅನಾದಿಯನೆತ್ತಿ ಹೇಳಿ ತೋಱುವೆನೆ? ಅದನು ನೀನೆ ಬಲ್ಲೆ — ಎನಗೆ ಕಾಯವಿಲ್ಲೆಂಬುದನು. ಬಸವಣ್ಣನ ಕಾರಣ ಮರ್ತ್ಯಕ್ಕೆ ಬಂದರೆ ಒಡಲುಪಾಧಿಯೆಂಬುದಿಲ್ಲ ನೋಡ! ಒಡಲೇ ಬಸವಣ್ಣ, ಪ್ರಾಣವೆ ಚೆನ್ನಬಸವಣ್ಣ, ಎನ್ನ ಮಹಾಜ್ಞಾನವೆ ನೀವು ನೋಡ! ಇಂತು ಎರಡಿಲ್ಲದಿಪ್ಪಲ್ಲಿ ನುಡಿಯಡಗಿದ ಪರಿಯ ನಿಮ್ಮ ಶರಣ ಬಸವಣ್ಣ ಬಲ್ಲ ಕಾಣಾ ಕಲಿದೇವರ ದೇವ. ೫೪೪-೬೮೫-9-6.

ಇಂತು ಮಡಿವಾಳ ತಂದೆಗಳು ತಮ್ಮ ಪೂರ್ವಾಪರ ಸಂಬಂಧದ ವೃತ್ತಾಂತಮಂ ಬಿನ್ನಪಂಗೆಯ್ಯಲು— ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ:

ಗುರುವಿದು, ಲಿಂಗವಿದು, ಜಂಗಮವಿದು-ಎಂಬ ಭೇದವ ಏಕವಮಾಡಿ ನಿನಗೆ ತೋಱಿದವರಾರು ಹೇಳಾ? ಆದಿ-ಅನಾದಿಯನು ಒಂದು ಮಾಡುವ ಭಾವ-ನಿರ್ಭಾವವ ಅಱುಹಿದವರಾರು ಹೇಳಾ? ದೀಕ್ಷೆ-ಶಿಕ್ಷೆ-ಸ್ವಾನುಭಾವದ ಪರಿಯ ತೋಱಿ ನಿಜಪದದಲ್ಲಿ ನಿಲಿಸಿದವರಾರು ಹೇಳಾ? ಗೊಗೇಶ್ವರಲಿಂಗದಲ್ಲಿ ನಿನ್ನ ಆಯತವ ಹೇಳಾ ಮಡಿವಾಳ ಮಾಚಯ್ಯ ೫೪೫-೬೮೬-9-7.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಮಡಿವಾಳತಂದೆಗಳು ಬಿನ್ನೈಸಿದ ಪ್ರತ್ಯುತ್ತರ:

ಗುರುಸ್ವಾಯತವಾಯಿತ್ತು. ಎಂಟು ಭಾವ ಸ್ವಾಯತವಾಯಿತ್ತು. ಹದಿನಾಱು ತೆಱನ ಭಕ್ತಿ ಸ್ವಾಯತವಾಯಿತ್ತು. ಅಷ್ಟವಿಧಾರ್ಚನೆ ಸ್ವಾಯತವಾಯಿತ್ತು. ಇಂತೀ ತ್ರಿವಿಧದ ಅಱಿವು ಸ್ವಾಯತವಾಯಿತ್ತು. ಮಹಾಲಿಂಗದ ನಿಲವು, ಮಹಾಜಂಗಮದ ನಿಜವು ಸ್ವಾಯತವಾಯಿತ್ತು. ಶುದ್ಧಪ್ರಸಾದ ತನುಸ್ವಾಯತವಾಯಿತ್ತು. ಸಿದ್ಧಪ್ರಸಾದ ಚೈತನ್ಯಸ್ವಾಯತವಾಯಿತ್ತು. ಪ್ರಸಿದ್ಧಪ್ರಸಾದ ಮನಸ್ವಾಯತವಾಯಿತ್ತು. ವಾಮಭಾಗದಲ್ಲಿ ಮಹ ಉದಯವಾಗಿತ್ತು, ಶಿವಾಚಾರದಲ್ಲಿ ನಿರವಯ ಉದಯವಾಯಿತ್ತು. ನಿಜಸ್ಥಾನಕದಲ್ಲಿ ನಿಂದಿತ್ತು, ಕ್ಷೀರಸ್ಥಾನಕದಲ್ಲಿ ಸಾರಾಯವಾಯಿತ್ತು; ಅನುಭಾವದಲ್ಲಿ ಘನಾಗಮನವೆನಿಸಿತ್ತು, ಸ್ವಾನುಭಾವದಲ್ಲಿ ನಿಮ್ಮ ಬಸವಣ್ಣಂಗೆ ಶರಣೆಂದಿತ್ತು; ನೆಮ್ಮುಗೆವಿಡಿದು ಬಸವಣ್ಣನ ಪ್ರಸಾದವ ಕೊಂಡಿತ್ತು; ನಿಮ್ಮ ಬಸವಣ್ಣನ ಪ್ರಸಾದದಿಂದ ಇಂತಹ ಘನವು ಸ್ವಾಯತವಾಯಿತ್ತು. ನೀವು ಬಸವಣ್ಣನಿಂದಾದಿರಾಗಿ ಬಸವಣ್ಣಂಗೆ ನಮೋ ನಮೋ ಎನುತಿರ್ದೆನು ಕಲಿದೇವರ ದೇವ. ೫೪೬-೬೮೭-9-8. ಮತ್ತಂ:

ಒಬ್ಬಳು ಆದಿಯುಗದಲ್ಲಿ ಮಾಯಾಂಗನೆ ಹಲವು ಬಣ್ಣದ ವಸ್ತ್ರವನುಟ್ಟುಕೊಂಡು, ಹೆಡಗೆ ತುಂಬಿದ ದೇವರ ಹೊತ್ತುಕೊಂಡು—"ಓ ದೇವರ ಕೊಳ್ಳಿರಯ್ಯ, ಓ ದೇವರ ಕೊಳ್ಳಿರಯ್ಯ" ಎಂದಳು. ಎಂದರೆ—ಆ ದೇವರನಾರು ಕೊಂಬವರಿಲ್ಲ. ನಾನು ಒಂದಱುವೆಯ ಕೊಟ್ಟು ಆ ದೇವರ ಕೊಂಡು—ಎನ್ನ ಹೆತ್ತ ತಂದೆ ಬಸವಣ್ಣನ ಪ್ರಸಾದದಿಂದ ಬದುಕಿದೆನು ಕಾಣಾ ಕಲಿದೇವರ ದೇವ. ೫೪೭-೬೮೮-9-9. ಮತ್ತಂ :

ಎಲ್ಲಾ ಭಕ್ತಿಯ ಭೇದವನು, ಎಲ್ಲಾ ಕೂಟದ ಭೇದವನು, ಎಲ್ಲಾ ಶೀಲದ ಭೇದವನು, ನಾನು ನಿಮಗೆ ಬಿನ್ನೈಸುವೆನು—ಕೇಳಯ್ಯ ; ನೀನು ಕರ್ತನಾಗಿ, ನಾನು ಭೃತ್ಯನಾಗಿ—ಅವಧರಿಸಯ್ಯ : ಎಲ್ಲಾ ಭೇದಂಗಳನೂ ಬಸವಣ್ಣ ಮಾಡಿದನು. ಆದಿ-ಅನಾದಿಯನೂ ಬಸವಣ್ಣ ಮಾಡಿದನು. ಸಾಧ್ಯ-ಅಸಾಧ್ಯಂಗಳನೂ ಬಸವಣ್ಣ ಮಾಡಿದನು. ಲಿಂಗವನೂ ಜಂಗಮವನೂ ಬಸವಣ್ಣ ಮಾಡಿದನು. ಎನ್ನ ಸರ್ವಸ್ವಾಯತವನೂ ಬಸವಣ್ಣ ಮಾಡಿದ ಕಾರಣ—ಆ ಬಸವಣ್ಣನ ನೆನೆದು ಬದುಕಿದೆನು ಕಾಣಾ ಕಲಿದೇವರ ದೇವ. ೫೪೮-೬೮೯-9-10.

ಮತ್ತಂ ಮಡಿವಾಳಯ್ಯಗಳು ಬಸವಣ್ಣನ ತೋಱಿ ತೋಱಿ ಬಿನ್ನಪಂಗೆಯ್ವ ಪ್ರಸ್ತಾವದ ವಚನ :

ಶಿವ ತಾನೀತ ಮರ್ತ್ಯಲೋಕವ ಪಾವನವ ಮಾಡುವ, ಗುರು ತಾನೀತನೆನ್ನ ಭವರೋಗವ ಭೇದಿಸಲು, ಭಕ್ತ ತಾನೀತನೆನಗೆ ನಿಸ್ತಾರವಾಗಿ, ಎನಗೆ ಜಂಗಮ ತಾನೀತ ಅನಾದಿ ಸಂಸಿದ್ಧ ಮಹಾಮಹಿಮನಾಗಿ, ಲಿಂಗವು ತಾನೀತನೆನಗೆ, ಪ್ರಾಣಲಿಂಗವು ತಾನೀತನೆನಗೆ, ಎನ್ನ ವಿಸ್ತಾರವು ತಾನೀತನೆನ್ನ ನಿಲುಕಡೆಯು ತಾನೀತನೆನಗೆ ಸರ್ವಸ್ವಾಯತವ ಮಾಡಿದ—ಮಹಿಮ ತಾನೀತ ಕಾಣ ಕಲಿದೇವರ ದೇವ ನಿಮ್ಮ ಶರಣ ಬಸವಣ್ಣನು ೫೪೯-೬೯೦-9-11.

ಅಱಿವನಾಱಡಿಗೊಂಡಿತ್ತು ಮಱಹು, ಮಱಹನಾಱಡಿಗೊಂಡಿತ್ತು ಮಾಯೆ, ಮಾಯೆಯನಾಱಡಿಕೊಂಡಿತ್ತು ಕರ್ಮ, ಕರ್ಮವನಾಱಡಿಗೊಂಡಿತ್ತು ತನು, ತನುವನಾಱಡಿಗೊಂಡಿತ್ತು ಸಂಸಾರ. ಮಱಹು ಬಂದಹುದೆಂದಱಿದು, ಅಱಿವ ಬೆಲೆಮಾಡಿ, ಅಱಿವ ಕೊಟ್ಟು ಗುರುವಿನ ಕೈಯ ಲಿಂಗವ ಕೊಂಡೆ ನೋಡಯ್ಯ. ಎನ್ನ ಱಿವನಾಯತದಲ್ಲಿ ನಿಲಿಸಿ ನಿಜಸ್ವಾಯತವ ಮಾಡಿದನು, ಕಲಿದೇವರ ದೇವ, ನಿಮ್ಮ ಶರಣ ಬಸವಣ್ಣನು. ೫೫೦-೬೯೧-9-12.

ಹೀಂಗೆಂದು ಮಡಿವಾಳ ತಂದೆಗಳು ಬಿನ್ನಪಂಗೆಯ್ಯಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ :

ಅಱಿವು ಉದಯವಾದಲ್ಲದೆ ಮಱಹು ನಷ್ಟವಾಗದು. ಮಱಹು ನಷ್ಟವಾದಲ್ಲದೆ ಅಱಿವು ಸಯವಾಗದು. ಅಱಿವು ಸಯವಾಗಿ ದೊರಕೊಂಡ ಬಳಿಕ, ಗುರುವಾರು ? ಲಿಂಗವಾರು ? ಆವುದು ಘನ,ಆವುದು-ಕಿಱಿದು ಹೇಳಾ? ಗೊಗೇಶ್ವರಲಿಂಗದಲ್ಲಿ ಅಱಿದು

ಮಱೆದು ಉಪದೇಶವ ಹಡೆದರೆ ಮುಂದೆ ನಿಜವೆಂತು ಸಾಧ್ಯವಪ್ಪುದು ಹೇಳಾ ಮಡಿವಾಳ ಮಾಚಯ್ಯ ? ೫೫೧-೬೯೨-9-13.

ಹೀಂಗೆಂದು ಪ್ರಭುದೇವರು ನಿರೂಪಿಸುತ್ತಿರಲು ಇದಕ್ಕೆ ಮಡಿವಾಳ ತಂದೆಗಳು ಬಿನ್ನೈಸಿದ ಪ್ರತ್ಯುತ್ತರ:

ಅಱಿದಲ್ಲದೆ ಗುರುವ ಕಾಣಬಾರದು, ಅಱಿದಲ್ಲದೆ ಲಿಂಗವ ಕಾಣಬಾರದು, ಅಱಿದಲ್ಲದೆ ಜಂಗಮವ ಕಾಣಬಾರದು : ಇಂತೀ ತ್ರಿವಿಧವು ಬಸವಣ್ಣನ ಕೃಪೆಯಿಂದಲೆನಗೆ ಸ್ವಾಯತವಾಯಿತ್ತಾಗಿ ಭಿನ್ನವಿಲ್ಲ ಕಾಣಾ ಕಲಿದೇವರ ದೇವ. ೫೫೨-೬೯೩-9-14.

ಇದಕ್ಕೆ ಪ್ರಭುದೇವರ ನಿರೂಪ:

ಗುರು ಸ್ವಾಯತವಾಯಿತ್ತು, ಲಿಂಗ ಸ್ವಾಯತವಾಯಿತ್ತು, ಜಂಗಮ ಸ್ವಾಯತವಾಯಿತ್ತು ಬಸವಣ್ಣನಿಂದಲೆಂದರೆ—ತನುವಿಲ್ಲದಿರಬೇಕು, ಮನವಿಲ್ಲದಿರಬೇಕು, ಅಱಿವಱಿತು ಮಱಹು ನಷ್ಟವಾಗಿರಬೇಕು. ಗೊಗೇಶ್ವರಲಿಂಗದಲ್ಲಿ ನಿರ್ಲೇಪಿಯಾದಲ್ಲದಿಲ್ಲ ಕಾಣಾ ಮಡಿವಾಳ ಮಾಚಯ್ಯ. ೫೫೩-೬೯೪-9-15,

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಮಡಿವಾಳ ತಂದೆಗಳ ಪ್ರತ್ಯುತ್ತರ:

ತನುವಿನಲ್ಲಿ ಹೊರೆಯಿಲ್ಲ. ಮನದಲ್ಲಿ ವ್ಯಾಕುಳವಿಲ್ಲ, ಭಾವದಲ್ಲಿ ಬಯಕೆಯಿಲ್ಲ. ಅಱಿವಿನಲ್ಲಿ ವಿಚಾರವಿಲ್ಲ. ನಿಜದಲ್ಲಿ ಅವಧಾನವಿಲ್ಲ. ನಿರ್ಲೇಪಸಂಗದಲ್ಲಿ ಬಿಚ್ಚಿ ಬೇಱಾಗಲಿಲ್ಲ. ಕಲಿದೇವರ ದೇವ, ನಿಮ್ಮಲ್ಲಿ ಬೆರಸಿ ಬೇಱಿಲ್ಲದಿದ್ದೆನು. ೫೫೪-೬೯೫-9-16.

ಹೀಂಗೆಂದು ಮಡಿವಾಳ ತಂದೆಗಳು ಬಿನ್ನಪಂಗೆಯ್ಯಲು ಇದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ತನುವಿನಲ್ಲಿಪ್ಪ ಲೋಭವ ಮನವ ಕದ್ದು ಮಾತನಾಡಿದರೆ, ಆ ತನುವೇ ಮನ-ರೂಪಾಗಿ ಕಾಣಬರುತ್ತಿದೆ. ಆ ಮನದಲ್ಲಿ ಬಯಕೆ ಸಮರತಿಯಾಗದಾಗಿ, ಕಾಮದ ಕರುಳು ಲೋಭದ ಬಯಕೆಯೊಳಗದೆ. ಅಱಿದೆನೆಂದು ಬಱುಮಾತ ನುಡಿದರೆ ನಮ್ಮ ಗೋಗೇಶ್ವರಲಿಂಗವು ಮೆಚ್ಚ ನೋಡ ಮಡಿವಾಳ ಮಾಚಯ್ಯ. ೫೫೫-೬೯೬-9-17.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಮಡಿವಾಳ ತಂದೆಗಳು ಬಿನ್ನೈಸಿದ ಪ್ರತ್ಯುತ್ತರ:

ಕಾಮದ ಕರಸ್ಥಲದಲ್ಲಿ ಗುರುಸ್ವಾಯತವ ಮಾಡಿದೆನು. ಕ್ರೋಧದ ನಯನದಲ್ಲಿ ಜಂಗಮಸ್ವಾಯತವ ಮಾಡಿದೆನು. ಲೋಭವಿಲ್ಲದ ಪ್ರಸಾದವ ಗ್ರಹಿಸುವೆನು. ಇಂತೀ ತ್ರಿವಿಧದಲ್ಲಿ ಶುದ್ಧನಾದೆನು ಕಾಣಾ ಕಲಿದೇವರ ದೇವ ನಿಮ್ಮ ಶರಣ. ೫೫೬-೬೯೭-9-18.

ಎನ್ನ ಅಷ್ಟವಿಧಾರ್ಚನೆ ಶುದ್ಧವಾಯಿತ್ತಯ್ಯ ನೀವು ಮೂರ್ತಿಲಿಂಗವಾದಕಾರಣ. ಎನ್ನ ತನು-ಮನ ಶುದ್ಧವಾಯಿತ್ತಯ್ಯ ನೀವು ಜಂಗಮಲಿಂಗವಾದ ಕಾರಣ. ಎನ್ನ ಆಪ್ಯಾಯನ ಶುದ್ಧವಾಯಿತ್ತಯ್ಯ ನಿಮ್ಮ ಪ್ರಸಾದವ ಕೊಂಡೆನಾಗಿ. ಎನ್ನ ಕಾಮ-

ಕ್ರೋಧ-ಲೋಭ-ಮೋಹ-ಮದ-ಮತ್ಸರಂಗಳೆಲ್ಲವಳಿದವಯ್ಯ ನೀವು ಜ್ಞಾನಲಿಂಗವಾದ ಕಾರಣ. ಇಂತೀ ಸರ್ವದಲ್ಲಿ ಸನ್ನಿಹಿತನಾದೆನು ಕಾಣಾ ಕಲಿದೇವರ ದೇವ. ೫೫೭-೬೯೮-9-19.

ಹೀಂಗೆಂದು ಮಡಿವಾಳ ತಂದೆಗಳು ಬಿನ್ನೈಸಲು, ಇದಕ್ಕೆ ಪ್ರಭುದೇವರು ಆ ಮಡಿವಾಳ ತಂದೆಗಳ ಸಮರಸಭಾವವನೊರೆದು ನೋಡುವ ಪ್ರಸ್ತಾವದ ವಚನ:

ತನುಗುಣ ನಾಸ್ತಿ, ಮನಗುಣ ನಾಸ್ತಿ, ಧನಗುಣ ನಾಸ್ತಿಯಾದಡೇನು? ಭಾವ ನಾಸ್ತಿಯಾಗಬೇಕು. ಭಾವನಾಸ್ತಿಯಾದಲ್ಲದೆ ಅಱಿವು ನೆಲೆಗೊಳ್ಳದು. ಅಱಿವು ನೆಲೆಗೊಂಡಲ್ಲಿ ಕುಱುಹಿಂಗೆ ಹೊಱಗು. ಕುಱುಹಳಿದು ಕೂಡುವ ಪರವು ಸುಖವು ಗೊಗೇಶ್ವರಲಿಂಗದಲ್ಲಿ ನಿನಗೆ ಸಾಧ್ಯವಾದ ಪರಿಯ ಹೇಳಾ ಮಡಿವಾಳ ಮಾಚಯ್ಯ. ೫೫೮-೬೯೯-9-20.

ಹೀಂಗೆಂದು ಪ್ರಭುದೇವರು ಮಡಿವಾಳ ತಂದೆಗಳ ಒಳಗನೊರೆದು ನೋಡಲು, ಮರಳಿಯಾ ಮಡಿವಾಳ ತಂದೆಗಳು ಬಿನ್ನೈಸಿದ ಪ್ರತ್ಯುತ್ತರ.

ಆಲೀಯುವಾಗಿ ಬಂದ ಪರಿಯ, ಅಕಾರ-ಉಕಾರ-ಮಕಾರಂಗಳು ಸೋಂಕದಿದ್ದ ಪರಿಯ, ನಿರ್ಲೇಪಸ್ಥಲವಾಧಾರವಾದ ಪರಿಯ, ನಿಮ್ಮ ಶರಣ ಬಸವಣ್ಣ ಬಲ್ಲನು ಬೆಸಗೊಳ್ಳಾ ಕಲಿದೇವರದೇವ ೫೫೯-೭೦೦-9-21.

ಎನ್ನ ಅಂತಸ್ಥಿತಿಗತಿಯನು ಬಸವಣ್ಣ ಬಲ್ಲನಾಗಿ, ಆತನಿಂದಲೆನ್ನ ಪರಿಯ ವಿಚಾರಿಸಿ ನೋಡಿ—ಎಂದು ಮಡಿವಾಳ ತಂದೆಗಳು ಬಿನ್ನವಿಸಲು, ಇದಕ್ಕೆ ಆ ಪ್ರಭುದೇವರು ಬಸವರಾಜದೇವರ ಬೆಸಗೊಂಬ ಪ್ರಸ್ತಾವದ ವಚನ:

ಮನ ಮನ ಬೆರಸಿ ಸಮರತಿಯ ಸಂಗದಲ್ಲಿ ಸುಖಿಗಳಾಗಿಪ್ಪ ಶರಣರ ಸಂಗಸುಖವನಾ ಶರಣರೆ ಬಲ್ಲರಲ್ಲದೆ ಕೆಲದಲಿದ್ದವರಿಗೆ ಅಱಿಯ ಬಹುದೇ? ನಿಜಗುಣಭರಿತರು—ಶಿವಶರಣರ ನಿಲವ ಕಂಡಹೆನೆಂದರೆ ಕಾಣಬಹುದೇ? ಗೊಗೇಶ್ವರಲಿಂಗದಲ್ಲಿ ಮಡಿವಾಳ ಮಾಚಯ್ಯನ ಪರಿಯ ನೀ ಬಲ್ಲೆ—ಎನಗೊಮ್ಮೆ ಹೇಳಾ ಸಂಗನ ಬಸವಣ್ಣ. ೫೬೦-೭೦೧-9-22.

ಹೀಂಗೆಂದು ಪ್ರಭುದೇವರು ಬೆಸಗೊಳಲು, ಬಸವರಾಜದೇವರು ಮರಳಿ ಪ್ರಭುದೇವರೊಡನೆ ಬಿನ್ನಪಂಗೆಯ್ವ ಪ್ರಸ್ತಾವದ ವಚನ:

ಎನ್ನ ಕಾಯದ ಕತ್ತಲೆಯ ಕಳೆಯಲಱಿಯೆನು. ಎನ್ನ ಜೀವದ ನಿಲವ ಗೆಲಲಱಿಯೆನು. ಎನ್ನ ಭಾವದ ಸೂತಕವ ಕಳೆಯಲಱಿಯೆನು. ನಾನೆಂತು ಬಲ್ಲೆನಯ್ಯ—ನಿಮ್ಮ ಘನಮಹಿಮರ ನಿಲವ? ಕೂಡಲಸಂಗಮದೇವ, ನಿಮ್ಮ ಶರಣ ಮಡಿವಾಳ ಮಾಚಿತಂದೆಯ ಘನವ ನೀವೇ ಬಲ್ಲಿರಿ. ೫೬೧-೭೦೨-9-23.

ಹೀಂಗೆಂದು ಬಸವರಾಜದೇವರು ಬಿನ್ನೈಸಲು, ಪ್ರಭುದೇವರು ಆ ಬಸವರಾಜದೇವರ ಪರಿ ಎಹಂಗೆಂದು ಮಡಿವಾಳ ತಂದೆಗಳ ಬೆಸಗೊಂಬ ಪ್ರಸ್ತಾವದ ವಚನ:

ಯುಕ್ತಿಯ ಕೇಳಿದರೆ ಭಕ್ತಿಯ ತೋಱಿದ. ಭಕ್ತಿಯ ಕೇಳಿದರೆ ಯುಕ್ತಿಯ

ತೋಱಿದ. ನಿತ್ಯವ ಬೇಸಗೊಂಡರೆ ಅತ್ತತ್ತಲೋಸರಿಸಿದ. ಗೊಗೇಶ್ವರನ ಶರಣ ಸಂಗನ ಬಸವಣ್ಣ ಮಱೆಗೆ ಮಱೆಯನೊಡ್ಡಿ ಜಾಱಿದನು. ಬಸವಣ್ಣನ ಪರಿಯೆಂತು ಹೇಳಾ ಮಡಿವಾಳ ಮಾಚಯ್ಯ. ೫೬೨-೭೦೩-9-26.

ಹೀಂಗೆಂದು ಬಸವರಾಜದೇವರ ಪರಿ ಎಹಂಗೆಂದು ಮಡಿವಾಳ ಮಾಚಿ ತಂದೆಗಳ ಬೆಸಗೊಳಲು, ಆ ಮಾಚಿ ತಂದೆಗಳು ಆ ಬಸವರಾಜದೇವರ ಮಹಾತ್ಮೆಯನು ಆ ಪ್ರಭು ದೇವರೊಡನೆ ಬಿನ್ನಪಂಗೆಯ್ವ ಪ್ರಸ್ತಾವದ ವಚನ:

ಪ್ರಥಮಕಾಲದಲ್ಲಿ ದೇವಗಣ-ಮಹಾಗಣ-ಕಿನ್ನರಗಣ-ಆಳಾಪಗಣ ಸಹಿತ ಸಂಗನ ಬಸವಣ್ಣನು ಗಣಪ್ರಸಾದಿಯಾಗಿ ಮರ್ತ್ಯಲೋಕಕ್ಕೆ ಮಹವ ತಂದು ಶಿವಗಣಂಗಳ ಮಾಡಿದಾತ ಬಸವಣ್ಣನು. ಸ್ವರೂಪುಸಾರಾಯವನೂ ಪದಾರ್ಥವೆಂದಾತ ಬಸವಣ್ಣನು. ಕಲಿದೇವ, ನಿಮ್ಮ ಶರಣನಿಂತಹ ಮಹಿಮನು. ೫೯೩-೭೦೪-9-27. ಮತ್ತಂ:

ಎಲ್ಲಾ ವ್ಯಾವರ್ಣನೆಗಳೂ ಸ್ಥಾಪ್ಯದೊಳಗು. ಎಲ್ಲಾ ವಚನಂಗಳೂ ತಾಪದೊಳಗು. ಎಲ್ಲಾ ಸ್ತೋತ್ರಂಗಳೂ ಕ್ರೋಧದೊಳಗು. ಎಲ್ಲಾ ಅಱಿವು ಮಥನದೊಳಗು. ಎಲ್ಲಾ ಮೂರ್ತಿಗಳು ಪ್ರಳಯದೊಳಗು. ಎಲ್ಲಾ ಗೀತಂಗಳೂ ಸಂವಾದದೊಳಗು. ಲಿಂಗಾನು ಭಾವಿ ಇವನೆಂದೂ ಮನದಲ್ಲಿ ನೆನೆಯ, ಎನೆಂದೂ ಅಱಿಯ. ಸ್ವತಂತ್ರ ನಿತ್ಯನಾಗಿ ಭಕ್ತಿದಾಸೋಹವ ನಿಮ್ಮ ಬಸವಣ್ಣನಳವಡಿಸಿಕೊಂಡನು. ನಿಮ್ಮ ಬಸವಣ್ಣನಿಂತಹ ಸ್ವತಂತ್ರನಯ್ಯ ಕಲಿದೇವರ ದೇವ. ೫೬೪-೭೦೫-9-28.

ಆದಿ-ಅನಾದಿಯಲ್ಲಿ ಸಾಧ್ಯಾಸಾಧ್ಯಂಗಳಿಲ್ಲದಂದು, ಸ್ಥೂಲ-ಸೂಕ್ಷ್ಮವೆಂಬ ಮೂರ್ತಿಗಳಿಲ್ಲದಂದು, ಸಾಕಾರ-ನಿರಾಕಾರವೆಂಬ ವಾಕು ಹುಟ್ಟದಂದು, ಶಂಕರ-ಶಶಿಧರ-ಈಶ್ವರರೆಂಬ ಗಣಾಧೀಶ್ವರರಿಲ್ಲದಂದು, ಉಮೆಯ ಕಲ್ಯಾಣವಿಲ್ಲದಂದು, ಶಿವರತಿ-ಮಹಾರತಿ ಬಸವಣ್ಣನಿಂದಾಯಿತ್ತು. ಸರ್ವವಿಸ್ತೀರ್ಣವ ನೀಕರಿಸಿ ಶಿವಲಿಂಗಾರ್ಚನೆಯ ತೋಱಿಸಿದ; ನಿತ್ಯಲಿಂಗಾರ್ಚನೆಯಲ್ಲಿ ಪ್ರಸಾದಧ್ಯಾನ, ಜಂಗಮಾರ್ಚನೆಯಲ್ಲಿ ಪ್ರಸಾದಭೋಗವೆಂಬುದನೂ ಸಂಗನ ಬಸವಣ್ಣನಲ್ಲದೆ ಮತ್ತಾರೂ ಅಱಿಯರು. ಭಕ್ತಿಯ ಕುಳಸ್ಥಳವನು, [1]ಭಕ್ತಿಯ ಸಾರಾಯವನು ಮುನ್ನವೆ ಅತಿರಥ-ಸಮರಥರೆಲ್ಲರೂ ಅಱಿಯರು. ನಿಮ್ಮ ಬಸವಣ್ಣನಿಂತಹ ಸ್ವತಂತ್ರನಯ್ಯ ಕಲಿದೇವರ ದೇವ[1]. ೫೬೫-೭೦೬-9-29.

---

[1] (ಶಿ) (ಹ) ಅಱಿಯವೆ ಎಲ್ಲರು ಎಂದಂತೆ ಎಂದರು. ಬಂದಲ್ಲಿಯೆ ಬಂದರು. ಇದ ನೀಕರಿಸಿ ಜಂಗಮವೆ ಲಿಂಗವೆಂದು ಸಂಗಸಾಹಿತ್ಯವಾದನು ಸಂಗನ ಬಸವಣ್ಣ ನಿಂತಹ ನಿತ್ಯನಯ್ಯ ಕಲಿದೇವರ ದೇವ (ಗೂ) Note: ಈ ಪಾಠಾಂತರ ಭಾಗವನ್ನು ಗೂಳೂರು ಸಿದ್ಧವೀರನು ಶಿವಗಣಪ್ರಸಾದಿಯ ಶೂನ್ಯಸಂಪಾದನೆಯಲ್ಲಿನ (೫೬೭-೭೦೮-×) ವಚನದಿಂದ ಇಲ್ಲಿ ಆಂಶಿಕವಾಗಿ ಎತ್ತಿ ಸೇರಿಸಿ ಕೊಂಡು, ಆ ವಚನವನ್ನೇ ಕೈಬಿಟ್ಟಿದ್ದಾನೆ. ಇದರಿಂದ ಶೂನ್ಯಸಂಪಾದನಕಾರರಲ್ಲಿ ಒಬ್ಬನಾದ ಸಿದ್ಧವೀರನು ಎರಡು ವಚನಗಳನ್ನು ಬೆಸೆದು ಒಂದು ಮಾಡುವುದು; ಹಾಗೆ ಮಾಡುವಾಗ ಬೇಡ ವಾದ ಭಾಗವನ್ನು ಕತ್ತರಿಸಿ ಹಾಕುವುದು ಸ್ಪಷ್ಟವಿದೆ. ಒಟ್ಟಿನಲ್ಲಿ ಶೂನ್ಯಸಂಪಾದನಕಾರರು ಶರಣರ ವಚನಗಳ ಪಾಠದ ಪಾವಿತ್ರ್ಯವೆನ್ನು ರಕ್ಷಿಸಿದಂತಿಲ್ಲ.

ಆಕಾರ-ನಿರಾಕಾರವೆನುತಿಹರೆಲ್ಲರೂ ; ಆಕಾರವೆನ್ನ, ನಿರಾಕಾರವೆನ್ನ. ಲಿಂಗಜಂಗಮದ ಪ್ರಸಾದಲ್ಲಿ ತದ್ಗತನಾದ. ನಿಮ್ಮ ಬಸವಣ್ಣ ನಿಂತಹ ಸ್ವತಂತ್ರನಯ್ಯ ಕಲಿದೇವರ ದೇವ. ೫೬೬-೨೦೭-9-30. ಮತ್ತಂ :

ದಾಸೋಹವು, ಭೃತ್ಯಾಚಾರವು ; ಅತಿ ಪ್ರೇಮವು, ಕಿಂಕಿಲವು ಸಂಗನ ಬಸವಣ್ಣಂಗಲ್ಲದೆ ಮತ್ತಾರಿಗೂ ಇಲ್ಲ. ಇಂತಹ ಭಕ್ತಿಯ ಕುಳಸ್ಥಳವನಱಿಯದೆ ಎಲ್ಲರೂ ಎಂದಂತೆ ಎಂದರು; ಬಂದಲ್ಲಿಯೆ ಬಂದರು. ಇದ ನೀಕರಿಸಿ, ಜಂಗಮವೇ ಲಿಂಗವೆಂದು ಸಂಗಸಾಹಿತ್ಯವಾದನು ಬಸವಣ್ಣನಿಂತಹ ನಿತ್ಯನಯ್ಯ ಕಲಿದೇವರ ದೇವ. ೫೬೭-೨೦೮-× . ಮತ್ತಂ :

ಬಸವಣ್ಣನ ನಡೆ ಪರುಷ, ಬಸವಣ್ಣನ ನುಡಿ ಪರುಷ, ಬಸವಣ್ಣನ ದೃಷ್ಟಿ ಪರುಷ, ಬಸವಣ್ಣನ ಹಸ್ತ ಪರುಷ, ಬಸವಣ್ಣನ ಭಾವ ಪರುಷ, ಬಸವಣ್ಣನ ಮನ ಪರುಷ. ತನು-ಮನ-ಧನವ ನಿರ್ವೇದಿಸಿದಾತ ಬಸವಣ್ಣನು. ಬಸವಣ್ಣನ ನೆನೆವುದೇ ಲಿಂಗಾರ್ಚನೆ, ಬಸವಣ್ಣನ ನೆನೆವುದೇ ಪರಮತತ್ವವು, ಬಸವಣ್ಣನ ನೆನೆವುದೇ ಕಲ್ಯಾಣವೆನಗೆ. ಕಲಿದೇವಯ್ಯ ನಿಮ್ಮ ಶರಣ ಬಸವಣ್ಣನಿಂತಹ ಮಹಿಮ ನೋಡಯ್ಯ. ೫೬೮-೨೦೯-9-31.

ಇಂತು ಮಡಿವಾಳ ತಂದೆಗಳು ಪ್ರಭುದೇವರೊಡನೆ ಬಸವರಾಜದೇವರ ಮಹಾತ್ಮೆಯಂ ಕೊಂಡಾಡಲು, ಇದಕ್ಕೆ ಪ್ರಭುದೇವರು ಪ್ರಸನ್ನರಾಗಿ ಬಸವರಾಜದೇವರೊಡನೆ ಮಡಿವಾಳ ತಂದೆಗಳ ಕೊಂಡಾಡಿದ ಪ್ರಸ್ತಾವದ ವಚನ :

[1]ಆನಿ[1]ಕಲ್ಲ ಪುತ್ಥಳಿ ವಾರಿಧಿಯನಪ್ಪಿಕೊಂಡಂತಾಯಿತು. ಅಗ್ನಿಯ [2]ಪುರುಷನ[2] ಮುಸುಕ ತೆಗೆದ ಕರ್ಪುರದ [2]ಪುತ್ಥಳಿಯ[2]ಂತಾಯಿತು. ಕತ್ತಲೆಯೊಳಗೆ [2]ರವಿಯ[2] ಬೆಳಗು ಹೊಕ್ಕಂತಾಯಿತು. ಗೊಗೇಶ್ವರನ ಶರಣ, ಮಡಿವಾಳ ಮಾಚಿ ತಂದೆಯ ಕೃಪೆಯಿಂದ ಬಸವಣ್ಣ, ನಿನ್ನ ಕಂಡೆನು, ನಿನ್ನನೂ ಮಡಿವಾಳನನೂ ನೀನೆಂದೆ ಕಂಡೆನಯ್ಯ. ೫೬೯-೨೧೦-9-32.

ಹೀಗೆಂದು ಪ್ರಭುದೇವರು ಬಸವರಾಜದೇವರೊಡನೆ ಮಡಿವಾಳ ಮಾಚಿ ತಂದೆಗಳ ಕೊಂಡಾಡಲು, ಆ ಮಡಿವಾಳ ತಂದೆಗಳು ಬಸವರಾಜದೇವರ ದಾಸೋಹದ ಕಟ್ಟಳೆಯ ನೇಮವನು, ಆತನ ಆಚಾರವನು, ಆ ಬಸವಣ್ಣನ ಭಕ್ತಿವ್ರತವನು ಪ್ರಭುದೇವರೊಡನೆ ಕೊಂಡಾಡಿ ಹೇಳಿದ ಪ್ರಸ್ತಾವದ ವಚನ:

ಕೃತಯುಗ-ತ್ರೇತಾಯುಗ-ದ್ವಾಪರ-ಕಲಿಯುಗಂಗಳಲ್ಲಿ ಆ ಬಸವಣ್ಣನೇ ಭಕ್ತ, ಪ್ರಭುವೆ ನೀವೇ ಜಂಗಮ—ಎಂಬುದು ಭಾವಭೇದವಿಲ್ಲ—ತಪ್ಪದು ನೋಡಯ್ಯ. ಕಲಿಯುಗದಲ್ಲಿ ಶಿವಭಕ್ತಿಯನು ಪ್ರಬಲವ ಮಾಡಬೇಕೆಂದು ಮರ್ತ್ಯಲೋಕಕ್ಕಿಳಿದು ಶೈವಾಗಮಾಚಾರ್ಯ ಮಂಡಗೆಯ ಮಾದಿರಾಜನ ಸತಿ ಮಾದಾಂಬಿಕೆಯ ಗರ್ಭದಿಂದವತರಿಸಿ, ಬಸವಣ್ಣನೆಂಬ ನಾಮಕರಣಮಂ ಧರಿಸಿ, ಕೂಡಲಸಂಗಮದೇವರ ದಿವ್ಯ ಶ್ರೀಪಾದಪದ್ಮಾರಾಧಕರಾಗಿ ಮರ್ತ್ಯಕ್ಕೆ ಪ್ರತಿಕೈಲಾಸವೆಂಬ ಕಲ್ಯಾಣಮಂ ಮಾಡಿ, ತನ್ನ ಭಕ್ತಿ-

[1] (ಶಿ) ವಾರಿ (ಹ ಗೂ) [ಆನಿಕಲ್ಲು < ಆಲಿಕಲ್ಲು]. [2] (ಹ) × (ಶಿಗೂ).

ಪರೀಕ್ಷೆಗೆ ಬಿಜ್ಜಳನೆಂಬ ಒರೆಗಲ್ಲಂ ಮಾಡಿ, ಆ ಸದ್ಭಕ್ತಿಚಿನ್ನವನು ಒರೆದು ನೋಡುವ ಕೊಂಡೆಯ ಮಂಚಣ್ಣಗಳಂ ಪುಟ್ಟಿಸಿದ ಬಸವಣ್ಣನು. ಕಪ್ಪಡಿಯ ಸಂಗಯ್ಯದೇವರ ಸ್ವಹಸ್ತದಿಂದುಪದೇಶವಂ ಪಡೆದು ಸರ್ವಾಚಾರ ಸಂಪನ್ನನಾಗಿ ಇರುತ್ತಿರೆ— ಶಿವನಟ್ಟಿದ ನಿರೂಪವಂ ಓದಿ, ಅಱುವತ್ತು ಕೋಟಿ ವಸ್ತುವಂ ತೆಗೆಸಿ, ಬಿಜ್ಜಳಂಗೆ ದೃಷ್ಟವಂ ತೋಱಿ, ಶಿರಪ್ರಧಾನನಾಗಿ, ಶಿವಾಚಾರ ಶಿರೋಮಣಿಯಾಗಿ, ಏಳು ನೂಱಱಪ್ಪತ್ತು ಅಮರಗಣಂಗಳಿಗೆ ಪ್ರಥಮ-ದಂಡನಾಯಕನಾಗಿ, ಗುರು-ಲಿಂಗ-ಜಂಗಮಕ್ಕೆ ತನು-ಮನ-ಧನವಂ ನಿವೇದಿಸಿ, ಅನವರತ ಶಿವಗಣತಿಂಥಿಣಿಯೊಳು ಓಲಾಡುತ್ತಿಪ್ಪ ಆ ಬಸವಣ್ಣನು ಲಕ್ಷದ ಮೇಲೆ ತೊಂಬತ್ತಾಱು ಸಾವಿರ ಜಂಗಮದ ಪಾದೋದಕ ಪ್ರಸಾದದಲ್ಲಿ ನಿಯತನಾಗಿ, ಅಲ್ಲಿ ಲಿಂಗಾರ್ಚನೆಯ ಮಾಡುವ ಜಂಗಮದ ಗಣತಿಂಥಿಣಿಯ ಕಂಡು, ಅವರ ನೇಮದಿಚ್ಛೆಗಳಂ ಸಲಿಸಿ ಒಲಿದು ಮಾಡುವ ದಾಸೋಹದ ಪರಿ ಎಂತೆಂದರೆ: ಹಾಲ ನೇಮದವರು 12000, ಹಾಲ ಕೆನೆಯ ನೇಮದವರು 12000, ಘಟ್ಟಿವಾಲ ನೇಮದವರು 12000, ಪಂಚಾಮೃತಂಗಳ ಒಲಿದು ಲಿಂಗಕ್ಕೆ ಸಲಿಸುವ ನೇಮದವರು 12000, ಕಟ್ಟು ಮೊಸರು ನೇಮದವರು 12000, ಕೆನೆಮೊಸರ ನೇಮದವರು 12000, ಘಟ್ಟಿ ತುಪ್ಪದ ನೇಮದನರು 12000, ತಿಳಿತುಪ್ಪದ ನೇಮದವರು [1]6000,[1] ಚಿಲುಮೆಯಗ್ಘಣಿಯ ನೇಮದವರು 12000, ಪರಡಿಸೂಜ್ಜಿಗೆಯ ನೇಮದವರು 12000, ಕಟ್ಟುಮಂಡಗೆಯ ನೇಮದವರು 12000, ಎಣ್ಣೆ ಹೂರಿಗೆಯ ನೇಮದವರು 12000, ಒಡೆಪೂರಿಗೆಯ ನೇಮದವರು 12000, [2]ಹಾಲುಂಡೆ[2] ನೇಮದವರು, 12000, ತವರಾಜ ಸಕ್ಕರೆಯ ನೇಮದವರು 12000, ಷಡುರಸಾಯನದ ನೇಮದವರು 12000, ದ್ರಾಕ್ಷಿ-ಮಾವು-ಖರ್ಜೂರ-ಹಲಸು-ದಾಳಿಂಬ-ಇಕ್ಷುದಂಡ-ಕದಳಿ ಮೊದಲಾದ ಫಲದ್ರವ್ಯಂಗಳ ನೇಮದವರು 12000, ಸಪ್ಪೆಯ ನೇಮದವರು 12000, ಸರ್ವದ್ರವ್ಯಂಗಳ ನೇಮದವರು 12000, ಸಮಯಾಚಾರಸಹಿತ ಲಿಂಗಾರ್ಚನೆಯ ಮಾಡುವ [3]ಸಮಯಾಚಾರಿಗಳು[3] ನಿತ್ಯನೇಮಿಗಳು [4]16000,[4] ಇಂತು ಎಡೆಬಿಡುವಿಲ್ಲದೆ ಲಿಂಗಾರ್ಚನೆಯ ಮಾಡುವ ಜಂಗಮ [5]1,96000,[5] ಆ ಬಸವಣ್ಣನ ಸಮಯಾಚಾರದಲ್ಲಿ ಕುಳ್ಳಿರ್ದು ಲಿಂಗಾರ್ಚನೆಯ ಮಾಡುವ ಜಂಗಮ ಸಮಯಾಚಾರಿಗಳು [6]36000[6]; ಅಂತು [7][4,30000][7] ಶಿವಗಣಂಗಳ ತಿಂಥಿಣಿಗೊಲಿದು ದಾಸೋಹಂ ಮಾಡುತ್ತ ಪ್ರಸಾದ ಪಾದೋಕದೊಳೋಲಾಡುತ್ತ ಸುಖಸಂಕಥಾ ವಿನೋದದಿಂದ ಭಕ್ತಿ ಸಾಮ್ರಾಜ್ಯಂಗೆಯ್ಯುತ್ತಿರಲು— ಶಿವಭಕ್ತಿ ಕುಲತಿಲಕ, ಶಿವಭಕ್ತಿ ಶಿರೋಮಣಿ ಎಂಬ ಚೆನ್ನಬಸವಣ್ಣನವತರಿಸಿ [7A]ಶೈವಮಾರ್ಗಮಂ ಬಿಡಿಸಿ,[7A] ಪ್ರಾಣಲಿಂಗ ಸಂಬಂಧಮಂ ತೋಱಿಸಿ, [8]ಸರ್ವಾಂಗ[8] ಶಿವಲಿಂಗ ಪ್ರಾಣಪ್ರಸಾದ ಭೋಗೋಪ

[1] (ಶಿ) 12000 (ಹ). [2] (ಹ) × (ಶಿ). [3] (ಶಿ) × (ಹ). [4] (ಶಿ) 12000 (ಹ). [5] Note: ಇದು ಹಿಂದಿನ ಎಲ್ಲ ಅಂಕಿ ಅಂಶಗಳ ಮೊತ್ತವಲ್ಲ. [6] (ಶಿ) 32000 (ಹ). [7] 232000 (ಹ ಶಿ) Note: [7A] ಗೂಳೂರು ಸಿದ್ಧವೀರನು ಈ ವಚನವನ್ನು ಬಿಟ್ಟಿರುವುದಕ್ಕೆ ಕಾರಣ ಇಲ್ಲಿದೆ.

ಭೋಗದ ಭೇದವಂ ತೋಱಿಸಿ, ದಾಸೋಹದ ನಿರ್ಣಯವಂ ಬಣ್ಣವಿಟ್ಟು ಬೆಳಗಿ ತೋಱಿ, ಪಾದೋದಕ-ಪ್ರಸಾದಮಂ ಕೊಳಕಲಿಸಿ, ಗುರು-ಲಿಂಗ-ಜಂಗಮದ ಘನವಂ ತೋಱಿಸಿ, ಶರಣಸತಿ-ಲಿಂಗಪತಿ ಎಂಬುದಂ ಸಂಬಂಧಿಸಿ ತೋಱಿ, ಭಕ್ತ-ಮಾಹೇಶ್ವರ ಪ್ರಸಾದಿ-ಪ್ರಾಣಲಿಂಗಿ-ಶರಣನೈಕ್ಯನೆಂಬ ಷಡುಸ್ಥಲವಂ ಸರ್ವಾಂಗದೊಳು ಪ್ರತಿಷ್ಠಿಸಿ ತೋಱಿ ಸಲಹಿದ ಆ ಚೆನ್ನಬಸವಣ್ಣನಲ್ಲಿ ಇಂಬುಗೊಂಡು—ಅಚ್ಚಪ್ರಸಾದಿಯಾಗಿ, ನಿಚ್ಚಪ್ರಸಾದಿಯಾಗಿ, ಸತ್ಯಪ್ರಸಾದಿಯಾಗಿ, ಸಮಯಪ್ರಸಾದಿಯಾಗಿ, ಸಂತೋಷ ಪ್ರಸಾದಿಯಾಗಿ, ಸರ್ವಾಂಗಪ್ರಸಾದಿಯಾಗಿ, ಸಮರಸಪ್ರಸಾದಿಯಾಗಿ—ನಿರ್ಣಯದಲ್ಲಿ ನಿಷ್ಪನ್ನನಾಗಿ, ನಿಜದಲ್ಲಿ ನಿವಾಸಿಯಾಗಿ, ನಿರಾಳಕ್ಕೆ ನಿರಾಳನಾಗಿ, ಘನದಲ್ಲಿ ಅಗಮ್ಯ ನಾಗಿ, ಅಖಂಡಪರಿಪೂರ್ಣನಾಗಿ, ಉಪಮೆಗೆ ಅನುಪಮನಾಗಿ, ವಾಙ್ಮನಕ್ಕಗೋಚರ ನಾಗಿ, ಭಾವನಿರ್ಭಾವವೆಂಬ ಬಗೆಯ ಬಣ್ಣಕ್ಕೆ ಅತ್ತತ್ತಲೆಂದೆನಿಸಿ—ಶೂನ್ಯನೆಂದೆನಿಸಿಪ್ಪ ಸಂಗನ ಬಸವಣ್ಣನ ತೊತ್ತಿನ ತೊತ್ತಿನ ಮಱುದೊತ್ತಿನ ಮಗ ನಾನು ಕಾಣಾ, ಪ್ರಭುವೇ, ಕಲಿದೇವರ ದೇವ. ೫೭೦-೭೧೧-೪.

ಹೀಂಗೆಂದು ಮಡಿವಾಳ ಮಾಚಿ ತಂದೆಗಳು ಬಸವರಾಜದೇವರ ಮಹಾತ್ಮೆಯಂ ಕೊಂಡಾಡಿ ಪೇಳಲು—ಪ್ರಭುದೇವರು ಪ್ರಸನ್ನರಾಗಿ, ಆ ಬಸವರಾಜದೇವರೊಡನೆ ಆ ಮಡಿವಾಳ ತಂದೆಗಳ ಕೊಂಡಾಡಿದ ಪ್ರಸ್ತಾವದ ವಚನ:

ಅಷ್ಟತನುವಿನ ಘಟ್ಟಿಯ ಕರಗಿಸಿ, ಕಟ್ಟುಗ್ರದ ಕಾಮ-ಕ್ರೋಧ-ಲೋಭ-ಮೋಹ-ಮದ-ಮತ್ಸರಂಗಳೆಂಬವಂ ಸುಟ್ಟುರುಹಿ, ತನುವಿನ ಅವಲೋಹವ ಕೆಡಿಸಿ, ಮನದ ಸಂಚಲವ ನಿಲಿಸಿ, ಸಕಲ ಕರಣಂಗಳ ಅಱಿವಿಂಗಾಹುತಿಯನಿಕ್ಕಿ, ಸುಜ್ಞಾನ-ಪ್ರಭೆಯ ನುಟ್ಟು, ಸುಜ್ಞಾನ ಪ್ರಭೆಯ ಹೊದೆದು, ಸುಜ್ಞಾನ ಪ್ರಭೆಯ ಸುತ್ತಿ, ಸುಜ್ಞಾನಪ್ರಭೆಯ ಹಾಸಿ—ಮಹಾಜ್ಞಾನದಲ್ಲಿ ನಿರ್ಭಾವಸಂಪನ್ನ[1]ನಾದ[1] ಮಡಿವಾಳನ ಮಡಿಯ ಪ್ರಸಾದವ ನಾನು ಹೊದೆದ ಕಾರಣ ನಿರ್ಮಳನಾದೆನು, ನಿಜೈಕ್ಯನಾದೆನು, ನಿಶ್ಚಿಂತನಾದೆನು : ಇದು ಕಾರಣ, ಗೊಗ್ಗೇಶ್ವರಲಿಂಗದಲ್ಲಿ ತೆಱಹಿಲ್ಲದಿಪ್ಪ ಮಡಿವಾಳನ ಪ್ರಸಾದದಿಂದ ನಿಮ್ಮ ಘನವನಱಿದು ಬದುಕಿದೆನು ಕಾಣಾ ಸಂಗನ ಬಸವಣ್ಣ. ೫೭೧-೭೧೨-9-33.

ಹೀಂಗೆಂದು ಪ್ರಭುದೇವರು—ಮಡಿವಾಳಮಾಚಿ ತಂದೆಗಳ ಸ್ತುತಿಯಿಸಿ ಬಸವರಾಜ ದೇವರೊಡನೆ ನಿರೂಪಿಸಲು, ಆ ಮಡಿವಾಳ ಮಾಚಿ ತಂದೆಗಳು—ಆ ಪ್ರಭುದೇವರನು ಸ್ತೋತ್ರವಂ ಮಾಡಿದ ಪ್ರಸ್ತಾವದ ವಚನ:

ಅಂಗಯ್ಯ ಲಿಂಗ ಕಂಗಳ ನೋಟದಲ್ಲಿ ಅಱಿತ ಲಿಂಗೈಕನ, ಮನದ ಅಱಿವು ನಿರ್ಭಾವ ದಲ್ಲಿ ಅಱಿತ ಲಿಂಗೈಕ್ಯನ, ಸರ್ವಾಂಗನಿಷ್ಠೆ ನಿರ್ಣಯವಾದ ಲಿಂಗೈಕ್ಯನ, ನಿಜವನುಂಡು ತೃಪ್ತನಾದ ಲಿಂಗೈಕ್ಯ[ನ], ಮಹವನವಗ್ರಹಿಸಿ ಘನವೇದ್ಯನಾದ ಲಿಂಗೈಕ್ಯ[ನ], ಕಲಿದೇವರ ದೇವ, ಪ್ರಭುವೆಂಬ ಲಿಂಗೈಕ್ಯನ ಶ್ರೀ ಪಾದದಲ್ಲಿ ಮಗ್ನನಾಗಿದ್ದೆನು. ೫೭೨-೭೧೩-9-36 ಮತ್ತಂ:

ಗುರುವಾಗಿ ಉಪದೇಶವ ತೋಱಿದನೀತ, ಲಿಂಗವಾಗಿ ಮನವನಿಂಬುಗೊಂಡನೀತ,

ಜಂಗಮವಾಗಿ ಅರ್ಥಪ್ರಾಣಾಭಿಮಾನದರ್ಪವ ಕೆಡಿಸಿದನೀತ, ಪ್ರಸಾದವಾಗಿ ಎನ್ನ ಸರ್ವಾಂಗವನನುಗ್ರಹಿಸಿದಾತನೀತ, ಪಾದೋದಕವಾಗಿ ಎನ್ನ ಒಳಹೊರಗ ತೊಳೆದಾತನೀತ: ಕಲಿದೇವರದೇವ, ಬಸವಣ್ಣ ತೋಱಿದನಾಗಿ ಪ್ರಭುವೆಂಬ ಮಹಿಮನ ಸಂಗದಿಂದ ಬದುಕಿದೆನು. ೫೭೩-೭೧೪-9-37.

ಹೀಂಗೆಂದು ಮಡಿವಾಳ ತಂದೆಗಳು ಪ್ರಭುದೇವರ ಸ್ತುತಿಸಿ ಬಸವರಾಜದೇವರೊಡನೆ ಬಿನ್ನೈಸಲು, ಆ ಬಸವರಾಜದೇವರು ಪ್ರಭುದೇವರೊಡನೆ ಮಡಿವಾಳ ತಂದೆಗಳ ಸ್ತುತಿಯಿಸಿದ ಪ್ರಸ್ತಾವದ ವಚನ:

ಎನ್ನ ಕಾಯವ ಶುದ್ಧವ ಮಾಡಿದಾತ ಮಡಿವಾಳ, ಎನ್ನ ಮನವ ನಿರ್ಮಲವ ಮಾಡಿದಾತ ಮಡಿವಾಳ, ಎನ್ನಂತರಂಗವ ಬೆಳಗಿದಾತ ಮಡಿವಾಳ, ಎನ್ನ ಬಹಿರಂಗವ ಬಿಡಿಸಿದಾತ ಮಡಿವಾಳ. ಕೂಡಲಸಂಗಮದೇವ, ಎನ್ನ ನಿಮಗೆ ಯೋಗ್ಯನ ಮಾಡಿದಾತ ಮಡಿವಾಳ. ೫೭೪-೭೧೫-9-38.

ಹೀಂಗೆಂದು ಬಸವರಾಜದೇವರು ಪ್ರಭುದೇವರೊಡನೆ ಮಡಿವಾಳ ತಂದೆಗಳ ಸ್ತೋತ್ರವ ಮಾಡುವ ವಚನ:

ಸೂತ್ರಧಾರಿ ಮನದ ಮೈಲಿಗೆಯ ಕಳೆಯ ಬಂದನಯ್ಯ ಮಡಿವಾಳನು. ಎನ್ನ ಕಾಯದ ಮೈಲಿಗೆಯ ತಂದು ತನ್ನ ಮುಂದೆ ಇರಿಸಿದರೆ, ಸಮತೆಯೆಂಬ ಕೂಪತೋಹಿನಲ್ಲಿ ಅದ್ದಿ ಕಟ್ಟಿ ಹಿಳಿದನಯ್ಯ. ಅವಗುಣವೆಂಬ ಪಂಚೇಂದ್ರಿಯವರ್ಗಂಗಳ ಜ್ಞಾನವೆಂಬ ನಿರ್ಮಳಜಲದಲ್ಲಿ ಅಲುಬಿ ಸೆಳೆದನಯ್ಯ. ರವಿ-ಶಶಿ-ಶಿಖಿಯ ತೇಜದಲ್ಲಿ ಆಱಿಸಿದನು. ಚತುರ್ದಶ-ಷೋಡಶವೆಂಬ ಗಳಿಗೆಯಂ ಮಾಡಿದನು; ಸಮಾಧಾನವೆಂಬ ಅಡೆಯ ಮೇಲಿರಿಸಿ ಸಮಗುಣವೆಂಬ ಕೊಡತಿಯಲ್ಲಿ ಘಟ್ಟಿಸಿದನು. ಹಱಿಯಿತ್ತಯ್ಯ ಸೆಱಗು ಮೂಱಾಗಿ, ಆ ಮೂಱಱುವೆಯ ಕೊಟ್ಟನಯ್ಯ ಎನ್ನ ಕೈಯಲ್ಲಿ. ಆ ಅಱುವೆಯ ಗುರುವಿಂಗೊಂದ ಕೊಟ್ಟೆನು, ಲಿಂಗಕ್ಕೊಂದ ಕೊಟ್ಟೆನು, ಜಂಗಮಕ್ಕೊಂದ ಕೊಟ್ಟೆನು. ಎನಗೆ ಕೊಟ್ಟ ಮೂಱಱುವೆಯನು ಒಂದು ಮಾಡಿ ಹೊದೆದುಕೊಂಡು ನಿಶ್ಚಿಂತನಾಗಿ—ಮಡಿವಾಳನ ಕೃಪೆಯಿಂದಲಾನು ಬದುಕಿದೆನು ಕಾಣ ಕೂಡಲಸಂಗಮದೇವ. ೫೭೫-೭೧೬-9-39 ಮತ್ತಂ:

ಮಡಿವಾಳ ಮಡಿವಾಳನೆಂಬರು: ಮಡಿ-ವಾಳನೆಂಬುದನಾರೂ ಅಱಿಯರು. ಎನ್ನ ಮಲತ್ರಯದಲ್ಲಿ ಹೊದಕುಳಿಗೊಂಬ ಮನದ ಮೈಲಿಗೆಯ ತಂದು ನಾನು ತನ್ನ ಮನೆಗೆ ಕೊಂಡುಹೋಗಿ ಹಾಕಿದರೆ—ಕೈಮುಟ್ಟಿದರೆ ಆಗದೆಂದು—ತನ್ನ ಪಾದದೊಳಗೆ ಮೆಟ್ಟಿ ಅಲುಬಿ ಸೆಳೆದನಯ್ಯ. ತನ್ನ ನಿರ್ಮಲವ ಕೊಟ್ಟನೆನಗೆ. ಆ ಕೊಟ್ಟ [1][ಬಿಳುದ][1] ಹೊದೆದುಕೊಂಡೆನಾಗಿ, ಆ ಮಡಿವಾಳಮಾಚಿ ತಂದೆಯ ಕೃಪೆಯಿಂದಲಾನು ಬದುಕಿದೆನಯ್ಯ ಕೂಡಲಸಂಗಮದೇವ. ೫೭೬-೭೧೭-9-40.

ಹೀಂಗೆಂದು ಬಸವರಾಜದೇವರು ಮಡಿವಾಳಮಾಚಿ ತಂದೆಗಳ ಹೊಗಳಲು, ಆ

---

[1] ಬಿಳುಡೆಯ (ಶಿಹ) ಬೀಳುಡಿಗೆಯ (ಗೂ).

ಮಾಚಿ ತಂದೆಗಳು ಮರಳಿ ಮರಳಿ ಬಸವರಾಜದೇವರ ಕೊಂಡಾಡುವ ವಚನ:

ಬಿಂದುವ ಹಱಿದು, ನಾದವನತಿಗಳೆದು, ಕಳೆಯ ಬೆಳಗ ಸಾಧಿಸಿ, ಅಸಾಧ್ಯಸಾಧಕ ನಾದೆಯಲ್ಲಾ ಬಸವಣ್ಣ. ಕಾಯವ ಹೊದ್ದದೆ, ಮಾಯವ ಸೋಂಕದೆ, ನಿರಾಳನಾಗಿ ನಿಂದೆಯಲ್ಲಾ ಬಸವಣ್ಣ. ನಾ ನಿನ್ನನವಗ್ರಹಿಸಿ, ನೀನೆನ್ನನವಗ್ರಹಿಸಿ, ಸಂದು-ಭೇದವಿಲ್ಲ ದಿಪ್ಪಲ್ಲಿ, ಹೊಗಳಲಿಂಬುಂಟೆ ಬಸವಣ್ಣ ? ಕಲಿದೇವರ ದೇವನು ಕಾಯಗೊಂಡಿಪ್ಪುದನು ನಿನ್ನಿಂದಲಾನು ಕಂಡೆ ನೋಡಾ ಸಂಗನ ಬಸವಣ್ಣ. ೫೭೭-೭೧೮-9-41.

ಹೀಂಗೆಂದು ಮಡಿವಾಳತಂದೆಗಳು ಬಸವರಾಜದೇವರನು ಕೊಂಡಾಡುತ್ತಿರಲು, ಇದಕ್ಕೆ ಪ್ರಭುದೇವರು—ಬಸವಣ್ಣನ ಕೃಪೆಯಿಂದ ನಿನ್ನ ಘನವಱಿದೆನೆಂದು ಮಡಿವಾಳ ಮಾಚಿ ತಂದೆಗಳ ಕೊಂಡಾಡುವ ಪ್ರಸ್ತಾವದ ವಚನ :

[1]ಆದಿಯ ಕಂಡೆ, ಅನಾದಿಯ ಕಂಡೆ; ಘನವ ಕಂಡೆ [ಗಂಭೀರವ ಕಂಡೆ]; ಮನವ ಕಂಡೆ, ಅನುವ ಕಂಡೆ.[1] ಆಯತ-ಸ್ವಾಯತ-ಸನ್ನಿಹಿತವ ಕಂಡೆ. ಗೊಗೇಶ್ವರಲಿಂಗ ದಲ್ಲಿ ಬಸವಣ್ಣನ ಕೃಪೆಯಿಂದ ನಿನ್ನ ಕಂಡೆನು ಕಾಣಾ ಮಡಿವಾಳ ಮಾಚಯ್ಯ. ೫೭೮-೭೧೯-9-42.

ಹೀಂಗೆಂದು ಮಡಿವಾಳ ತಂದೆಗಳ ಪ್ರಭುದೇವರು ಸ್ತೋತ್ರಮಂ ಮಾಡುತ್ತಿರಲು, ಆ ಮಡಿವಾಳ ತಂದೆಗಳು—ಬಸವಣ್ಣನ ಕೃಪೆಯಿಂದ ನಿಮ್ಮ ಕಂಡು ಬದುಕಿದೆನೆಂದು, ಪ್ರಭುದೇವರ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ :

ಎಲೆ ಕಲಿದೇವ, ಆದಿಯ ಕುಳವು, ಅನಾದಿಯ[2] ಕುಳವು[2] ನಿಮ್ಮ ಜಂಗಮಮೂರ್ತಿ ಯಲ್ಲಿ ನಿಂದಿತ್ತು. ಮೂಲಶುದ್ಧದ ಮುಕ್ತಾಯ ನಿಮ್ಮ ಜಂಗಮ ಮೂರ್ತಿಯಲ್ಲಿ ನಿಂದಿತ್ತು. ಉಭಯಕುಳಕಿರಣಶಕ್ತಿ ನಿಮ್ಮ ಜಂಗಮಮೂರ್ತಿಯಲ್ಲಿ ನಿಂದಿತ್ತು. ಭಾವ-ನಿರ್ಭಾವ ನಿಮ್ಮ ಜಂಗಮಮೂರ್ತಿಯಲ್ಲಿ ನಿಂದವು. ಆದಿಯನಾದಿಯೂ ನಿಮ್ಮ ಜಂಗಮಮೂರ್ತಿಯಲ್ಲಿ ನಿಂದವು. ಸಾಧ್ಯಾಸಾಧ್ಯ ನಿಮ್ಮ ಜಂಗಮಮೂರ್ತಿ ಯಲ್ಲಿ ನಿಂದಿತ್ತು. ಅರ್ಥಪ್ರಾಣಾಭಿಮಾನ ನಿಮ್ಮ ಜಂಗಮಮೂರ್ತಿಯಲ್ಲಿ ನಿಂದಿತ್ತು. ಅಂಗ-ಲಿಂಗ-ಸಂಗ ನಿಮ್ಮ ಜಂಗಮಮೂರ್ತಿಯಲ್ಲಿ ನಿಂದಿತ್ತು. ಅಷ್ಟದಳಕಮಲದ ಸಪ್ತ ಕನ್ನಿಕೆಯರು ನಿಮ್ಮ ಜಂಗಮೂರ್ತಿಯಲ್ಲಿ ನಿಂದವು. ಎನ್ನ ನಡೆಗೆಟ್ಟಿತ್ತು, ನಿಮ್ಮ ಜಂಗಮಮೂರ್ತಿಯಿಂದ. ಎನ್ನ ನುಡಿಗೆಟ್ಟಿತ್ತು, ನಿಮ್ಮ ಜಂಗಮಮೂರ್ತಿಯಿಂದ. ಎನ್ನ ನೋಟ ಕೆಟ್ಟಿತ್ತು, ನಿಮ್ಮ ಜಂಗಮಮೂರ್ತಿಯಿಂದ. ಎನ್ನ ಮಾಟ [3]ಸಮಾಪ್ತಿ[3] ಯಾಯಿತ್ತು, ನಿಮ್ಮ ಜಂಗಮಮೂರ್ತಿಯಿಂದ. ನಿಮ್ಮ ಪ್ರಸಾದದಿಂದ ತನುವಾಯಿತ್ತು.

---

[1] ಆದಿ ಅನಾದಿಯ ಕಂಡೆ. ಘನಗಂಭೀರವ ಕಂಡೆ. ಭಕ್ತ್ಯಾಚಾರದನುವ ಕಂಡೆ. ಮನವ ಕಂಡೆ—ಅನುವ ಕಂಡೆ ಗುರುಲಿಂಗ ಜಂಗಮನೆಲೆಯ ಕಂಡೆ (ಹ) ಆದಿಯ ಕಂಡೆ ಅನಾದಿಯ ಕಂಡೆ. ಘನವ ಕಂಡೆ ಮನವ ಕಂಡೆ ಅನುವ ಕಂಡೆ (ಗೂ ಶಿ). [2] ಸ್ಥಳವು (ಹ) ಕುಳವು (ಶಿಗೂ). [3] (ಗೂಹ) ಸಮಾಧಿ (ಶಿ).

ಬಸವಣ್ಣ ತೋಱಿದ ಕಾರಣ, ನಿಮ್ಮ ಜಂಗಮಮೂರ್ತಿಯ ಕಂಡು, ಬದುಕಿದೆ ಕಾಣಾ ಕಲಿದೇವರ ದೇವ. ೫೭೯-೭೨೦-9-43

ಹೀಂಗೆಂದು ಮಡಿವಾಳ ತಂದೆಗಳು—ಬಸವರಾಜ ದೇವರ ಮುಖದಿಂದ ನಿಮ್ಮ ಮಹಾತ್ಮೆಯನಱಿದು ಕೃತಾರ್ಥನಾದೆನೆಂದು ಪ್ರಭುದೇವರೊಡನೆ ಬಿನ್ನೈಸುತ್ತಿರಲು, ಇದಕ್ಕೆ ಬಸವರಾಜದೇವರು ಆ ಪ್ರಭುದೇವರೊಡನೆ, ನಾನು ಮಡಿವಾಳ ತಂದೆಯ ಸಮರಸಭಾವದೊಳಿರ್ದೆನೆಂದು ಬಿನ್ನೈಸುವ ಪ್ರಸ್ತಾವದ ವಚನ :

ಕಲ್ಪಿತವ ಕಳೆದು, ಅಕಲ್ಪಿತವ ತಿಳುಹಿದ. ಮನವ ಮಾಣಿಸಿ, ಘನವ ನೆಲೆಗೊಳಿಸಿದ. ತನುವ ಕೆಡಿಸಿ, ಅನುವ ಸ್ಥಾಪ್ಯವ ಮಾಡಿದ. ಅಂತರಂಗದಲ್ಲಿ ಮಹಾಜ್ಞಾನವ ತುಂಬಿದ ಬಹಿರಂಗದಲ್ಲಿ ಸದಾಚಾರವ ನೆಲೆಗೊಳಿಸಿದ. ನಿಮ್ಮ ನಿಲವನೆನಗೆ ಒರೆದೊರೆದು ಹೇಳಿ ತೋಱಿಸಿ, ಎನ್ನ ನಿಮ್ಮ ಶ್ರೀಪಾದಕ್ಕೆ ಯೋಗ್ಯನ ಮಾಡಿದ. ಕೂಡಲ ಸಂಗಮದೇವಯ್ಯ ನಿಮ್ಮ ಮಹಾ ಮನೆಯಲ್ಲಿ ಮಡಿವಾಳನೂ ನಾನೂ ಕೂಡಿ ಸುಖದಲ್ಲಿ ಇದ್ದೆವಯ್ಯ. ೫೮೦-೭೨೧-9-44.

ಹೀಂಗೆಂದು ಬಸವರಾಜದೇವರು—ಪ್ರಭುದೇವರೊಡನೆ, ಮಡಿವಾಳತಂದೆಗಳ-ತಮ್ಮ ಸಮರಸ[1]ಸ್ವಾನು[1]ಭಾವವಂ [2]ಬಿನ್ನೈಸಲು, ಇದಕ್ಕೆ ಮಡಿವಾಳ ತಂದೆಗಳು ತಮ್ಮ-ಬಸವ ರಾಜದೇವರ ಸಮರಸಭಾವವಂ[2] ಬಿನ್ನೈಸುತ್ತಿರ್ದ ಪ್ರಸ್ತಾವದ ವಚನ :

ಹೊಗಬಾರದು ಕಲ್ಯಾಣವನಾರಿಗೆಯೂ. ಹೊಕ್ಕಡೇನು ? ಕಲ್ಯಾಣದ ಸ್ಥಾನಮಾನಂಗಳನಱಿಯಬಾರದು. ಕಲ್ಯಾಣದ ಕಡೆಯ ಕಾಣಬಾರದು. ಕಲ್ಯಾಣದೊಳಗೆ ಹೊಕ್ಕಹೆವೆಂದು, ಕಲ್ಯಾಣಚರಿತ್ರರಾದೇವೆಂದು ದೇವದಾನವಮಾನವರೆಲ್ಲರೂ ಭಾವಿಸುತ್ತಿರ್ದರು ನೋಡಾ. ಕಲ್ಯಾಣವನು ಅನಂತಮೂರ್ತಿಗಳು, ಅನಂತ ಸ್ಥೂಲಮೂರ್ತಿಗಳು, ಅನಂತ ಸೂಕ್ಷ್ಮ ಮೂರ್ತಿಗಳು, ಅನಂತ ಮಂತ್ರಧ್ಯಾನರೂಪರು, ಪುಣ್ಯಕ್ಕೆ ಅಭಿಲಾಷೆಯ ಮಾಡುವ[+ವ]ರು ; ಪೂಜಕರು, ಯೋಗಿಗಳು ಭೋಗಿಗಳು, ದ್ವೈತರು ಅದ್ವೈತರು, ಕಾಮಿಗಳು ನಿಷ್ಕಾಮಿಗಳು, [3]ಆಶ್ರಿತರು[3]—ಅದೆಂತು ಹೊಗಬಹುದಯ್ಯ ಕಲ್ಯಾಣವನು ? ಅದೆಂತು ಕಾಣಬಹುದಯ್ಯ ಕಲ್ಯಾಣವನು ಲಿಂಗದೃಷ್ಟಂಗಲ್ಲದೆ, ಲಿಂಗವೇದ್ಯಂಗಲ್ಲದೆ, ಲಿಂಗಗಂಭೀರಂಗಲ್ಲದೆ, ಪ್ರಸಾದಕುಳಾನ್ವಯಂಗಲ್ಲದೆ? ಆಶೆಗೆಡೆಗುಡದಿಪ್ಪುದೇ ಕಲ್ಯಾಣ! ಸರ್ವಾಂಗವರ್ಣವಳಿದು ಕುಲಮದ ತಲೆದೋಱದೆ, ಭಕ್ತಿ ನಿತ್ಯವಾದುದೇ ಕಲ್ಯಾಣ ! ಈ ಕಲ್ಯಾಣವೆಂಬ ಮಹಾಘನದೊಳಗೆ ಬಸವಣ್ಣನೂ ನಾನೂ ಹದುಳಿದ್ದೆವು ಕಾಣಾ ಕಲಿದೇವರ ದೇವಯ್ಯ. ೫೮೧-೭೨೨-9-45.

ಹೀಂಗೆಂದು ಮಡಿವಾಳ ತಂದೆಗಳು ಬಿನ್ನೈಸಲು, ಇದಕ್ಕೆ ಪ್ರಭುದೇವರು—ಬಸವ ರಾಜದೇವರೊಡನೆ ಹೇಳಿ—ಮಡಿವಾಳ ತಂದೆಗಳ ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ :

---

[1] (ಹಗೂ) × (ಶಿ). [2] (ಗೂಹ) × (ಶಿ). [3] (ಹಗೂ) ಆಶ್ರಿಮರು (ಶಿ).

ಒಂದ ಮಾಡ ಹೋದರೆ ಮತ್ತೊಂದಾಯಿತ್ತೆಂಬುದು ಎನಗಾಯಿತ್ತು, ನೋಡಾ! ಮಡಿವಾಳನ ಪರಿಯನೊರೆದು ನೋಡಿದರೆ ನಿನ್ನ ಪೂರ್ವಾಪರವಱಿಯ ಬಂದಿತ್ತು. ನಿನ್ನ ಪೂರ್ವಾಪರಸಂಗವ ಮಾಡಬಂದರೆ ಎನ್ನ ಪೂರ್ವಾಪರವೆನಗಱಿಯ ಬಂದಿತ್ತು-ನೋಡ. ಮಹಾಜ್ಞಾನಿಗಳ ಸಂಗದಿಂದ ಉಭಯ ಸಂಗಸಿದ್ಧಿಯೆಂಬುದು ದಿಟವಾಯಿತ್ತು ನೋಡಾ ಬಸವಣ್ಣ. ಗೊಗೇಶ್ವರನ ಶರಣ ಮಡಿವಾಳನ ಶ್ರೀ ಪಾದಕ್ಕೆ ನಮೋ ನಮೋ ಎನುತಿದ್ದೆನು. ೫೮೨-೭೩-5-46.

ಹೀಂಗೆಂದು ಪ್ರಭುದೇವರು—ಬಸವರಾಜದೇವರೊಡನೆ—ಮಡಿವಾಳ ತಂದೆಗಳ ಮಹಾತ್ಮೆಯನು, ನಿನ್ನಿಂದ ಕಂಡೆನೆಂದು ಕೊಂಡಾಡಿ ಹೇಳುತ್ತಿರಲು, ಇದಕ್ಕೆ ಬಸವ ರಾಜದೇವರು—ಮಡಿವಾಳ ತಂದೆಯ ಶ್ರೀ ಪಾದದ ಘನವನು ಚೆನ್ನಬಸವಣ್ಣ ತೋಱಿದನಾಗಿ ಅಱಿದು ಸುಖಿಯಾದೆನೆಂದು ಬಿನ್ನೈಸುವ ಪ್ರತ್ಯುತ್ತರ:

ಅಯ್ಯ, ಎನ್ನ ಕಾಯದಲ್ಲಿ ಮಡಿವಾಳನ ತೋಱಿದ. ಎನ್ನ ಮನದಲ್ಲಿ ತನ್ನ ನಿಲವ ತೋಱಿದ. ಎನ್ನ ಅಱಿವಿನಲ್ಲಿ ನಿಮ್ಮ ತೋಱಿದ. ಇಂತೀ ತ್ರಿವಿಧಸ್ವಾಯತವನು ಎನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ ತೋಱಿದ. ಕೂಡಲಸಂಗಮದೇವಯ್ಯ, ಚೆನ್ನಬಸವಣ್ಣನ ಕರುಣದಿಂದ ಮಡಿವಾಳನೆಂಬ ಪರುಷ ಸಾಧ್ಯವಾಯಿತ್ತೆನಗೆ. ೫೮೩-೭೪-9-47.

ಹೀಂಗೆಂದು ಬಸವರಾಜದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಆ ಬಸವರಾಜ ದೇವರಿಗೆ ಪ್ರತ್ಯುತ್ತರವ ಕೊಡುವ ಪ್ರಸ್ತಾವದ ವಚನ:

ನಾನೊಂದ ತೋಱಲಱಿಯೆನು, ನಾನೊಂದ ಹೇಳಲಱಿಯೆನು, ನಾನೊಂದ ಸ್ಥಲ ವಿಡಲಱಿಯೆನು. ನಾನೊಂದ ಕುಳವಿಡಲಱಿಯೆನು. ಕೂಡಲ ಚೆನ್ನಸಂಗಮದೇವರಲ್ಲಿ ಮಡಿವಾಳನ ನಿಲವ ನಾನೆತ್ತ ಬಲ್ಲೆನು ಹೇಳಾ ಸಂಗನ ಬಸವಣ್ಣ. ೫೮೪-೭೫-9-48.

ಹೀಂಗೆಂದು ಚಿಕ್ಕ ದಣ್ಣಾಯಕರು ಮಡಿವಾಳ ತಂದೆಗಳ ಮಹಾತ್ಮೆಯಂ ಕೊಂಡಾಡುತ್ತಿರಲು, ಇದಕ್ಕೆ ಮಡಿವಾಳ ತಂದೆಗಳು ಆ ಚೆನ್ನಬಸವರಾಜದೇವರ ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ:

ಅಹುದಹುದು ಇಂತಿರಬೇಡಾ ನಿರಹಂಕಾರ? ಮಹಾಜ್ಞಾನಕ್ಕೆ ನಿರಹಂಕಾರವೇ ಶೃಂಗಾರ. ನಿರಹಂಕಾರಕ್ಕೆ ಭಕ್ತಿಯೇ ಶೃಂಗಾರ. ಭಕ್ತಿಗೆ ಬಸವಣ್ಣನೆ ಶೃಂಗಾರ. ಬಸವಣ್ಣಂಗೆ ಚೆನ್ನಬಸವಣ್ಣನೆ ಶೃಂಗಾರ. ಕಲಿದೇವರ ದೇವ, ಎನಗೂ ನಿನಗೂ ಚೆನ್ನ ಬಸವಣ್ಣನೆ ಶೃಂಗಾರ. ೫೮೫-೭೬-9-49.

ಹೀಂಗೆಂದು ಮಡಿವಾಳ ತಂದೆಗಳು ಚಿಕ್ಕ ದಣ್ಣಾಯಕರ ಮಹಾತ್ಮೆಯ ಪೊಗಳಲು, ಆ ಚಿಕ್ಕದಣ್ಣಾಯಕರು ಆ ಮಡಿವಾಳ ತಂದೆಗಳ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ:

ಅಘಟಿತಘಟಿತನೆಂಬ ಮಹಾಘನವ ಸಾಧಿಸುವರೆ, ಮಡಿವಾಳನ ಕೃಪೆಯಿಲ್ಲದನ್ನಕ್ಕರ ಎಂತಱಿಯ ಬಪ್ಪುದು ನಿಜಲಿಂಗೈಕ್ಯವನು? ಎನ್ನ ಆರೂಢಿಯ ಅಱಿವಿಂಗೆ ನೀನೆ

ಶೃಂಗಾರ. ಕೂಡಲ ಚೆನ್ನಸಂಗಮದೇವರಲ್ಲಿ ಮಡಿವಾಳನ [1]ಕೈಯಲಿ[1] ಸ್ವಾಯತವಾದೆನು ಕಾಣಾ ಪ್ರಭುವೆ. ೫೮೬-೭೨೭-9-50.

ಹೀಂಗೆಂದು ಚಿಕ್ಕದಣ್ಣಾಯಕರು ನಿರೂಪಿಸಲು, ಇದಕ್ಕೆ ಮಡಿವಾಳ ತಂದೆಗಳು ಚಿಕ್ಕದಣ್ಣಾಯಕರ ಕೃಪೆಯನೆನಗೆ ಸಾಧ್ಯವ ಮಾಡಿಕೊಡಿ ಎಂದು ಪ್ರಭುದೇವರನುಪಾಸ್ತಿಯ ಮಾಡುವ ವಚನ :

ಒಂದು ಕೈಯ ಬಯಲನೆನಗೆ ಕೊಟ್ಟನು. ಒಂದು ಕೈಯ ಬಯಲ ಚೆನ್ನಬಸವಣ್ಣಂಗೆ ಕೊಟ್ಟನು. ನೀವು [2][ಬಂದಹಿರೆಂದು][2] ಎಂಟು ಸಾವಿರ ವರುಷ ಒಗೆದೊಗೆದು ಬಿಳಿದು ಮಾಡುತ್ತಿದ್ದೆನು. ಒಂದು ಬಿಳಿದ 'ಬಸವಣ್ಣ, ನಿನ್ನ ಲಿಂಗಕ್ಕೆ ಕೊಡು' ಎಂದು ಕೊಟ್ಟರೆ, ಲಿಂಗಕ್ಕೆ ಕೊಡಲೊಲ್ಲದೆ ತಲೆಯಲ್ಲಿ ಸುತ್ತಿಕೊಂಡನು. ಮಡಿಯ ಕೂಲಿಯ ಬೇಡ ಹೋದರೆ ಬಿಳಿದ ಹಱಿದು ಎನ್ನ ಮೇಲೆ ಬಿಸುಟನು. ನೀನುಟ್ಟ [3]ಬೀಳಿದಿಗೆ[3] ಆ ಚೆನ್ನಬಸವಣ್ಣನ ಕೈಯಲ್ಲಿ ನಿರಾಳವನೆನಗೆ ಕೊಡಿಸಾ-ಪ್ರಭುವೆ ಕಲಿದೇವರ ದೇವ. ೫೮೭-೭೨೮-9-51.

ಹೀಂಗೆಂದು ಮಡಿವಾಳ ತಂದೆಗಳು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಆ ಮಡಿವಾಳ ತಂದೆಗಳೊಡನೆ ನುಡಿವ ಪ್ರತ್ಯುತ್ತರ :

ನರಸುರಾದಿಗಳೆಲ್ಲರೂ ನಿಮ್ಮ ಹೊಳೆಯಲ್ಲಿದ್ದರು. ಮನುಮುನಿ ಯತಿವ್ರತಿಗಳೆಲ್ಲರೂ ನಿಮ್ಮ ತೋಹಿನೊಳಗಿದ್ದರು. ಗಂಗೆವಾಳುಕರೆಲ್ಲರೂ ನಿಮ್ಮ ಮಡಿಯೊಳಡಗಿದರು. ಗಂಗೆಯ ಗೌರಿಯ ವಲ್ಲಭರೆಲ್ಲರೂ, ಚತುರ್ಮುಖ-ಪಂಚಮುಖ-ಷಣ್ಮುಖ-ದಶಮುಖರೆಲ್ಲರೂ ನಿಮ್ಮ ಮಡಿಯ ಗಳಿಗೆಯೊಳಗಡಗಿದರು. ಲೋಕಾದಿಲೋಕವೆಲ್ಲವೂ ನಿಮ್ಮ ಕುಕ್ಷಿಯೊಳಗು. ಕೂಡಲಚೆನ್ನಸಂಗಮದೇವರು ಸಾಕ್ಷಿಯಾಗಿ, ನಿಮ್ಮ ನಿರಾಳದ ಪ್ರಸಾದದಿಂದ ನಿರವಯದ ಹಾದಿಯ ಕಂಡೆನಲ್ಲದೆ, ನಿಮ್ಮಿಂದಲಾನು ಘನವೆ ಮಡಿವಾಳ ಮಾಚಯ್ಯ ? ೫೮೮-೭೨೯-9-52.

---

[1] (ಶ) ಕೈಯ (ಗೂ). [2] ಬಂದಹರೆಂದು (ಸರ್ವತ್ರ). [3] (ಶಿ) ಬೀಳುಡಿಗೆಯ (ಗೂ) ಬಿಳುಡಿಗೆ (ಹ).

ಇಂತು ಮಡಿವಾಳ ತಂದೆಗಳೂ ಚಿಕ್ಕದಣ್ಣಾಯಕರೂ ಮಹಾನುಭಾವಗೋಷ್ಠಿಯ ಮಾಡುತ್ತಿರಲು, ಆ ಪ್ರಸ್ತಾವದೊಳು ಸಿದ್ಧರಾಮ ತಂದೆಗಳು—ಪರಮಹರುಷಿತರಾಗಿ ನಿರೂಪಿಸಿದ ಪ್ರತ್ಯುತ್ತರ:

ಬೆಳಗು ಬೆಳಗು ಹಳಚುವಲ್ಲಿ ಕತ್ತಲೆ ಅಳಿವುದಯ್ಯ! ಶರಣರು ಶರಣರು ಮಹಾನುಭಾವಗೋಷ್ಠಿಯ ಮಾಡುವಲ್ಲಿ ಸಂಗದೊಳಗಿದ್ದವರ ಅಜ್ಞಾನವಳಿದು ನಿಜವನೆಯ್ದುವರಯ್ಯ. ನಿಮ್ಮ ಮಹಾನುಭಾವದ ಸೋಂಕಿನ ಸೆಱಗಿನೊಳಗಿದ್ದು ನಾನು ಪರಮಸುಖಿಯಾಗಿ, ಮಡಿವಾಳನ ಪಾದದಲ್ಲಿದ್ದು ಮನಮಗ್ನನಾದೆನು, ಕಾಣಾ ಪ್ರಭುವೆ ಕಪಿಲಸಿದ್ಧಮಲ್ಲಿಕಾರ್ಜುನ. ೫೮೯–೭೩೦–10–5

ಹೀಂಗೆಂದು ಸಿದ್ಧರಾಮಯ್ಯದೇವರು ನಿರೂಪಿಸಲು, ಆ ಪ್ರಸ್ತಾವದೊಳು ಚಿಕ್ಕದಣ್ಣಾಯಕರು ಆ ಸಿದ್ಧರಾಮಯ್ಯದೇವರ ಅಂತಸ್ಥಿತಿಯನೊರೆದು ನೋಡಲೆಂದು ನಿರೂಪಿಸಿದ ಪ್ರಸ್ತಾವದ ವಚನ:

ಅಂಗದಲ್ಲಿ ಲಿಂಗವಿಲ್ಲದನ್ನಕ್ಕರ, ಪ್ರಾಣದಲ್ಲಿ ಲಿಂಗಪರಿಣಾಮವೆಂತಪ್ಪುದಯ್ಯ? ಅಂಗತ್ರಯ ಉಳ್ಳವರು ಲಿಂಗತ್ರಯ ಸಂಪನ್ನರಾಗಬೇಕು. [1]ಒಂದೊಂದಂಗ[1] ವಿರಹಿತರಾಗಿಪ್ಪರುಂಟೆ? ಕಂಗಳ ನೋಟಕಿಂಬಾವುದು ಹೇಳಾ? [2]ಒಂದ ಬಿಟ್ಟು ಒಂದ[2] ತೋಱದಾಗಿ, ಸಂದು-ಭೇದವಿಲ್ಲದಿಪ್ಪ ಮಡಿವಾಳನ ನಿಲವು ಕೂಡಲಚೆನ್ನಸಂಗನಲ್ಲಿ ನಿನಗೆಂತು ಸಾಧ್ಯವಾಯಿತ್ತು ಹೇಳಾ ಸಿದ್ಧರಾಮಯ್ಯ? ೫೯೦–೭೩೧–10–6.

ಹೀಂಗೆಂದು ಚಿಕ್ಕದಣ್ಣಾಯಕರು ನಿರೂಪಿಸಲು ಇದಕ್ಕೆ ಸಿದ್ಧರಾಮಯ್ಯದೇವರು ಕೊಟ್ಟ ಪ್ರತ್ಯುತ್ತರ:

ತನು ಉಂಟೆಂಬ ಭಾವ ಮನದಲ್ಲಿಲ್ಲವಯ್ಯ. ಮನ ಉಂಟೆಂಬ ಭಾವ ಅಱಿವಿನಲ್ಲಿಲ್ಲವಯ್ಯ. ಅಱಿವು ಉಂಟೆಂಬ ಭಾವ ನುಡಿಯೊಳಗಿಲ್ಲವಯ್ಯ. ಇಂತು ತನು-ಮನ-[3]ಜ್ಞಾನವೆಂಬ[3] ತ್ರಿವಿಧವು ಏಕಾರ್ಥವಾದ ಬಳಿಕ, ಆವ ತನುವಿನ ಮೇಲೆ ಸ್ವಾಯತವ ಮಾಡುವೆನು? ಎನ್ನ ಕಾಯವೆ ಬಸವಣ್ಣನು, ಎನ್ನ ಪ್ರಾಣ[4]ಲಿಂಗ[4]ವೆ ಪ್ರಭುದೇವರು. ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಒಳ-ಹೊಱಗೆಂಬುದಿಲ್ಲ ಕಾಣಾ ಚೆನ್ನಬಸವಣ್ಣ! ೫೯೧–೭೩೨–10–7.

ಹೀಂಗೆಂದು ಸಿದ್ಧರಾಮಯ್ಯದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಕೊಟ್ಟ ಪ್ರತ್ಯುತ್ತರ:

---

[1] (ಶಿಹ) ಒಂದಂಗ (ಗೂ). [2] (ಶಿಹ) ಒಂದಂಗವ ಬಿಟ್ಟು ಒಂದಂಗ (ಗೂ).
[3] (ಹಗೂ) ಜ್ಞಾನ ಉಂಟೆಂಬ (ಶಿ). [4] (ಗೂ R. ಅ) (ಹ) (ಶಿ) × (ಗೂ).

ಅಂಗವಿಲ್ಲೆಂಬಲ್ಲಿಯೇ ಅಂಗಶಂಕೆ ಬಿಡದು. ಲಿಂಗ ಉಂಟೆಂಬಲ್ಲಿಯೇ ಲಿಂಗಶಂಕೆ ಬಿಡದು. ಇಲ್ಲನೆಂಬುದಕ್ಕೆ ಉಂಟೆಂಬುದೇ ಮಱಹು. ಉಂಟೆಂಬುದಕ್ಕೆ ಇಲ್ಲವೆಂಬುದೆ ಮಱಹು. ಉಂಟು-ಇಲ್ಲ ಎಂಬುದು ಅಳಿದುಳಿದಲ್ಲದೆ, ಪ್ರಾಣಲಿಂಗಸಂಬಂಧ ಸಯವಾಗದು. ಕೂಡಲಚೆನ್ನಸಂಗನಲ್ಲಿ ಪ್ರಾಣಲಿಂಗಸಂಬಂಧ ನಿನಗೆಲ್ಲಿ ಸಾಧ್ಯವಾಯಿತ್ತು ಹೇಳಾ ಸಿದ್ಧರಾಮಯ್ಯ. ೫೯೨-೭೩೩-10-8.

ಹೀಂಗೆಂದು ಚಿಕ್ಕದಣ್ಣಾಯಕರು ನಿರೂಪಿಸಲು, ಇದಕ್ಕೆ ಸಿದ್ಧರಾಮತಂದೆಗಳು ಕೊಟ್ಟ ಪ್ರತ್ಯುತ್ತರ:

ತನುವಿದ್ದೂ ತನುವಿಲ್ಲ. ಮನವಿದ್ದೂ ಮನವಿಲ್ಲ. ಭಾವವಿದ್ದೂ ಭಾವವಿಲ್ಲ. ನೀನೆಂಬುದುಂಟಾಗಿ ಭೃತ್ಯಾಚಾರವಿಲ್ಲ. ನಾನೆಂಬುದುಂಟಾಗಿ ಅಹಂಕಾರವಿಲ್ಲ. ಕಪಿಲಸಿದ್ಧ ಮಲ್ಲಿನಾಥಯ್ಯನಲ್ಲಿ ಲಿಂಗಸಂಗ ನಿರ್ಲೇಪವಾದುದನಿದಿರಿಂಗೆ ನುಡಿದು ಹೇಳಬಾರದು ಕಾಣಾ ಚೆನ್ನಬಸವಣ್ಣ. ೫೯೩-೭೩೪-10-9.

ಹೀಂಗೆಂದು ಚೆನ್ನಬಸವರಾಜದೇವರು ಸಿದ್ಧರಾಮಯ್ಯದೇವರ[ಂ] ಮಹಾನುಭಾವಗೋಷ್ಠಿಯೊಳು ಒರೆದೊರೆದು ನೋಡುವ ಪ್ರಸ್ತಾವದೊಳು ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಆಕಾಶವನಡರುವಂಗೆ [1]ಅಟ್ಟಗೋಲ[1] ಹಂಗೇಕೆ? ಸಮುದ್ರವ ದಾಂಟುವಂಗೆ ಹಱುಗೋಲ ಹಂಗೇಕೆ? ಸೀಮೆಯ ಮೀಱಿದ ನಿಸ್ಸೀಮಂಗೆ ಸೀಮೆಯ ಹಂಗೇಕೆ? ಗೊಗ್ಗೇಶ್ವರಲಿಂಗದಲ್ಲಿ ನಿಸ್ಸೀಮ ಸಿದ್ಧರಾಮಯ್ಯ ದೇವರಿಗೆ ಲಿಂಗವೆಂದೇನು ಹೇಳಾ ಚೆನ್ನಬಸವಣ್ಣ?!* ೫೯೪-೭೩೬-10-11.

[2]ಹೀಂಗೆಂದು ಪ್ರಭುದೇವರು ಸಿದ್ಧರಾಮಯ್ಯದೇವರ ಮಹಾತ್ಮೆಯಂ ಕೊಂಡಾಡಿ ಚೆನ್ನಬಸವಣ್ಣಂಗೆ ನಿರೂಪಿಸಲು, ಆ[2] ಚೆನ್ನಬಸವರಾಜದೇವರು ಪರಿಣಾಮಿಸಿ, ತಾವು ಮತ್ತೆ ಸಿದ್ಧರಾಮಯ್ಯ ದೇವರ ನಿಜಲಿಂಗೈಕ್ಯದ ಭೇದವಂ ಕೊಂಡಾಡಿ ನಿರೂಪಿಸಿದ ಪ್ರಸ್ತಾವದ ವಚನ:

ಅಹುದುಹುದು: ಅಂಗಕ್ಕೆ ಲಿಂಗವನಱಸಬೇಕಲ್ಲದೆ, ಲಿಂಗಕ್ಕೆ ಲಿಂಗವನಱಸಲುಂಟೆ? ಪ್ರಾಣಕ್ಕೆ ಜ್ಞಾನವನಱಸಬೇಕಲ್ಲದೆ, ಜ್ಞಾನಕ್ಕೆ ಜ್ಞಾನವನಱಸಲುಂಟೆ? ಎರಡಾದುದನೊಂದು ಮಾಡಿಹೆನೆನ್ನಬೇಕಲ್ಲದೆ, ಒಂದಾಗಿದ್ದುದ[3]ನೇನನೂ[3] ಮಾಡಲಿಲ್ಲ. ಕೂಡಲಚೆನ್ನಸಂಗಮದೇವರಲ್ಲಿ ನಿಸ್ಸೀಮ ಸಿದ್ಧರಾಮಯ್ಯದೇವರ ಶ್ರೀಪಾದಕ್ಕೆ ಶರಣೆಂದು ಶುದ್ಧನಾದೆ ಕಾಣಾ ಪ್ರಭುವೆ. ೫೯೫-೮೭೩-10-58.

ಹೀಗೆಂದು ಚಿಕ್ಕದಣ್ಣಾಯಕರು ಸಿದ್ಧರಾಮಯ್ಯದೇವರ ಪ್ರಾಣಲಿಂಗೈಕ್ಯದ ಭೇದವಂ

---

[1] (ಗೂ) ಅಟ್ಟೆಗೋಲ (ಗೂ R. ಅಆ) (ಶಿ) ನಿಚ್ಚಣಿಗೆಯ (ಹ). * Note: ಇಲ್ಲಿಂದ ಮುಂದಿನ ಭಾಗವನ್ನು ಹಲಗೆದೇವ ಮತ್ತು ಸಿದ್ಧವೀರಣ್ಣರಿಬ್ಬರೂ ಬಹುಮಟ್ಟಿಗೆ ಬಿಟ್ಟು ಯಥೇಚ್ಛವಾಗಿ ವಚನಗಳನ್ನು ಹೊಸದಾಗಿ ಸೇರಿಸಿರುವರು, ಸಿದ್ಧರಾಮನ ದೀಕ್ಷೆಯನ್ನು ಸಮರ್ಥಿಸುವುದಕ್ಕಾಗಿ. [2] (ಶಿ) ಇದಕ್ಕೆ (ಗೂ). [3] (ಶಿ) ನೆರಡ (ಗೂ).

ನಿರೂಪಿಸಲು, ಆ ಪ್ರಸ್ತಾವದೊಳು ಸಿದ್ಧರಾಮಯ್ಯದೇವರು ಪ್ರಭುದೇವ[1][ರ][1] ಪ್ರಾಣ-ಲಿಂಗದ ಸ್ಥಿತಿಗತಿಯು ಒರೆದು ನೋಡುವ ಪ್ರಸ್ತಾವದ ವಚನ:

ಕಾಯ ಲಿಂಗವೋ ? ಕಾಯದಲ್ಲಿ ಸಾರಿಪ್ಪ ಲಿಂಗ ಲಿಂಗವೋ ? ಪ್ರಾಣ ಲಿಂಗವೋ? ಪ್ರಾಣದಲ್ಲಿ ಸಾರಿಪ್ಪ ಲಿಂಗ ಲಿಂಗವೋ ? ಜ್ಞಾನ ಲಿಂಗವೋ ? ಜ್ಞಾನದ ಮೊನೆಯ ಮೇಲೆ ತೋಱುವ ಬೆಳಗು ಲಿಂಗವೋ ? ಲಿಂಗ ಪ್ರಾಣ, ಪ್ರಾಣ ಲಿಂಗವೆಂಬುದೆಂತೆಱಿಯೆನು. ನಿಮ್ಮ ಕಾಯದ ಕರಸ್ಥಳದ ಸಾರಿರ್ದ ಲಿಂಗ ಪ್ರಾಣದೊಳು ವೇದ್ಯವಾದ ಪರಿಯ ಹೇಳಾ, ಪ್ರಭುವೇ, ಕಪಿಲಸಿದ್ಧ ಮಲ್ಲಿಕಾರ್ಜುನ ? ೫೬-೮೧೧-×.

ಹೀಂಗೆಂದು ಸಿದ್ಧರಾಮತಂದೆಗಳು ಪ್ರಭುದೇವರ ಲಿಂಗ-ಪ್ರಾಣದ ಸಮರಸಭಾವಮಂ ವಿಚಾರಿಸಿ ಬೆಸಗೊಳಲು, ಆ ಪ್ರಸ್ತಾವದೊಳು ಆ ಪ್ರಭುದೇವರು ತಮ್ಮ ಪ್ರಾಣಲಿಂಗದ ಸಂಬಂಧಮಂ ನಿರೂಪಿಸಿದ ವಚನ:

ಅಂಗ ಲಿಂಗ, ಪ್ರಾಣ ಲಿಂಗ, ಮನ ಲಿಂಗವಾಯಿತ್ತು—ನೋಡ! ಅಂಗ ಲಿಂಗವಾಗಿ ನಡೆ-ನುಡಿ-ಗತಿಯನಱಿಯದು. ಪ್ರಾಣ ಲಿಂಗವಾಗಿ ನವನಾಳದ ಸುಳುಹನಱಿಯದು. ಮನ ಲಿಂಗವಾಗಿ ನೆನಹುಗೆಟ್ಟಿತ್ತು. ಅನುಭಾವ ಲಿಂಗವಾಗಿ ವಿಚಾರವಱಿತಿತ್ತು. ಭಾವ ಲಿಂಗವಾಗಿ ಭಾವನೆಯುಳಿಯಿತ್ತು. ಸರ್ವಕ್ರೀಗಳೆಲ್ಲವೂ ಲಿಂಗವಾಗಿ ಮಾರ್ಗ-ಕ್ರೀಯ ಹೊಲಬನಱಿಯದು. ಅಱಿವು ಲಿಂಗವಾಗಿ ಮಱಹುಗೆಟ್ಟಿತ್ತು. ಅಂತರಂಗ ಲಿಂಗವಾಗಿ ಬಹಿರಂಗವೆಂತೆಂದಱಿಯದು. ಬಹಿರಂಗ ಲಿಂಗವಾಗಿ ಅಂತರಂಗದ ಸುದ್ದಿಯ ನಱಿಯದು. ಸರ್ವಾಂಗ ಲಿಂಗವಾಗಿ ಸರ್ವೇಂದ್ರಿಯ ಗಮನಗೆಟ್ಟಿತ್ತು. ಮಹಾಘನ ವಿಂಬುಗೊಂಡಿತ್ತಾಗಿ ನಿಷ್ಪತ್ತಿ ಕಱಿಗೊಂಡಿತ್ತು. ಗೊಗೇಶ್ವರಲಿಂಗದಲ್ಲಿ ಪ್ರಾಣಲಿಂಗ ಸಯವಾಯಿತ್ತು—ನೋಡಾ ಸಿದ್ಧರಾಮಯ್ಯ ! ೫೭-೮೧೨-10-44.

ಇಂತು ಪ್ರಾಣಲಿಂಗ ಸಂಬಂಧಮಂ ಪ್ರಭುದೇವರು ನಿರೂಪಿಸಲು, ಇದಕ್ಕೆ ಸಿದ್ಧ ರಾಮಯ್ಯದೇವರು ಹರ್ಷಿತರಾಗಿ ಆ ಪ್ರಭುದೇವರಂ ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ:

ಅಂಗಯ್ಯ ನೋಟದೊಳು ಕಂಗಳು ನಟ್ಟು, ಕಂಗಳ ತೇಜ ಹಿಂಗದು. ಲಿಂಗಪ್ರಭೆಯೊಳಗೆ ಅಂಗವೆಲ್ಲಾ ಲೀಯವಾಗಿ, ಸಂಗ-ನಿಸ್ಸಂಗವೆಂಬ ದಂದುಗವ ಹಱಿದು, ಹಿಂದು-ಮುಂದೆಂಬ ಭಾವವಳಿದು, ನಿಂದ ನಿಜದ ನಿರಾಳದಲ್ಲಿ ಪ್ರಾಣ ಸಮರತಿಯಾಗಿ ಕಪಿಲಸಿದ್ಧ ಮಲ್ಲಿನಾಥನಲ್ಲಿ ಪ್ರಭುದೇವರ ಪಾದಕ್ಕೆ ನಮೋ ನಮೋ ಎಂದು ಬದುಕಿದೆನು ಕಾಣಾ ಚೆನ್ನಬಸವಣ್ಣ. ೫೮-೮೭೪-10-102.

ಹೀಗೆಂದು ಸಿದ್ಧರಾಮಯ್ಯ ದೇವರು ಚಿಕ್ಕದಣ್ಣಾಯಕರೊಡನೆ ಪ್ರಭುದೇವರ ಮಹಾತ್ಮೆಯಂ ಕೊಂಡಾಡಿ ಹೇಳುತ್ತಿರಲು, ಆ ಚಿಕ್ಕದಣ್ಣಾಯಕರು ಪ್ರಭುದೇವರ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ:

ಕಾಯವೆಂಬ ಕಣ್ಣಡವಿಲ್ಲ—ಪ್ರಾಣವಿಲ್ಲಾಗಿ. ಮನವೆಂಬ ನೆನಹಿಲ್ಲ—ಅನುಭಾವ

[1] ರು (ಶಿ).

ವಿಲ್ಲಾಗಿ. ಅಱಿವೆಂಬ ಕುಱುಹಿಲ್ಲ—ಪ್ರತಿಯಿಲ್ಲಾಗಿ. ಕೂಡಲಚೆನ್ನಸಂಗಮ ದೇವರಲ್ಲಿ ಪ್ರಭುದೇವರ ಪಾದಕ್ಕೆ ನಮೋ ನಮೋ ಎಂದು ಬದುಕಿದೆನು ಕಾಣಾ ಸಿದ್ಧರಾಮಯ್ಯ. ೫೯೯-೮೭೫-10-103.

ಹೀಗೆಂದು ಚಿಕ್ಕದಣ್ಣಾಯಕರು ಪ್ರಭುದೇವರ ಸ್ತೋತ್ರಮಂ ಮಾಡಲು, ಆ ಪ್ರಭುದೇವರು ತಾವು ಚಿಕ್ಕದಣ್ಣಾಕರ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ:

ಗಗನ [1]ಪವನದ[1] ಮೇಲೆ ಉದಯ ಮುಖದನುಭಾವ-ಸದಮದ ಗಜವ ನಿಲಿಸುವ ಮಾವತಿಗ ಬಂದ, ಅಷ್ಟದಳಕಮಳದೊಳು ಸೃಷ್ಟಿ[2]ಯಂಕುಶ[2] ಭಜನೆ, ಮೆಟ್ಟ ಸಿಂದಾತ ಪರಮಯೋಗಿಯಾಗದೆ ಮಾಣ. ಬಯಲ ಬಣ್ಣಕ್ಕೆ ತಂದು, ನೆಳಲ ಶೃಂಗಾರವ ಮಾಡಿದ ಗೊಗೇಶ್ವರನ ಶರಣ ಚೆನ್ನಬಸವಣ್ಣಂಗೆ ಶರಣೆನುತಿದ್ದೆನು. ೬೦೦-೮೭೬-10-104.

ಚೌದಂತ ಮದಕರಿಯೊಳಗಡಗಿತ್ತು. ಬೆಳಗಿನ ಬಳಗದ ನವ[3] ಪಂಕಜದೊಳಗಳ ಮರಿಮಳ ಭಾವಂ ಭೇದಿಸಬಾರದು—Aಮದಾಳಿಯ[3]A ಸುಳುಹಿನ ಸೂಕ್ಷ್ಮಂಗಲ್ಲದೆ. ಅಳಿ ರತುನವ ನುಂಗಿದ ಪರಿ [4]ಎಂತೊ ?[4] ಸಾಧ್ಯ[5]ವಾಯ್ತು[5] ಸುಖಸಂಭಾಷಣೆ ಗೊಗೇಶ್ವರನ ಶರಣ ಚೆನ್ನ ಬಸವಣ್ಣಂಗೆ. ೬೦೧-೮೭೭-11-36.*

ಹೀಂಗೆಂದು ಪ್ರಭುದೇವರು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡುತ್ತಿರಲು, ಆ ಪ್ರಸ್ತಾವದೊಳು ಬಸವರಾಜದೇವರು ಚಿಕ್ಕದಣ್ಣಾಯಕರ ಸ್ತೋತ್ರವ ಮಾಡಿದ ಪ್ರಸ್ತಾವದ ವಚನ:

ಇಂದ್ರ-ವ್ಯಾಸ-ಉಪೇಂದ್ರನ ಓಲಗ ಚಂದ್ರಮೌಳಿಯನಱಿಯದೆ ಹೋಯ್ತು. ಬಂಧನ ಮೋಕ್ಷವಾಗಿ ಭವಬಂಧನ ಬಿಡದನ್ನಕ್ಕರ, ಮತ್ತೊಂದಱ ಮುಖ ಜನಿಸಿತ್ತಲ್ಲಾ! ಕೂಡಲಸಂಗಮದೇವ, ಚೆನ್ನ ಬಸವಣ್ಣನ ಸನ್ನಿಧಿಯಿಂದಲಾನು ಬದುಕಿದೆನು. ೬೦೨-೮೭೮-11-37. ಮತ್ತಂ:

ಪ್ರಸಾದಿಯ ಪ್ರಸಾದದಲೊದಗಿದ ಪ್ರಸಾದಿಯನೇನೆಂದುಪಮಿಸುವೆನು! ಏನೆಂದು ಸ್ತುತಿಸುವೆನಯ್ಯ, ಪ್ರಸಾದಕ್ಕೆ ಮಹಾಪ್ರಸಾದಿಯಾದ ಪ್ರಸಾದಿಯನು? ಅಗಮ್ಯ ಪ್ರಸಾದದಲ್ಲಿ ಸ್ವಾಯತವಾದ ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣಂಗೆ ನಮೋ ನಮೋ ಎನುತ್ತಿದ್ದೆನು. ೬೦೩-೮೭೯-11-38.

ಹೀಂಗೆಂದು ಬಸವರಾಜದೇವರು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡಲು, ಆ

---

[1] (ಉ) (ಹ) (ಗೂ) ಗಗನದ (ಶಿ). [2] (ಶಿ) ಯಂಕುರ (ಗೂ). [3] (ಹ) ಪಂಜರವೊ! ಭಾವ ಪರಿಮಳವ ಭೇದಿಸಬಾರದು ಮಕಾದಾಳಿಯ (ಗೂ) ಪಂಕಜವೋ ಭಾವ ಪರಿಮಳ ಭೇದಿಸಬಾರದು (ಶಿ). A(ಶಿಉ). [4] (ಶಿ) ಇನ್ನೆಂತೋ (ಗೂ). [5] (ಶಿ) ವಾಯಿತ್ತು (ಗೂ). * ಈ ವಚನ ಪ್ರಾರಂಭವಾಗುವಲ್ಲಿಗೆ 'ಗೂ' ಪ್ರತಿಯಲ್ಲಿ "ಸಿದ್ಧರಾಮೇಶ್ವರನ ಗುರುಕರಣ" ವಿಭಾಗ ಮುಗಿದು, ಈ ವಚನ ಅದೇ ಪ್ರತಿಯ ಮುಂದಿನ ವಿಭಾಗವಾದ "ಪ್ರಭುದೇವರ ಪೂಜಾಸ್ತುತಿ" ಎಂಬುದರೊಳಗಾಗುವುದು.

ಚಿಕ್ಕದಣ್ಣಾಯಕರು ಬಸವರಾಜದೇವರ ಸ್ತೋತ್ರವಮಂ ಮಾಡಿದ ಪ್ರಸ್ತಾವದ ವಚನ:

ಅಯ್ಯ, ಘನಗಂಭೀರವಪ್ಪ ಸಮುದ್ರದೊಳಗೊಂದು ರತ್ನ ಹುಟ್ಟಿದರೆ, ಆ ಸಮುದ್ರದೊಳಗೇ ಅಡಗಿಪ್ಪುದಲ್ಲದೆ ಘನವಾಗಿ ತೋಱಬಲ್ಲುದೆ? ನಿಮ್ಮ ಕರುಣಕಟಾಕ್ಷದಿಂದ ಉದಯಿಸಿ, Aಅನಂತ ಲಿಂಗಪುರಾಣವೆಲ್ಲವುA ನಿಮ್ಮ ಕೃಪೆಯಿಂದ ಸಾಧ್ಯವಾಯಿತ್ತೆನಗೆ. ಆದಿ-ಅನಾದಿ ಇಲ್ಲದಂದು ನೀನೊಬ್ಬನೇ ಪ್ರಸಾದಿ, ಉಮೆಯ ಕಲ್ಯಾಣವಿಲ್ಲದಂದು ನೀನೊಬ್ಬನೇ ಪ್ರಸಾದಿ, ಕೂಡಲಚೆನ್ನಸಂಗಮದೇವರು ಸಾಕ್ಷಿಯಾಗಿ, ಬಸವಣ್ಣ, ನಿಮ್ಮ ತೊತ್ತಿನ ತೊತ್ತಿನ ಮಱದೊತ್ತಿನ ಮಗನು ನಾನಯ್ಯ. ೬೦೪-೯೬೭ ಮತ್ತು ೮೪೦-11-39. ಮತ್ತಂ:

ತನುವ ಗುರುವಿನಲ್ಲಿ ಸವೆಸಿ, ಮನವ ಲಿಂಗದಲ್ಲಿ ಸವೆಸಿ, ಧನವ ಜಂಗಮದಲ್ಲಿ ಸವೆಸಿ; ತನುವೆ ಗುರುವಾಗಿ, ಮನವೆ ಲಿಂಗವಾಗಿ, ಧನವೆ ಜಂಗಮವಾಗಿ—ಇಂತೀ ತ್ರಿವಿಧವು ನಿಮ್ಮಲ್ಲಿ ನಿಜಭರಿತನಾದ, ಕಾಯಕವಿಡಿದು ಕರ್ಮವಿರಹಿತನಾದ; ಕೂಡಲಚೆನ್ನಸಂಗಮದೇವರಲ್ಲಿ, ಸಂಗನ ಬಸವಣ್ಣಂಗೆ ನಮೋ ನಮೋ ಎನುತಿದ್ದೆನು. ೬೦೫-೮೪೧-11-40.

ಇಂತು ಚಿಕ್ಕಣ್ಣಾಯಕರು ಬಸವರಾಜದೇವರ ಸ್ತೋತ್ರವಮಂ ಮಾಡುವ ಪ್ರಸ್ತಾವದೊಳು ಮಡಿವಾಳ ತಂದೆಗಳು ಬಸವರಾಜದೇವರ ಹೊಗಳಿದ ಪ್ರಸ್ತಾವದ ವಚನ:

ಅಂಗಾಲ ಕಣ್ಣವರಾಗಬಹುದಲ್ಲದೆ—ಮೈಯೆಲ್ಲಾ ಕಣ್ಣವರಾಗ ಬಾರದು, ಮೈಯೆಲ್ಲಾ ಕಣ್ಣವರಾಗ ಬಹುದಲ್ಲದೆ—ನೊಸಲ ಕಣ್ಣು ಚತುರ್ಭುಜದವರಾಗ ಬಾರದು. ನೊಸಲ ಕಣ್ಣು ಚತುರ್ಭುಜದವರಾಗ ಬಹುದಲ್ಲದೆ—ಪಂಚವಕ್ತ್ರ ದಶಭುಜದವರಾಗ ಬಾರದು. ಪಂಚವಕ್ತ್ರ ದಶಭುಜದವರಾಗ ಬಹುದಲ್ಲದೆ—ಸರ್ವಾಂಗ ಲಿಂಗಿಗಳಾಗ ಬಾರದು. ಸರ್ವಾಂಗಲಿಂಗಿಗಳಾಗ ಬಹುದಲ್ಲದೆ, ಕಲಿದೇವಯ್ಯ, ನಿಮ್ಮ ಶರಣ ಬಸವಣ್ಣನಾಗ ಬಾರದೆಂದಱಿದು, ಆ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿದ್ದೆನು. ೬೦೬-೮೪೨-11-41.

ಹೀಂಗೆಂದು ಮಡಿವಾಳ ತಂದೆಗಳು ಬಸವರಾಜದೇವರ ಸ್ತೋತ್ರವಮಂ ಮಾಡಲು, ಆ ಬಸವರಾಜದೇವರು ಮಡಿವಾಳತಂದೆಗಳ ಸ್ತೋತ್ರವಮಂ ಮಾಡುವ ಪ್ರಸ್ತಾವದ ವಚನ:

ಭಕ್ತಿ-ಯುಕ್ತಿಯನಱಿಯೆ, ಷೋಡಶೋಪಚಾರಂಗಳನಱಿಯೆ, ಭಾವ-ನಿರ್ಭಾವವನಱಿಯೆ, ಜ್ಞಾನ-ಮಹಾಜ್ಞಾನವನಱಿಯೆ, ಕೂಡಲಸಂಗಮದೇವಯ್ಯ, ಮಡಿವಾಳ ತಂದೆಗಳ ಪಾದಕ್ಕೆ ನಮೋ ನಮೋ ಎನುತಿದ್ದೆನು. ೬೦೭-೮೪೩-11-46.

ಇಂತು ಬಸವರಾಜದೇವರು ಮಡಿವಾಳತಂದೆಗಳ ಸ್ತೋತ್ರವಮಂ ಮಾಡಲು, ಆ ಮಡಿವಾಳತಂದೆಗಳು ಆ ಬಸವರಾಜದೇವರನೂ ಚೆನ್ನಬಸವರಾಜದೇವರನೂ ಪ್ರಭುದೇವರನೂ ಕೂಡಿ ಸ್ತೋತ್ರವಮಂ ಮಾಡಿದ ಪ್ರಸ್ತಾವದ ವಚನ:

ಎನ್ನ ಮನ ಬಸವಣ್ಣನು. ಎನ್ನ ವಾಕು ಚೆನ್ನಬಸವಣ್ಣನು. ಎನ್ನ ಕಾಯವೆ ಪ್ರಭು

ದೇವರು. ಇಂತೀ ಮೂವರ ಪಾದವನು ತ್ರಿಕರಣ ಶುದ್ಧಿಯಿಂದ ನಂಬಿ-ನಮೋ ನಮೋ ಎನುತಿದ್ದೆನು ಕಾಣಾ ಕಲಿದೇವರ ದೇವ. ೬೦೮-೮೮೪-11-47.

ಹೀಂಗೆಂದು ಮಡಿವಾಳತಂದೆಗಳು ಬಸವಣ್ಣ-ಚೆನ್ನಬಸವಣ್ಣ-ಪ್ರಭುದೇವರನೂ ಒಂದೇ ವಚನದಲ್ಲಿ ಸ್ತೋತ್ರಮಂ ಮಾಡಲು, ಆ ಪ್ರಸ್ತಾವದೊಳು ಚಿಕ್ಕದಣ್ಣಾಯಕರು ಬಸವರಾಜದೇವರನು ಪ್ರಭುದೇವರನು [1]ಮಡಿವಾಳತಂದೆಗಳನು[1] ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ:

ಎನ್ನ ಅಂತರಂಗ ಬಸವಣ್ಣನು, ಬಹಿರಂಗ ಮಡಿವಾಳನು. ಈ ಉಭಯಸಂಗವೆ ಪ್ರಭುದೇವರು. ಇಂತಿವರ ಕರುಣದ ಕಂದನಾಗಿ ನಾನು ಬದುಕಿದೆನು ಕಾಣಾ ಕೂಡಲ ಚೆನ್ನಸಂಗಮದೇವ. ೬೦೯-೮೮೫-11-48.

ಹೀಂಗೆಂದು ಚಿಕ್ಕದಣ್ಣಾಯಕರು—ಬಸವಣ್ಣ, ಮಡಿವಾಳಯ್ಯಗಳು, ಪ್ರಭುದೇವರೆಂಬ ಮೂವರನೂ ಒಂದೆ ವಚನದಲ್ಲಿ ಸ್ತೋತ್ರಮಂ ಮಾಡಲು, ಆ ಪ್ರಸ್ತಾವದೊಳು ಬಸವರಾಜದೇವರು—ಚೆನ್ನಬಸವರಾಜದೇವರು, ಪ್ರಭುದೇವರು, ಮಡಿವಾಳಯ್ಯಗಳನೂ ಕೂಡಿ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ:

ಎನ್ನ ಕಾಯದ ಕರಸ್ಥಲದಲ್ಲಿ ಅಲ್ಲಮಪ್ರಭುದೇವರ ಕಂಡೆನು. ಎನ್ನ ಮನದ ಕರಸ್ಥಲದಲ್ಲಿ ಚೆನ್ನಬಸವಣ್ಣನ ಕಂಡೆನು. ಎನ್ನ ಅಱಿವಿನ ಕರಸ್ಥಲದಲ್ಲಿ ಮಡಿವಾಳಯ್ಯಗಳ ಕಂಡೆನು. ಒಳಗು-ಹೊಱಗು, ಹೊಱಗು-ಒಳಗೆಂಬ ಭೇದವನಱಿಯದೆ ನೀನೆಂದಂತೆ ಇದ್ದೆನು. ಕೂಡಲಸಂಗಮದೇವಯ್ಯ, ನಿಮ್ಮ ಶರಣರು ಎನ್ನ ಪಾವನ ಮಾಡಿದ ಪರಿಣಾಮವನಂತಿಂತೆನಲಮ್ಮದೆ ನಮೋ ನಮೋ ಎನುತಿದ್ದೆನು. ೬೧೦-೮೮೬-10-3.

ಹೀಂಗೆಂದು ಬಸವರಾಜದೇವರು—ಚೆನ್ನಬಸವಣ್ಣ, ಪ್ರಭುದೇವರು, ಮಡಿವಾಳ ತಂದೆಗಳು ಈ ಮೂವರನೂ ಒಂದೇ ವಚನದಲ್ಲಿ ಸ್ತೋತ್ರಮಂ ಮಾಡಲು, ಆ ಪ್ರಸ್ತಾವದೊಳು, ಪ್ರಭುದೇವರು—ಬಸವಣ್ಣ, ಚೆನ್ನಬಸವಣ್ಣ, ಮಡಿವಾಳ ತಂದೆಗಳನೂ ಕೂಡಿ ಹೊಗಳಿದ ಪ್ರಸ್ತಾವದ ವಚನ:

ಎನ್ನ ಕಾಯವ ಬಸವಣ್ಣನಳವಡಿಸಿಕೊಂಡನು. ಎನ್ನ ಮನವ ಚೆನ್ನಬಸವಣ್ಣನಳವಡಿಸಿಕೊಂಡನು. ಎನ್ನ ಭಾವವ ಮಡಿವಾಳನಳವಡಿಸಿಕೊಂಡನು. ಇಂತೀ ಮೂವರೊಂದೊಂದನಳವಡಿಸಿಕೊಂಡ ಕಾರಣ, ಗೊಗೇಶ್ವರ, ನಿಮ್ಮ ಶರಣರೆಂಬ ತ್ರಿಮೂರ್ತಿಗಳಿಗೆ ನಮೋ ನಮೋ ಎನುತ್ತಿದ್ದೆನು. ೬೧೧-೮೮೭-11-49.

ಇಂತು ಪ್ರಭುದೇವರು—ಚಿಕ್ಕ ದಣ್ಣಾಯಕರು, ಹಿರಿಯ ದಣ್ಣಾಯಕರು, ಮಡಿವಾಳ ತಂದೆಗಳನೂ ಕೂಡಿ ಒಂದೆ ವಚನದೊಳು ಸ್ತೋತ್ರಮಂ ಮಾಡಲು, ಆ ಪ್ರಸ್ತಾವದೊಳು ಸಿದ್ಧರಾಮತಂದೆಗಳು ಪರಮಹರ್ಷವನೆಯ್ದಿ ಪ್ರಭುದೇವರ ಸ್ತೋತ್ರವ ಮಾಡಿದ ಪ್ರಸ್ತಾವದ ವಚನ:

ಎಲೆಯಯ್ಯ ನಿಮ್ಮ ನಚ್ಚಿನ ಮಚ್ಚಿನ ಶರಣಸಂಗದಲ್ಲಿ ಇರಿಸಿ ಎನ್ನನಾಗುಮಾಡಿ

[1] (ಶಿ) ಮಡಿವಾಳ ತಂದೆಗಳನು ಒಂದೆ ವಚನದಲ್ಲಿ (ಹ ಗೂ).

ದಿರಿ—ಹಾ, ನಿಮ್ಮ ಕರುಣವನೇನೆಂದುಪಮಿಸುವೆನು! ಎರಡು ಪುರವ [1]ಮೆಟ್ಟಿ[1] ಮೇಲುಪುರವ ನೋಡುತ್ತಿದ್ದೆನು. ಮೇಲುಪುರವ ಭೇದಿಸಲೊಡನೆ [2]ನಿನ್ನಂತಾನಾದೆನಯ್ಯ.[2] ಕಪಿಲಸಿದ್ಧ ಮಲ್ಲಿನಾಥ, ನಿಮ್ಮ ಶರಣ ಪ್ರಭುದೇವರ ಕರುಣದಿಂದಲಾನು ಬದುಕಿದೆನು. ೬೧೨-೮೮೮-11-53.

ಮತ್ತಂ ಸಿದ್ಧರಾಮತಂದೆಗಳು ಚೆನ್ನಬಸವರಾಜದೇವರ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ :

ಅಯ್ಯ, ಮೂಱು ಪುರದ ಮೇಲುಪ್ಪರಿಗೆಯ ಕೆಲಸವನೇನೆಂಬೆನಯ್ಯ! ಮುತ್ತಿನ ಕಳಸದ ಮೇಲೊಂದು ಅರಳಿದ ಪುಷ್ಪ, ಆ ಪುಷ್ಪದ [3]ಪರಿಮಳದೊಳಗೆ[3] ಅಗ್ನಿಯಂ ಕಂಡೆನಾಗಿ, ಕಪಿಲಸಿದ್ಧ ಮಲ್ಲಿನಾಥ, ನಿಮ್ಮ ಶರಣ ಚೆನ್ನಬಸವಣ್ಣ ತೋಱಿದ ಹಾದಿ ಸುಪಥವಾಯಿತ್ತಾಗಿ, ನಾನು ಚೆನ್ನಬಸವಣ್ಣಂಗೆ ನಮೋ ನಮೋ ಎನುತ್ತಿದ್ದೆನು. ೬೧೩-೮೮೯-11-54.

ಮತ್ತಂ ಸಿದ್ಧರಾಮಯ್ಯದೇವರು ಬಸವರಾಜದೇವರ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ :

ಅಯ್ಯ, ನಿಮ್ಮ ಶರಣ ಬಸವಣ್ಣನಿಂದ ಲಿಂಗವ ಕಂಡು ಒಳಗೆ ಬೈಚಿಟ್ಟುಕೊಂಡೆನಯ್ಯ. ನಿಮ್ಮ ಶರಣ ಬಸವಣ್ಣನಿಂದ ಲಿಂಗವ ಹಾಸಿ ಹೊದೆದುಕೊಂಡೆನು. ನಿಮ್ಮ ಶರಣ ಬಸವಣ್ಣನಿಂದ ನಿರವಯ[4]ವಾ[4]ದೆನು. ಎಲೆ ಕಪಿಲಸಿದ್ಧ ಮಲ್ಲಿನಾಥಯ್ಯ, ನಿಮ್ಮ ಶರಣ ಬಸವಣ್ಣಂಗೆ ನಮೋ ನಮೋ ಎನುತಿದ್ದೆನು. ೬೧೪-೮೯೦-11-52.

ಮತ್ತಂ ಸಿದ್ಧರಾಮಯ್ಯದೇವರು ಮಡಿವಾಳತಂದೆಗಳ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ:

ಎಲೆ ಅಯ್ಯ, ಗಾರುಡವ [5]ಬಲ್ಲ[5]ನಯ್ಯ, ಮತ್ತೆ ಗಾರುಡನಲ್ಲ ನೋಡಯ್ಯ! ಎನ್ನ ಮನದ ಮೇಲೆ ಇಪ್ಪ ಶಂಕೆಯೆಂಬ ವಿಷವ ಗಾರುಡಿಸಿ ಮಾಣಿಸಿ, ನಿಶ್ಶಂಕನ ಮಾಡಿದ-ಕಪಿಲಸಿದ್ಧ ಮಲ್ಲಿನಾಥನಲ್ಲಿ-ಮಡಿವಾಳಮಾಚಿ ತಂದೆಯ ಪಾದಕ್ಕೆ ನಮೋ ನಮೋ ಎಂಬೆನು. ೬೧೫-೮೯೧-11-56.

ಹೀಂಗೆಂದು ಸಿದ್ಧರಾಮಯ್ಯದೇವರು ಮಡಿವಾಳತಂದೆಗಳ ಸ್ತೋತ್ರಮಂ ಮಾಡಲು, ಆ ಮಡಿವಾಳ ಮಾಚಿದೇವನು ಆ ಸಿದ್ಧರಾಮಯ್ಯದೇವರ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ:

ಅಕ್ಕತಂಗಿಯರೈವರು ಒಬ್ಬನ ಅರಸಿಯರು. [6]ಕಿಱಿಯಾಕೆಯ[6] ಕೂಡುವರೆ ಹಿರಿಯರಸಿ ಕುಂಟಣಿ, ಹಿರಿಯರಸಿಯ ಕೂಡುವರೆ ಕಿಱಿಯರಸಿ ಕುಂಟಣಿ. ಈ ಇಬ್ಬರನೂ ಕೂಡುವರೆ, ಬೇಱುಮಾಡಿ ಬೆರಸಬಾರದೆಂದಱಿದು ಒಂದಾಗಿ ಕೂಡಲು;

---

[1] (ಹಗೂ) ಕಟ್ಟಿ (ಶಿ). [2] (ಹಶಿ) ನೀನು ನಾನಾದೆನಯ್ಯ (ಗೂ) (ಉ). [3] (ಹ) ಪರಿಯೊಳಗೆ (ಶಿಗೂ) [ಪರಿಧಿಯೊಳಗೆ?]. [4] (ಶಿ) (ಹ) (ಗೂ) ಲಾ (ಗೂ R. ಉ). [5] (ಹಗೂ) ಬಲ್ಲೆ (ಶಿ). [6] (ಶಿ) ಕಿಱಿಯಕ್ಕನ (ಗೂ) ಕಿರಿಯಾಯಕ್ಕನ (ಹ).

ಒಬ್ಬಾಕೆ ಕಣ್ಣ ಕೆಚ್ಚನೆ ಮಾಡುವಳು, ಒಬ್ಬಾಕೆ ಬುದ್ಧಿಯ ಹೇಳುವಳು, ಒಬ್ಬಾಕೆ ಹಾಸಿಕೊಡುವಳು. ಇವರಿಬ್ಬರನೂ ಅಪ್ಪಿಕೊಂಡು ಒಂದೆ ಬಾರಿ ಬೆರಸಲು, ನೀರ ನೀರ ಬೆರಸಿದಂತಾಯಿತ್ತು. ಕಲಿದೇವಯ್ಯ, ನಿಮ್ಮ ಶರಣ ಸಿದ್ಧರಾಮಯ್ಯದೇವರು ಎನಗೆ ಈ ಪಥವ ಕಲಿಸಿ ನಿಜನಿವಾಸದಲ್ಲಿ ಇರಿಸಿದ ಕಾರಣ ಆನು ನಮೋ ನಮೋ ಎನುತಿದ್ದೆನು. ೬೧೬-೮೯೨-11-57.

ಇಂತು ಪ್ರಭುದೇವರು–ಬಸವರಾಜದೇವರು–ಚಿಕ್ಕದಣ್ಣಾಯಕರು–ಮಡಿವಾಳ ಮಾಚಿತಂದೆಗಳು–ಸಿದ್ಧರಾಮಯ್ಯ ದೇವರು ಮಹಾನುಭಾವಗೋಷ್ಠಿಯಂ ಮಾಡುತ್ತಿರಲು, ಕೆಲಬಲದಲ್ಲಿ ಇದ್ದ ಸೊಡ್ಡಳ ಬಾಚರಸರು–ಹಡಪದ ಅಪ್ಪಣ್ಣಗಳು–ಪಡಿಹಾರಿ ಉತ್ತಣ್ಣ–ಅಕ್ಕನಾಗಾಯಿಗಳು–ಮೋಳಿಗೆಯ ಮಾರಯ್ಯ–ಡೋಹರ ಕಕ್ಕಯ್ಯ–ಕಿನ್ನರ ಬೊಮ್ಮಣ್ಣ–ಕನ್ನದ ಮಾರಣ್ಣ–ಮಿಂಡಮಲ್ಲಿನಾಥ–ಕೋಲಶಾಂತಯ್ಯ–ಓಲಗದ ಕೇಶಿರಾಜದೇವರು–ಖಂಡಣೆಯ ಕೇಶಿರಾಜದೇವರು ಮುಖ್ಯವಾದ ಅಸಂಖ್ಯಾತಗಣಂಗಳೆಲ್ಲರೂ ಆ ಮಹಾನುಭಾವ ಪ್ರಸಂಗವಂ ಕೇಳಿ ನಿಜತತ್ವದಲ್ಲಿ ಸಮರಸರಾಗಿ ಪರಮಾನಂದದಲ್ಲಿ ಓಲಾಡುತ್ತಿರಲು—[1]ಇತ್ತಲು ಪರಮೇಶ್ವರನ ನಿರೂಪದಿಂ ಒಬ್ಬ ರುದ್ರ ಕನ್ನಿಕೆ ಮರ್ತ್ಯದೊಳೊಗೆದು ಉಡುತಡಿಯ ಮಹಾದೇವಿಯಕ್ಕನೆಂಬ ನಾಮವಂ ಧರಿಸಿ, ಭವಿಯ ಸಂಗವಂ ತೊಱೆದು, ಲಿಂಗಸಂಗದೊಳು ಅವಿರಳಸಂಗಿಯಾಗಿ, ತನ್ನ ದಿವ್ಯರೂಪಲಾವಣ್ಯವ ನೆಡೆಗೊಂಡ ಷೋಡಶಪ್ರಾಯದ ನವಯೌವನದ ಸುಖದ ಸುಗ್ಗಿ ಶಿವನೊಳ್ ಪರವಶವನೆಯ್ದಿ, ಸರ್ವಸಂಗಪರಿತ್ಯಾಗವಂ ಮಾಡಿ, ದಿಗಂಬರದುಡಿಗೆಯನುಟ್ಟು ತನ್ನ ಕೇಶವೆಂಬಂಬರವಂ ಮುಸುಂಕಿಟ್ಟು, ಕರಸ್ಥಲದೊಳಗಿಪ್ಪ ಇಷ್ಟಲಿಂಗದೊಳ್ ದೃಷ್ಟಿನಟ್ಟು, ಮನಂ ಮುಟ್ಟಿಯಿಸಿ, ಭಾವಂ ಕಱಿಗೊಂಡು, ಲೌಕಿಕಲಜ್ಜಾಭಿಮಾನವಂ ತೊಱೆದು, ಭವಸಾಗರವಂ ದಾಂಟಿ, ಚೆನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯೊಳು ತನ್ನ ಮಱೆದು, ಇತರವಂ ಪಱಿದು, ದೇಶಾಂತರ ಮುಖದೊಳು ಚರಿಸಿ ಬಪ್ಪಾಗಳು—ಕಿನ್ನರ ಬೊಮ್ಮಿತಂದೆಗಳು ಕಂಡು ಹರುಷಿಸಿ [<ಪರುಷಿಸಿ <ಸ್ಪರ್ಶಿಸಿ ಅಥವಾ <ಪರೀಕ್ಷಿಸಿ?] ನೋಡಲು, ಅಂತರಂಗದ ಜ್ಞಾನಾಗ್ನಿಯೊಳ್ ಕಾಮನಂ ಸುಟ್ಟು ಭಸ್ಮವಂ ಮಾಡಿ, ಅವರಂ ಬೀಳ್ಕೊಂಡು ಕಲ್ಯಾಣದತ್ತಲಭಿಮುಖವಾಗಿ ನಡೆತಂದು, ತತ್ಪುರವಂ ಕಂಡ ಪ್ರಸ್ತಾವದೊಳು ನಿರೂಪಿಸಿದ ಪ್ರಸ್ತಾವದ ವಚನ:[1]

---

[1] ಹಲಗೆಯಾರ್ಯನ ಶೂನ್ಯಸಂಪಾದನೆಯಲ್ಲಿ ಈ ಮುಂದಿನ ಪಾಠವಿದೆ: ಇತ್ತ ಕೈಲಾಸದೊಳು ಶಿವದೇವಿಯರೋಲಗವ ನೋಡಿ ಬಾರೆಂದು ಗುಪ್ತಗಣವರನಂ ಕಳುಪಲಾತಂ ಬರುತ್ತಂ ದೇವಿಯರ ಸಾತ್ವಿಕಕಲಾಸ್ವರೂಪೆಯಪ್ಪ ನಿರ್ಮಲಾಂಗಿಯಂ ಸೋಂಕಲು ಆಕೆಯು ಗುಪ್ತಗಣೇಶ್ವರನೆಂದರಿಯದೆ ಭವಿಯೆಂದು ಭಾವಿಸಲಾಕೆಯ ಬಗೆಯನರಿದಾ ದೇವಿ ಕೋಪಿಸಿ, ನೀನು ಮರ್ತ್ಯಕ್ಕೆ ಹೋಗಿ, ಭವಿಗೆ ವಧುವಾಗಿ ಬಾರೆಂದು ನಿರೂಪಿಸೆ ಆ ರುದ್ರಕನ್ನಿಕೆಯದಂ ಕೇಳಿ ಹಮ್ಮೈದಂಬೋಗಿ, ಭೀತಾತುರೆಯಾಗಿ, ಭವಾನಿಗೆ ದೀರ್ಘದಂಡ ನಮಸ್ಕಾರವಂ ಮಾಡಿಕೊಂಡು ಇರಲು, ಆ ದೇವಿಯರು ಕರುಣದಿಂ ಕರ ಹಿಡಿದೆತ್ತಿ ನೀನಂಜಬೇಡ, ನಿನಗೆ ಬಂದ ಕಾರ್ಯದ ಶಾಪಮಂ ಗೆಲಿದು ಪ್ರಭುದೇವರು ಮುಖ್ಯವಾದ ಗಣಂಗಳ ಕೃಪೆಯಂ ಪಡೆದು, ಬಾರೆಂದು ಕಳುಪಲಾ ನಿರ್ಮಲಾಂಗಿಯಪ್ಪ ರುದ್ರಕನ್ನಿಕೆ ಉಡುತಡಿಯಲ್ಲಿಹ ನಿರ್ಮಲಾಂಗನೆಂಬ ಶಿವಭಕ್ತನ ಸತಿ ಜ್ಞಾನಿಯ ಗರ್ಭದೊಳುದಿಸಿ, ಪಂಡಿತಾರಾಧ್ಯರ ಕೈಯಲ್ಲಿ ದೀಕ್ಷೆಯಾಗಿ, ಇಷ್ಟ

ಲಿಂಗಮಂ ಪಡೆದು, ಬಾಲಲೀಲೆಯೆಲ್ಲವಂ ಶಿವಲೀಲೆಯಾಗಿ ಕಳೆದು, ಯೌವನದ ಪ್ರಾಯದಲ್ಲಿ ದಿವ್ಯಜ್ಞಾನಿಯಾಗಿ, ತನ್ನ ಪೂರ್ವಾಪರವನರಿದು ಪರಮದಾಸೋಹಿಯಾಗಿರೆ, ದೇವಿಯರಿತ್ತ ಅವಧಿ ಬರೆ ಕೌಶಿಕನೆಂಬ ರಾಯಗೆ ವಧುವಾಗಿ—ನೀರತಾವರೆಯಂತೆ, ಕಣ್ಣುಕಾಡಿಗೆಯಂತೆ, ನೆಯಿ ನಾಲಗೆಯಂತೆ, ಗಾಳಿಧೂಳಿನಂತೆ, ಆ ಸಂಸಾರದೊಳಗಿದ್ದೂ ಇಲ್ಲದೆ, .ತನುವನೆ ಸಂಸಾರಕ್ಕೆ ಎರವಾಗಿ ಕೊಟ್ಟು, ಮನ ಮೆಚ್ಚಿ ಲಿಂಗದಲ್ಲಿದ್ದು, ಚರಲಿಂಗದಲ್ಲಿ ಪರಮ ದಾಸೋಹದಲ್ಲಿ ಭಕ್ತಿಯ ಮಾಡುವಲ್ಲಿ—ಆತ ಕೊಟ್ಟ ಭಾಷೆಗೆ ಉತ್ತರಮಂ ಮಾಡಿ ಹೋಗುತ್ತಿರೆ, ಸೀರೆಯಂ ಪಿಡಿದೆಳೆಯೆ, ಬಿಟ್ಟು ದಿಗಂಬರೆಯಾಗಿ, ದಿಗಂಬರನ ನೆನೆವುತ್ತ, ಮಸ್ತಕದ ಚಿತ್ಕಲೆಯೆ ಸರ್ವಾಂಗ [=ಗಾ] ವೃತೆಯೆಂಬಂತೆ ಕೆದರಿದ ಕೇಶವ ಪೊದೆದು ಕರಸ್ಥಲದ ಲಿಂಗಧ್ಯಾನದಲ್ಲಿ ಸಟ್ಟದಿಟ್ಟ ಹೆ [+ರ] ಹಿಂಗದೆ ಪೋಗುತ್ತಿರೆ, ತಂದೆತಾಯಿಗಳು ಬಂಧುಗಳೆಲ್ಲರೂ ಕರೆಯೆ ಬಾರನೆ, ಅವರಿಗೆ—ತಂದೆಯೆ ಗುರು, ಲಿಂಗವೆ ಗಂಡ, ಶಿವಗಣಂಗಳೆ ಬಂಧುಗಳು, ಜಂಗಮವೆ ದೈವವೆಂದು ನಿರೂಪಿಸಿ, ತನ್ನ ಪೂರ್ವಾಪರವಂ ತಾನೆಯರಿದು, ತನ್ನ ನಿಜವಂ ಸಾಧಿಸಿ ನಿಜೈಕ್ಯವಹ ಬಗೆಗೆ ಕಲ್ಯಾಣದಲ್ಲಿಗೆ ಹೋಗಿ, ಬಸವಣ್ಣ-ಪ್ರಭುದೇವರು-ಚೆನ್ನಬಸವೇಶ್ವರ ಮೊದಲಾದ ಗಣಂಗಳ ಕೃಪೆಯ ಹಡೆದಲ್ಲ ದಾಗದೆಂದು ಶ್ರೀಕಲ್ಯಾಣದತ್ತಲಭಿಮುಖೆಯಾಗಿ ಬರುತ್ತಿರಲಾ ಕಲ್ಯಾಣದ ಹೊರಸಳಯಕ್ಕೆ ತನ್ನ ಲೀಲಾವಿನೋದದಿಂ ಕಿನ್ನರ ಬ್ರಹ್ಮಯ್ಯಗಳು ಬಂದಿರಲಾ ಕಾಲದಲ್ಲಿ ಅಕ್ಕಗಳ ದಿಗಂಬರವೇಷಮಂ, ನಿರ್ವಾಣದ ನಿಲುಕಡೆಯಂ, ದಿವ್ಯಸ್ವರೂಪಿನ ಲಾವಣ್ಯಮಂ ಕಂಡು ಕಿನ್ನರಬೊಮ್ಮಣ್ಣಗಳು—ಈಕೆ ಲಿಂಗಾನುಭಾವ ಸಂಪನ್ನೆಯಾದರೆ ಗುರು ತಾಯೆಂದು ಶರಣೆಂಬೆನು, ಅಲ್ಲಾ ದೇಹಲಜ್ಜಾಭಿಮಾನ ಉಳ್ಳಡೆ ಸ್ತ್ರೀಯಾಗಿ ಕೈವಿಡಿವೆನು—ಎಂದು ತನ್ನ ತಾ ನಿಶ್ಚೈಸಿ, ಆ ಮಹಾದೇವಿಯಕ್ಕಗಳ ಒರೆ ದೊರೆದು ನೋಡುವ ಪ್ರಸ್ತಾವದ ವಚನ:

ಕಾಯದಲ್ಲಿ ಕಳವಳವಿರಲು, ಪ್ರಾಣದಲ್ಲಿ ಮಾಯೆಯಿರಲು, ಏತರ ಗಮನ ಇದೇತರ ನಿರ್ವಾಣ? ಮಹಾಲಿಂಗತ್ರಿಪುರಾಂತಕನು ನಿನ್ನ ಸಂಸಾರಿ ಎಂಬನಲ್ಲದೆ ಸಜ್ಜನೆ ಎಂದು ಕೈವಿಡಿಪನಲ್ಲ ಕೇಳಾ ಮರುಳೆ. ೧೧೧೧ ಮತ್ತಂ:

ನಿನ್ನ ಸ್ವರೂಪ ಕಂಡೆನ್ನ ದೃಷ್ಟಿ ನಟ್ಟುದೆನಗೆ,ನಿನ್ನ ಲಾವಣ್ಯರಸವ ಕಂಡು ಮನ ಹಾರೈಸಿತ್ತೆನಗೆ. ನಿನ್ನ ಪ್ರೌಢಿಯಿಂದ ಕೂಡಿಹೆನೆಂಬುದು ಭಾವದಲ್ಲಿ ಬಚ್ಚಬರಿಯ ಹೆಂಗುಸಾಗಿ ತೋರಿತ್ತೆನಗೆ. ಮಹಾಲಿಂಗ ತ್ರಿಪುರಾಂತಕನೆನಗೊಡ್ಡಿದ ಮಾಯೆಯ ನಿನ್ನ ಸಮಸುಖಕೂಟಸೊಳಿದ್ದು ಶಿವಭಾವ ಭಕ್ತಿಯಿಂ ಗೆಲುವೆನು ಬಾರೌ ಹೆಣ್ಣೆ ಎಂದು ಕೈವಿಡಿದೆನು. ೧೧೧೨.

ಇಂತೀ ಮನಭಾವದೃಷ್ಟಿಯಿಂ ಮೆಚ್ಚಿಹಿಡಿದು ಕೂಡಿಹೆನೆಂಬ ಕಿನ್ನರ ಬೊಮ್ಮಣ್ಣನ ಮಹಾದೇವಿ ಯಕ್ಕಗಳು ಜರೆದು ಝುಂಕಿಸಿ ವಿಡಂಬಿಸುವ ಪ್ರಸ್ತಾವದ ವಚನ:

ನೋಡುವ ಕಂಗಳಿಗೆ ರೂಪಿಂಬಾಗಿರಲು ನೀವು ಮನ ನಾಚದೆ ಬಂದಿರಣ್ಣಾ! ಕೇಳಿದ ಶ್ರೋತ್ರ ಸೊಗಸಿಗೆ ನೀವು ಮರುಳಾಗಿ ಬಂದಿರಣ್ಣ! ನಾರಿಯೆಂಬ ರೂಪಿಂಗೆ ನೀವು ಒಲಿದು ಬಂದಿರಣ್ಣ! ಮೂತ್ರವು ಬಿಂದು ಒಸರುವ ನಾಳವೆಂದು ಕಂಗಾಣದೆ ಮುಂದುಗೆಟ್ಟು ಬಂದಿರಣ್ಣ! ಬುದ್ಧಿಗೇಡಿತನ ದಿಂದ ಪರಮಾರ್ಥದ ಸುಖವ ಹೋಗಲಾಡಿಕೊಂಡು ಇದಾವ ಕಾರಣವೆಂದರಿಯದೆ ನೀವು ನರಕ ಹೇತುವೆಂದರಿದು ಮನ ಹೇಸದೆ ಬಂದಿರಣ್ಣ! ಚೆನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕಿಹ ಪುರುಷರೆನಗೆ ಸಹೋದರ, ಛೀ ಹೋಗಾ ಮರುಳೆ! ೧೧೧೩. ಮತ್ತಂ:

ಬಟ್ಟಮೊಲೆಯ ಭರದ ಜವ್ವನದ ಚೆಲುವ ಕಂಡು ಬಂದಿರಣ್ಣ! ಅಣ್ಣಾ ನಾನು ಹೆಂಗೂಸಲ್ಲ! ಅಣ್ಣಾ ನಾನು ಸೂಳೆಯಲ್ಲ! ಅಣ್ಣಾ ಮತ್ತೆ ನಸ್ನ ಕಂಡು ಕಂಡು ಆರೆಂದು ಬಂದಿರಣ್ಣ? ಚೆನ್ನ ಮಲ್ಲಿಕಾರ್ಜುನನಲ್ಲದ ಮಿಕ್ಕಿನ ಪುರುಷನು ನಮಗಾಗದ ಮೋರೆ ನೋಡಣ್ಣ! ೧೧೧೪. ಮತ್ತಂ:

ಎನ್ನಂತೆ ಪುಣ್ಯಗೆಯ್ದವರುಂಟೆ? ಎನ್ನಂತೆ ಭಾಗ್ಯಗೆಯ್ದವರುಂಟೆ? ಕಿನ್ನರನಂತಪ್ಪ ಸೋದರ ನೆನಗೆ! ಏಳೇಳು ಜನ್ಮದಲ್ಲಿ ಶಿವಭಕ್ತರೆ ಬಳಗವೆನಗೆ ಚೆನ್ನಮಲ್ಲಿಕಾರ್ಜುನನಂತಪ್ಪ ಗಂಡ ನೋಡಾ ಎನಗೆ! ೧೧೧೫.

ಹೀಗೆಂದು ಮಹಾದೇವಿಯಕ್ಕಗಳು ನಿರೂಪಿಸಲು ಆ ಕಿನ್ನರಯ್ಯಗಳು ಬರಿಯ ಮಾತಿನ ಬಣ್ಣಣೆಯ ಪಸರಿಸೆ ನಾನು ಬಿಡುವೆನೇ ಬಾರೆಂದು ತುಡುಕಿ ಹಿಡಿಯಲಾ ಮಹಾದೇವಿ—ನೀನಿಂತು ಮುಂದುಗೆಡುವರೆ ನನ್ನ ತನುವನೊಪ್ಪಿಸಿಹೆನು, ನಿನ್ನ ಮನಕ್ಕೆ ಬಂದಂತೆ ಮಾಡಿಕೊಳೆಂದು ಒಪ್ಪಿಸ ಲಾತಂ ಸರ್ವಾಂಗಸ್ಥಾನಮಾನಂಗಳಂ ಪರುಷಿಸಿ ನೋಡಲು, ದೇಹಾಭಿಮಾನಗಳಿಲ್ಲದಿರಲಾತಂ, ಯೋನಿಯೊಳಂಗುಲಿಪ್ರವೇಶವಂ ಮಾಡಲಲ್ಲಿ ಚಿದ್ಭಸ್ಮವೊದಗಲಾತಂ ನಡುಗಿ ಭೀತಾತುರನಾಗಿ, ತನ್ನ ಮನವಂ ತಾನೆ ಸಂತೈಸಿಕೊಂಡು, ಆ ಅಕ್ಕಗಳ ಶರೀರದಲ್ಲಿ ಎಲ್ಲಿಯೂ ಶಿವ ತನ್ಮಯವಾಗಿರ್ದ ಪನೆಂದು ಬಿನ್ನೈಸಿದ ಪ್ರಸ್ತಾವದ ವಚನ:

ಮಸ್ತಕವ ಮುಟ್ಟಿ ನೋಡಿದರೆ ಮನೋಹರಸುಳುಮೆ ಕಾಣಬಂದಿತ್ತು. ಮುಖಕಮಲವ ಮುಟ್ಟಿ ನೋಡಿದರೆ ಮೂರ್ತಿಯ ಉಳಿವು ಕಾಣಬಂದಿತ್ತು, ಕೊರಳ ಮುಟ್ಟಿ ನೋಡಿದರೆ ಗರಳಧರ ನಿರವು ಕಾಣಬಂದಿತ್ತು, ತೋಳುಗಳ ಮುಟ್ಟಿ ನೋಡಿದರೆ ಶಿವನಪ್ಪು ಕಾಣಬಂದಿತ್ತು. ಉರಸ್ಥಲವ ಮುಟ್ಟಿ ನೋದಿದರೆ ಕರಸ್ಥಲದಂಗ ಕಾಣ ಬಂದಿತ್ತು. ಬಸುರ ಮುಟ್ಟಿ ನೋಡಿದರೆ ಬ್ರಹ್ಮಾಂಡವಡ ಗಿತ್ತ ಕಾಣಬಂದಿತ್ತು. ಗುಹ್ಯವ ಮುಟ್ಟಿ ನೋಡಿದರೆ ಕಾಮದಹನ ಕಾಣಬಂದಿತ್ತು, ಮಹಾಲಿಂಗ ತ್ರಿಪುರಾಂತಕದೇವ ಮಹಾದೇವಿಯಕ್ಕನ ನಿಲವನಱಿಯದೆ ಅಳುಪಿ ಕೆಟ್ಟೆನು. ೧೧೧೬.

ಹೀಗೆಂದು ಕಿನ್ನರಯ್ಯಗಳು ಬಿನ್ನವಿಸಲು ಇದಕ್ಕೆ ಅಕ್ಕಗಳು ಶಿವನು ಕಾಮನ ಕೊಂದು ಭಸ್ಮವ ಪೂಸಿ ಮನಸಿಜನಾಗಿ ಉಳುಹಿದರೆ, ನಾನಾ ಮನಸಿಜನ ಸುಟ್ಟುಬೂದಿ ಇದೆಕೋ ಎಂದು ತೋರಿ ಸುಡಿವ ಪ್ರಸ್ತಾವದ ವಚನ:

ಅಂಗದ ಭಂಗವ ಲಿಂಗ ಮುಖದಲ್ಲಿ ಗೆಲಿದೆ. ಮನದ ಭಂಗವ ಅರಿವಿನ ಮುಖದಲ್ಲಿ ಗೆಲಿದೆ. ಜೀವದ ಭಂಗವ ಶಿವನ ಭಾವದಿಂದ ಗೆಲಿದೆ. ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ. ಎನ್ನ ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಗೆ ತೋರುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯ. ಚೆನ್ನಮಲ್ಲಿಕಾರ್ಜುನ ಕಾಮನ ಕೊಂದು ಮನಸಿಜನಾಗುಳುಹಿದರೆ, ಮನಸಿಜನ ತಲೆಯ ಬರೆಹವ ನಾನು ತೊಡೆದೆನು. ೧೧೧೭.

ಇಂತು ಮಹಾದೇವಿಯಕ್ಕಗಳು ಕಾಮನ ಸುಟ್ಟು ಭಸ್ಮವ ಗುಹ್ಯಸ್ಥಾನದಲ್ಲಿ ಸುರಿದು ತೋರಲು, ಕಿನ್ನರಬೊಮ್ಮ ತಂದೆಗಳು ಕಂಡು ನಡನಡನೆ ನಡುಗಿ ಕೆಟ್ಟೆನೆಂದು ಉಮ್ಮಳಿಸಿ ಮನದಲ್ಲಿ ನೊಂದು ಬಿನ್ನೈಸುವ ಪ್ರಸ್ತಾವದ ವಚನ:

ವಿಷಯಂಗಳು ವಿಷಮವಾದವಲ್ಲಾ! ಎನ್ನ ವ್ಯಸನಂಗಳು ಹಗೆಯಾದವಲ್ಲಾ! ಎನ್ನ ಅಳಿಪೆ ಎದೆವಾವಾಯಿತಲ್ಲಾ! ಎನ್ನ ಮುಳಿಸೆ ಬರಸಿಡಿಲಾಯಿತಲ್ಲಾ! ಎನ್ನ ಹುಸಿಯೇ ಮಸೆದಲಗಾಯಿ ತಲ್ಲಾ. ಎನ್ನ ಮಹಾಲಿಂಗ ತ್ರಿಪುರಾಂತಕ ಕೊಲ್ಲು ಕಾಯಿ ನಿಮ್ಮ ಧರ್ಮ. ೧೧೧೮.

ಹುಸಿಯೆಂಬ ಅಲಗಿಂಗೆ ಒಡಲೆ ಗುರಿಯಾಯ್ತು. ವಿಷವೆಂಬ ಅಗ್ನಿಗೆ ತನುವೆ ನಿಂಧ್ಯನವಾಯಿತು. ಏನೆಂಬೆನೇನೆಂಬೆ ವಿಧಿ ಮಾಡಿತ್ತ! ಶಮದಮಾದಿಗಳು ನೆಲೆಗೊಳದೆ ಹೋದವು. ಮಹಾಲಿಂಗ ತ್ರಿಪುರಾಂತಕನ ಶರಣರೆನ್ನೊಡೆಯರೆಂದರಿಯದೆ ಇದ್ದ ಕಾರಣ ತೆರಹುಮುರಹಿನಲ್ಲಿ ತಾವೆಡೆಗೊಂಡವು. ೧೧೧೯.

ಹುಟ್ಟಿತಲ್ಲಾ! ಉಂಟೆನಿಸಿತಲ್ಲಾ! ಕರುವಿಟ್ಟಿತಲ್ಲಾ ರೂಪಾಯಿತಲ್ಲಾ! ನೋಡ ನೋಡ ಛಾಯೆಗುಂದಿತಲ್ಲಾ! ನೋಡ ನೋಡ ಭಾವಗುಂದಿತಲ್ಲಾ! ಆರು ವಿಕಾರದಲಾಯಿತು ಹೋಯಿತು, ಮಹಾಲಿಂಗ ತ್ರಿಪುರಾಂತಕ, ನಿಮಗೆರಗದ ತನು. ೧೧೨೦.

ಇಂತು ಕಿನ್ನರ ಬೊಮ್ಮಿ ತಂದೆಗಳು ನೊಂದು ಅನುತಾಪಿಸುತ್ತಿರಲು, ಮಹಾದೇವಿಯಕ್ಕಗಳು ಕಿನ್ನರಬೊಮ್ಮಣ್ಣಂಗಳಂ ಸಂತೈಸುವ ವಚನ:

ಎಲೆ ಅಣ್ಣಾ, ಎಲೆ ಅಣ್ಣಾ ನೀವು ಮರುಳಲ್ಲಾ! ಅಣ್ಣಾ ಎನ್ನ ನಿನ್ನಳವೆ? ಹದಿನಾಲ್ಕು ಲೋಕವ ನುಂಗಿದ ಕಾಮನ ಬಾಣದ ಗುಣ ಎನ್ನ ನಿನ್ನಳವೆ? ವಾರುವ ಮುಗ್ಗಿದಡೆ ಮಿಡಿಯ ಹರಿಯ ಹೊಯ್ವರೆ? ಮುಗ್ಗಿದ ಭಂಗವ ಮುಂದೆ ರಣದಲ್ಲಿ ತಿಳಿವುದು. ನಿನ್ನ ನೀ ಸಂಹರಿಸಿ ಕೈದುವ ಕೊಳಿರಣ್ಣ ಚೆನ್ನಮಲ್ಲಿಕಾರ್ಜುನನೆಂಬ ಹಗೆಗೆ ಬೆಂಗೊಡದಿರಣ್ಣ! ೧೧೨೧.

ಹೀಗೆಂದು ಮಹಾದೇವಿಯಕ್ಕಗಳು ನಿರೂಪಿಸಲು ಕಿನ್ನರ ಬೊಮ್ಮಣ್ಣಗಳು ಹರುಷವನೆಯ್ದಿ ಬಿನ್ನೈಸಿದ ವಚನ:

ಶರಣಾರ್ತಿ ಶರಣಾರ್ತಿ ಎಲೆ ತಾಯೆ ಎಮ್ಮವ್ವ! ಶರಣಾರ್ತಿ ಶರಣಾರ್ತಿ ಕರುಣಾಸಾಗರನಿಧಿಯೆ! ದಯಾಮೂರ್ತಿ ತಾಯೆ ಶರಣಾರ್ತಿ ಶರಣಾರ್ತಿ. ಮಹಾಲಿಂಗ ತ್ರಿಪುರಾಂತಕನೊಡ್ಡಿದ ತೊಡಕ ನೀವು ಬಿಡಿಸಿದಿರಾಗಿ ನಿಮ್ಮ ದಯದಿಂದ ನಾನು ಹುಲಿನೆಕ್ಕಿ ಬದುಕಿದೆನು—ಶರಣಾರ್ತಿ ಶರಣಾರ್ತಿ ತಾಯೆ! ೧೧೨೨. ಮತ್ತಂ:

ಕಿನ್ನರ ಬೊಮ್ಮಯ್ಯಗಳು ಆ ಮಹಾದೇವಿಯಕ್ಕನಿಂದ ಬದುಕಿದೆನೆಂದು, ಎನ್ನ ಭವನಾಸ್ತಿಯಾಯಿತೆಂದು ಬಿನ್ನೈಸಿದ ಪ್ರಸ್ತಾವದ ವಚನ:

ವಿಷಯಂಗಳು ನಿರ್ವಿಷಯವಾದವಿಂದು. ಎನ್ನ ಅಳಿಪೆಂಬ ಅರೆವಾವು ಮಡಿಯಿತ್ತಿಂದು, ಎನ್ನ ಹೃದಯಕಲ್ಮಷ ತೊಳೆಯಿತ್ತಿಂದು, ಮಹಾಲಿಂಗ ತ್ರಿಪುರಾಂತಕಯ್ಯ, ಮಹಾದೇವಿಯಕ್ಕಗಳ ಧರ್ಮದಿಂದ ಹಿಂದಣ ಹುಟ್ಟು ಮುರಿಯಿತಿಂದು. ೧೧೨೩.

ಇಂತು ಮಹಾದೇವಿಯಕ್ಕಗಳು ಕಿನ್ನರಬೊಮ್ಮಿ ತಂದೆಗಳ ಮನೋರಥಸಿದ್ಧಿಯಂ ಮಾಡಿ ಒಬ್ಬರಿಗೊಬ್ಬರು ನಮಸ್ಕರಿಸಿಕೊಂಡಾತನ ಬೀಳ್ಕೊಂಡು ಕಲ್ಯಾಣಕ್ಕೆ ಬರುತ್ತ, ತನ್ನಂಗಯ್ಯ ಶಿವಲಿಂಗದಲ್ಲಿ ದೃಷ್ಟಿ ನಟ್ಟು ನಿಬ್ಬೆರಗಾಗುತ್ತ ತನ್ನ ಮನಕ್ಕೆ ತಾನೆ ಶರಣರ ಸಂಗದಲ್ಲಿ ಸವೆದು ಬದುಕೆಂದು ಹೇಳುವ ಪ್ರಸ್ತಾವದ ವಚನ:

ಹಡೆವುದರಿದು ನರಜನ್ಮವ, ಹಡೆವುದರಿದು ಗುರು ಕಾರುಣ್ಯವ, ಹಡೆವುದರಿದು ಲಿಂಗಜಂಗಮದ ಸೇವೆಯ, ಚೆನ್ನಮಲ್ಲಿಕಾರ್ಜುನನ ಕರುಣದ ಕಡೆಗೋಡಿವರಿವಲ್ಲಿ ಶಿವಶರಣರ ಸಂಗದಲ್ಲಿ ನಲಿದಾಡು ಕಂಡಾ ಮನವೆ! ೧೧೨೪.

ಇಂತು ಮಹಾದೇವಿಯಕ್ಕಗಳು ತನ್ನ ಮನವ ತಾನೇ ಸಂತೈಸಿಕೊಂಡು ಶಿವಶರಣರ ಸಂಗಮಂ ಹಾರೈವುತ್ತ ಬಪ್ಪಾಗಲಾ ಕಲ್ಯಾಣಮಂ ಕೊಂಡಾಡಿದ ಪ್ರಸ್ತಾವದ ವಚನ; (ಹ)

---

[1] ಗುಮ್ಮಳಾಪುರದ ಶೂನ್ಯಸಂಪಾದನೆಯಲ್ಲಿ ಈ ಮುಂದಿನ ಪಾಠವಿದೆ:

ಇತ್ತಲು ಪರಮೇಶ್ವರನ ನಿರೂಪದಿಂದ ಒಬ್ಬ ರುದ್ರಕನ್ನಿಕೆ ಮರ್ತ್ಯಲೋಕವಲ್ಲೊಗೆದು ಉಡುತಡಿಯ ಮಹಾದೇವಿಯಕ್ಕನೆಂಬ ನಾಮಮಂ ಧರಿಸಿ ಅಂಗಸಂಗಮಂ ತೊಱೆದು ಲಿಂಗಸಂಗದೊಳು ಅವಿರಳ ಸಂಗಿಯಾಗಿ, ತನ್ನ ದಿವ್ಯ ಸ್ವರೂಪಲಾವಣ್ಯವನೆಡೆಗೊಂಡು, ಷೋಡಶಪ್ರಾಯದ ಯೌವನದ ಸುಖದ ಸುಗ್ಗಿ, ಶಿವನೊಳ್ ಪರವಶವನೆಯ್ದಿ, ಸರ್ವಕರಣಂಗಳ ಅಱುಹಿನ ಆಹುತಿಗಿಕ್ಕಿ, ದಿಗಂಬರದುಡಿಗೆಯನುಟ್ಟು, ತನ್ನ ಕೇಶವೆಂಬ ಅಂಬರಮಂ ಮುಸುಕಿಟ್ಟು, ಕರಸ್ಥಲದೊಳಗಿಪ್ಪ ಇಷ್ಟಲಿಂಗದೊಳೆ ದೃಷ್ಟಿನಟ್ಟು, ಮನ ಮುಟ್ಟೈಸಿ, ಭಾವಂ ಕಱಗೊಂಡು, ಲೌಕಿಕಲಜ್ಜಾಭಿಮಾನಭಾವಮಂ ತೊಱೆದು, ಭವಸಾಗರಮಂ ದಾಂಟಿ, ಚೆನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯೊಳ್ಳ ತನ್ನ ಮಱೆದು, ಇತರಮಂ ಪಱಿದು, ಮಹಾವೈರಾಗ್ಯವಂ ಬೀರುತ್ತ ಕರುಣರಸಮಂ ಹೇರುತ್ತ, ನಿಶ್ಚಲ ಬುದ್ಧಿಯನೆಡೆಗೊಂಡು, ಭಕ್ತಿಯ ಭಾಗ್ಯವೆನಿಪ, ಮುಕ್ತಿಯ ತವರ್ಮನೆಯೆನಿಪ, ಶಿವಭಾವಸಂಪನ್ನೆ, ಪ್ರಸಾದದ ಮೇರುವೆ, ತತ್ವಶಿಖಾಮಣಿ, ಪುಣ್ಯದ ಪುಂಜ, ನೈಷ್ಠೆಯ ಕಣಿ, ಸತ್ಯದ ಸದನ, ಶಾಂತಿಯ ನಿಧಿ, ಚಿದಂಬರ ಸಂಯುಂತೆ, ಸ್ವಾನುಭಾವದ ಸಾಗರೆ, ನಿತ್ಯದ ನಿವಾಸೆ, ಎನಿಪ ಮಹಾದೇವಿಯಕ್ಕಗಳು ಶಿವಸುಖಾಳಾಪಮಂ ಗೆಯ್ವುತ್ತೆ ಪ್ರತ್ಯಕ್ಷ ಮುಕ್ತ್ಯಂಗನೆಯ ಸುಳುಹು ದಿಟದಿಟವೆನಿಸಿ, ಸಕಲಲೋಕಂಗಳಂ ಪಾವನವ ಮಾಡುತ್ತ, ಮುಟ್ಟಿದುದು ಪರುಷ, ಮೆಟ್ಟಿದ ಧರೆ ಪಾವನ, ನೋಡಿದುದೆಲ್ಲಾ ಪವಿತ್ರ, ನುಡಿದುದೆಲ್ಲಾ ಶಿವತತ್ವ, ನಡೆದುದೆಲ್ಲಾ ಸುಮಾರ್ಗ, ನೆರೆದುದೇ ದೇವಸಭೆಯಾಗಿ ಸಕಲಕ್ಷೇತ್ರಂಗಳಂ ಪಾವನವ ಮಾಡುತ್ತ, ತನ್ನ ಕೇಳ್ದು ಕಂಡು ಕೈ ಮುಗಿದ ಸಕಲ ಜನಂಗಳೆಲ್ಲರಂ ಕೃತಾರ್ಥರಂ ಮಾಡುತ್ತ ಬಪ್ಪಾಗಳು, ಇತ್ತ ಬಸವಣ್ಣ ಚೆನ್ನ ಬಸವಣ್ಣ ಪ್ರಭುದೇವರು ಮುಖ್ಯವಾದ ಅಸಂಖ್ಯಾತರ ಮಧ್ಯದಲ್ಲಿ ಆ ಬಸವರಾಜದೇವರು ಪ್ರಭುದೇವರೊಡನೆ ಎನ್ನ ಹೆತ್ತ ತಾಯಿ ಅಕ್ಕಮಹಾದೇವಿಯರು ವಿರತಿಯಿಂದ ದಿಗಂಬರೆಯಾಗಿ ಕಾಮಾರಿಯಾಗಿ ಬರುತಿರ್ಪಳೆಂದು ಬಿನ್ನೈಸೆ, ಆ ಪ್ರಭುದೇವರು ಸಕಲ ಪ್ರಮಥರಿಗೆ ಕಾಮಸಂಹಾರಿಯೆಂಬುದಂ ಪ್ರತ್ಯಕ್ಷವ ತೋರಬೇಕೆಂದು ಭಕ್ತಿ ವಿಸ್ತಾರದಿಂದ ಕಿನ್ನರಯ್ಯಗಳಂ ಒಪ್ಪಿ ಕಳುಹಲು, ಆ ಪರಮಜ್ಞಾನಿಯಪ್ಪ ಕಿನ್ನರಯ್ಯಗಳು ದಳದಳನೆ ಇದಿರಿನಲ್ಲಿ ಬಂದು ಕಂಡು, ಭಕ್ತಿಭಾವದಿಂ ಪ್ವರುಶಿಸಿ [=ಸ್ಪರುಶಿಸಿ] ನೋಡಲು, ಆ ಮಹಾದೇವಿಯಕ್ಕಗಳು ತಮ್ಮ ಅಂತರಂಗದ ಜ್ಞಾನಾಗ್ನಿಯೊಳ್ ಕಾಮನಂ ಸುಟ್ಟು ಭಸ್ಮಮಂ ಮಾಡಿ ಕಿನ್ನರಯ್ಯಗಳಿಗೆ ತೋರಿದ ಪ್ರಸ್ತಾವದ ವಚನ:

ಅಂಗವ ಭಂಗವ ಲಿಂಗಮುಖದಿಂದ ಗೆಲಿದೆ. ಮನದ ಭಂಗವ ಅಱುಹಿನ ಮುಖದಿಂದ ಗೆಲಿದೆ. ಜೀವದ ಭಂಗವ ಶಿವಾನುಭಾವದಿಂದ ಗೆಲಿದೆ. ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ. ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಗೆ ತೋಱುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯ. ಚೆನ್ನಮಲ್ಲಿಕಾರ್ಜುನ ಕಾಮನ ಕೊಂದು ಮನಸಿಜನನುಳುಹಿದರೆ ಮನಸಿಜನ ತಲೆಯ ಬರೆಹವ ತೊಡೆದೆನು. ೧೦೦೩.

ಇಂತು ಕಾಮನಸುಟ್ಟು ಭಸ್ಮವ ಮಾಡಿ ಕಿನ್ನರಯ್ಯಗಳಿಗೆ ತೋರಿಸಿ ಅವರಂ ಬೀಳ್ಕೊಂಡು ಕಲ್ಯಾಣದತ್ತಲಭಿಮುಖವಾಗಿ ನಡೆತಂದು ತತ್ಪುರಮಂ ಕಂಡ ಪ್ರಸ್ತಾವದ ವಚನ: (ಗು)

[1] ಗೂಳೂರಿನ ಶೂನ್ಯಸಂಪಾದನೆಯಲ್ಲಿ ಈ ಮುಂದಿನ ಪಾಠವಿದೆ:

ಇತ್ತಲು ಪರಮೇಶ್ವರನ ನಿರೂಪದಿಂದ ಒಬ್ಬ ರುದ್ರಕನ್ನಿಕೆ ಮರ್ತ್ಯದಲ್ಲೊಗೆದು, ಉಡುತಡಿಯ

ಮಹಾದೇವಿಯಕ್ಕನೆಂಬ ನಾಮಮಂ ಧರಿಸಿ, ಲಿಂಗಧಾರಣವಾಗಲೊಲ್ಲೆನೆಂದ ಭವಿಯಂ ಸೋಂಕದೆ ಅಂಗಸಂಗಮಂ ತೊರೆದು, ಲಿಂಗಸಂಗದೊಳು ಅವಿರಳಸಂಗಿಯಾಗಿ, ತನ್ನ ದಿವ್ಯರೂಪಲಾವಣ್ಯವ ನೆಡೆಗೊಂಡು ಷೋಡಶಪ್ರಾಯದ ಯೌವನದ ಸುಖದ ಸುಗ್ಗಿ ಶಿವನೊಳ್ ಪರವಶವನೆಯ್ದಿ, ಸರ್ವ ಕರಣಂಗಳ ಅರುಹಿಂಗಾಹುತಿಯನಿಕ್ಕಿ, ದಿಗಂಬರದುಡುಗೆಯನುಟ್ಟು, ತನ್ನ ಕೇಶವೆಂಬಂಬರಮಂ ಮುಸುಕಿಟ್ಟು, ಕರಸ್ಥಲದೊಳಗಿಪ್ಪ ಇಷ್ಟ ಲಿಂಗದೊಳ್ ದೃಷ್ಟಿನಟ್ಟು, ಮನ ಮುಟ್ಟಯಿಸಿ, ಭಾವ ಕರಿಗೊಂಡು ಲೌಕಿಕಲಜ್ಜಾಭಿಮಾನಮಂ ತೊರೆದು, ಭವಸಾಗರಮಂ ದಾಂಟಿ, ಚೆನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯೊಳು ತನ್ನ ಮರೆದು, ಇತರಮಂ ಪರಿದು, ಮಹಾ ವೈರಾಗ್ಯಮಂ ಬೀರುತ್ತ, ಕರುಣ ರಸಮಂ ಹೇರುತ್ತ, ನಿಶ್ಚಲಬುದ್ಧಿಯನೆಡೆಗೊಂಡು, ಭಕ್ತಿಯ ಭಾಗ್ಯವೆನಿಪ, ಮುಕ್ತಿಯ ತವರ್ಮನೆ ಯೆನಿಪ ಶಿವಭಾವಸಂಪನ್ನೆ, ಪ್ರಸಾದದ ಮೇರುವೆ, ತತ್ವಶಿಖಾಮಣಿ, ಪುಣ್ಯದ ಪುಂಜಿ, ನೈಷ್ಠೆಯ ಕಣಿ, ಸತ್ಯದ ಸದನ, ಶಾಂತಿಯ ನಿಧಿ, ಚಿದಂಬರಸಂಯುತೆ, ಸ್ವಾನುಭಾವದ ಸಾಗರೆ, ನಿತ್ಯದ ನಿವಾಸೆ, ಎನಿಪ ಮಹಾದೇವಿಯಕ್ಕಗಳು, ಶಿವಸುಖಾಳಾಪಂಗೆಯುತ್ತ ಪ್ರತ್ಯಕ್ಷ ಮುಕ್ತಾಂಗನೆಯ ಸುಳುಹು ದಿಟವೆನಿಸಿ ಸಕಲ ಲೋಕಂಗಳಂ ಪಾವನವ ಮಾಡುತ್ತ, ಮುಟ್ಟಿದುದು ಪರುಷ, ಮೆಟ್ಟಿದ ಧರೆ ಪಾವನ, ನೋಡಿತ್ತೆಲ್ಲಾ ಪವಿತ್ರ, ನುಡಿದುದೆಲ್ಲಾ ಶಿವತತ್ವ, ನಡೆದುದೆಲ್ಲಾ ಶಿವ ಮಾರ್ಗ, ನೆರೆದುದೆ ದೇವಸಭೆಯಾಗಿ ಸಕಲ ಕ್ಷೇತ್ರಂಗಳು ಪಾವನವ ಮಾಡುತ್ತ ತನ್ನ ಕೇಳ್ದು ಕಂಡು ಕೈಮುಗಿದ ಸಕಲ ಜನಂಗಳೆಲ್ಲರ ಕೃತಾರ್ಥರಂ ಮಾಡುತ್ತ ಬಪ್ಪಾಗಳು, ಇತ್ತ ಬಸವಣ್ಣ-ಚೆನ್ನಬಸವಣ್ಣ ಪ್ರಭುದೇವರು ಮುಖ್ಯವಾದ ಅಸಂಖ್ಯಾತರ ಮಧ್ಯದಲ್ಲಿ ಆ ಬಸವರಾಜ ರಾಜದೇವರು ಪ್ರಭುದೇವರೊಡನೆ ಎನ್ನ ಹೆತ್ತ ತಾಯಿ ಅಕ್ಕಮಹಾದೇವಿಯವರು ವಿರಕ್ತಿಯಿಂದ ದಿಗಂಬರೆಯಾಗಿ ಕಾಮಾರಿಯಾಗಿ ಬರುತಿರ್ಪಳೆಂದು ಬಿನ್ನೈಸೆ, ಆ ಪ್ರಭುದೇವರು ಸಕಲ ಪ್ರಮಥ ರಿಗೆ ಕಾಮಸಂಹಾರಿಯೆಂಬುದಂ ಪ್ರತ್ಯಕ್ಷವ ಮಾಡಿ ತೋರಬೇಕೆಂದು ಭಕ್ತಿವಿಸ್ತಾರದಿಂದ ಕಿನ್ನರಯ್ಯ ಗಳಂ ಒಪ್ಪಿಕಳುಹಲು, ಆ ಪರಮಜ್ಞಾನಿಯಪ್ಪ ಕಿನ್ನರಯ್ಯಗಳು ದಳದಳನೆ ಇದಿರಿನಲಿ ಬಂದು ಕಂಡು ಆ ಮಹಾದೇವಿಯಕ್ಕಗಳ ಒರೆದೊರೆದು ನೋಡುವ ಪ್ರಸ್ತಾವದ ವಚನ:

ಕಾಯದಲ್ಲಿ ಕಳವಳವಿರಲು, ಪ್ರಾಣದಲ್ಲಿ ಮಾಯೆಯಿರಲು ಏತರ ಮನ ಇದೇತರ ನಿರ್ವಾಣ? ಮಹಾಲಿಂಗ ತ್ರಿಪುರಾಂತಕನು ನಿನ್ನ ಸಂಸಾರಿಯೆಂಬನಲ್ಲದೆ, ಸಜ್ಜನೆಯೆಂದು ಕೈವಿಡಿವನಲ್ಲ ಕೇಳಾ ಮರುಳೆ. **16-1.** ಮತ್ತಂ:

ಆ ಕಿನ್ನರಯ್ಯಗಳು ಭಕ್ತಿಭಾವದಿಂದ ಸರ್ವಾಂಗಮಂ ಸ್ಪರುಷಿಸಿ ನೋಡಲು ಆ ಮಹಾದೇವಿ ಯಕ್ಕಗಳು ತಮ್ಮ ಅಂತರಂಗದ ಜ್ಞಾನಾಗ್ನಿಯೊಳ್ ಕಾಮನಂ ಸುಟ್ಟು ಭಸ್ಮಮಂ ಮಾಡಿ ತೋರಿದ ಪ್ರಸ್ತಾವದ ವಚನ:

ಅಂಗದ ಭಂಗವ ಲಿಂಗದ ಸುಖದಿಂದ ಗೆಲಿದೆ. ಮನದ ಭಂಗವ ಅರುಹಿನ ಮುಖದಿಂದ ಗೆಲಿದೆ. ಜೀವದ ಭಂಗವ ಶಿವಾನುಭಾವದಿಂ ಗೆಲಿದೆ. ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ. ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಂಗೆ ತೋರುವ ಕಾಮನ ಸುಟ್ಟು ಉರುಹಿದ ಭಸ್ಮವ ನೋಡಯ್ಯ. ಚೆನ್ನಮಲ್ಲಿಕಾರ್ಜುನ ಕಾಮನ ಕೊಂದು ಮನಸಿಜನ ತಲೆಯ ಬರೆಹವ ತೊಡೆದೆನು. **16-2.**

ಇಂತು ಕಾಮನ ಸುಟ್ಟು ಭಸ್ಮವಂ ಮಾಡಿದ ಎನಗೆ ಮರುಪೆ ನೀನೆ ಎನಗೆ ಒಡಹುಟ್ಟಿದನೆಂದು ನುಡಿದ ಪ್ರಸ್ತಾವದ ವಚನ:

[1]ಕಲ್ಯಾಣವೆಂಬುದನ್ನಾರಿಗೆ ಹೊಗಬಹುದು ?[1] ಹೊಗಬಾರದು, ಹೊಗಬಾರದು, ಅಸಾಧ್ಯವಯ್ಯ ! ಆಶೆಯಾಮಿಷವಳಿದಂಗಲ್ಲದೆ ಕಲ್ಯಾಣದತ್ತಲಡಿಯಿಡಬಾರದು. ಒಳ-ಹೊಱಗು ಶುದ್ಧವಾದಂಗಲ್ಲದೆ ಕಲ್ಯಾಣವ ಹೊಗಬಾರದು. ನೀ-ನಾನೆಂಬುದ ಹಱಿದಂಗಲ್ಲದೆ ಕಲ್ಯಾಣದ ಒಳಗು ತಿಳಿಯದು. ಚೆನ್ನಮಲ್ಲಿಕಾರ್ಜುನಂಗೊಲಿದು ಉಭಯಲಜ್ಜೆಯಳಿದೆನಾಗಿ ಕಲ್ಯಾಣವ ಕಂಡು ನಮೋ ನಮೋ ಎನುತ್ತಿದ್ದೆನು. ೬೧೭-೧೧೩೫-೧೦೦೪-16-4.

ಇಂತು ಕಲ್ಯಾಣಪಟ್ಟಣಮಂ ಕಂಡು ಒಳಹೊಕ್ಕು ಬರುತಿಪ್ಪಾಗಳು ಬಸವರಾಜ ದೇವರ ಮಹಾತ್ಮೆಯಂ ಕೊಡಾಡುತ್ತಿದ್ದ [2]ವಚನ[2] :

ಅಯ್ಯ ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯ. ಅಯ್ಯ, ನಿಮ್ಮ ಶರಣರಿದ್ದ ಪುರ ಕೈಲಾಸಪುರವಯ್ಯ, ಅಯ್ಯ ನಿಮ್ಮ ಶರಣರು ನಿಂದುದೇ ನಿಜನಿವಾಸವಯ್ಯ. ಚೆನ್ನಮಲ್ಲಿಕಾರ್ಜುನಯ್ಯ, ನಿಮ್ಮ ಶರಣ ಬಸವಣ್ಣನಿದ್ದ ಕ್ಷೇತ್ರವೇ ಅವಿಮುಕ್ತಿ ಕ್ಷೇತ್ರವಾಗಿ ಆನು ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನು. ೬೧೮-೧೧೩೬-೧೦೦೫-16-5.

ಇಂತು ಬಸವರಾಜದೇವರ ಮಹಾತ್ಮೆಯಂ ಕೊಂಡಾಡುತ್ತ ಬಂದು ಆ ಬಸವರಾಜ ದೇವರ ನಿಜನಿವಾಸಮಂ ಪೊಕ್ಕು, ಪ್ರಭುದೇವರು ಮುಖ್ಯವಾದ ಅಸಂಖ್ಯಾತಮಹಾ ಗಣಂಗಳೊಳು ಪರಮಾನಂದ ಸಂಗಿಯಾಗಿಪ್ಪ ಆ ಸಂಗನ ಬಸವಣ್ಣನ ಶ್ರೀಮೂರ್ತಿಯನು ಮಹಾದೇವಿಯಕ್ಕಗಳು ಕಂಡ ಪ್ರಸ್ತಾವದ ವಚನ :

ಅಱಿಸಿ ತೊಳಲಿದರಿಲ್ಲ, ಹರಸಿ ಬಳಲಿದರಿಲ್ಲ. ಬಯಸಿ ಹೊಕ್ಕರೆ ಇಲ್ಲ. ತಪಸ ಮಾಡಿ ದಡಿಲ್ಲ, ಅದು ತನ್ನ ಅಹ ಕಾಲಕ್ಕಲ್ಲದೆ ಸಾಧ್ಯವಾಗದು. ಶಿವನೊಲಿದಲ್ಲದೆ ಕೈಗೂಡದು. ಚೆನ್ನಮಲ್ಲಿಕಾರ್ಜುನನೆನಗೆ ಒಲಿದನಾಗಿ, ನಾನು ಸಂಗನ ಬಸವಣ್ಣನ ಶ್ರೀಪಾದವ ಕಂಡು ಬದುಕಿದೆನು. ೬೧೯-೧೧೩೭-೧೦೦೬-16-6. ಮತ್ತಂ :

ಅಯ್ಯ ನಿಮ್ಮ ಸಜ್ಜನ [3]ಶರಣರ ಸಜ್ಜನ ಸದ್ಭಾವರ[3] ಕಂಡೆನಾಗಿ, ಎನ್ನ ಕಂಗಳ ಪಟಲ ಹಱಿಯಿತ್ತಿಂದು. ಅಯ್ಯ ನಿಮ್ಮ ಸಜ್ಜನಸದ್ಭಾವರ ಶ್ರೀ ಚರಣಕ್ಕೆಱಗಿದೆನಾಗಿ ಎನ್ನ ಹಣೆಯ ಲಿಖಿತ [4]ತೊಡೆಯಿತ್ತು[4], ಚೆನ್ನಮಲ್ಲಿಕಾರ್ಜುಯ್ಯ, ನಿಮ್ಮ ಶರಣ ಸಂಗನ

---

ಎನ್ನಂತೆ ಪುಣ್ಯಗೆಯ್ದವರುಂಟೆ, ಎನ್ನಂತೆ ಭಾಗ್ಯಂಗೆಯ್ದವರುಂಟೆ ? ಕಿನ್ನರನಂತಪ್ಪ ಸೋದರ ನೆನಗೆ ಏಳೇಳು ಜನ್ಮದಲ್ಲಿ ಶಿವಭಕ್ತರೇ ಬಂಧುಗಳೆನಗೆ. ಚೆನ್ನಮಲ್ಲಿಕಾರ್ಜುನನಂತಪ್ಪ ಗಂಡ ನೋಡಾ ಎನಗೆ. 16-3.

ಈ ಹಿಂಗೆಂದು ಮಹಾದೇವಿಯಕ್ಕಗಳು ಕಿನ್ನರಯ್ಯಗಳಂ ಬೀಳ್ಕೊಂಡು ಕಲ್ಯಾಣದತ್ತಲಭಿ ಮುಖವಾಗಿ ನಡೆತಂದು ತತ್ಪುರಮಂ ಕಂಡ ಪ್ರಸ್ತಾವದ ವಚನ ; (ಉ)

[1] (ಶಿ) ಕಲ್ಯಾಣವೆಂಬುದನಗರಿಗೆ ಹೊಗಬಾರದು (ಹ) ಕಲ್ಯಾಣವೆಂಬುದನಾರಿಗೆಯೂ ಹೊಗ ಬಾರದು (ಗು) ಕಲ್ಯಾಣವೆಂಬುದನಾರಿಗೆ ಹೊಗಬಾರದು (ಗೂ). [2] (ಶಿ) ಪ್ರಸ್ತಾವದ ವಚನ (ಹ ಗು ಗೂ) [3] (ಶಿ) ಸದಾಚಾರಸಂಪನ್ನರ (ಹ) ಸದಾಚಾರವ (ಗು) (ಗೂ). [4] (ಶಿ) (ಗು) ತೊಡೆಯಿ ತಿಂದು (ಹ) (ಗೂ).

ಬಸವಣ್ಣನ ಶ್ರೀಪಾದವ [1]ಕಂಡು[1] ನಮೋ ನಮೋ ಎನುತಿದ್ದೆನು. [೬೨೦]-೧೧೨೮-೧೦೦೭-16-7.

ಇಂತು ಮಹಾದೇವಿಯಕ್ಕಗಳು ಬಸವರಾಜದೇವರ [2]ಶ್ರೀ ಪಾದದರ್ಶನವಾಗಿ[2] ಸಾಷ್ಟಾಂಗದಂಡಪ್ರಣಾಮಮಂ ಮಾಡಿ [3]ಕೈಮುಗಿದು ನಿಂದಿರಲು, ಆ ಪ್ರಸ್ತಾವದೊಳು ಬಸವರಾಜದೇವರು ಮಹಾದೇವಿಯಕ್ಕನ ಕಂಡು [4]ಪ್ರಭುದೇವರ[4] ತೋಱಿ ನುಡಿದ ಪ್ರಸ್ತಾವದ ವಚನ :

ಕಾಯದ ಲಜ್ಜೆಯ ಕಲ್ಪಿತವ ಕಳೆದು, ಜೀವದ ಲಜ್ಜೆಯ ಮೋಹವನಳಿದು, ಮನದ ಲಜ್ಜೆಯ ನೆನಹ ಸುಟ್ಟು, ಭಾವದ ಕೂಟ [5]ಬತ್ತಲೆಯೆಂದಱಿದು[5], ತವಕ[6]ದ[6] ಸ್ನೇಹ ವ್ಯವಹಾರಕ್ಕೆ ಹುಗದು, ಕೂಡಲಸಂಗಮದೇವಯ್ಯ, ಎನ್ನ ಹೆತ್ತ ತಾಯಿ ಮಹಾದೇವಿಯಕ್ಕನ ನಿಲವ [7]ನೋಡಾ[7] ಪ್ರಭುವೆ. ೬೨೦-೧೧೨೯-೧೦೦೮-16-8. ಮತ್ತಂ :

[8]ರೂಪಿಲ್ಲದವರಿಂಗೆ[8] ಒಲಿದವರಿಗೆ ತನುವಿನ ಹಂಗುಂಟೆ? [9]ಮನವಿಲ್ಲದವರಿಗೆ[9] ಮೆಚ್ಚಿದವರಿಂಗೆ ಅಭಿಮಾನದ ಹಂಗುಂಟೆ? ದಿಗಂಬರಂಗೆ ಒಲಿದವರಿಗೆ ಕೌಪೀನದ ಹಂಗುಂಟೆ? ಕೂಡಲಸಂಗಮದೇವಯ್ಯ, ಮಹಾದೇವಿಯಕ್ಕನೆಂಬ [10]ಭಕ್ತಿಗೆ[10] ಆವ ಹೊರೆಯೂ ಇಲ್ಲ ನೋಡಾ ಪ್ರಭುವೆ. ೬೨೧-೧೧೩೦-೧೦೦೯-16-9.

[11]ಇಂತು[11] ಬಸವರಾಜದೇವರು ಪ್ರಭುದೇವರಿಗೆ ಮಹಾದೇವಿಯಕ್ಕನ ನಿಲವನೊರೆದೊರೆದು ಹೇಳಿ ತೋರಲು, ಆ ಪ್ರಭುದೇವರು ಆ ಮಹಾದೇವಿಯಕ್ಕನ ಅನುಭಾವಸುಖಮುಖದಿಂ [12]ನುಡಿಯಿಸುವ[12] ಪ್ರಸ್ತಾವದ ವಚನ :

ಉದಮದದ ಯೌವನವನೊಳಕೊಂಡ ಸತಿ ನೀನು ಇತ್ತಲೇಕೆ ಬಂದೆಯವ್ವ. ಸತಿ ಎಂದರೆ ಮುನಿವರು ನಮ್ಮ ಶರಣರು. ನಿನ್ನ ಪತಿಯ ಕುಱುಹ ಹೇಳಿದರೆ ಬಂದು ಕುಳ್ಳಿರು. ಅಲ್ಲದಡೆ ತೊಲಗು ತಾಯೆ. ನಮ್ಮ ಗೊಗೇಶ್ವರನ ಶರಣರಲ್ಲಿ ಸಂಗಸು[13]ಖ[13]ಸನ್ನಿಹಿತವ ಬಯಸುವರೆ ನಿನ್ನ ಪತಿ ಯಾರೆಂಬುದ ಹೇಳಾ ಎಲೆಯವ್ವ. ೬೨೨-೧೧೩೧-೧೦೧೦-16-10.*

---

[1] (ಶಿ) ಕಂಡು ಮಿಗೆಮಿಗೆ (ಹಗುಗೂ). [2] (ಶಿ) ಶ್ರೀಪಾದಮಂ ದರುಶನವಾಗಿ (ಹ) ಶ್ರೀಪಾದಮಂದರ್ಶನವಾಗಿ (ಗು) [2–3] ಶ್ರೀಪಾದದರ್ಶನಮಾಗಿನಮಸ್ಕರಿಸಿ (ಉ). [4] (ಶಿ) ಪ್ರಭುದೇವರಿಗೆ (ಹಗುಉ) [5] (ಹಗುಉ) ಬತ್ತಲೆಯೆಂದಱಿಯದು (ಶಿ). [6] (ಶಿಹಗು) × (ಉ). [7] (ಶಿಹ) ನೋಡಯ್ಯ (ಗುಉ). [8] (ಶಿಹ) ರೂಹಿಲ್ಲದವಂಗೆ (ಗು) ರೂಹಿಲ್ಲದಂಗೆ (ಉ). [9] (ಶಿಹ) (ಉ) ಮಾನವಿಲ್ಲದವರಿಗೆ (ಗು). [10] (ಶಿಹ) ಭಕ್ತೆಗೆ (ಗುಉ). [11] (ಶಿ) ಹಿಂಗೆಂದು (ಹ) ಹೀಗೆಂದು (ಗು) ಇಹಿಂಗೆಂದು (ಉ). [12] (ಶಿಹಗು) ನುಡಿವ (ಉ). [13] (ಶಿಹಗು) × (ಉ). * ಇದಾದಮೇಲೆ ಹ-ಗು–ಉಗಳಲ್ಲಿ ಈ ಮುಂದಿನ ಅಧಿಕವಚನವಿದೆ :

ಕಾಯುಸತಿಯೆಂದು ಹೇಸಿ ಕಳೆದೆ. ವಾಯದ ಮನ ಮಾಯೆಯೆಂದು ಹೇಸಿಬಿಟ್ಟೆ. ^A^ವಾಯುದ^A^ ಸತಿಯೆಂಬ ಸಂದೇಹವೆ ನಮಗೆ. ಸತಿಯರ ಗೋಷ್ಠಿ ವಿಷ ಕಾಣವ್ವ. ಗೋಗೇಶ್ವರಲಿಂಗದಲ್ಲಿ ನಿನ್ನ ಪತಿಯ ಕುರುಹ ಹೇಳಾ ಎಲೆಯವ್ವ ೧೧೩೨–೧೦೧೧–16–11.

^A^ವಾಯು (ಗು).

ಹೀಗೆಂದು ಪ್ರಭುದೇವರು ಮಹಾದೇವಿಯಕ್ಕಗಳ ಬೆಸಗೊಳಲು, ಇದಕ್ಕೆ [1]ಆ ಮಹಾದೇವಿಯಕ್ಕಗಳು ತನ್ನ ಪತಿಯ ಕುಱುಹಂ ಬಿನ್ನಹಂ ಮಾಡುವ[1] ಪ್ರಸ್ತಾವದ ವಚನ :*

ಗುರುವೆ ತೆತ್ತಿಗನಾದ, ಲಿಂಗವೆ ಮದವಣಿಗನಾದ. ನಾನೆ ಮದವಳಿಗೆಯಾದೆನು. ಈ ಭುವನವೆಲ್ಲಱಿಯಲು ಅಸಂಖ್ಯಾತರೆನಗೆ ತಾಯಿತಂದೆಗಳು. ಕೊಟ್ಟರು ಪ್ರಭುವಿನ ಮನೆಗೆ ಸಾದೃಶ್ಯವಪ್ಪ ವರನ ನೋಡಿ. ಇದು ಕಾರಣ, ಚೆನ್ನಮಲ್ಲಿಕಾರ್ಜುನ [2]ಗಂಡ ನೆನಗೆ ಮಿಕ್ಕಿನ ಲೋಕದವರೆನಗೆ[2] ಸಂಭಂಧವಿಲ್ಲವಯ್ಯ ಪ್ರಭುವೆ. ೬೨೩–೧೧೩೩–೧೦೧೪–16–14. ಮತ್ತಂ :

ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ [3]ಚೆಲುವಂಗೆ;[3] ಭವವಿಲ್ಲದ, ಭಯವಿಲ್ಲದ, ನಿರ್ಭಯ ಚೆಲುವಂಗೆ [4]ನಾನೊಲಿದೆನಯ್ಯ. ಚೆನ್ನಮಲ್ಲಿಕಾರ್ಜುನ[4] ಗಂಡನೆನಗೆ ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ, ೬೨೪–೧೧೩೪–೧೦೧೫–16–23*

ᴀಹೀಂಗೆಂದು ಮಹಾದೇವಿಯಕ್ಕಗಳು ಬಿನ್ನೈಸಲು, ಇದಕ್ಕೆ [5]ಅಲ್ಲಮಪ್ರಭುದೇವರು[5] ಆ ಮಹಾದೇವಿಯಕ್ಕಗಳ ಉತ್ತರವ[4] ಖಂಡಿಸಿ ನುಡಿವ ಪ್ರಸ್ತಾವದ ವಚನ :ᴀ

---

[1] (ಶಿ) (ಉ) ಅಕ್ಕಗಳು ತನ್ನ ಪತಿಯ ಕುರುಹ ಹೇಳುವ (ಹ) ಮಹಾದೇವಿಯಕ್ಕಗಳು ತನ್ನ ಪತಿಯ ಕುಱುಹ ಬಿನ್ನೈಸುವ (ಗು).

* ಇದಾದ ಮೇಲೆ ಗು–ಉ ಪ್ರತಿಗಳಲ್ಲಿ ಈ ಮುಂದಣ ವಚನಗಳಿವೆ:

(1) ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆ ನೋಡಾ! ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರಕೆ ಕಳುಹಿದರೆಮ್ಮವರು. ಭಸ್ಮವನೆ ಹೂಸಿ, ಕಂಕಣವನೆ ಕಟ್ಟಿ, ಚೆನ್ನಮಲ್ಲಿಕಾರ್ಜುನ ತನಗೆ ನಾನಾಗಬೇಕೆಂದು. ೧೦೧೨–16–12. ಮತ್ತಂ :

(2) ಪಚ್ಚೆಯ ನೆಲಕಟ್ಟು, ಕನಕದ ತೋರಣ, ವಜ್ರದ ಕಂಭ, ಪವಳದ ಚಪ್ಪರವಿಕ್ಕಿ ಮದುವೆಯ ಮಾಡಿದರು. ನಮ್ಮವರೆನ್ನ ಮದುವೆಯ ಮಾಡಿದರು. ಕಂಕಣ ಕೈಧಾರೆ ಸ್ಥಿರಸೇಸೆಯ ನಿಕ್ಕಿ ಚೆನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯ ಮಾಡಿದರು. ೧೦೧೩–16–13.

[2] (ಶಿಉ) ನೆ ಗಂಡನೆನಗೆ ಮಿಕ್ಕಿನ.ಲೋಕದ ಗಂಡರೆನಗೆ (ಹ) ನೆನಗೆ ಗಂಡ ಮಿಕ್ಕಿನ ಲೋಕದ ಗಂಡರೆನಗೆ (ಗು). [3] (ಶಿಗು) ಚೆಲುವಂಗೆ ನಾನೊಲಿದೆ (ಹ). [4] (ಶಿ) (ಗು) ನಾನೊಲಿದೆ ನೋಡಯ್ಯ ಚೆನ್ನಮಲ್ಲಿಕಾರ್ಜುನನೆ (ಹ). * ಈ ವಚನ "ಉ" ನಲ್ಲಿ ಈ ಎಡೆ ಯಲ್ಲಿಲ್ಲ. ಸ್ಥಳಾಂತರವಾಗಿದೆ ; ನೋಡಿ : ಗೂ. 16–23. [5] (ಶಿ) ಅಲ್ಲಮಾ ಪ್ರಭುದೇವರು (ಹ) ಪ್ರಭುದೇವರು ಮಹಾದೇವಿಯಕ್ಕಗಳ ಉತ್ತರಮಂ (ಗು) ᴀ ಈ ಹಿಂಗೆಂದು ಮಹಾದೇವಿ ಯಕ್ಕಗಳು ತಮ್ಮ ಪತಿಯ ಕುಱುಹ ಹೇಳಲು, ಆದರೆ ನೀನು ಕೌಶಿಕನೆಂಬ ಭವಿಯ ಮೇಲೆ ಲಿಂಗ ಧಾರಣವಾಗದ ತಪ್ಪ ಹೊರಿಸಿ ನಿರ್ವಾಣವಾಗಿ ಬಹಲ್ಲಿ, ಕೇಶ ಮಱೆಯಾದರೆ ಅಭಿಮಾನ ಹರಿಯ ದೆಂದು ನಿರೂಪಿಸಿದ ಪ್ರಸ್ತಾವದ ವಚನ :

ತಪ್ಪ ಹೇರಿಸಿ ಹೊಱಸಿಹೆನೆಂಬುದು ಸತ್ಯವೆ? ತನು ಸೀರೆಯನಳಿದು ನಿರ್ವಾಣವಾದಲ್ಲಿ ಮನದ ಭ್ರಾಂತು ನಿಶ್ಚಯವಾಗದು. ಕೇಶವೆಂಬ ಸೀರೆ ಅಂಗಕ್ಕೆ ಮರೆಯಾಯಿತ್ತು. ಅಪಮಾನವೆಂತು ಹರಿ ಯಿತ್ತು. ಅದು ಗೊಗೇಶ್ವರ ಲಿಂಗಕ್ಕೆ ಸಲ್ಲದ ವೇಷ. 16–15.

ರೂಪಿಂಗೆ ಕೇಡುಂಟು, ನಿರೂಪಿಂಗೆ ಕೇಡಿಲ್ಲ. ರೂಪು ನಿರೂಪವ ಒಡಗೂಡುವ ಪರಿಯೆಂತು ಹೇಳಾ ? [1]ಸಂಬಂಧವಸಂಬಂಧ[1]ವಾಗಿ, ದೇಹ ಇಂದ್ರಿಯವೆಂಬ ಮಾತಿರಲು ಗೊಗೇಶ್ವರಲಿಂಗವ ಮುಟ್ಟಬಾರದು ಕೇಳವ್ವ ! ೬೨೫–೧೧೩೫–೧೦೧೬–16–24.

ಹೀಂಗೆಂದು ಪ್ರಭುದೇವರು ನಿರೂಪಿಸಲು, ಮಹಾದೇವಿಯಕ್ಕಗಳು ಬಿನ್ನೈಸಿದ ಪ್ರಸ್ತಾವದ ವಚನ :

ಇದಕ್ಕೆ ಮಹಾದೇವಿಯಕ್ಕಗಳ ಬಿನ್ನಹ :

ಕಾಯ ಕಜ್ಜಿನೆ ಕಂದಿದರೇನಯ್ಯ, ಕಾಯ ಮಿರ್‍ರನೆ ಮಿಂಚಿದರೇನಯ್ಯ, ಅಂತರಂಗ ಶುದ್ಧವಾದ ಬಳಿಕ ? ಮಲ್ಲಿಕಾರ್ಜುನ ಲಿಂಗವು ಒಲಿದ ಕಾಯವು ಹೇಂಗಿದ್ದರೇನಯ್ಯ. 16–16.

ಇದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ :

ದೇವನೊಲಿದ ನೀನೊಲಿದೆನೆಂಬುದು ಅದಾವುದಕ್ಕ ? ಭಾವಶುದ್ಧವಾದಲ್ಲಿ ಸೀರೆಯನಳಿದು ಕೂದಲ ಮರೆಸಲೇತಕ್ಕೆ ? ಅಂತರಂಗದ ನಾಚಿಕೆ ಬಾಹ್ಯದಲ್ಲಿ ತೋರಿತ್ತು. ಅದು ಗೊಗೇಶ್ವರ ಲಿಂಗಕ್ಕೆ ಒಲವರವಲ್ಲ. 16–17.

ಇದಕ್ಕೆ ಮಹಾದೇವಿಯಕ್ಕಗಳ ಬಿನ್ನಹ :

ಫಳದೊಳಗೆ ಸತ್ವವಾಗಿಯಲ್ಲದೆ ಹೊಱಗಳ ಸಿಪ್ಪೆ ಒಪ್ಪಗೆಡದು. ಕಾಮನ ಮುದ್ರೆಯ ಕಂಡು ನಿಮಗೆ ನೊವಾದೀತೆಂದು ಆ ಭಾವದಿಂದ ಮುಚ್ಚಿದೆ. ಇದಕ್ಕೆ ನೋವೇಕೆ ? ಕಾಡದಿರಣ್ಣ ಚೆನ್ನಮಲ್ಲಿಕಾರ್ಜುನದೇವರ ದೇವನೊಳಗಾದವಳ. 16–18.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರದ ವಚನ :

ನೀ ದೇವರೊಳಗೋ ದೇವರು ನಿನ್ನೊಳಗೋ ಎಂಬ ಠಾವನರಿಯೆ. ಸಿಪ್ಪೆ ಒಪ್ಪಗೆಟ್ಟಾಗ ಹಣ್ಣಿನ ರಸ ಕೊಳೆಯಿತ್ತು. ಅದು ಗೊಗೇಶ್ವರನೊಪ್ಪದ ಮಾತು. 16–18.

ಇದಕ್ಕೆ ಮಹಾದೇವಿಯಕ್ಕಗಳ ಬಿನ್ನಹ :

ಗುಣದೋಷವ ಸಂಪಾದನೆಯ ಮಾಡುವನ್ನಕ್ಕರ ಕಾಮದ ಒಡಲು, ಕ್ರೋಧದ ಗೊತ್ತು, ಲೋಭದ ಇಕ್ಕೆ, ಮೋಹದ ಮಂದಿರ. ಆ ಭಾವವರತಲ್ಲದೆ ಚೆನ್ನಮಲ್ಲಿಕಾರ್ಜುನನ ಕೇಳುವುದಕ್ಕಿಂಬಿಲ್ಲ ಎಲೆ ಅಣ್ಣಗಳಿರಾ. 16–20.

ಇದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ :

ಕಾಮದಿಂದ ಖಂಡ, ಕ್ರೋಧದಿಂದ ಅಸ್ತಿ, ಲೋಭದಿಂದ ಸಕಲ ವಿಷಯಂಗಳು. ಮೋಹದಿಂದ ನೋಡಿಹೆನೆಂಬುದೆಲ್ಲವೂ ಕಾಮನ ಬಲೆಯೊಳಗು. ಕಾಮನ ಗೆದ್ದ ಠಾವಾವುದು ಹೇಳಾ ಗೋಗೇಶ್ವರ ? 16–21.

ಇದಕ್ಕೆ ಮಹಾದೇವಿಯಕ್ಕಗಳ ಬಿನ್ನಹ :

ಕೆಂಡದ ಶವದಂತೆ, ಸೂತ್ರ ತಪ್ಪಿದ ಬೊಂಬೆಯಂತೆ, ಜಲವರತ ತಟಾಕದಂತೆ, ಬೆಂದ ನುಲಿಯಂತೆ—ಮತ್ತೆ ಹಿಂದಣಂಗ ಉಂಟೆ, ಅಣ್ಣ, ಚೆನ್ನಮಲ್ಲಿಕಾರ್ಜುನನಂಗವೆ ಆಶ್ರಯವಾದವಳಿಗೆ ? 16–22.

ಇಂತು ಮಹಾದೇವಿಯಕ್ಕಗಳು ನಾನು ನಿಃಕಾಮಿಯಾಗಿ ನಿರಾಕಾರ ಬ್ರಹ್ಮವ ಕೈವಿಡಿದೆನೆಂದು ನಿರೂಪಿಸುವ ಪ್ರಸ್ತಾವದ ವಚನ : (ಉ).

[1] (ಶಿ)ಸಂಬಂಧವಸಂಬಂಧಸಂಬಂಧವಾಗಿದೆ (ಹ). ಅಸಂಬಂಧ ಸಂಬಂಧವಾಗಿದೆ (ಗು ಗೂ).

ಹಾವಿನ ಹಲ್ಲ ಕಳೆದು ಹಾವನಾಡಿಸ[1]ಬಲ್ಲಡೆ,[1] ಹಾವಿನ ಸಂಗವೆ ಲೇಸು ಕಂಡಯ್ಯ ! ಕಾಯದ ಸಂಗವ ವಿವರಿಸ ಬಲ್ಲಡೆ, ಕಾಯದ ಸಂಗವೆ ಲೇಸು ಕಂಡಯ್ಯ ! ತಾಯಿ ರಕ್ಕಸಿಯಾದಂತೆ ಕಾಯ[2]ವಿಕಾರವು[2], ಚೆನ್ನಮಲ್ಲಿಕಾರ್ಜುನಯ್ಯ ನೀನೊಲಿದವರು ಕಾಯಗೊಂಡಿದ್ದರೆನ[3]ಬೇಡ[3]. ೬೨೬-೧೧೩೬-೧೦೧೭-16-25.*

ಈ ಉತ್ತರಕ್ಕೆ [4]ಪ್ರಭುದೇವರು ನಿರೂಪಿಸಿದ[4] ವಚನ :

ತನುವಿನ ಗುಣವ ವಿವರಿಸಿಹೆನೆಂದರೆ ಮನ ಶುದ್ಧವಾಗಬೇಕು. ಮನದ ಗುಣವ ವಿವರಿಸಿಹೆನೆಂದರೆ ಇಂದ್ರಿಯಂಗಳು ಶುದ್ಧವಾಗಬೇಕು. ತನು ಮನ ಇಂದ್ರಿಯಂಗಳು ಶುದ್ಧ ಸುಯಿಧಾನವಾ[5]ಗಿ[5] ಲಿಂಗಮುಖಕ್ಕೆ ವೇದ್ಯವಾದಲ್ಲದೆ [6]ಗೊಗೇಶ್ವರನ ಬೆರಸ ಬಾರದು ಕೇಳಾ.[6] [೬೨೬-A]—[೧೧೩೯]—೧೦೧೮-16-26.

ಈ ಉತ್ತರಕ್ಕೆ ಮಹಾದೇವಿಯಕ್ಕಗಳು ಕೊಟ್ಟ ಪ್ರತ್ಯುತ್ತರ :

ತನು ಶುದ್ಧವಾಯಿತ್ತು [7]ಭಕ್ತ[7]ರೊಕ್ಕುದ ಕೊಂಡೆನ್ನ[8]. ಮನ ಶುದ್ಧವಾಯಿತ್ತು ಅಸಂಖ್ಯಾತರನೆನೆದೆನ್ನ. ಕಂಗಳು [9]ಶುದ್ಧವಾಯಿತ್ತು ಸಕಲ ಶಿವಗಣಂಗಳ[9]ನೋಡಿಯೆನ್ನ.

---

[1] (ಶಿಗು ಗೂ) ಬಲ್ಲಗೆ (ಹ). [2] (ಶಿಗುಗೂ) ವಿಕಾರವೂ ನೋಡಯ್ಯ (ಹ). [3] (ಶಿಗುಗೂ) ಬೇಡವಯ್ಯ ಪ್ರಭುವೆ (ಹ).

* ಇಲ್ಲಿಂದ ಮುಂದಕ್ಕೆ "ಹ" ದಲ್ಲಿ ಎರಡು ವಚನಗಳು ಅಧಿಕವಾಗಿವೆ. ಅವು :

(1) ಅಂಗವ Aಲಿಂಗಮುಖದಲ್ಲಿA ಅರ್ಪಿಸಿ ಅಂಗ ಅನಂಗವಾಯಿತು. ಮನವ ಅರಿವಿಂಗರ್ಪಿಸಿ ಮನ ಲಯವಾಯಿತು. ಭಾವವ ತೃಪ್ತಿಗರ್ಪಿಸಿ ಭಾವ ಬಯಲಾಯಿತು.ಅಂಗ–ಮನ–ಭಾವವಳಿದ ಕಾರಣಕಾಯ ಅಕಾಯವಾಯಿತು. ಎನ್ನ ಕಾಯದ ಸುಖಭೋಗವ ಲಿಂಗವೆ ಭೋಗಿಸುವುದಾಗಿ ಶರಣ–ಸತಿ ಲಿಂಗ–ಪತಿಯಾದೆನು. ಇದು ಕಾರಣ ಚೆನ್ನಮಲ್ಲಿಕಾರ್ಜುನನೆಂಬ ಗಂಡನ ಒಳಹೊಕ್ಕು ಬೆರಸಿದೆನು. ೧೧೩೭–16–33.

(2) ಘಟ್ಟದುಪ್ಪ ತಿಳಿದುಪ್ಪಕ್ಕೆ ಹಂಗುಂಟೆಯಯ್ಯ ? ದೀಪಕ್ಕೆ ದೀಪ್ತಿಗೆ ಭೇದವುಂಟೆಯಯ್ಯ ? ಅಂಗಕ್ಕೆ ಆತ್ಮಂಗೆ ಭಿನ್ನವುಂಟೆಯಯ್ಯ ? ಎನ್ನ ಅಂಗವನು ಶ್ರೀಗುರು ಮಂತ್ರವ ಮಾಡಿ ತೋರಿದನಾಗಿ Bಸಾವಯಕ್ಕೂ ನಿರವಯಕ್ಕೂB ಭಿನ್ನವಿಲ್ಲವಯ್ಯ.ಚೆನ್ನ ಮಲ್ಲಿಕಾರ್ಜುನದೇವನ ಬೆರಸಿ ಮತಿಗೆಟ್ಟವಳ ಏತಕ್ಕೆ ನುಡಿಸುವೆಯಯ್ಯ ಪ್ರಭುವೆ? ೧೧೩೮–೧೦೨೪–16–32.

Note : ಗುಮ್ಮಳಾಪುರದ ಸಿದ್ಧಲಿಂಗನು ಮೇಲಣ ಎರಡು ವಚನಗಳಲ್ಲಿ ಎರಡನೆಯದನ್ನೂ, ಗೂಳೂರು ಸಿದ್ಧವೀರನು ಎರಡನ್ನೂ ಸ್ಥಳಾಂತರಮಾಡಿ ಬಳಸಿಕೊಂಡಿರುವರು.

A (ಹ) ಲಿಂಗಮುಖದಿಂದರ್ಪಿಸಿ (ಉ). B (ಹ) ಸಾವಯನಿರವಯಕ್ಕೆ (ಗು) ಸಾವಯಕ್ಕೆನಿರವಯಕ್ಕೆ (ಉ).

[4] (ಶಿ) ಪ್ರಭುದೇವರು ನಿರೂಪಿಸಿದ ಪ್ರಸ್ತಾವದ (ಹ) ಪ್ರಭುದೇವರ (ಗು) (ಗೂ). [5] (ಶಿಗು ಗೂ) ಗೆ (ಶಿ). [6] (ಶಿ) ಗೋಗೇಶ್ವರಲಿಂಗವ ಬೆರಸಬಾರದು ಕೇಳವ್ವ (ಹ) ಗೊಗೇಶ್ವರನ ಬೆರಸ ಬಾರದು ಕೇಳಾ ತಾಯೆ (ಗು) ಗೋಗೇಶ್ವರನ ಬೆಸಗೊಳಬಾರದು ಕೇಳಾ ತಾಯೆ (ಉ). [7] (ಶಿ) ಶಿವಭಕ್ತ (ಹಗುಉ) 7–8 (ಶಿಗುಉ) ಶಿವಭಕ್ತರಿಗೆ ಶರಣುವೊಕ್ಕೆನಾಗಿ (ಹ). [9] (ಶಿ) ಶುದ್ಧವಾದವು ಸಕಲಗಣಂಗಳ (ಹ) ಶುದ್ಧವಾಯಿತ್ತು ಸಕಲ ಪುರಾತನರ (ಗುಉ).

ಶ್ರೋತ್ರ[1]ಶುದ್ಧವಾಯಿತ್ತು ಅವರ ಕೀರ್ತಿಯ ಕೇಳಿಯೆನ್ನ. ಭಾವನೆಯೆನಗಿದು ಜೀವನವು[1] ಕೇಳಾ ಲಿಂಗ ತಂದೆ. ನೆಟ್ಟನೆ ನಿಮ್ಮುವ ಪೂಜಿಸಿ ಭವಗೆಟ್ಟನು ಕಾಣಾ ಚೆನ್ನಮಲ್ಲಿಕಾರ್ಜುನ. ೬೨೭–೧೧೪೦–೧೦೧೯–16–27.*

---

[1] ಶುದ್ಧವಾದವುಸಕಲಪುರಾತರ ಕೀರ್ತಿಯ ಕೇಳಿ ಎನ್ನ. ಘ್ರಾಣ ಶುದ್ಧವಾಯಿತ್ತೆನ್ನ ನಿಮ್ಮ ಪಾದಾರ್ಪಿತ ಪರಿಮಳವ.ವಾಸಿಸಿಸಿಯೆನ್ನ. ಜಿಹ್ವೆ ಶುದ್ಧವಾಯಿತು ನಿಮ್ಮ ಶರಣರೊಕ್ಕುದಕೊಂಡೆನಾಗಿ. ಭಾವನೆಯೆನಗಿದು ಜೀವನವು. (ಹ) ಶುದ್ಧವಾಯಿತ್ತು ಅವರ ಕೀರ್ತಿಯ ಕೇಳಿಯೆನ್ನ ಭಾವನೆಯೆನಗಿದು (ಗು) (ಉ) ಶುದ್ಧವಾಯಿತ್ತು ಅವರ ಕೀರ್ತಿಯ ಕೇಳಿ ಎನ್ನ ಭಾವನೆಗಿದು ಜೀವನವು (ಶಿ).

* ಇಲ್ಲಿಂದ ಮುಂದಕ್ಕೆ ಹಲಗೆದೇವರಲ್ಲಿ ಈ ಮುಂದಿನ ಭಾಗ ಅಧಿಕವಾಗಿದೆ:

ಮತ್ತಂ, ಅಕ್ಕಂಗಳು–"ಬಸವೇಶ್ವರ ದೇವರು ತಮ್ಮ ಪ್ರಾಣಲಿಂಗವಾದ ಸಂಗಮನಾಥಂಗೆ ಬೇಕೆಂದು ತಾಲಿ ಬಂದಿಯ ಕಟ್ಟಿ ಎಲ್ಲಾ ಗಣಂಗಳು ಕೂಡಿ ಎನ್ನ ಮದುವೆಯ ಮಾಡದರೆಂ"ದು ಬಿನ್ನೈಸುವ ಪ್ರಸ್ತಾವದ ವಚನ:

ರಾಗ: ಕಾಂಬೋಧಿ

ಎಮ್ಮವರೆನ್ನ ಮದುವೆಯ ಮಾಡಿದರು
ಲಿಂಗಕ್ಕೆನ್ನ ಮದುವೆಯ ಮಾಡಿದರು ‖ ಪಲ್ಲವ ‖
ಪಚ್ಚೆಯ ನೆಲಗಟ್ಟು ಕನಕದ ತೋರಣ
ವಜ್ರದ ಕಂಭ ಮಾಣಿಕದ ಚಪ್ಪರವಿಕ್ಕಿ ಮದುವೆ ‖ ೧ ‖
ಬಸವಬಂದಿಗಟ್ಟಿ ಸಂಗಯ್ಯ ಮದುವಣಿಗ
ಅನು ಮುತ್ತೈದೆ ಶರಣರು ದಿಬ್ಬಣಿಗರು ‖ ೨ ‖
ಕಂಕಣ ಕೈಧಾರೆಗಟ್ಟಿ ಸ್ಥಿರಸೇಸೆಯನಿಟ್ಟು
ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯ ಮಾಡಿದರು ‖ ೩ ‖

ಪದಸಹವಚನ ೧೧೪೩.

Note: ಮೇಲಣ ಹಾಡಿನೊಡನೆ 167ನೇ ಪುಟದ ಅಡಿಟಪ್ಪಣಿಯ ೧೦೧೨–16–12 ಮತ್ತು ೧೦೧೩–16–13 ನೇ ವಚನಗಳನ್ನು ಹೋಲಿಸಿ.

* ಇಲ್ಲಿಂದ ಮುಂದಕ್ಕೆ ಗುಮ್ಮಳಾಪುರದ ಮತ್ತು ಗೂಳೂರಿನ ಶೂನ್ಯಸಂಪಾದನೆಗಳಲ್ಲಿ ಈ ಮುಂದಿನ ಭಾಗ ಅಧಿಕವಾಗಿದೆ: ಹಲಗೆಯಲ್ಲಿ ಈ ಭಾಗ ಸ್ಥಳಾಂತರವಾಗಿದೆ:

ಮತ್ತಂ: ಬಸವಣ್ಣನ ಪಾದವ ಕಂಡೆನಾಗಿ ಎನ್ನಂಗ ನಾಸ್ತಿಯಾಯಿತ್ತು. ಚೆನ್ನಬಸವಣ್ಣನ ಪಾದವ ಕಂಡೆನಾಗಿ ಎನ್ನ ಪ್ರಾಣ ᴀಬಯಲಾಯಿತ್ತುᴀ. ಪ್ರಭುವೇ, ನಿಮ್ಮ ಶ್ರೀಚರಣಕ್ಕೆ ಶರಣೆಂದೆನಾಗಿ ಎನ್ನರಿವು ಸ್ವಯವಾಯಿತ್ತು. ಚೆನ್ನಮಲ್ಲಿಕಾರ್ಜುನದೇವಯ್ಯ, ನಿಮ್ಮ ಶರಣರ ಕರುಣವ ಪಡೆದೆನಾಗಿ ಎನಗೆ ʙಮತ್ತಾವುದಿಲ್ಲʙವಯ್ಯ ಪ್ರಭುವೆ. ೧೦೨೦–16–28.

A (ಗು) ನಾಸ್ತಿಯಾಯಿತು (ಹ). B (ಗು) ಮತ್ತೇನೂವಿಲ್ಲ (ಹ).

[1]ಹೀಂಗೆಂದು ಮಹಾದೇವಿಯಕ್ಕಗಳು ಬಿನ್ನೈಸಲು[1] ಪ್ರಭುದೇವರು ಕೊಟ್ಟ ಪ್ರತ್ಯುತ್ತರ:

ಕಾಯ ಶುದ್ಧವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು. ಜೀವ ಶುದ್ಧವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು. ಭಾವ ಶುದ್ಧವಾಯಿತೆಂದರೆ ಲಿಂಗ ನೆಲೆಗೊಳ್ಳದು. ಗೊಗೇಶ್ವರ ಲಿಗದಲ್ಲಿ ಶುದ್ಧ ಸುಯಿಧಾನಿ[2]ಯಾದೆನೆಂದರೆ[2] ನಿಜವು ಸಾಧ್ಯವಾಗದು ಕೇಳನ್ನ. ೬೨೮–೧೧೪೪–೧೦೨೧–16–29.

ಇದಕ್ಕೆ ಅಕ್ಕಗಳ [3]ಪ್ರತ್ಯುತ್ತರ[3]:

ಕಾಯದೊಳಗೆ ಅಕಾಯವಾಯಿತ್ತು, ಜೀವದೊಳಗೆ ನಿರ್ಜೀವವಾಯಿತ್ತು. [4][ಭಾವದೊಳಗೆ ನಿರ್ಭಾವವಾಯಿತ್ತು][4] ಎನ್ನ ಮನದೊಳಗೆ ಘನ ನೆನಹಾಯಿತ್ತು. ಎನ್ನ ತಲೆ-ಮೊಲೆಗಳ ನೋಡಿ [5]ಸಲಹಿದರಾಗಿ[5] ಚೆನ್ನಮಲ್ಲಿಕಾರ್ಜುನನ [6]ಧರ್ಮದವಳು ನಾನು[6] ೬೨೯–೧೧೪೫–೧೦೨೨–16–30.*

ಇದಕ್ಕೆ ಪ್ರಭುದೇವರ [7]ಪ್ರತ್ಯುತ್ತರ[7]:

ಕೂಡಲಿಲ್ಲದ [8]ಅಗಲಲಿಲ್ಲದ[8] ಘನವ ಕೂಡುವ ಪರಿ ಎಂತವ್ವ? ಹೇಳಿದರೆ ಅದಕ್ಕೆ ಅದೇ ಕೊಱತೆ. ಗೊಗೇಶ್ವರಲಿಂಗವ ಬೇಱುಮಾಡಿ ಬೆರಸುವ ಪರಿಯೆಂತು ಹೇಳಾ? ೬೩೦–೧೧೪೬–೧೦೨೩–16–31.†

---

[1] (ಶಿ) (ಉ) ಈ ಉತ್ತರಕ್ಕೆ (ಹ) ಈ ಹೀಗೆಂದು ಪ್ರಭುದೇವರಿಗೆ ಬಿನ್ನೈಸಲು ಮಹದೇವಿ ಯಕ್ಕಗಳು, ಅದಕ್ಕೆ (ಗು). [2] (ಹಗುಉ) ಯಾಗಿಯಾದೆನೆಂದರೆ (ಶಿ). [3] (ಶಿಗುಗೂ) ಪ್ರತ್ಯುತ್ತರದ ವಚನ (ಹ). [4] (ಹಗುಉ) × (ಶಿ.) [5] (ಶಿಉ) ಸಲಹಿದಿರಾಗಿ (ಹಗು). [6] (ಶಿ) ಧರ್ಮದವಳಾನು ಕಾಣಾಪ್ರಭುವೆ (ಹ) ಧರ್ಮದವಳಾನು (ಗು) (ಉ). * ಇಲ್ಲಿಂದ ಮುಂದೆಹಲಗೆಯಲ್ಲಿ ಈ ಮುಂದಿನ ಎರಡು ವಚನಗಳು ಅಧಿಕವಾಗಿವೆ: ಅವುಗಳಲ್ಲಿ ಮೊದಲನೆಯದು ಸ್ಥಳಾಂತರವಾಗಿದೆಯೆಂದು ಮೇಲೆ ನಿರ್ದೇಶಿಸಿರುವ "ಬಸವಣ್ಣನ ಪಾದವ ಕಂಡೆನಾಗಿ" ಎಂಬ ವಚನ; ಎರಡನೆಯದು ಮುಂದಿನಂತಿದೆ:

ಅಂಗವಲ್ಲಿ ಆಚಾರವ ತೋರಿದ; ಆ ಆಚಾರವೆ ಲಿಂಗವೆಂದರುಹಿದ. ಪ್ರಾಣದಲ್ಲಿ ಅರಿವ ನೆಲೆಗೊಳಿಸಿದ; ಆ ಅರಿವೆ ಜಂಗಮವೆಂದು ತೋರಿದ. ಚೆನ್ನಮಲ್ಲಿಕಾರ್ಜುನನ ಹೆತ್ತ ತಂದೆ ಸಂಗನಬಸವಣ್ಣನು ಎನಗೀ ಕ್ರಮವನರುಹಿದನಯ್ಯ ಪ್ರಭುವೆ. ೧೧೪೭.

Note: ಈ ಮೇಲಣ ವಚನ ಗುಮ್ಮಳಾಪುರದಲ್ಲಿಲ್ಲ. ಗೂಳೂರಿನಲ್ಲಿ ಸ್ಥಳಾಂತರವಾಗಿದೆ. ಅದರ ಪ್ರಕಾರ ವಚನದ ಕೊನೆಗಿರುವ "ಪ್ರಭುವೆ" ಎಂಬ ಪಾಠವಿಲ್ಲ.

[7] (ಶಿಗುಉ) ಪ್ರತ್ಯುತ್ತರದ ವಚನ (ಹ). [8] (ಶಿಹ) × (ಗುಉ).

† ಮೊದಲಿಗೆ ಅಕ್ಕನು "ಘಟ್ಟಿ ತುಪ್ಪ ತಿಳಿದುಪ್ಪಕ್ಕೆ ಹಂಗುಂಟೇ" ಮತ್ತು "ಅಂಗವ ಲಿಂಗಮುಖದಿಂದರ್ಪಿಸಿ" ಎಂಬ ಎರಡು ವಚನಗಳ ಮೂಲಕ ಪ್ರಭುದೇವರಿಗೆ ಉತ್ತರ ಕೊಡಲು ಆ ಸಂದರ್ಭದಲ್ಲಿ ಗೂಳೂರಿನಲ್ಲಿ ಈ ಮುಂದಿನ ಅಧಿಕ ಭಾಗವಿದೆ:

ಈ ಹೀಗೆಂದ ಮಹಾದೇವಿಯಕ್ಕಗಳ ಚಿದಹಂತೆಯ ಪ್ರಭುದೇವರು ಖಂಡಿಸಿ ನುಡಿದ ಪ್ರಸ್ತಾವದ ವಚನ:

ನಾ ಸತ್ತೆನೆಂದು ಹೆಣ ಕೂಗಿದುದುಂಟೆ ? ಬೈಚಿಟ್ಟ ಬಯಕೆ ಕರೆದುದುಂಟೆ ? ಹೆಪ್ಪಿಟ್ಟ ಹಾಲು ಸಿಹಿಯಪ್ಪುದೇ ? ಈ ಮಾತು ಒಪ್ಪವಲ್ಲ ಗುಹೇಶ್ವರಲಿಂಗಕ್ಕೆ. 16-34.

ಇದಕ್ಕೆ ಅಕ್ಕಗಳ ಪ್ರತ್ಯುತ್ತರ:

ಸತ್ತ ಹೆಣ ಕೂಗಿದುದುಂಟು. ಬೈಚಿಟ್ಟ ಬಯಕೆ ಕರೆದುದುಂಟು. ಹೆಪ್ಪಿಟ್ಟ ಹಾಲು ಗಟ್ಟಿಗೊಂಡು ಸಿಹಿಯಾದುದುಂಟು. ಇದ ನಿಶ್ಚೈಸಿ ನೋಡಿ ಚೆನ್ನಮಲ್ಲಿಕಾರ್ಜುನದೇವರಲ್ಲಿ. 16-35.

ಇದಕ್ಕೆ ಪ್ರಭುದೇವರ ವಚನ:

ಇದು ಎನಗೆ ಆಶ್ಚರ್ಯ ಹೇಳವ್ವ. ಕಾಯವಿಲ್ಲದ ಸುಖವ, ಜೀವವಿಲ್ಲದ ಭವವ ಆ ಠಾವ ಹೇಳಾ ಗೋಗೇಶ್ವರ ಲಿಂಗಕ್ಕೆ ? 16-36.

ಇದಕ್ಕೆ ಅಕ್ಕಗಳ ಪ್ರತ್ಯುತ್ತರ:

ಮಱೆದೊಱಗಿ ಕನಸ ಕಂಡು ಹೇಳುವಲ್ಲಿ ಸತ್ತ ಹೆಣ ಎದ್ದಿತ್ತು. ತನ್ನ ಋಣ ನಿಧಾನ ಎದ್ದು ಕರೆಯಿತ್ತು. ಹೆಪ್ಪಿಟ್ಟ ಹಾಲು ಘಟ್ಟಿ ತುಪ್ಪವಾಗಿ ಸಿಹಿಯಾಯಿತ್ತು. ಇದಕ್ಕೆ ತಪ್ಪಸಾಧಿಸಲೇಕೆ ಚೆನ್ನಮಲ್ಲಿಕಾರ್ಜುನದೇವರ ದೇವನಣ್ಣಗಳಿರಾ ! 16-37.

ಇದಕ್ಕೆ ಪ್ರಭುದೇವರು ಒಡಂಬಟ್ಟ ಪ್ರಸ್ತಾವದ ವಚನ:

ಇದು ಲೇಸಾಯಿತ್ತು. ತುಂಬಿದ ಲೆಕ್ಕಕ್ಕೆ ಮತ್ತೊಂದೆಂದು ಕಡೆಗಾಣಿಸುವಂತೆ, ಸ್ಥಾಣುವಿನ ಮಱೆಯ Aಚೋರನ Aಂತೆ ಅಂಬುಧಿಯ ಕೊಂಬಿನಲ್ಲಿದ್ದ ವಿಹಂಗನಂತೆ ಎಲ್ಲಿ ಬಂದಡೂ ಗೊಗೇಶ್ವರನೆಂಬ ಭಾವ ಒಂದಾಯಿತ್ತು. 16-38.

ಇದಕ್ಕೆ ಮಹಾದೇವಿಯಕ್ಕಗಳ ನಿರಹಂಭಾವದ ವಚನ:

ಎನಗೇಕಯ್ಯ ನಾ ಪ್ರಪಂಚಿನ ಪುತ್ಥಳಿ. ಮಾಯಿಕದ ಮಲಭಾಂಡ. ಆತುರದ ಭವನಿಳಯ. ಜಲಕುಂಭದ ಒಡೆಯಲ್ಲಿ ಒಸರುವ ನೆಲೆಮನೆಗೇಕಯ್ಯ ? ಬೆರಳು ತಾಳ ಹಣ್ಣ ಹಿಸಿಕಿದಡೆ ಮೆಲಲುಂಟೆ Bಬಿತ್ತಿಲ್ಲವB. ಅದಱಿಒಪ್ಪದ ತೆಱ ಎನಗೆ. ಎನ್ನ ತಪ್ಪನೊಪ್ಪುಗೊಳ್ಳಿ, ಚೆನ್ನಮಲ್ಲಿಕಾರ್ಜುನದೇವರ ದೇವ ನೀವೆ ಅಣ್ಣಗಳಿರಾ ! 16-39.

ಚಂದನವ ಕಡಿದು ಕೊಱೆದು ತೇದಡೆ ನೊಂದೆನೆಂದು ಕಂಪ ಬಿಟ್ಟಿತ್ತೆ. ತಂದು ಸುವರ್ಣವ ಕಡಿದೊರೆದೊಡೆ ಬೆಂದು ಕಳಂಕ ಹಿಡಿಯಿತ್ತೆ. ಸಂಡು ಸಂದು ಕಡಿದ ಕಬ್ಬನು ತಂದು ಗಾಣದಲ್ಲಿಕ್ಕಿ ಅರೆದಡೆ ಬೆಂದು ಪಾಕಗೂಳ ಸಕ್ಕರೆಯಾಗಿ ನೊಂದೆನೆಂದು ಸಿಹಿಯ ಬಿಟ್ಟಿತ್ತೆ ? ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿ. ಎನ್ನ ತಂದೆ ಚೆನ್ನಮಲ್ಲಿಕಾರ್ಜುನಯ್ಯ ಕೊಂದಡೆ ಶರಣೆಂಬುದ ಮಾಣೆ. 16-40.

ಇದಕ್ಕೆ ಪ್ರಭುದೇವರು ಸಂತೋಷಿಸಿ ಕೊಂಡಾಡಿದ ಪ್ರಸ್ತಾವದ ವಚನ:

ಅಂಗ ಅಂಗನೆಯ ರೂಪಲ್ಲದೆ ಮನ-ವಸ್ತು ಭಾವದಲ್ಲಿ ಬೆಚ್ಚಂತಿಪ್ಪುದು. ಬಂದDಕದನದಲ್ಲಿD ಬಂದು ಹಿಂಗಿದೆಯಲ್ಲಾ, ಅಕ್ಕಾ ! ಗೊಹೇಶ್ವರಲಿಂಗದಲ್ಲಿ ಉಭಯನಾಮುವಳಿದೆ ಎನ್ನಕ್ಕ. 16-41.

---

ಇಂತು ಪ್ರಭುದೇವರು ಉಭಯನಾಮುವಳಿದೆಯೆಂದು ಕೊಂಡಾಡಲು ಆ ಮಹಾದೇವಿಯಕ್ಕಗಳು ಎರಡಿಲ್ಲದೆ ಬೆರಸಿದುದಂ ಬಿನ್ನೈಸುವ ಪ್ರಸ್ತಾವದ ವಚನ:

A (ಗೂ) × (ಉ) (ಗೂ R. ಇ. ಈ). B (ಉ) ಬಿತ್ತೆಲ್ಲ ಜೀವ (ಗೂ).
D (ಉ) (ಗೂR. ಅ ಇ ಈ) ಕಥನದಲ್ಲಿ (ಗೂ) ಕಥನದಲ್ಲಿ (ಗೂR. ಅ)

ಇದಕ್ಕೆ ಅಕ್ಕಗಳ [1]ವಚನ[1] :

ಅಂಗಸಂಗದಲ್ಲಿ ಲಿಂಗಸಂಗಿಯಾದೆ. ಲಿಂಗಸಂಗದಲ್ಲಿ ಅಂಗಸಂಗಿಯಾದೆ. ಉಭಯ ಸಂಗವನೂ ಅಱಿಯದೆ ಪರಿಣಾಮಿಯಾದೆನು. ನುಡಿಯ ಗಡಣವ ಮಱೆದು [2]ತೆಱಹಿಲ್ಲದಿದ್ದೆನು[2]. ಎನ್ನ ದೇವ ಚೆನ್ನಮಲ್ಲಿಕಾರ್ಜುನನ ಬೆರಸಿದ ಬಳಿಕ [3]ನಾನು ಏನೆಂದೂ ಅಱಿಯೆನಯ್ಯ[3] ! ೬೩೧–೧೧೪೯–೧೦೨೫–16–42.

ಹೀಂಗೆಂದು ಪ್ರಭುದೇವರೊಡನೆ ಅಕ್ಕಗಳು ಪ್ರಸಂಗಿಸುತ್ತಿರಲು ಬಸವರಾಜದೇವರು ಆ ಮಹಾದೇವಿಯಕ್ಕಗಳ ನುಡಿಸಿನೋಡುವ ಪ್ರಸ್ತಾವದ ವಚನ :

ಅಂಗದಲ್ಲಿ ಲಿಂಗಸಂಗ, ಲಿಂಗದಲ್ಲಿ ಅಂಗಸಂಗವ ಮಾಡಿದೆನೆಂದಡೆ ಸಂದು–ಬೇದ ಳಿವ ಪರಿ ಎಂತು ಹೇಳಾ? ಅಂಗದಲ್ಲಿ ಸಂಗವ ಮಾಡಿಹೆನೆಂದರೆ ಮುಂದುಗೆಡಿಸಿ ಕಾಡುವ ಶಿವನು. ಕಾಮವೆಂಬ ಬಯಕೆಯಲ್ಲಿ ಅಳಲಿಸಿ ಬಳಲಿಸುವನು ಶಿವನು. ಲಿಂಗದಲ್ಲಿ ಅಂಗವ ತಂದು ನಿಕ್ಷೇಪಿಸಿಹೆನೆಂದರೆ ಅಂಗದಿಂದ ಅಗಲಿ ಅತ್ತತ್ತಲೋಸರಿಸಿ [4]ನೋಡುವನಯ್ಯ[4] ಶಿವನು. ಹೆಣ್ಣು [5]ಗಂಡಾದರೆ[5] ಸಂಗಕ್ಕೆ ಒಲಿವನು ಶಿವನು ಕೇಳಾ ! ಕೂಡಲಸಂಗಯ್ಯನ ಬೆರಸುವರೆ ಭಿನ್ನವಿಲ್ಲದ ಕಲಿಯಾಗಬೇಕು ಕೇಳಾ ಎಲೆಯಮ್ಮ. ೬೩೨–೧೧೫೦–೧೦೨೬–16–43.

ಇದಕ್ಕೆ ಅಕ್ಕಗಳ ಬಿನ್ನಪ :

[6]ಕಾಮಾರಿಯ[6] ಗೆಲಿದೆನಯ್ಯ ಬಸವಣ್ಣ ನಿನ್ನ ದಯದಿಂದ. ಸೋಮಧರನ ಹಿಡಿ ತಪ್ಪೆನಯ್ಯ ಬಸವಣ್ಣ ನಿನ್ನ ಬಲದಿಂದ. ನಾಮದಲ್ಲಿ ಹೆಣ್ಣುರೂಪಲ್ಲದೆ, ಭಾವಿಸಲು ಗಂಡು ರೂಪು ನೋಡಾ! ಬಸವಣ್ಣ, ನಿನ್ನ [7]ಬಲದಿಂದ[7] ಅತಿಕಾಮಿ ಚೆನ್ನಮಲ್ಲಿಕಾರ್ಜುನಯ್ಯಂಗೆ ತೊಡರನಿಕ್ಕಿ ಕೂಡಿ ಎರಡಱಿಯದೆ ಮಱೆವೆನಯ್ಯ, ಬಸವಣ್ಣ, ನಿಮ್ಮ ದಯದಿಂದ. ೬೩೩–೧೧೫೧–೧೦೨೭–16–44.*

[8]ಮತ್ತಂ, ಅಂಗವಿಕಾರವ ಗೆಲಿದು,"ಆ ಲಿಂಗವನು ಎನ್ನೊಳಗೆ ದೃಢವಿಡಿದು ಸರ್ವಾಂಗ ದೊಳು ಐಕ್ಯವ ಮಾಡಿಕೊಂಡು ನಿಜಗಲಿಯಾಗಿ ಗೆಲಿದೆ"ನೆಂದು ಬಿನ್ನೈಸುವ ಪ್ರಸ್ತಾವದ ವಚನ :[8]

---

[1] (ಶಿ) ಪ್ರತ್ಯುತ್ತರದ ವಚನ (ಹ) ಪ್ರತ್ಯುತ್ತರ (ಗುಉ). [2] (ಶಿಹ) ತೆಱಹಿಲ್ಲದಿದ್ದರೇನು (ಗುಉ). [3] (ಶಿ) ಎನ್ನ ನಾನು ಏನೆಂದೂ ಅರಿಯೆನಯ್ಯ ಪ್ರಭುವೆ (ಹ) ಎನ್ನ ನಾನು ಏನೆಂದೂ ಅಱಿಯೆನಯ್ಯ (ಗು). [4] (ಶಿ) ಓಡುವನವ್ವಾ (ಹ) ಓಡುವನಯ್ಯ (ಗು) (ಉ). [5] (ಶಿಗುಉ) ಗಂಡಾದೆನೆಂದರೆ (ಹ). [6] (ಶಿಹ) ಕಾಮನ (ಗುಉ). [7] (ಶಿ) ದಯದಿಂದ (ಹ) (ಗು. ಉ) * ಇದಾದಮೇಲೆ ಹಲಗೆಯಲ್ಲಿ ಒಂದು ವಚನ ಅಧಿಕವಾಗಿ ಬರುವುದು. ಅದು ಹೀಗಿದೆ :

"ನಿನ್ನ ಅಂಗದ ಆಚಾರವ ಕಂಡು ಎನಗೆ ಲಿಂಗಸಂಗವಾಯಿತ್ತಯ್ಯ. ಬಸವಣ್ಣ ನಿನ್ನ ಮನದ ಸುಜ್ಞಾನವ ಕಂಡು ಎನಗೆ ಜಂಗಮಸಂಬಂಧವಾಯಿತ್ತಯ್ಯ, ಬಸವಣ್ಣ ನಿನ್ನ ಸದ್ಭಕ್ತಿಯ ತಿಳಿದು ಎನ್ನ ನಿಜ ಸಾಧ್ಯವಾಯಿತಯ್ಯ ಬಸವಣ್ಣ. ಚೆನ್ನಮಲ್ಲಿಕಾರ್ಜುನಯ್ಯನ ಹೆಸರಿಟ್ಟ ಗುರು ನೀನಾದ ಕಾರಣ ನಾನೆಂಬುದಿಲ್ಲವಯ್ಯ ಸಂಗನ ಬಸವಣ್ಣ. ೧೧೫೦–16–49. [8] (ಶಿಗು) (ಉ) × (ಹ).

ಭಾವಿಸಿ ನೋಡಿದರಂಗನಾಯಿತ್ತು. [1]ಅಂಗಗುಣವಳಿದುಳಿದ ಬಳಿಕ[1] ನಾ ನಿನಗಂಗವಾದೆ. ಭಿನ್ನರುಚಿಯ ಬಿಟ್ಟು ಲಿಂಗರುಚಿಯಾದ ಬಳಿಕ ಚೆನ್ನಮಲ್ಲಿಕಾರ್ಜುನನ ಕೊಂದು ಸಾವ ಭಾಷೆ. ೬೩೪-೧೧೫೩-೧೦೨೮-16-45.

ಇದಕ್ಕೆ ಬಸವರಾಜದೇವರು ನಿರೂಪಿಸಿದ ವಚನ :

ಅಳಿವನಲ್ಲ, ಉಳಿವನಲ್ಲ. ಪ್ರಳಯವೆಂಬುದ ಮುನ್ನಲಱಿಯನು. ಕಳಾಕುಳರಹಿತನು. ಉಭಯಕುಳರಹಿತನು. ಅಱಿವ ಬೈಚಿಟ್ಟು ಮೆಱೆವ! ಗಮನನಲ್ಲ. ಕೂಡಲಸಂಗಯ್ಯನೆಂಬ ಶಬ್ದಮುಗ್ಧನ ಭಾವದ [2]ಬಳಲಿಕೆಯಲ್ಲಿ[2] ಗೆಲಬಹುದೆ ಹೇಳಾ ? ೬೩೫- × -೧೦೨೯-16-46.

ಇದಕ್ಕೆ ಮಹಾದೇವಿಯಕ್ಕಗಳು ಬಿನ್ನೈಸಿದ ಪ್ರತ್ಯುತ್ತರ :

ಅಂಗದೊಳಗೆ ಅಂಗವಾ[3]ಗೆ[3] ಅಂಗಲಿಂಗೈಕ್ಯವ ಮಾಡಿದೆ. ಮನದೊಳಗೆ ಮನವಾ[3]ಗೆ[3] ಮನಲಿಂಗೈಕ್ಯವ ಮಾಡಿದೆ. ಭಾವದೊಳಗೆ ಭಾವವಾ[3]ಗೆ[3] ಭಾವಲಿಂಗೈಕ್ಯವ ಮಾಡಿದೆ. ಅಱಿವಿನೊಳಗೆ ಅಱಿವಾ[3]ಗೆ[3] ಜ್ಞಾನಲಿಂಗೈಕ್ಯವ ಮಾಡಿದೆ. ಕ್ರೀಗಳೆಲ್ಲವ ನಿಲಿಸಿ ನಿಃಕ್ರಿಯಾತೀತನಾಗಿ ನಿಷ್ಪತಿಲಿಂಗೈಕ್ಯವಾದೆ. ನಾನೆಂಬುದ ನಿಲಿಸಿ, ನೀನೆಂಬುದ ಕೆಡಿಸಿ ಉಭಯಲಿಂಗೈಕ್ಯವ ಮಾಡಿದೆ. ಚೆನ್ನಮಲ್ಲಿಕಾರ್ಜುನನ ಒಳಗೆ ನಾನಳಿದೆನಾಗಿ ಲಿಂಗವೆಂಬ ಘನವು ಎನ್ನಲ್ಲಿ ಅಳಿಯಿತ್ತು ಕಾಣಾ ಸಂಗನ ಬಸವಣ್ಣ. ೬೩೬-×-೧೦೩೦-16-47.

ಹೀಂಗೆಂದು ಅಕ್ಕಗಳು ಬಿನ್ನೈಸಲು ಬಸವರಾಜದೇವರು ಮೆಚ್ಚಿ ನಿರೂಪಿಸಿದ ವಚನ :

ಹೆಂಗೂಸಿನಂಗವ ನೋಡಿರೇ ಪುರಾತನರು, ಬಾಲತನದಂಗವ ನೋಡಿರೇ ಪುರಾತನರು. ಬ್ರಹ್ಮವನಾಚರಿಸಿ ತನ್ನ ಮಱೆದಿಪ್ಪುದ ನೋಡಿರೇ ಲಿಂಗವಂತರು. ತನ್ನಲ್ಲಿ ತಾನು ನಿಶ್ಚಯವಾಗಿ ಭಾಷೆ ಬೀಸರವೋಗದಿಪ್ಪ ಇರವು ಕೂಡಲ ಸಂಗನು ದೇವರಲ್ಲಿ ನಮ್ಮ ಮಹಾದೇವಿಯಕ್ಕಂಗಾಯಿತ್ತು. ೬೩೭-೧೧೫೪-೧೦೩೧-16-48.*

---

ಗೂಳೂರಿನಲ್ಲಿ ಈ ಮೇಲಣ ವಚನದ ಜೊತೆಗೆ ಈ ಮುಂದಣ ವಚನವೂ ಅಧಿಕವಾಗಿದೆ:

ಅಂಗದಲ್ಲಿ ಆಚಾರವ ತ್ರೋಱಿದ. ಆ ಆಚಾರವೇ ಲಿಂಗವೆಂದಱುಹಿದ. ಪ್ರಾಣದಲ್ಲಿ ಅಱುವ ನೆಲೆಗೊಳಿಸಿದ. ಆ ಅಱುವೆ ಜಂಗಮವೆಂದು ತೋಱಿದ ಚೆನ್ನಮಲ್ಲಿಕಾರ್ಜುನನ ಹೆತ್ತ ತಂದೆ ಸಂಗನ ಬಸವಣ್ಣನು ಎನಗೀ ಕ್ರಮುವನಱುಹಿದನಲ್ಲಾ ! 16-50.

[1] (ಶಿ) (ಉ) ಅಂಗಗುಣವಳಿದು ನಿಜಉಳಿದ ಬಳಿಕ (ಹ) ಅಂಗಗುಣವಳಿದ ಬಳಿಕ (ಗು) [2] (ಶಿ ಉ) ಬಳಕೆಯಲ್ಲಿ (ಗು) [3] (ಶಿ) ಗಿ (ಗು ಉ).

*ಇಲ್ಲಿಂದ ಮುಂದೆ ಗುಮ್ಮಳಾಪುರದಲ್ಲಿ ಈ ಮುಂದಿನ ಭಾಗವಿದೆ :

ಇದಕ್ಕೆ ಅಕ್ಕಗಳು ಅನಾದಿ ಪರಶಿವ ತಾನೆ ಜಗಹಿತಾರ್ಥವಾಗಿ ಮರ್ತ್ಯಕ್ಕೆ ಅವತರಿಸಿ ಬಸವನೆಂಬ ನಾಮಮಂ ಧರಿಸಿ ವೀರಶೈವನಾಮುವನರುಪುವುದಕ್ಕೆ ಭಾವನ್ನ ವಿವರವನೊಳಕೊಂಡು ಚರಿಸಿದನೆಂದು ಬಸವರಾಜದೇವರ ಮಹಾತ್ಮೆಯಂ ಕೊಂಡಾಡುವ ಪ್ರಸ್ತಾವದ ವಚನ: "ಶಿವಶಿವಾ ಆದಿ-ಅನಾದಿಗಳೆಂಬೆರಡಿಲ್ಲದ...." Note: ಎಂಬ ದೀರ್ಘವಾದೊಂದು ವಚನವಿದೆ.

ಇದಕ್ಕೆ ಅಕ್ಕಗಳ ಪ್ರತ್ಯುತ್ತರ!

[1]ಎನ್ನ[1] ಭಕ್ತಿ ನಿಮ್ಮ ಧರ್ಮ, ಎನ್ನ ಜ್ಞಾನ [2]ಪ್ರಭುದೇವರ[2] ಧರ್ಮ, ಎನ್ನ ಪರಿಣಾಮ ಚೆನ್ನಬಸವಣ್ಣನ ಧರ್ಮ. ಈ ಮೂವರು ಒಂದೊಂದ ಕೊಟ್ಟರೆನಗೆ ಮೂಱು ಭಾವವಾಯಿತ್ತು. ಆ ಮೂಱನೂ ನಿಮ್ಮಲ್ಲಿ ಸಮರ್ಪಿಸಿದ ಬಳಿಕ ಎನಗಾವ ಜಂಜಡವಿಲ್ಲ. ಚೆನ್ನಮಲ್ಲಿಕಾರ್ಜುನ ದೇವರ ನೆನಹದಲ್ಲಿ ನಿನ್ನ ಕರುಣದ ಶಿಶು ನಾನು ಕಾಣ ಸಂಗನ ಬಸವಣ್ಣ. ೬೩೮-೧೧೫೫-೧೦೩೩-16-52.

ಹೀಗೆಂದು ಮಹಾದೇವಿಯಕ್ಕಗಳು ಬಿನ್ನೈಸಲು, ಆ ಸಮಯದಲ್ಲಿ ಪ್ರಭುದೇವರು ಆ ಮಹಾದೇವಿಯಕ್ಕಗಳಿಗೆ ನಮಸ್ಕಾರವ ಮಾಡಿದ ಪ್ರಸ್ತಾವದ ವಚನ :

ಆದಿಶಕ್ತಿ-ಅನಾದಿಶಕ್ತಿಯೆಂಬರು. ಆದಿ ಎಂದರೆ ಕುಱುಹಿಂಗೆ ಬಂದಿತ್ತು. ಅನಾದಿ ಎಂದರೆ ನಾಮಕ್ಕೆ ಬಂದಿತ್ತು. ಆದಿಯಲ್ಲ ಅನಾದಿಯಲ್ಲ. ನಾಮವಿಲ್ಲದ ಸೀಮೆಯಿಲ್ಲದ ನಿಜಶಕ್ತಿಯೇ [3]ಶಕ್ತಿಯಾಯಿತ್ತು[3] ನೋಡಾ! ಅಂತರಂಗದ ಪ್ರಭೆ ಬಹಿರಂಗವೆಲ್ಲಾ ತಾನೆಯಾಗಿ, ಗೊಗೇಶ್ವರ ಲಿಂಗದಲ್ಲಿ ಸಂದಿಲ್ಲದಿಪ್ಪ ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎಂಬೆನು. ೬೩೯-೧೧೫೬-೧೦೩೪-16-53.*

ಇದಕ್ಕೆ ಮಹಾದೇವಿಯಕ್ಕಗಳ ನಿರಹಂಕಾರದ ಬಿನ್ನಹ :

ನೀರ-ಕ್ಷೀರದಂತೆ ನೀನಿಪ್ಪೆಯಾಗಿ—ಆವುದು ಮುಂದು, ಆವುದು ಹಿಂದೆಂದಱಿಯೆ. ಆವುದು ಕರ್ತೃ ಆವುದು ಭೃತ್ಯನೆಂದರಿಯೆ. ಆವುದು ಘನ, ಆವುದು ಕಿಱಿದೆಂದಱಿಯೆ. ಚೆನ್ನಮಲ್ಲಿಕಾರ್ಜುನಯ್ಯ ನೀನೊಲಿದು ಕೊಂಡಾಡಿದರೆ ಇಱುಹೆ ರುದ್ರನಾಗದೆ ಹೇಳಯ್ಯ?! ೬೪೦-೧೧೫೭-೧೦೩೫-16-59.

ಹೀಂಗೆಂದು ಬಿನ್ನೈಸುವ ಮಹಾದೇವಿಯಕ್ಕಂಗೆ ಚಿಕ್ಕದಣ್ಣಾಯಕರು ಪ್ರಸನ್ನರಾಗಿ ಸ್ತುತಿಯಿಸಿದ ವಚನ :

---

[1] (ಶಿ ಗು ಉ) ಬಸವಣ್ಣ ಎನ್ನ (ಹ). [2] (ಹ ಗು ಉ) ನಿಮ್ಮ (ಶಿ). [3] (ಶಿ) ನಿಶ್ಶಕ್ತಿಯಾಯಿತ್ತು (ಹ) ಚಿಚ್ಛಕ್ತಿಯಾಯಿತ್ತು (ಗು ಉ).

* ಇಲ್ಲಿಂದ ಮುಂದೆಯೂ ಶೂನ್ಯ ಸಂಪಾದನೆಗಳಲ್ಲಿ ಪರಸ್ಪರ ಸಾಮ್ಯಗಳೂ, ವ್ಯತ್ಯಾಸಗಳೂ, ನ್ಯೂನಾಧಿಕ ಭಾಗಗಳೂ ಉಂಟು. ಉದಾಹರಣೆಗಾಗಿ ಅಕ್ಕಮಹಾದೇವಿಯ ಪ್ರಸಂಗದಲ್ಲಿ ಇಲ್ಲಿಯ ವರೆಗಿನ ಭಾಗವನ್ನು ನಾಲ್ಕು ಶೂನ್ಯಸಂಪಾದನೆಗಳ ಸಹಾಯದಿಂದವಿವರವಾಗಿ ಗುರುತಿಸಿದುದಾಯಿತು.

ಈ ಅಕ್ಕಮಹಾದೇವಿಯ ಪ್ರಸಂಗವನ್ನು ನಿರೂಪಿಸಲು ಶಿವಗಣಪ್ರಸಾದಿ—ಹಲಗೆ ಯಾರ್ಯ—ಗುಮ್ಮಳಾಪುರ—ಗೂಳೂರು ಕ್ರಮವಾಗಿ ಸುಮಾರು 30–100–50–90 ವಚನಗಳನ್ನು ಬಳಸಿಕೊಂಡಿರುವರು. ಶಿವಗಣಪ್ರಸಾದಿಯೊಬ್ಬನೇ—ಈ ಪ್ರಸಂಗವನ್ನು ಬಸವಣ್ಣನ ಮಹಾಮನೆಯಲ್ಲಿ ನಡೆದ ಶಿವಾನುಭಾವಗೋಷ್ಠಿಯಷ್ಟಕ್ಕೇ ಸೀಮಿತಗೊಳಿಸಿಕೊಂಡು ಸ್ಥಲೈಕ್ಯವನ್ನೂ, ಕಾಲೈಕ್ಯವನ್ನೂ, ಪಾಠ ಶುದ್ಧಿಯನ್ನೂ ಉಳಿಸಿಕೊಂಡಿರುವವನು. ಮಿಕ್ಕವರು ಈ ಪ್ರಸಂಗವನ್ನು ಅಕ್ಕಮಹಾದೇವಿಯು ಕದಳಿಯಲ್ಲಿ ಐಕ್ಯವಾಗುವವರೆಗೂ ಈಚಿರುವರು. ಈ ಪ್ರಸಂಗವನ್ನು ಉಳಿದಿರಿಗೆ ಮೇಲು ಪಂಕ್ತಿಯಾಗುವಂತೆ ಹಿಗ್ಗಿಸಿದವನು ಹಲಗೆಯಾರ್ಯ.

ಅಜಕಲ್ಪಕೋಟಿ ವರುಷದವರೆಲ್ಲರೂ ಹಿರಿಯರೇ ? ಹುತ್ತೇಱಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ ? ನಡು ಮುಱಿದು, ಗುಡುಗೂಱಿ, ತಲೆ ನಡುಗಿ, ನರೆ-ತೆರೆ ಹೆಚ್ಚಿ, ಮತಿಗೆಟ್ಟು, ಒಂದನಾಡ ಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲಾ ಹಿರಿಯರೇ ? ಅನುವನಱಿದು, ಘನವ ಬೆರಸಿ, ಹಿರಿದು-ಕಿಱಿದೆಂಬ ಭೇದವ ಮಱೆದು ಕೂಡಲ ಚೆನ್ನಸಂಗಯ್ಯನಲ್ಲಿ ಬೆರಸಿ ಬೇಱಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು. ೬೪೧-೧೧೫೮-೧೦೩೬-16-55.

ಆ ಸಮಯದಲ್ಲಿ ಸಿದ್ಧರಾಮಯ್ಯ ತಂದೆಗಳು ಆ ಮಹಾದೇವಿಯಕ್ಕಗಳ ಸ್ತುತಿಯಿಸಿದ ವಚನ :

ಅಹುದಹುದು ಮತ್ತೇನು ? ಮಱಹಿಂಗೆ ಹಿರಿದು-ಕಿಱಿದುಂಟಲ್ಲದೆ, ಅಱಿವಿಂಗೆ ಹಿರಿದು ಕಿಱಿದುಂಟೆ ಹೇಳಯ್ಯ ? [1][ಸಾವಂಗೆ ಭಯ ಉಂಟಲ್ಲದೆ][1] ಅಜಾತಂಗೆ ಭಯ ಉಂಟೆ ಹೇಳಯ್ಯ? ಕಪಿಲಸಿದ್ಧಮಲ್ಲಿನಾಥನಲ್ಲಿ ಮಹಾದೇವಿಯಕ್ಕನ ನಿಲವಿಂಗೆ ಶರಣೆಂದು ಶುದ್ಧನಾದೆನು ಕಾಣಾ ಚೆನ್ನಬಸವಣ್ಣ. ೬೪೨-೧೧೬೩-೧೦೩೭-16-56.

ಹೀಂಗೆಂದು ಸಿದ್ಧರಾಮಯ್ಯದೇವರು ಸ್ತುತಿಯಿಸುತ್ತಿರಲು, ಆ ವೇಳೆಯಲ್ಲಿ ಮಹಾದೇವಿಯಕ್ಕಗಳು ತಮ್ಮ ಐಕ್ಯಸ್ಥಲವಾವುದೆಂದು ಪ್ರಭುದೇವರ ಕೇಳುವ ಪ್ರಸ್ತಾವದ ವಚನ :

ಲಿಂಗಸುಖಸಂಗದಲ್ಲಿ ಮನವೇದ್ಯವಾಯಿತ್ತು. ಇನ್ನೆಲ್ಲಿಯಯ್ಯ ಎನಗೆ ನಿಮ್ಮಲ್ಲಿ ನಿರವಯವು ? ಇನ್ನೆಲ್ಲಿಯಯ್ಯ ನಿಮ್ಮಲ್ಲಿ ಕೂಡುವುದು ? ಪರಮಸುಖಪರಿಣಾಮ ಮನ ಮೀರಿದಪ್ಪಿ ನಾನು ನಿಜವನೈದುವ ಠಾವ ಹೇಳಾ ಚೆನ್ನಮಲ್ಲಿಕಾರ್ಜುನ. ೬೪೩-೧೧೬೯-೧೦೩೯-16-70.

ಹೀಂಗೆಂದು ಮಹಾದೇವಿಯಕ್ಕಗಳು ತಮ್ಮ ಲಿಂಗೈಕ್ಯದ ಸ್ಥಾನ-ಕಾಲ-ಸ್ಥಿತಿಯಾವುದೆಂದು ಬೆಸಗೊಳಲು, ಇದಕ್ಕೆ ಪ್ರಭುದೇವರು ತತ್‌ಕಾಲ-ಸ್ಥಾನ ಸಮರಸಮಂ ನಿರೂಪಿಸಿದ ಪ್ರಸ್ತಾವದ ವಚನ :

ನೀ-ನಾನೆಂಬುಭಯಸಂಗವಳಿದು ತಾನು ತಾನಾದ ತ್ರಿಕೂಟವೆಂಬ ಮಹಾಗಿರಿಯ ತುಟ್ಟತುದಿಯ ಮೆಟ್ಟಿ ನೋಡಲು ಬಟ್ಟಬಯಲು ಕಾಣಬಹುದು ನೋಡಾ. ಆ ಬಯಲ ಬೆರಸುವರೆ ತ್ರಿಕೂಟಗಿರಿಯೊಳಗೊಂದು ಕಾಣಬಾರದ ಕದಳಿಯುಂಟು ನೋಡಾ. ಕದಳಿಯ ಕಳಿದಲ್ಲಿ ಒಳಹೊಕ್ಕು ನೋಡಲು ತೊಳಗಿ ಬೆಳಗುವ ಜ್ಯೋತಿಯುಂಟು ಕೇಳಾ. ನಡೆಯಲ್ಲಿಗೆ ತಾಯೆ, ಗೊಗ್ಗೇಶ್ವರಲಿಂಗದಲ್ಲಿ ಪರಮಪದ ನಿನಗೆ ಸಯವು ನೋಡಾ. ೬೪೪-೧೧೭೦-೧೦೩೯A-16-71.

ಹೀಂಗೆಂದು ಪ್ರಭುದೇವರು ನಿರೂಪಿಸಲು ಮಹಾದೇವಿಯಕ್ಕಗಳು ಕೇಳಿ ಹರ್ಷಿತೆಯಾಗಿ, ಆ ಪ್ರಭುದೇವರು ಮುಖ್ಯವಾದ ಎಲ್ಲಾ ಪುರಾತನರನೂ ಬೀಳುಕೊಂಬ ಪ್ರಸ್ತಾವದ ವಚನ :

[1] ಸಾವಿಂಗೆ ಬಯಲುಂಟಲ್ಲದೆ (ಶಿ) ಸಾವಿಂಗೆ ಭಯ ಉಂಟಲ್ಲದೆ (ಗೂ) ಸಾವುಳ್ಳವಂಗೆ ಭಯ ಉಂಟಲ್ಲದೆ (ಹ).

ಒಡಲಿಲ್ಲದ, ನುಡಿಯಿಲ್ಲದ, ಕಡೆಯಿಲ್ಲದ ನಲ್ಲನ ಒಡಗೂಡಿ ಸುಖಿಯಾದೆ ಕೇಳಿರಯ್ಯ, ಭಾಷೆ ಪೈಸರವಿಲ್ಲ, ಓಸರಿಸೆನಸ್ಯಕ್ಕೆ. ಆಶೆ ಮಾಡೆನು ಮತ್ತೆ ಭಿನ್ನಸುಖಕ್ಕೆ. ಆಱಳಿದು ಮೂಱಾಗಿ, ಮೂಱಳಿದು ಎರಡಾಗಿ, ಎರಡಳಿದು ಒಂದಾಗಿ ನಿಂದೆನಲ್ಲಾ! ಬಸವಣ್ಣ ಮೊದಲಾದ ಶರಣರಿಗೆ ಶರಣಾರ್ತಿ. ಪ್ರಭುವಿಂದ ಕೃತಕೃತ್ಯಳಾದೆ ನಾನು. ಮಱೆಯಲಾಗದು ನಿಮ್ಮ ಶಿಶುವೆಂದು. ಎನ್ನನು ಚೆನ್ನಮಲ್ಲಿಕಾರ್ಜುನನ ಬೆರಸೆಂದು ಹರಸುತ್ತಿಹುದು. ೬೪೫-೧೧೭೧-೧೦೪೦-16-75.

ಆ ಸಮಯದಲ್ಲಿ ಮಡಿವಾಳ ತಂದೆಗಳು ಆ ಮಹಾದೇವಿಯಕ್ಕನನು ಸ್ತುತಿಸುವ ವಚನ:

ಕಂಗಳ ನೋಟ ಕರಸ್ಥಲದಲ್ಲಿ ಪ್ರಾಣ. ಅಂಗವಿಕಾರ ನಿರ್ವಿಕಾರವಾಯಿತ್ತು. ಸಂಗಸುಖ ನಿಸ್ಸಂಗವಾಯಿತ್ತು. ಹೆಂಗೂಸೆಂಬ ಭಾವ ಬಯಲ ಬೆರಸಿತ್ತು. ಕಲಿದೇವರ ದೇವ, ನಿಮ್ಮನೊಲಿಸಿ ಒಚ್ಚತವಾದ ಮಹಾದೇವಿಯಕ್ಕನ ಪಾದವ ನೆನೆದು ನಾನು ಬದುಕಿದೆನು. ೬೪೬-೧೧೮೫- x -16-92.

ಹೀಂಗೆಂದು ಮಹಾದೇವಿಯಕ್ಕನ ಐಕ್ಯಸ್ಥಲವಂ ಮಡಿವಾಳ ಮಾಚಿತಂದೆಗಳು ಕೊಂಡಾಡುತ್ತಿರಲು ಆ ಪ್ರಭುದೇವರು ಎಲ್ಲರ ಸ್ತುತಿಗಳ ಸಂತೈಸಿ ನಿಲಿಸಿ ಮತ್ತೊಮ್ಮೆ ಬಂದಪೆನೆಂದು ಎಲ್ಲರ ಕೈಯಲ್ಲಿ ಕಳುಹಿಸಿಕೊಂಬ ಪ್ರಸ್ತಾವದ ವಚನ :

ನಚ್ಚುಮಚ್ಚಿನ ಸುಖದ ಪರಿಣಾಮ ಸನ್ನಿಹಿತವಾದ ಬಳಿಕ ಇನ್ನು ಅನುಭಾವ ವೆಂಬುದಿಲ್ಲ. ಅಂತಿರಲಿ ನುಡಿಗಡಣ, ಶಶಿಧರನಟ್ಟಿದ ಬೆಸನ ಮಾಡ ಬಂದ ಬಳಿಕ ಹೇಳಿದ ಮಣಿಹವ [1]ಮಾಡುತ್ತಿಹೆವಲ್ಲದೆ—ಅದು ತನ್ನಲ್ಲಿ[1] ತಾನು ಬೆರಸುವಂದಿಂಗೆ ಬೆರಸಲಿ. ಆ ದಿನಕ್ಕೆ ಬಂದು [2]ಹೇಳುವೆ[2] ನಿರ್ಣಯವ. ಗೊಗೇಶ್ವರಲಿಂಗದ ಆಣತಿ ಬಪ್ಪನ್ನಬರ ಶಿವಶರಣರೆಲ್ಲರೂ ಸಂಗನಬಸವಣ್ಣ ಸಹಿತ ನಿತ್ಯರಾಗಿರಿರಯ್ಯ. ೬೪೭-೧೨೨೧-17-1.

ಆ ಸಮಯದಲ್ಲಿ ಸಿದ್ಧರಾಮಯ್ಯದೇವರು ಅನುಜ್ಞೆಯಂ ಪಡೆದು ಬೀಳುಕೊಂಬ ಪ್ರಸ್ತಾವದ ವಚನ :

ಎಲೆ ಎಲೆ ಅಯ್ಯ, ನೀವು ಹೇಳಯ್ಯ ಎನಗೆ ಗತಿಯೇನು ? ಮತಿಯೇನು ? ನಿನ್ನಲ್ಲಿ ಸಮರಸವೆಂತು ಹೇಳಾ ? ಮೂಱುಂನೆಲೆಯ ಕರುಮಾಡದ ಮೇಲುವಾಗಿಲ ಮನೆ ಯೊಳಗಿಪ್ಪೆನೋ ನಾನು ? ಚೌಕಮಧ್ಯದ ಎಂಟೆಸಳ ಮೊನೆಯ ಮೋಹರದ ನಡುವಣ [3]ಕೋಣೆ[3]ಯೊಳಗಿಪ್ಪೆನೋ ? ಕಾಮನ ಕಟ್ಟುವಂಜರವ ಬಿಟ್ಟು ನಿಲುವೆನೊ ? ಬಿಡದೆ ನಿಲುವೆನೊ ? ಹೇಳು ಹೇಳಾ ನಿರ್ಣಯವ ಎಲೆ ಎಲೆ ಕಪಿಲಸಿದ್ಧಮಲ್ಲಿನಾಥಯ್ಯ. ೬೪೮-೧೨೨೨-17-2.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ :

ಗುರುತತ್ವದಲ್ಲಿ ಹುಟ್ಟಿ, ಶಿವತತ್ವದಲ್ಲಿ ಬೆಳೆದು, ಪರತತ್ವದಲ್ಲಿ ಮಗ್ನವಾದ ಶರಣಂಗೆ ಕಾಯವಳಿದು ನಿರ್ವಯಲಾದಡೇನು ? ಕಂಥೆಯ ಕಳೆದು ನಿರ್ವಯಲಾದಡೇನು ? ಕಾಯಸಮಾಧಿ, ಕರಣಸಮಾಧಿ, ಭಾವಸಮಾಧಿಯಾದ ಬಳಿಕ, ಗೊಗೇಶ್ವರಲಿಂಗದಲ್ಲಿ ಬಯಲಭ್ರಮೆಯ ಕಳೆದು [4]ಜ್ಞಾನ[4]ಸಮಾಧಿಯನೆಯ್ದಬಲ್ಲಡೆ ಅದೇ ನಿಜಸಮಾಧಿ ಕೇಳಾ ಸಿದ್ಧರಾಮಯ್ಯ. ೬೪೯-೧೨೨3-17-3.

ಇಂತು ಸಿದ್ಧರಾಮಯ್ಯದೇವರಿಗೆ ನಿಜಯೋಗದ ನಿಲುಕಡೆಯ ನಿರೂಪಿಸಿ ಬಿಜಯಂ ಗೆಯ್ಯಲು, ಬಸವರಾಜದೇವರು ಆ ಪ್ರಭುದೇವರನಗಲಿ ಪ್ರಳಾಪಿಸುತ್ತಿದ್ದ ಪ್ರಸ್ತಾವದ ವಚನ :

---

[1] (ಶಿ) ಮಾಡುತ್ತಿಹುದಲ್ಲದೆ ಅದು ತನ್ನ ಲೀಲೆ (ಗೂ) ಮಾಡುತ್ತಿಹುದಲ್ಲದೆ ಅದು ತನ್ನಲ್ಲಿ (ಹ). [2] (ಹ ಶಿ) ಹೇಳುವ (ಗೂ). [3] (ಗೂ ಶಿ) ಕೊನೆ (ಹ). [4] (ಹ ಶಿ) ಸುಜ್ಞಾನ (ಗೂ).

ನಿಮ್ಮ ನೋಡ ನೋಡಲಿಕೆನ್ನ ಹರಣವಿದ್ದುದ ಕಂಡೆ. ನಿಮ್ಮನಗಲಲಗಲೆನ್ನ ಹರಣವಿಲ್ಲಯ್ಯ. ಇರುಳೊಂದು ಜುಗ [1]ಮೇಲೆ ಕಡೆ[1]ದಂತೆ! [2]ಅದನೆಂತು[2] ಆಳವಾಡಿ ಕಳೆವೆನೆಯ್ಯ. [3]ಹಗಲೆಲ್ಲ[3] ಹಂಬಲಿಸಿ ಹಲುಬುವೆನಯ್ಯ. ಕೂಡಲಸಂಗನ ಶರಣರ ನಗಲುವ ಧಾವತಿಯಿಂದ ಮರಣವೇ ಲೇಸಯ್ಯ. ೬೫೦-೧೨೨೪-17-4. ವೃತ್ತಂ:

ಅಯ್ಯ ನಿಮ್ಮ ಮಹಾನುಭಾವಿಗಳನಗಲಿ ಬದುಕಲಾಱೆ[3], [4]ಶಿವಧಾ[4]! [5]ಅಂಗದಾಶ್ರಯ ದಲ್ಲಿ[5] ಮುಂದುಗಾಣೆ, ಲಿಂಗಸಂಗಿಗಳನಗಲಿ ನಾನೆಂತು ಬದುಕುವೆನು, ಕೂಡಲಸಂಗಮ ದೇವ. ೬೫೧-೧೨೨೫-17-5.

ಜಜ್ಜನೆ ಜರಿದೆನು. ಜಜ್ಜನೆ ಜರಿದೆನು, [6]ಜಜ್ಜನೆ ಜರಿದೆನಯ್ಯ[6]! ಬಿಬ್ಬನೆ ಬಿರಿದೆ, ಬಿಬ್ಬನೆ ಬಿರಿದೆ, [7]ಬಿಬ್ಬನೆ ಬಿರಿದೆ[7] ನೋಡಯ್ಯ. ನಾನೊಬ್ಬನೆ ಉಳಿದೆನು, [8]ಒಬ್ಬನೆ[8] ಉಳಿದೆನು ಕೂಡಲಸಂಗಮದೇವಯ್ಯ, ನಿಮ್ಮ ಶರಣರನಗಲಿದ ಕಾರಣ. ೬೫೨-೧೨೨೬-17-6. ವೃತ್ತಂ:

ಕಂಡರೆ ಮನೋಹರವು, ಕಾಣದಿದ್ದರೆ ಅವಸ್ಥೆ ನೋಡಯ್ಯ. ಹಗಲು ಇರುಳಹುದು, ಇರುಳು ಹಗಲಹುದು. [9]ಇರುಳೂ ಹಗಲೂ ಒಂದೊಂದು [9]ಜುಗ ಮೇಲೆ ಕೆಡೆದಂತೆ ಇಹುದು. ಕೂಡಲಸಂಗನ ಶರಣರನಗಲುವ ಧಾವತಿಯಿಂದ [10]ಮರಣವೇ ಲೇಸಯ್ಯ[10]. ೬೫೩-೧೨೨೭-17-7.

ಚಿಕ್ಕದಣ್ಣಾಯಕರ ವಿಯೋಗಾವಸ್ಥೆಯ ವಚನ:

ಮನಕ್ಕೆ ಮನವೇಕಾರ್ಥವಾಗಿ, ಪ್ರಾಣಕ್ಕೆ ಪ್ರಾಣವೇಕಾರ್ಥವಾಗಿ, ಭಾವಕ್ಕೆ ಭಾವವೇಕಾರ್ಥವಾಗಿ, ಸಂಗಕ್ಕೆ ಸಂಗ ಸಮರತಿಯಾಗಿ ಕೂಡಿದ ಕೂಟವನಗಲ ಬಾರದಯ್ಯ. ಅಗಲಿ ಒಂದು ನಿಮಿಷ ಸೈರಿಸಬಾರದಯ್ಯ. ಕೂಡಲಚೆನ್ನಸಂಗ, ನಿಮ್ಮ ನಚ್ಚಿನ ಮಚ್ಚಿನ ಶರಣರನಗಲುವ ಅಗಲಿಕೆ ಎನ್ನ ಪ್ರಾಣದ ಹೋಕು ನೋಡಯ್ಯ. ೬೫೪-೧೨೨೮-17-8.

ಇಂತು ಬಸವರಾಜದೇವರು ಚೆನ್ನಬಸವರಾಜದೇವರು ವಿಯೋಗಾವಸ್ಥೆಯೊಳಿರಲು ಮಡಿವಾಳತಂದೆಗಳು ಸಂತೈಸುವ ವಚನ:

ಹೊಱಗಿದ್ದಹನೆಂಬನೆ ಒಳಗು ತಾನೆ ನೋಡಾ! ಒಳಗಿದ್ದಹನೆಂಬೆನೆ ಹೊಱಗು ತಾನೆ ನೋಡಾ. ಒಳಗು-ಹೊಱಗು ಸರ್ವಾಂಗ ಸನ್ನಿಹಿತವಾಗಿದ್ದ ಸಮರಸದ ಮಹಿಮನ ತಿಳಿದು ನೋಡಾ. ಅಗಲಲಿಲ್ಲದ ಘನವನಗಲಿದೆನೆಂಬ ಮಾತು ಶಿವಶರಣರ ಮನಕ್ಕೆ ಬಹುದೇ? ಮರಣವಿಲ್ಲದ ಮಹಿಮನ ನಿಲವ ತನ್ನಲ್ಲಿ ನೋಡಿ ಶರಣೆಂಬುದಲ್ಲದೆ ಮಱೆಯಲಹುದೇ? ತೆಱಹಿಲ್ಲದ ನಿಲವು ಕಲಿದೇವರ ದೇವನು ಕರಸ್ಥಲದೊಳಗೈದಾನೆ ಕಾಣಾ ಚೆನ್ನಬಸವಣ್ಣ. ೬೫೫-೧೨೨೯-17-9.

---

[1] (ಗೂ ಹ) ಮೇಲುಗೆಡೆ (ಶಿ). [2] ಅದೆ ಎಂತು (ಗೂ) ಅದನೆಂತು (ಹ). [3] (ಹಶಿ) ಹಲವನೆಲ್ಲ (ಗೂ). [4] ಶಿವಘೋ (ಗೂ) ಶಿವಧಾ (ಶಿ ಹ). [5] ಕಂಗಳಶ್ರುಗಳಿಂದ (ಗೂ ಹ) ಅಂಗದಾಶ್ರಯದಲ್ಲಿ (ಶಿ). [6] (ಶಿ ಹ) ನೋಡಯ್ಯ (ಗೂ). [7] (ಶಿ ಹ) × (ಗೂ). [8] (ಶಿಹ) ನಾನೊಬ್ಬನೆ (ಗೂ). [9] (ಶಿ) ಇರುಳು ಹಗಲೂ ಒಂದು (ಹ) ಇರುಳು ಹಗಲೊಂದು (ಗೂ). [10] (ಹ) ಮರಣ ಲೇಸಯ್ಯ (ಶಿ) ಮರಣವೇ ಲೇಸು ಕಂಡಯ್ಯ (ಗೂ).

ಇಂತು ಪ್ರಭುದೇವರು—ಬಸವಣ್ಣ-ಚೆನ್ನಬಸವಣ್ಣ-ಮಡಿವಾಳಮಾಚಯ್ಯದೇವರಿಗೆ ಮಹಾಜ್ಞಾನಮಂ ಬೋಧಿಸಿ, ಸಕಲ ಪುರಾತರ ಕೃತಾರ್ಥರಂ ಮಾಡಿ, ಮಹಾದೇವಿ ಯಕ್ಕಂಗೆ ನಿಜಶಿವತತ್ತ್ವಮಂ ನಿರ್ವಹಿಸಿ ತೋಱಿಕೊಟ್ಟು ಶ್ರೀಪರ್ವತಕ್ಕೆ ಕಳುಹಿ, ಸಿದ್ಧರಾಮಯ್ಯದೇವರಿಗೆ ನಿಜಸಮಾಧಿಯ ನಿರ್ಣಯಮಂ ತಿಳುಹಿ ಸೊನ್ನಲಿಗೆಯ ಪುರಕ್ಕೆ ಕಳುಹಿ, ತಾನು ನಿರ್ಗಮನ ನಡೆವಿಡಿದು, ನಾನಾದೇಶ ನಾನಾಗಿರಿ ಗಹ್ವರಾಂತ ರಂಗಳೊಳು ಸುಳಿದಾಡುತಿರ್ದನದೆಂತೆಂದಡೆ:

ನಡೆದಡೆ ನಿರ್ಗಮನಿ, ಸುಳಿದಡೆ ಗತಿವಿರಹಿತನನೇನೆಂಬೆನೆಂತೆಂಬೆ ? ಅಘಟಿತ[1]ಘಟಿತ, ಅಖಂಡಿತ ಮಹಿಮನನೇನೆಂಬೆನೆಂತೆಂಬೆ, [1]ಆದಿಯಿಂದತ್ತ ಗೊಗೇಶ್ವರಲ್ಲಯ್ಯನ ಸುಳುಹು ಜಗಕ್ಕೆ ಪಾವನ. ೬೫೬-೧೨೩೦-17-12.

ನಡೆದಡೆ ನಡೆಗೆಟ್ಟ ನಡೆಯ ನಡೆವುದಯ್ಯ. ನುಡಿದಡೆ ನುಡಿಗೆಟ್ಟ ನುಡಿಯ ನುಡಿವುದಯ್ಯ. ಒಡಲ ಹಿಡಿದಡೆ ಹಿಡಿಯದೆ ಹಿಡಿವುದಯ್ಯ. ಕೂಡುವರೆ ಕೇಡಿಲ್ಲದ ಕೂಟವ ಕೂಡುವುದಯ್ಯ, ಗೊಗೇಶ್ವರ, ನಿಮ್ಮಲ್ಲಿ ನಿಲುವುದಯ್ಯ. ೬೫೭-೧೨೩೧-17-13.

ಗಿರಿಗಳ ಗುಹೆಗಳ ಕಂದರದಲ್ಲಿ ನೆಲ ಹೊಲ ಮುಟ್ಟದೆ ಇಪ್ಪೆ ದೇವಾ! ಎಲ್ಲಿ ನೋಡಿದಡಲ್ಲಿ ಇಪ್ಪೆ ದೇವಾ! ಮನಕ್ಕಗಮ್ಯ ಅಗೋಚರನಾಗಿ ಅಲ್ಲಿ ಅಲ್ಲಿ ಎಲ್ಲಿಯೂ ನೀನೆ ಇಪ್ಪೆಯಯ್ಯ! ಗೊಗೇಶ್ವರ, [2]ನಿಂದಲ್ಲಿ ಮನದಗಲಕ್ಕೆ[2] ಹರಿವರಿದು ಕಂಡೆ ನಾನು. ೬೫೮-೧೨೩೨-17-14.

ಇಂತು ಸುಳಿದು ಬರುತಿರ್ಪ ಪ್ರಭುದೇವರು ಪೊನ್ನಾಂಬಲನಾಥನಂ ನಿರೀಕ್ಷಿಸಿ ಅಲ್ಲಿಯುಳ್ಳ ಸದ್‌ಭಕ್ತಿಯುಕ್ತರಂ, ಸದಾಚಾರ ಸನ್ಮಾರ್ಗಿಗಳಂ, ಶಿವಲಿಂಗಾರ್ಚನ ಪರಾಯಣರಂ, ಶಿವಧ್ಯಾನೈಕನಿಷ್ಠರಂ, ಶಿವಪ್ರಸಾದ ಪಾದೋದಕ ಸೇವ್ಯರಂ, ಶಿವ ಲಿಂಗಾಂಗ ಸಂಬಂಧಿಗಳಂ, ಶಿವಾನುಭಾವಸಂಪನ್ನರಂ, ಶಿವಾದ್ವೈತವೇದ್ಯರಂ—ಶಿವ ಜ್ಞಾನೋದಯ ಪ್ರಸನ್ನರೊಳು ಸದ್‌ಗೋಷ್ಠಿಸಂಬಂಧಮಂ ಸಮವೇಧಿಸಿ—ಸರ್ವರಂ ಜೀವನ್ಮುಕ್ತರಂ ಮಾಡಿ; ಅಲ್ಲಿ ಪೂರ್ವಾಬ್ಧಿಯ ತೀರಂಗೊಂಡು ರಾಮೇಶ್ವರಕ್ಕೆ ಬಂದು, ಆ ರಾಮನಾಥನೊಳು ಸುಖಸಂಕಥಾಪ್ರಸಂಗಮಂ ಮಾಡಿ, ಆ ರಾಮನಾಥನಿಂ ಪೂಜೆಯಂ ಕೈಕೊಂಡು; ಅಲ್ಲಿಂ ದಕ್ಷಿಣಸಮುದ್ರಮಂ ನಿರೀಕ್ಷಿಸಿ, ಪಶ್ಚಿಮಾಂಬುಧಿ ಯಲ್ಲಿ ನಿಂದು, ಮಹಾಬಳೇಶ್ವರಸ್ಥಾನಮಂ ಪೊಕ್ಕು, ಸ್ವಲೀಲೆಯಿಂ ತಿರುಗಿ; ಉತ್ತರಾಭಿಮುಖನಾಗಿ ಸೌರಾಷ್ಟ್ರ ಸೋಮನಾಥನಂ ನೋಡುತ್ತ, ತನ್ನ ಕಂಡ-ಕೇಳ್ದ-ಪೆಸರ್ಗೊಂಡ-ನುಡಿದ-ವಂದಿಸಿದ ಸರ್ವಜನಂಗಳ ಭವಪಾಶಬಂಧನಮಂ ಪಱಿವುತ್ತ,

---

[1] (ಶಿ) (ಹ) ಘಟಿತನನೇನೆಂಬೆನೆಂತೆಂಬೆ, ಅಖಂಡಿತಮಹಿಮನನೇನೆಂಬೆ (ಗೂ). [2] (ಶಿ) ನಿಮ್ಮನಗಲಕ್ಕೆ (ಹ) (ಗೂ).

ಅಲ್ಲಿಂ ಪೊಱಮಟ್ಟು ನಾನಾ ಪುಣ್ಯಕ್ಷೇತ್ರಂಗಳಂ ನಿರೀಕ್ಷಿಸಿ, ಆ ಕ್ಷೇತ್ರಂಗಳಿಗೆ ಅಗಣ್ಯ ಪುಣ್ಯಾವರಂಗಳಂ ಕೊಡುತ್ತ, ಅಷ್ಟಾಷಷ್ಠಿ ತೀರ್ಥಂಗಳ ಸಮಸ್ತ ನಿಕರಮಂ ಮೆಟ್ಟಿ ನೋಡಿ, ಆ ಮಹಾತೀರ್ಥಂಗಳ ಕೈಯೊಳ್ ಪೂಜೆಗೊಂಡು, ತನ್ನ ಪರಮಾನಂದ ರಸವೆಂಬ ನಿರ್ಮಲಗಂಗಾಂಬುಕಣಮಂ ಆ ಸಕಲ ತೀರ್ಥಂಗಳಿಗೆ ಕಾರುಣ್ಯದಿಂದಿತ್ತು, ನಿತ್ಯನಿರ್ಮಳಪದಮಂ ಕೊಟ್ಟು, ಅಲ್ಲಿಂ ನಾನಾ ದೇಶಂಗಳೊಳು ಸುಳಿದು ಬರುತ್ತ ತದ್ದೇಶಂಗಳಂ ಪಾವನವ ಮಾಡುತ್ತ, ಶ್ರೀ ಕೇತಾರಮಂ ಪೊಕ್ಕು, ಅತ್ಯುತ್ಕಟ ಹಿಮಮಂ ಗೆಲ್ದು, ಸಪಾ[1]ದಲಕ್ಷ[1] ಪರ್ವತಂಗಳಂ ತಿರಿಗಿ, ತದ್ಗಿರಿಗುಹಾಂತರದೊಳು ಅಲ್ಲಲ್ಲಿ ವಿಶ್ರಮಂಗೆಯ್ಯುತ್ತ, ಒಂದು ಪಿರಿದಪ್ಪ ಗುಹೆಯಂ ಕಂಡು, ಆ ನಿವಾಸದೊಳು ಸ್ವಲೀಲೆಯಿಂ ಪದ್ಮಾಸನದೊಳು ಕುಳ್ಳಿರ್ದು, ಏಕಾಗ್ರಚಿತ್ತ ಮನಪವನ ಜ್ಞಾನಧ್ಯಾನ ಸಮ್ಮತ ಸಮರಸಭಾವದಿಂ ನಿರ್ಭಾವಪದದೊಳು ನಿಂದು, ನಿಶ್ಶೂನ್ಯಮಂ ನಿರೀಕ್ಷಿಸಿ, ನಿಜ ಸಮಾಧಿಯೊಳು ಮೂರ್ತಿಗೊಂಡಿದ್ದರದೆಂತೆಂದಡೆ ತತ್‌ಸಮಾಧಿಯ ಪ್ರಸ್ತಾವದ ವಚನ :

ಅಚಲಸಿಂಹಾಸನದಲ್ಲಿ ನಿಶ್ಚಲವೆಂಬ ಮಂಟಪವು! ಸಂಚಲದೋವರಿಯೊಳಗೆ ರುಚಿಗಳೆಲ್ಲವ ನಿಲಿಸಿ, ಪಂಚರತ್ನದ ಶಿಖರ ಮಿಂಚುವ ಕೋಟೆಯ ಕಳಶ! ವಚನಚಿತ್ರದ ಪುಷ್ಪದ ರಚನೆ! ನವರಂಗದಲ್ಲಿ ಖೇಚರಾದಿ ಗಮನವನು ವಿಚಾರಪರ ನುಂಗಿ ಗೊಗೇಶ್ವರ ನಿಂದ ನಿಲವು ಸಚರಾಚರವ ಮೀಱಿತ್ತು! ೬೫೯-೧೨೩೩-17-15. ಮತ್ತಂ :

ಸ್ವಸ್ಥಾನ [2][ಸುಸ್ಥಿರ][2] ಸುಮನಮಂಟಪದೊಳಗೆ ನಿತ್ಯನಿರಂಜನಪ್ರಭೆಯ ಬೆಳಗು. ಶಿವಯೋಗದನುಭಾವ ಏಕಾರ್ಥವಾಗಿ, ಗೊಗೇಶ್ವರ, ನಿಮ್ಮ ಶರಣನುಪಮಾತೀತನಾಗಿದ್ದನು. ೬೬೦-೧೨೩೪-17-16. ಮತ್ತಂ :

ಸ್ಥೂಲ-ಸೂಕ್ಷ್ಮದೊಳಗೆ ಬೆಳಗುವ ಮಹಾ ಬೆಳಗಾಗಿ ಹೊಳೆವ ಜ್ಞಾನಜ್ಯೋತಿ ದಳಗಳೆಲ್ಲವ ಮೀಱಿ, ನೆಳಲ ನುಂಗಿದ ಬಿಸಿಲಿನೊಳಗೆ ಚಂದ್ರಮನುದಯ. ಜಲಧಿ ವಳಯದ ಬೆಳಸ ಹೇಳಲಾರಳವಲ್ಲ. ಆಳು ಆಳ್ದನ ನುಂಗಿ, ಈರೇಳು ಭುವನವ ದಾಂಟ ಗೊಗೇಶ್ವರ ನಿಂದ ನಿಲವು ಹೊಱಗು-ಒಳಗ ನುಂಗಿತ್ತು. ೬೬೧-೧೨೩೫-17-17.

ಜಲದೊಳಗೆ [3]ಹುಟ್ಟಿದ[3] ಹಲವು ಬಣ್ಣದ ವೃಕ್ಷ ಕೊಂಬಿಲ್ಲದೆ ಹೂವಾಯಿತ್ತು. ಇಂಬಿನಲ್ಲಿ ಫಲಮೋಱಿ, ಜಂಬೂದ್ವೀಪದ ಮುಗ್ಧೆ ಅ[=ಯ ?]ಂಗೈಯ [4]ಅ[1]ರಳುದಲೆ ಇಂದ್ರನ ವಾಹನವ ನುಂಗಿ, ಬ್ರಹ್ಮರಂಧ್ರದೊಳಗೆ [5]ಅಶನಪವನವ[5] ಸೂಸಿ [6]ಬೀಸರ ವೋಗದ[6] ಶಿವಯೋಗ. ಸಾಕ್ಷೀಭೂತಾತ್ಮದ ಮಾತು ಮಥನವ ನುಂಗಿ, ಜ್ಯೋತಿ

---

[1] (ಶಿ) ಸವಾಲಕ್ಷ (ಹಗೂ). [2] ಸ್ವಸ್ಥಿರ (ಸರ್ವತ್ರ) NOTE : "ಸ್ವರೂಪಿ"ಯೊಡನೆ ಹೋಲಿಸಿ. [3] (ಗೂ) ಜಲಹುಟ್ಟಿ (ಶಿಹ). [4] (ಗೂಹ) ಲ (ಶಿ). [5] (ಶಿ) ಆಸನ ಪವನವ (ಗೂ) ಆಸನ ಪವನ ದೃಢ (ಹ). [6] (ಗೂಹ) ಬೀಸದ (ಶಿ).

ಯೊಳಗಣ [1]ಕರ್ಪುರ ಬೆಳಗುವಂತಿದ್ದಿತ್ತು[1], [2]ಗೊಗೇಶ್ವರಲಿಂಗದ[2] ಯೋಗವು. ೬೬೨-೧೨೩೬-17-18. ಮತ್ತಂ :

ಸಹಸ್ರದೆಂಟನೆಯ ದಳದಲ್ಲಿ ಖೇಚರ [3]ಚಲ್ಲಣ[3]ಗಟ್ಟಿ, ವಾಸುಗಿ ಫಣಿ ಪ್ರಜ್ವಲಿಸುವುದ ಕಂಡೆ. ಆ ಸುರರೆಲ್ಲಾ ತಮತಮಗಂಜಿ ಓಸರಿಸಿ ಮುಂದೆ [4]ನಡೆದಲ್ಲಿ[4] ನಾಸಿಕ ಮನ ಮುಸುಕುವುದ ಕಂಡೆ. ತಾ ಸುಖಿಯಾದ [[5]ಆ ಪ್ರವೇಶದಿಂದ[5]] ಗೊಸಾಸಿರ ನಡೆ ಗೆಟ್ಟವು, ಗೊಗೇಶ್ವರ, ನಿಮ್ಮ ನೆರೆದೆನಾಗಿ. ೬೬೩-೧೨೩೭-17-19 ಮತ್ತಂ :

ಜಗದಗಲದ ಮಂಟಪಕ್ಕೆ ಮುಗಿಲಗಲದ ಮೇಲುಕಟ್ಟಿನಲಿ ವಿಚಿತ್ರವ ನೋಡುತ್ತ [6]ನೋಡುತ್ತ[6], ಧ್ಯಾನವಿಶ್ರಾಂತಿಯಲಿ ದಿಟ ದಿಟವೆಂಬುದೊಂದು ದರುಶನವ ನೋಡುತ್ತ [7]ನೋಡುತ್ತ, ನೋಟ[7] ಗಗನ ಗಂಭೀರದಲ್ಲಿ ಉದಯವಾಯಿತ್ತ ಕಂಡೆ, ಗೊಗೇಶ್ವರ ಲಿಂಗ ತಾನಾಗಿ. ೬೬೪-೧೨೩೮-17-20.

ಏಳು [8]ತಾಳದ[8], ಮೇಲೆ ಕೇಳುವ ಸುನಾದ, ಸ್ಥೂಲಸೂಕ್ಷ್ಮ ಕೈಲಾಸದ ರಭಸ, ಗಂಗೆವಾಳುಕ ಸಮಾರುದ್ರರ ತಿಂಥಿಣಿ. ಗಗನ ಗಂಭೀರದ ಶಿವಸ್ತುತಿಯ ನೋಡ ನೋಡಲು ಪಿಂಡ ಬ್ರಹ್ಮಾಂಡವಾಯಿತ್ತು. ಅಖಂಡಿತ ನಿರಾಳ ಗೊಗೇಶ್ವರ. ೬೬೫-೧೨೩೯-17-21. ಮತ್ತಂ :

[9]ಪಂಚಬ್ರಹ್ಮದ ಮೇಲೆ ಪ್ರಣವಮಂತ್ರವಪ್ಪ[9] ಪಂಚಮುಖ ದಶಭುಜA ದ A ಫಣಿಯ ಮಣಿಯ ಮೇಲೆ ನೋಡುತ್ತೈದಾನೆ, ಈರೇಳು ಭುವನವೆಲ್ಲ ತಾನಾಗಿ ಸಮತೆ-ಸಮಾಧಿ ಯೆಂಬ ಸಮರಸದೊಳಗೆ ಚಂದ್ರಕಾಂತದ ಕೊಡನೊಳಗೆ [10]ಬಿಂದುವಿನ[10] ಅಮೃತವ ತುಂಬಿ ಕೊಡನೊಡೆಯದೆ ಬೆಳಗುತ್ತಿದ್ದೆನು ಗೊಗೇಶ್ವರ. ೬೬೬-೧೨೪೦-17-22. ಮತ್ತಂ :

ಬಂದೂ ಬಾರದು, ಹೊಂದಿಯೂ ಹೊಂದದು. ನಿಂದೂ ನಿಲ್ಲದ ಪರಿಯ ನೋಡಾ. ಅಖಂಡ ಚರಿತ್ರವನೇನೆಂದುಪಮಿಸುವೆನಯ್ಯ! ನವಖಂಡ ಪೃಥ್ವಿಯನೊಳಕೊಂಡ ಬಯಲು! ಅಗಮ್ಯ [11]ಸಮಾಧಿಸಂಯೋಗದಲ್ಲಿ[11] ಗೊಗೇಶ್ವರ ಲಿಂಗವನೇನೆಂದುಪ ಮಿಸುವೆ?! ೬೬೭-೧೨೪೧-17-23. ಮತ್ತಂ :

ಖೇಚರಪವನದಂತೆ ಜಾತಿಯೋಗಿಯ ನಿಲವು. ಮಾತಿನೊಳು [12]ಧಾತು[12] ನುಂಗಿ ಉಗುಳದಿನ್ನೆಂತೋ?! ಭೂಚಕ್ರವಳಯವನು ಆಚಾರ್ಯ [13]ರಚಿಸಿದ[13]. ಗ್ರಾಮವೆಲ್ಲವ ಸುಟ್ಟು ನೇಮ ನೆಲಗತವಾಯಿತು. ನಾಮ ನೇಮವ ನುಂಗಿ, ಗ್ರಾಮ ಪ್ರಭುವನೆ ನುಂಗಿ,

[1] (ಶಿ) ಕರ್ಪುರದ ಬೆಳಗಿನಂತಿದ್ದಿತ್ತು (ಗೂಹ). [2] (ಹ) ಗೊಹೇಶ್ವರಲಿಂಗದಲ್ಲಿ (ಗೂಶಿ) [3] (ಗೂಶಿ) ಚಲ್ಲಣಿ (ಹ). [4] (ಹ) ನಡೆವಲ್ಲಿ (ಗೂಶಿ). [5] ಆ ಪ್ರದೇಶದಿಂದ (ಹ) ಆ ವೇಶದಿಂದ (ಶಿ) ಸುಖಮುಖಪ್ರವೇಶದಿಂದ (ಗೂ). [6] (ಹಗೂ) × (ಶಿ). [7] (ಹ) ನೋಟ (ಶಿ) × (ಗೂ). [8] (ಶಿ) ತಾಳ (ಹಗೂ). [9] (ಹಶಿ) ಪಂಚಬ್ರಹ್ಮಮೂರ್ತಿ ಪ್ರಣವಮಂತ್ರರೂಪ (ಗೂ) A(ಹಗೂ) × (ಶಿ). [10] (ಹಶಿ) × (ಗೂ). [11] (ಹಶಿ) ಸಂಯೋಗ ಸಮಾಧಿಯಲ್ಲಿ (ಗೂ). [12] (ಗೂಹ) ಮಾತ (ಶಿ). [13] (ಹಶಿ) ರಚಿಸಿ (ಗೂ).

ಗೊಗೇಶ್ವರ ಗೊಗೇಶ್ವರ ಎನುತ್ತ ನಿರ್ವಯಲಾಯಿತ್ತು. ೬೬೮-೧೨೪೭-17-24, ಮತ್ತಂ:

ಇಹಲೋಕ ಪರಲೋಕ ತಾನಿದ್ದಲ್ಲಿ, ಗಗನ ಮೇರುಮಂದಿರ ತಾನಿದ್ದಲ್ಲಿ, ಸಕಲ ಭುವನ ಸತ್ಯಲೋಕ ತಾನಿದ್ದಲ್ಲಿ, ನಿತ್ಯನಿರಂಜನತತ್ವ ತಾನಿದ್ದಲ್ಲಿ, ಉತ್ತರೋತ್ತರ [1]ಪದವಿ[1] ತಾನಿದ್ದಲ್ಲಿ, ಚಂದ್ರ-ಸೂರ್ಯ-ತಾರಾಮಂಡಲ ತಾನಿದ್ದಲ್ಲಿ. ಅಂತರ ಮಹದಂತರ ತಾನಿದ್ದಲ್ಲಿ, ಸ್ವತಂತ್ರ ಗೊಗೇಶ್ವರ ತಾನಿದ್ದಲ್ಲಿ. ೬೬೯-೧೨೪೩-17-25.

ಇಂತು [2]ಪರಮ[2]ಶಿವಯೋಗದಲ್ಲಿ ನಿಂದು ನಿರವಯನಾಗಿ, ಅನಂತಕೋಟಿ ಬ್ರಹ್ಮಾಂಡಂಗಳೆಲ್ಲವನು ತನ್ನ ಮಹಾಜ್ಞಾನ ಪ್ರಕಾಶದಲ್ಲಿ ಆಲಿಂಗಿಸಿ, ತೊಳಗಿ ಬೆಳಗಿ ಒಪ್ಪುತ್ತಿಪ್ಪ ಪ್ರಭುದೇವರು ತಮ್ಮ ಲೀಲೆಯವಸಾನಕಾಲವಂ ವಿವೇಕದಿಂ ತಿಳಿದೆದ್ದು ಕಲ್ಯಾಣದತ್ತಲಭಿಮುಖವಾಗಿ ಬರುತಿರ್ಪಾಗಳು; ಇತ್ತಲು ಬಸವರಾಜದೇವರು—ಪ್ರಭುದೇವರು ಬರಬೇಕೆಂದು, ಶೂನ್ಯಸಿಂಹಾಸನವಂ [3]ರಚಿಯಿಸಿ[3], ಬರವ ಹಾರುತ್ತಿದ್ದರದೆಂತೆಂದೊಡೆ—ಆ ಪ್ರಸ್ತಾವದೊಳು ಹಡಪದಪ್ಪಣ್ಣಗಳ ವಚನ:

ಅಷ್ಟದಳಕಮಲದ ಹೂಗಲ್ಲ ಹಿಡಿದು ಶೂನ್ಯಸಿಂಹಾಸನಕ್ಕೆ ಧವಳಾಲಯವೆತ್ತಿತ್ತು. ಚಂದ್ರಕಾಂತದ ಶಿಲೆಯಲ್ಲಿ ಪಶ್ಚಿಮದ್ವಾರವಂ ತೆಗೆದು ನೋಡುವರೆ ವಿಪರೀತ!: ಏಕೋಭಾವನೆಂಬುದೊಂದು ಕಂಭ; ಅದಕ್ಕೆ ಅನೇಕ ಚಿತ್ರಗಳಡಗಿದ [4]ಪ್ರಭೆ[4]. ಆ ಪ್ರಭೆಯೊಳಗೆ ಬ್ರಹ್ಮರಂಧ್ರವೆಂಬ ಮಸ್ತಕದ ಮೇಲೆ [5]ಪಂಚ[5]ಮೌಕ್ತಿಕದ ಮಾಲೆಯ ನಿಳಿಯ ಬಿಟ್ಟು, ಮೂಲೆ ಮೂಲೆಗಳ ನಡುವೆ [6]ಕಟ್ಟಿದವು ನವರತ್ನದ ಗೊಂಡೆಯಂಗಳು[6] ಕಾಳಿಕೆಯ ಕಪ್ಪಡವದಕೆ ಮೇಲುವೊದಕೆ. ಉಲುಹಿನ ಅರಳೆಲೆಯ ಬಳಸುದೋರಣವ ಕಟ್ಟಿ, ದಶವಾಯುವನೆಲ್ಲವನೊಂದು ಮಾಡಿ ಲಿಂಗಸುಖವಾಯುವ ಸಂತೈಸಿ ಆಲವಟ್ಟವಂ ಮಾಡಿ, ಲಂಬಿಸಿದ ಮಂದಾನಿಳನಂ ಮಲಗು ಮಾಡಿ, ಹರುಷವನೆ ವಸಂತನ ಚೌಕದ ಆಸನ[6]ವ[6]ಟ್ಟಗೆಯ ಮಾಡಿ, ನವನಾಳದೊಳು ಮೊರೆವ ಶಬ್ದವಂ ಶುಕಪಿಕ ಭ್ರಮರಂಗಳ ಆಮೋದವಂ ಮಾಡಿ, ಪರಮಶಾಂತಿಯೆಂಬ ಶೈತ್ಯಾಕಾರದ ಸುಸೋಂಕಿನ ಚೂತಪಲ್ಲವಂಗಳಂ ಹಾಸಿ, ಉತ್ತರದ್ವಾರವೆಂಬ ನುಸುಳು[7]ಗಂಡಿಯಂ[7] ರಚಿಸಿ, ಪೂರ್ವ [8]ಯೋಗಂಗಳೆಂಬ[8] ಸೋಪಾನವಂ ಮಾಡಿ, ಪಶ್ಚಿಮ[9]ನಾಳ[9]ವೆಂಬ ನಿಜದ್ವಾರವಟ್ಟವಂ ಮಾಡಿ, ಸಪ್ತವ್ಯಸನ ಪಂಚೇಂದ್ರಿಯಂಗಳೆಂಬ ಪೌಳಿಯನಿಕ್ಕಿ, ಆಶೆಯಾವಿಷವಂ ಕೆಡಿಸಿ, ಊರ್ಧ್ವಚಕ್ರವೆಂಬ ಮೇಲುಪ್ಪರಿಗೆಯಂ ಮಾಡಿ, ಚಂದ್ರ ಸೂರ್ಯರೆಂಬ [10]ದೀಪಂಗಳ [10]ಬೆಳಗಿ, ಸೋಹವೆಂಬ ಶಿಖರಿಯ ಮೇಲೆ ಮಹಾಜ್ಞಾನ-ಪ್ರಕಾಶವೆಂಬ ಹೊನ್ನಕಳಶವಂ ಮಾಡಿ, ನಿಶ್ಶೂನ್ಯನಿರಾಳವೆಂಬ ಶೂನ್ಯಸಿಂಹಾಸನವಂ ಮಾಡಿದ ಬಸವಪ್ರಿಯ ಕೂಡಲ ಚೆನ್ನಸಂಗಯ್ಯನಲ್ಲಿ ಎನ್ನ ಪರಮಗುರು ಬಸವಣ್ಣನು. ೬೭೦–೧೨೪೪-17-26.

---

[1] (ಹಶಿ) ಪದ (ಗೂ). [2] (ಶಿ) ಪರ (ಗೂಹ). [3] (ಶಿ) ರಚಿಸಿ (ಗೂಹ) [4] (ಗೂ) × (ಶಿಹ). [5] (ಗೂ) ಪಂಜರ (ಶಿಹ). [6] (ಶಿಗೂ) ಕಟ್ಟಿದವು ನವರತ್ನದ ಗೊಂಡೆಹಂಗಳು (ಹ). [7] (ಗೂಶಿ) ಗನ್ನಡಿ (ಹ). [8] (ಶಿಹ) ಯೋಗವೆಂಬ (ಗೂ). [9] (ಶಿ) ದ್ವಾರ (ಗೂಹ). [10] (ಶಿ)ದೀಪಮಂ (ಗೂಹ).

ಅಂಗದ ಪ್ರಕೃತಿಯ ಲಿಂಗದಲ್ಲಿ ಅಳಿದು, ಮನದ ವಿಕೃತಿಯ ಅಱಿವಿನಲ್ಲಿ ಅಳಿದು, ಜೀವಭ್ರಾಂತಿಯ ನಿಶ್ಚಿತ ಪದದಲ್ಲಿ ಅಳಿದು, ನಿಶ್ಶೂನ್ಯ ನಿರಾಮಯವಾದ ನಿವಾಸಕ್ಕೆ ಸದಾಚಾರವೆಂಬ ಕೆಸಱುಗಲ್ಲನಿಕ್ಕಿ, ಸರ್ವಾಚಾರ ಸಂಪತ್ತೆಂಬ ಹೂಗಲ್ಲ ಮುಚ್ಚಿ, ಅಂತಃಕರಣ ಚತುಷ್ಟಯವೆಂಬ ನಾಲ್ಕು ಕಂಭಂಗಳಂ ನಿಲಿಸಿ, ಜ್ಞಾತೃವೆಂಬ ಭಿತ್ತಿಯ ಮೇಲೆ ಜ್ಞಾನವೆಂಬ ಶಿಖರಿಯನನುಗೊಳಿಸಿ, ಜ್ಞೇಯವೆಂಬ ಹೊನ್ನಕಳಶವಂ ಶೃಂಗಾರ ಮಂ ಮಾಡಿ, ಬ್ರಹ್ಮರಂಧ್ರದ ಊರ್ಧ್ವದ್ವಾರವೆಂಬ ನಿಜದ್ವಾರಮಂ ಮಾಡಿ, ನಿರ್ವಯ ಲಲ್ಲಿ ನೆಲೆಗೊಳಿಸಿ ಬಸವಪ್ರಿಯ ಕೂಡಲ ಚೆನ್ನಸಂಗಯ್ಯನ ಶರಣ ಪ್ರಭುದೇವರ ಬರವಿಂಗೆ **ಶೂನ್ಯಸಿಂಹಾಸನವ** ರಚಿಸಿ, ಬರವ ಹಾರುತ್ತಿರ್ದನೆನ್ನ ಪರಮಗುರು ಬಸವಣ್ಣನು. ೬೭೧-೧೨೪೫-17-27.

ಆ ಪ್ರಸ್ತಾವದೊಳು ಪ್ರಭುದೇವರ ಬರವಿಂಗೆ ಗುಡಿತೋರಣಮಂ ಕಟ್ಟಿ ಸಂಭ್ರಮಿಸು ತ್ತಿರ್ದ ಪ್ರಸ್ತಾವದ ವಚನ:

ಉಪ್ಪರಗುಡಿ ತೋರಣವ ಕಟ್ಟಿತ್ತು ಕಲ್ಯಾಣದಲ್ಲಿ. ಅಷ್ಟ[1]ದ್ವಾರ[1]ದಂಗಡಿ ರಾಜಬೀದಿ ಯೊಳೆಲ್ಲಾ ವ್ಯಾಸಬಾಹುಗಳುಪ್ಪರಿಸಿದವು. ಎಂಟು ಬಾಗಿಲಲ್ಲಿ [2]ನಡೆಮಡಿಗಳ[2] ಹಾಸಿ ಸಂಕಲ್ಪಸಂತೋಷವ ಮಾಡಿದನು **ವೃಷಭೇಶ್ವರನು,** ಬಸವಪ್ರಿಯ ಕೂಡಲ ಚೆನ್ನ ಸಂಗಯ್ಯ ಬಂದಹನೆಂದು. ೬೭೨-೧೨೪೬-17-28.

ಇಂತು ಶೂನ್ಯ ಸಿಂಹಾಸನವ ರಚಿಸಿ ಬಸವರಾಜದೇವರು ಪ್ರಭುದೇವರ ಬರವ ಹಾರು ತ್ತಿದ್ದ ವಚನ:

ಹಮ್ಮಿ ಹನ್ನೆರಡು ಸಂವತ್ಸರ ಹಿಂದಾಯಿತ್ತು. ಏನ ಮಾಡಿದಡೇನಯ್ಯ, ಎನ್ನಲ್ಲಿ ದಿಟವಿಲ್ಲದನ್ನಕ್ಕರ ? [2]ಏನ ಹಮ್ಮಿದರೇನಯ್ಯ[2] ಎನ್ನಲ್ಲಿ ದಿಟವಿಲ್ಲದನ್ನಕ್ಕರ? ಎನ್ನ ಪುಣ್ಯದ ಫಲ, ಕೂಡಲ ಸಂಗಮದೇವ, ಬಾಯಿನದುಂಡೆಗೆ ತೋಯನಟ್ಟಂತಾಯಿತ್ತು. ೬೭೩-೧೨೪೭-17-29.

ಸಮುದ್ರಕ್ಕೆ ಚಂದ್ರಮನ ಬರವೆ ಜೀವಾಳವಯ್ಯ. ಬತ್ತಿದ ಕೆಱೆಯ ಕಮಲಕ್ಕೆ ಉದಕವೆ ಜೀವಾಳವಯ್ಯ. ಚಕೋರಂಗೆ ಚಂದ್ರನೆ ಜೀವಾಳವಯ್ಯ. ಕೂಡಲ ಸಂಗಮ ದೇವ, ಎನಗೆ ನಿಮ್ಮ ಶರಣರ ಬರವೆ ಜೀವಾಳವಯ್ಯ ! ೬೭೪-೧೨೪೮-17-30.

ಕಾಣ ಬಹುದೇ ಪರುಷದ ಗಿರಿ ಅಂಧಕಂಗೆ? ಮೊಗೆಯ ಬಹುದೇ ರಸದ ಭಾವಿ ನಿರ್ಭಾಗ್ಯಂಗೆ? ತೆಗೆಯಬಹುದೇ [4]ಕಡವರ ನಿಧಾನ[4] ದರಿದ್ರಂಗೆ? ಕಱೆವುದೇ ಕಾಮಧೇನು ಅಶುದ್ಧಂಗೆ? ಕೂಡಲ ಸಂಗನ ಶರಣನು-ಪುಣ್ಯವಿಲ್ಲದ ಕಾಲಕ್ಕೆ ಎನಗೆ ಕಾಣಬಹುದೇ ?! ೫೭೫-೧೬೪೯-17-32.

---

[1] (ಶಿಗೂ) ದಿಗ್ದ್ವಾರ (ಹ). [2] (ಹಶಿ) ನಡೆಮಡಿಯ (ಗೂ). [3] (ಗೂ) ಎನ್ನ ಹಮ್ಮಿಂದ ಲೇನಯ್ಯ (ಹಶಿ). [4] (ಶಿ) ಕಡವರ (ಹ) ಕಡವರವ (ಗೂ).

ಸೂರ್ಯನ ಬರವು ತಾವರೆಗೆ ಜೀವಾಳವಯ್ಯ. ಚಂದ್ರನ ಬರವು ನೈದಿಲಿಗೆ ಜೀವಾಳವಯ್ಯ. ಕೂಪ ಠಾವಿನಲ್ಲಿ [1]ಕೂಟವೆ[1] ಜೀವಾಳವಯ್ಯ, ಕೂಡಲ ಸಂಗನ ಶರಣರ ಬರವು ಎನಗೆ ಜೀವಾಳವಯ್ಯ. ೬೭೬-೧೨೫೦-17-32.

ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ, ಬಳಿದಪ್ಪಿದ ಕಱು ತನ್ನ ಹಿಂಡ ಬಯಸುವಂತೆ ಬಯಸುತಿದ್ದೆನಯ್ಯ ನಿಮ್ಮ ಶರಣರ ಬರವನು! ದಿನಕರನುದಯಕ್ಕೆ ಕಮಲ ವಿಕಸಿತವಪ್ಪಂತೆ ಎನಗೆ ನಿಮ್ಮ [2]ಶರಣರ[2] ಬರವು, ಕೂಡಲ ಸಂಗಮದೇವ. ೬೭೭-೧೨೫೧-17-33.

ಎಡದ ಕೈಯಲಿ ಹಾಲ ಬಟ್ಟಲು, ಬಲದ ಕೈಯಲಿ [3]ಓಜುಗಟ್ಟಿಗೆ[3], ಆವಾಗ ಬಂದಹನು ನಮ್ಮಯ್ಯನು ಬಡಿದು ಹಾಲ ಕುಡಿಸಲೆಂದು?

ದಂಡಕ್ಷೀರದ್ವಯಂ ಹಸ್ತೇ ಜಂಗಮೋ ಭಕ್ತಮಂದಿರಂ ।
ಅತಿಭಕ್ತ್ಯಾ ಲಿಂಗತುಷ್ಟಿರಪಹಾಸಾಚ್ಚ ದಂಡನಂ ॥

ಇಂತೆಂದುದಾಗಿ, ಕೂಡಲ ಸಂಗಮದೇವ, ಭಕ್ತಿಯ ಪಥವ ತೋಱುವ ತಂದೆ ಆವಾಗ ಬಂದಹನು?! ೬೭೮-೧೨೫೨-17-34.

ಇದಕ್ಕೆ ಚಿಕ್ಕದಣ್ಣಾಯಕರ ಉತ್ತರ:

ಮನದಂತೆ ಮಂಗಳವೆಂಬುದು ತಪ್ಪದು ನೋಡಾ, ಬಸವಣ್ಣ! ಅಱಸುವಂಗೆ ಅಱಕೆ ಸಾಧ್ಯವಪ್ಪುದು—ತಪ್ಪದು ನೋಡಾ ಬಸವಣ್ಣ! ನಿಮ್ಮ ಮನದಾರ್ತವನಡಗಿಸುವಡೆ ಕೂಡಲ ಚೆನ್ನ ಸಂಗಮದೇವರ ಶರಣ ಪ್ರಭುದೇವರು ಬಹುದು ತಪ್ಪಲಱಿಯದು ಕೇಳಾ ಸಂಗನ ಬಸವಣ್ಣ. ೬೭೯-೧೨೫೩-17-35.

ಇದಕ್ಕೆ ಮಡಿವಾಳ ತಂದೆಗಳ ಉತ್ತರ:

ಮಾಡುವ ಭಕ್ತಂಗೆ,ಒಲಿವ ದೇವಂಗೆ ಭೇದವುಂಟೇ ಅಯ್ಯ? ಕಾಯದೊಳಗೆ ಕಾಯವಾಗಿಪ್ಪ, ಪ್ರಾಣದೊಳಗೆ ಪ್ರಾಣವಾಗಿಪ್ಪ. ಅಱಸಿಹೆನೆಂದರೆ ತಾನೆಯಾಗಿಪ್ಪ! ಅಱಸಿ ಬಯಸಿದರೆ ಕರುಣದಿಂದ ನಡೆದು ಬಹನು. [4]ಕಲಿದೇವರ ದೇವನ ಬರವನೀಗಳೆ ತೋಱಿ ಕೊಟ್ಟಹೆನು ಕಾಣಾ[4] ಸಂಗನ ಬಸವಣ್ಣ. ೬೮೦-೧೨೫೩-17-36.

ಇದಕ್ಕೆ ಬಸವಣ್ಣನ ಪ್ರತ್ಯುತ್ತರ:

ಹಸಿದಳುವ ಶಿಶುವಿಂಗೆ ತಾಯಿ ಮೊಲೆಯ ಕೊಟ್ಟರೆ, ಆ ಶಿಶು ಜೀವಿಸದಿಪ್ಪುದೆ ಹೇಳಯ್ಯ!? ಪ್ರಾಣವಲ್ಲಭನ ಅಗಲಿಕೆಯಿಂದ ಪ್ರಾಣವಿಯೋಗ[5]ವಾಗುತ್ತಿಹ[5] ಹೆಂಗೂಸಿಂಗೆ ಆ ಪ್ರಾಣವಲ್ಲಭ ಬಂದರೆ ವಿರಹ [6][ಸಂತೈಸದಿಪ್ಪುದೆ][6] ಹೇಳಯ್ಯ? ಕೂಡಲ

---

[1] (ಹಶಿ) ನೋಟವೆ (ಗೂ). [2] (ಗೂ) × (ಶಿಹ). [3] (ಗೂ) ವಾಜುಗಟ್ಟಿಗೆ (ಹ) ಒಂದು ಕಟ್ಟಿಗೆ (ಶಿ) ಓಜಗಟ್ಟಿಗೆ (ಗೂ R. ಇ ಈ) [4] ಕಲಿದೇವರದೇವನ ಬರವನೀಗಳೆ ತೋಱಿ ಕೊಟ್ಟಹೆನು ಕೇಳಾ (ಹ) (ಗೂ) ಕಲಿದೇವರ ದೇವನ ಬರವನೀಗಳೆ ತೊಱಿಕೊಟ್ಟಹೆನು ಕಾಣಾ (ಶಿ). [5] (ಹಶಿ) ವಾಗಿಹ (ಗೂ). [6] ಸಂತಾಪಿಸದಿಪ್ಪುದೆ (ಸರ್ವತ್ರ).

ಸಂಗಮದೇವರು ಸಾಕ್ಷಿಯಾಗಿ ಪ್ರಭುವೆನ್ನ ಮನೆಗೆ ಬಂದರೆ, ಎನ್ನ ಬಯಕೆ ಕೈಸಾರಿ, ಚೆನ್ನಬಸವಣ್ಣನ ಕರುಣದ ಕಂದನಾಗಿ ಉಳಿವೆನು ಕಾಣಾ ಮಡಿವಾಳ ಮಾಚಯ್ಯ. ೬೮೧-೧೨೫೫-17-37.

ಇಂತು ನುಡಿವುತ್ತಿರ್ಪ ಪ್ರಸ್ತಾವದೊಳು ಪ್ರಭುದೇವರ ಬರವಿನ ಸೂಚನೆ ಬಸವರಾಜ ದೇವರಿಗೆ ತೋಱುತ್ತಿದ್ದಿತ್ತು. ಅದೆಂತೆಂದೊಡೆ, ವಚನ:

ಅಂಗೈ ತಿಂದಹುದೆನ್ನ ಕಂಗಳು ಕೆತ್ತಿಹವಯ್ಯ, ಬಂದಹರೇಕಯ್ಯ ಎನ್ನ ಮನೆಗೆ ಪ್ರಮಥರು! ಬಂದಹರೇಕಯ್ಯ ಎನ್ನ ಮನೆಗೆ ಪುರಾತನರು! ಕಂಡ ಕನಸು ದಿಟವಾಗಿ ಜಂಗಮ ಮನೆಗೆ ಬಂದರೆ ಶಿವಾರ್ಚನೆಯ ಮಾಡುವೆನು, ಕೂಡಲ ಸಂಗಮದೇವ, ನಿಮ್ಮ ಮುಂದೆ! ೬೮೨-೧೨೫೬-17-38.

ಇದಕ್ಕೆ ಮೋಳಿಗೆಯ ಮಾರಿತಂದೆಗಳ ಪ್ರತ್ಯುತ್ತರ:

ನಿಮಿತ್ತ ಶುಭಸೂಚನೆಯ ಬಿನ್ನಪವನವಧರಿಸು, ಅತಿಥಿಯ ಮಸ್ತಕ ತಾಗಿ ಶೂನ್ಯ **ಸಿಂಹಾಸನದ** ಫಳಹಾರಂಗಳೆಲ್ಲವೂ ಅಲ್ಲಾಡುವುದ ಕಂಡೆನಯ್ಯ! ಮುತ್ತಿನಾರತಿಯ ಹಿಡಿದುಕೊಂಡು ಮುಕ್ತಿವನಿತೆಯರು ನಿತ್ಯನಿರಂಜನಂಗೆ ನಿವಾಳಿಸುವುದ ಕಂಡೆನಯ್ಯ! ಇದಱಿಂದ, ನಿಃಕಳಂಕ ಮಲ್ಲಿಕಾರ್ಜುನದೇವರು ಬಾರದಿರ್ದಡೆ ನೀನಾದಂತೆ ಅಹೆನು. ಕಟ್ಟು ಗುಡಿಯ ಸಂಗನ ಬಸವಣ್ಣ. ೬೮೩-೧೨೫೭-17-39.

ಇದಕ್ಕೆ ಸೊಡ್ಡಳ ಬಾಚರಸರ ಪ್ರತ್ಯುತ್ತರ:

ಮನದೊಡೆಯ ಮನೆಗೆ ಬಹಡೆ ಮನ ಮನ ಅಚ್ಚೊತ್ತಿದಂತಿಪ್ಪುದು ನೋಡಯ್ಯ ಮನಕ್ಕೆ ಮನೋಹರ, ಚಿತ್ತಕ್ಕೆ ಮನೋಹರವಾಗಿಪ್ಪುದಯ್ಯ! ಮಹಾದಾನಿ ಸೊಡ್ಡಳನ ಬರವಿಂಗೆ ಶುಭಸೂಚನೆ ಮೈದೋಱುತ್ತಿದೆ—ಪ್ರಭುದೇವರ ಬರವನೀಗಳೆ ತೋಱುವೆನಯ್ಯ ಸಂಗನ ಬಸವಣ್ಣ. ೬೮೪-೧೨೫೮-17-40.

ಇದಕ್ಕೆ ಬಸವರಾಜದೇವರ ಕೃತನಿಶ್ಚಯದ ವಚನ:

ಶರಣೆಂದು ಕರಸಂತೋಷವ ಮಾಡಿ, ಮುರಿದು ಮುಂಜೆಱಗ ಗಂಟನಿಕ್ಕಿ! ನೆಲನ ಹೊಯಿದ ಕೈತಪ್ಪುವುದಲ್ಲದೆ ಆದಿಯ ಶರಣರ ನುಡಿ ತಪ್ಪುವುದೆ? ಕೂಡಲಸಂಗಮದೇವರು ಸಾಕ್ಷಿಯಾಗಿ ಕಟ್ಟುವೆನು ಗುಡಿಯನೆತ್ತುವೆನು ಧ್ವಜವ. ೬೮೫-೧೨೫೯-17-41.

ಅಡವಿಯೊಳಗೆ ನೀರಡಸಿ—ಎಡೆಯಲ್ಲಿ ನೀರ ಕಂಡಂತಾದೆನಯ್ಯ! ಕುರುಡಂಗೆ ಕಣ್ಣು ಬಂದಂತಾದೆನಯ್ಯ. ನಮ್ಮ ಕೂಡಲ ಸಂಗನ ಶರಣರು ಬಂದಹರೆಂದರೆ ಹೋದ ಪ್ರಾಣ ಬಂದಂತಾಯಿತಯ್ಯ! ೬೮೬-೧೨೬೦-17-42.

ಹಡಪದಪ್ಪಣ್ಣಗಳ ವಚನ:

ಬಯಸುವ ಬಯಕೆ ಕೈ ಸಾರುವಂತೆ, ನಿಧಿನಿಧಾನ ಮನೆಗೆ ಬಪ್ಪಂತೆ, ಪರಿಮಳವ ನೞಸಿ ಬಪ್ಪ ಭ್ರಮರನಂತೆ, ಚಿಂತಾಮಣಿಯ ಪುತ್ಥಳಿ ನಡೆಗಲಿತಂತೆ, ಬಸವಪ್ರಿಯ ಕೂಡಲ ಚೆನ್ನ ಸಂಗನಲ್ಲಿ ಪ್ರಭುದೇವರ ಬರವು ಕಾಣಬರುತ್ತಿದೆ ನೋಡಾ ಸಂಗನ ಬಸವಣ್ಣ. ೬೮೭-೧೨೬೧-17-43.

ಇದಕ್ಕೆ ಬಸವರಾಜದೇವರ ವಚನ:

ನಚ್ಚು ಮಚ್ಚಿನ ಶರಣರೆನ್ನ ಕಣ್ಣ ಮುಂದೆ ಬಂದು ನಿಂದಿರಲು, ಎನ್ನ ತನುವ ಬಗಿದು ತನುವಿನೊಳಗಿಟ್ಟುಕೊಂಬೆ! ಎನ್ನ ಮನವ ಬಗಿದು—ಮನದೊಳಗಿಟ್ಟುಕೊಂಬೆ! ಎನ್ನ ಕಂಗಳ ಬಗಿದು—ಕಂಗಳೊಳಗಿಟ್ಟುಕೊಂಬೆ! ಕೂಡಲ ಸಂಗನ ಶರಣರೆನ್ನ ಒಡೆಯರಾಗಿ ಎನ್ನ ಮನೆಗೆ ಬಂದರೆ, ಎನ್ನ ಮನಕ್ಕೆ ಬಂದ ಭಕ್ತಿಯ ಮಾಡುವೆನು ಕಾಣಾ ಅಪ್ಪಣ್ಣ. ೬೮೮-೧೨೬೨-7-44.

ಇದಕ್ಕೆ ಚಿಕ್ಕದಣ್ಣಾಯಕರ ವಚನ:

ಕಂಗಳ ನೋಟ, ಕರಸ್ಥಳದ ಪ್ರಾಣ, ಮನದೊಳಗೆ ಪರಿಣಾಮ ತೋಱುತ್ತದೆ ನೋಡಾ! ನಡೆವಡೆ ಗತಿಯಿಲ್ಲ, ನಿಂದಡೆ ಹೆಜ್ಜೆಯಿಲ್ಲ, ಸುಳುಹಿನೊಳಗೊಂದು ಅತಿಶಯದ ಸುಳುಹು ನೋಡಾ! ತೆಱೆ-ಮಱೆಯ ಪರಶಿವನು ನಡೆಗಲಿತು ಬಪ್ಪ ಕರುಣವ ನೋಡಾ! ಸಂಗನ ಬಸವಣ್ಣ, ಕೂಡಲ ಚೆನ್ನ ಸಂಗನು ದೇವರು ಸಾಕ್ಷಿಯಾಗಿ ಪ್ರಭುದೇವರ ಬರವು ತಪ್ಪದು. ೬೮೯-೧೨೬೩- 7-45.

ಇದಕ್ಕೆ ಬಸವಣ್ಣನ ವಚನ:

ಸಂಗಸನ್ನಿಹಿತ ಶರಣರು ಮನೆಗೆ ಬಂದರೆ ನಂಬುವುದೆನ್ನ ಮನವು! ನಚ್ಚುವುದೆನ್ನ ಮನವು! ಹಾವು-ನೇಣೆಂಬ ಭ್ರಾಂತುಳ್ಳನ್ನಕ್ಕರ ನಾನೆಂತು ಭಕ್ತನಪ್ಪೆನಯ್ಯ. ಅಂಗ-ಲಿಂಗಸಹಿತ ಬಪ್ಪ ಪ್ರಭುದೇವರ ಕಂಡು ಮನದಲ್ಲಿ ಮತ್ತೆ ಸಂದೇಹ ಹೊಳೆದರೆ ಬೆಂದೆ ನಲ್ಲಾ ನಾನು ಕೂಡಲ ಸಂಗಮದೇವ. ೬೯೦-೧೨೬೪-17-46.

ಅಲ್ಲಿ ಬಸವರಾಜದೇವರು ಪ್ರಭುದೇವರ ಬರವಂ ಕಂಡು, ಆತನ ಮೂರ್ತಿಯ ನಿಲವನು ತೋಱಿ ಚೆನ್ನಬಸವಣ್ಣಂಗೆ ನುಡಿವ ಪ್ರಸ್ತಾವ:

ಕೆದಱಿದ ತಲೆಯ, ಮುಕ್ತಕೇಶದ, ನಡೆವ ತೊನೆವ, ಹಣೆಯ ಬುಗುಟಿನ, ಕರಸ್ಥಲದ ಅನಿಮಿಷದಿಂ—ಬಹಿರಂಗದವಧಾನ ತಪ್ಪಿ, ಇದಿರುಗೊಯಿಲುತಾಗಿ ಪುರ್ಬೊಡೆದು, ಕಣ್ದೆಱೆದು, ಕಿವಿ ಹಱಿದು, ಜೋಲುವ; ರಕ್ತಧಾರೆಯ, ಗಾಳಿಯ ಧೂಳಿನ ಮಳೆಯ ಜಾಱಿನ, ಬೆನ್ನಬಾಸುಳದ, ಎಡಬಲದ ಬಱಿಯ ತಟ್ಟನ, ಮುಳ್ಳುತಱಹಿನ, ಕಂಕುಳ ಸೀಳ, ಕಂಡು ನೋಡುವ ಜನರು ಬೆಱಗಾಗೆ, ಪೊಱವಾಱಿನ ಮಸಿಯ ದಿಗಂಬರದಲ್ಲಿ ಬಣಗು ಸುರಿವುತ್ತ, ಆಪ್ಯಾಯನವಱತು, ಬಿದ್ದು ಮೊಣಕಾಲೊಡೆದು, ಹೊಸ ಹುಣ್ಣಿನ ರಕ್ತದ ಜೋಱ [1]ಹಳೆಯ[1] ಮುಂಗಾಲ A ಕಳೆ A ಹೊಳೆದು ಕಣೆಕಾಲ ಸಂದು ತಪ್ಪಿ[ದ] ಬಿಱುಬೇನೆಯ, ಎಡಹಿ ಬೊಟ್ಟೊಡೆದ ಗಾಯದ, ಉಱುಗು ಟೊಂಕದ; [2]ಪಿಱುಪುಗುಂಟನ[2]—ನೋಡಾ ಚೆನ್ನಬಸವಣ್ಣ, ಅತ್ಯಂತ ಮಲಿನ. ಕೂಡಲ ಸಂಗಮದೇವರ ಸುಳುಹು ವಿಪರೀತ! ನೋಡುವರೆ ಭಯಂಕರವಾಗಿದೆ ಅಯ್ಯ. ೬೯೧-೧೨೬೫-17-48.

ಇದಕ್ಕೆ ಚಿಕ್ಕದಣ್ಣಾಯಕರ ಪ್ರತ್ಯುತ್ತರ:

---

[1] (ಶಿ) × (ಹಗೂ). A (ಶಿ) ಕಣೆ (ಹ) (ಗೂ). [2] (ಶಿ) ಬರುಪಗುಂಟನ (ಹ) ಬಱು ಗುಂಟನ (ಗೂ).

ಆದಿಯಿಂದತ್ತತ್ತ ನೀನಯ್ಯಾ! ಅನಾದಿಯಿಂದತ್ತತ್ತ ನೀನಯ್ಯಾ! ಈ ಎರಡನೂ ಮೀಱಿದ ಅತ್ಯತಿಷ್ಠದ್ದಶಾಂಗುಲನಾ[1]ದನ[1]ಯ್ಯಾ. 'ಚತುರ್ಯುಗ ಸಹಸ್ರಾಣಿ' ಎಂಬ ಸಂಖ್ಯೆ ಯುಗಂಗಳ ಪವಣಿಸದಂದು, [2]ಕಾಲಚಕ್ರನ ಕಟ್ಟದಂದು, ಕೆಸಱುಗಲ್ಲನಿಕ್ಕಿ ಧರೆ[2]ಮೇರುವ ನೆಲೆಗೊಳಿಸಿ ಅಂಡಜ ಉತ್ಪತ್ತಿಯಾಗದಂದು ಆತನಂತುವ ನೀನೆ ಬಲ್ಲೆ; ನಿನ್ನಂತುವನಾತನೆ ಬಲ್ಲ. ನಿಮ್ಮಿಬ್ಬರ ಮಹಿಮೆಯ ನಾನೇನ ಬಲ್ಲೆನಯ್ಯ ಬಸವಣ್ಣ, ಕೂಡಲ ಚೆನ್ನಸಂಗಮದೇವ. ೬೯೨-೧೨೬೬-17-49.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ಹುಟ್ಟುತ ದ್ರವ್ಯವನಱಿಯದ ಒಬ್ಬ ಬಡವಂಗೆ ಲಕ್ಷಸಂಖ್ಯೆಯ ಧನಸಂಪತ್ತಾಗಲು, ಆ ಸಿರಿಯ ನೋಡಿ ಪರಿಣಾಮಿಸುವಂತೆ; ಕಾಳೆಗದ ಮುಖವನೆಂದೂ ಕಂಡಱಿಯದ ಅರಸಿಂಗೆ ಒಬ್ಬ ಖಡ್ಗಉಳ್ಳ ಕುಮಾರ ಹುಟ್ಟಿ ಕಿಗ್ಗಡಲ ರಕ್ತದ ಹೊನಲಲ್ಲಿ ಮುಳುಗಾಡುವ ಕೊಳುಗುಳವ ಕಂಡು ಪರಿಣಾಮಿಸುವಂತೆ—ನಾನು ಪರಿಣಾಮಿಸುತಿದ್ದೆನಯ್ಯ, ಚೆನ್ನ ಬಸವಣ್ಣ, ನೀನು ಕೂಡಲ ಸಂಗನ ಶರಣ ಪ್ರಭುದೇವರ ನಿಜವನಱುಹಿದರೆ. ೬೯೩-೧೨೬೭-17-50.

ಇಂತು ಬಸವರಾಜದೇವರು—ಪ್ರಭುದೇವರ ನಿಲುವು ಅತ್ಯಂತ ನಿರಾಮಯವಾಗಿದೆಯೆಂದು ನಿರೂಪಿಸಲು, ಆ ಪ್ರಭುದೇವರ ನಿಲವನಾರೂ ಅಱಿಯರೆಂದು—ಚಿಕ್ಕದಣ್ಣಾಯಕರು ತಾವು ಸ್ತುತಿಗೆಯ್ದ ಪ್ರಸ್ತಾವದ ವಚನ:

ಕಾಲಿಲ್ಲವೆಂಬರಯ್ಯ ಪ್ರಭು[5]ದೇವರ[5] ಸಂಸಾರಸೂತಕವ ಮೆಟ್ಟನಾಗಿ, ಕೈಯಿಲ್ಲವೆಂಬರಯ್ಯ ಪ್ರಭು[5]ದೇವರ[5], ಪರಧನವ ಕೊಳ್ಳನಾಗಿ. ಕಿವಿಯಿಲ್ಲವೆಂಬರಯ್ಯ ಪ್ರಭು[5]ದೇವರ[5], ಅನ್ಯವ ಕೇಳನಾಗಿ. ಮೂಗಿಲ್ಲವೆಂಬರಯ್ಯ ಪ್ರಭು[5]ದೇವರ[5], ದುರ್ಗಂಧಕ್ಕೆಳಸನಾಗಿ. ಎದೆಯಿಲ್ಲವೆಂಬರಯ್ಯ ಪ್ರಭು[5]ದೇವರ[5], ಪರಸ್ತ್ರೀಯನಪ್ಪನಾಗಿ. ಇದು ಕಾರಣ, ಕೂಡಲ ಚೆನ್ನಸಂಗಯ್ಯನಲ್ಲಿ ಪ್ರಭುದೇವರ ಒಕ್ಕ ಪ್ರಸಾದವ ಕೊಂಡು ನಾವು ಧನ್ಯರಾದೆವು ಕಾಣಾ ಸಂಗನ ಬಸವಣ್ಣ. ೬೯೪-೧೨೬೮-17-51.

ಹೀಂಗೆಂದು ಚಿಕ್ಕದಣ್ಣಾಯಕರು ಆ ಪ್ರಭುದೇವರ ಬಸರಾಜದೇವರ ಪೂರ್ವಾಪರ ಸಂಬಂಧಮಂ ತಿಳಿಯ ಪೇಳಿದ ಪ್ರಸ್ತಾವದ ವಚನ:

ಕೃತಯುಗದಲ್ಲಿ ದೇವಾಂಗನೆಂಬ ಗಣೇಶ್ವರನಾಗಿ ನೀವು ಬಂದು ಆರಾಧಿಸುವಲ್ಲಿ—ಸ್ಥೂಲಕಾಯನೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯ ಮಾಡಿಹೋದ, ಅದಱ ಕ್ರಿಯಾಂಗವನು ಮಱೆದೆಯಲ್ಲಾ ಬಸವಣ್ಣ?! ತ್ರೇತಾಯುಗದಲ್ಲಿ ಘಂಟಾಕರ್ಣನೆಂಬ ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ—ಶೂನ್ಯಕಾಯನೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯ ಮಾಡಿಹೋದ, ಅದಱ ಕ್ರಿಯಾಂಗವನು ಮಱೆದೆಯಲ್ಲಾ ಬಸವಣ್ಣ?! ದ್ವಾಪರಯುಗದಲ್ಲಿ ನೀನು ವೃಷಭನೆಂಬ ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ—

[1] (ಗೂಶಿ) × (ಹ). [2] (ಹ) ಕೆಸಱುಗಲ್ಲಿಕ್ಕಿದರೆ (ಗೂಶಿ). [3] (ಹ) × (ಗೂಶಿ). [4] (ಹ) × (ಗೂಶಿ). [5] (ಹ) ದೇವರ (ಗೂಶಿ).

ಅನಿಮಿಷನೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯ ಮಾಡಿಹೋದ, ಅದಱ ಕ್ರಿಯಾಂಗವ ಮಱೆದೆಯಲ್ಲಾ ಬಸವಣ್ಣ ?! ಕಲಿಯುಗದಲ್ಲಿ ನೀನು ಬಸವನೆಂಬ ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ—ಪ್ರಭುದೇವರೆಂಬ ಜಂಗಮವಾಗಿ ಲಿಂಗಾರ್ಚನೆಯ ಮಾಡ ಬಂದ ಕಾಣ ಬಸವಣ್ಣ! ಇಂತೀ ದೇವ-ಭಕ್ತನೆಂಬ ನಾಮನಾಟಕ ಬಿನ್ನಾಣವಲ್ಲದೆ ಬೇಱೆಂದು ಕಂಡವರಿಗೆ ನರಕ ತಪ್ಪದು, ಕೂಡಲ ಚೆನ್ನಸಂಗಮದೇವ. ೬೯೫-೧೨೬೯-17-52.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ಇದ್ದ ಪರಿ ಇಂತುಟೆದೆ ನೋಡಯ್ಯ. ನಿಂದಡೆ ನೆಳಲಿಲ್ಲ,'ನಡೆದಡೆ ಹಜ್ಜೆಯಿಲ್ಲ. ಭೂತಳದೊಳಗೆ ತಾನು ಕಂಡುದಿಲ್ಲ ಇಂತಪ್ಪ ಅನಿಮಯದ ಸುಳುಹು. ಅಹುದಹುದು, ಅರಿದರಿದು ಜಂಗಮಸ್ಥಲ! ಇಂತುಟಲ್ಲದೆ ಎಂತುಟು ಹೇಳಾ !? ಆಪ್ಯಾಯನದ ಅಱಿಕೆಯ ಹೊಲಬ ಕಾಣಬಾರದು. ಊಡಿದರೆ ಉಂಬನೋ ಉಣ್ಣನೋ ! ಉಂಬಂತಾದರೆ ನೀಡುವೆ ಕೂಡಲ ಸಂಗಮದೇವರಿಗೆ, ಚೆನ್ನ ಬಸವಣ್ಣ, ನೀನಹುದಹುದೆನಲಿಕ್ಕೆ. ೬೯೬-೧೨೭೦-17-53.

ಇದಕ್ಕೆ ಚಿಕ್ಕದಣ್ಣಾಯಕರ ಪ್ರತ್ಯುತ್ತರ:

ಅಱಿಸುವಂಗೆ, ಅಱಿಸುವಂಗೇ ಅಱಿಕೆ ತಾನಹುದು ದೇವ! ಬಯಸುವಂಗೆ, ಬಯಸುವಂಗೇ ಬಯಕೆ ತಾನಹುದು ದೇವ! ನೀವು ಭಾವಿಸಿದಂತೆ ಅಲ್ಲದೆ ಬೇಱೊಂದಾಗಬಲ್ಲುದೆ? ಈರೇಳುಭುವನದ ಸ್ಥಾಪ್ಯದ ಪ್ರೇರಣೆಗಳೆಲ್ಲಾ ನಿಮ್ಮಿಂದಲಾದವಾಗಿ, ನಿಮ್ಮಿಂದಲಹುದಾಗದೆಂಬ ಸಂದೇಹ ಉಂಟೆ ಬಸವಣ್ಣ? ನಿಮ್ಮಡಿಗಳೆಂದಂತೆ, ನೆನೆದಂತೆ, ನೋಡಿದಂತೆ—ತಪ್ಪದು. ಕೂಡಲ ಚೆನ್ನಸಂಗಮದೇವರು ಸಾಕ್ಷಿಯಾಗಿ ಪ್ರಭುವಿನಾಣೆ ಕಟ್ಟುಗುಡಿಯನು. ೬೯೭-೧೨೭೧-17-54.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ಬಡಗವಾಗಿಲ ಪೌಳಿಯು ಭರವಸದಿಂ ಪೊಕ್ಕು,ಪಶ್ಚಿಮ ದ್ವಾರದ ಧವಳಾರಮಂ ಪಶ್ಚಿಮದಿಂ ಪೊಕ್ಕು, ತ್ರಿವಿಧಗತಿಯ ಶೂನ್ಯಸಿಂಹಾಸನದ ಮೇಲೆ ತರಹರವಾದಡೆ ನಂಬುವುದೆನ್ನ ಮನವು, ಕೂಡಲ ಸಂಗಮದೇವರು ಸಾಕ್ಷಿಯಾಗಿ,ನೀನು ನಮ್ಮ ಕೋಪಿಸಿದರೆ ಕೋಪಿಸು ಚೆನ್ನಬಸವಣ್ಣ. ೬೯೮-೧೨೭೨-17-55.

ಇದಕ್ಕೆ ಚಿಕ್ಕದಣ್ಣಾಯಕರ ಉತ್ತರ:

ದೇವ ದೇವ, ಮಹಾಪ್ರಸಾದ! ನಿಮ್ಮಡಿಗಳಿಗೆ ಉತ್ತರವ ಕೊಡಲಮ್ಮೆನಯ್ಯ. ಬಲ್ಲುದ ಬಲ್ಲೆನೆಂಬ ಬಲುಮೆಯ ದೇಹಿ ನೀನಲ್ಲವಾಗಿ, ಆನು ಭಕ್ತನೆಂಬ ಯುಕ್ತಿಶೂನ್ಯನಲ್ಲವಾಗಿ, ಆನು ಬಲ್ಲೆನೆಂಬ ನುಡಿ ಎನ್ನ ನಿಱಿದಿಱಿದು ಸುಡುತ್ತಿದೆ. ತಪ್ಪೆನ್ನದು, ಕ್ಷಮೆ ನಿಮ್ಮದು. ಕೂಡಲ ಚೆನ್ನಸಂಗಮದೇವರು ಸಾಕ್ಷಿಯಾಗಿ, ಕೊಲ್ಲು ಕಾಯಿ ನಿಮ್ಮ ಧರ್ಮ. ೬೯೯-೧೨೭೩-17-56.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ಪುಣ್ಯಂಗಳಹ ಕಾಲಕ್ಕೆ ಹಗೆ ತನ್ನವರಹರು. ಪುಣ್ಯಂಗಳಹ ಕಾಲಕ್ಕೆ ಮಣ್ಣು ಹೊನ್ನಹುದು. ಪುಣ್ಯಂಗಳಹ ಕಾಲಕ್ಕೆ ಹಾವು [1]ನೇವಳ[1]ವಹುದು. ಪುಣ್ಯಂಗಳಹ ಕಾಲಕ್ಕೆ ಅನ್ಯರು ತನ್ನವರಹರು. ಇಂತಪ್ಪ ಪುಣ್ಯಂಗಳೆಲ್ಲವು ಭಕ್ತಿಯಿಂದಲಹುದು. ಭಕ್ತಿ ಕೆಟ್ಟರೆ ಪುಣ್ಯವು ಕೆಡುವುದು. ಇಂತಪ್ಪ ಭಕ್ತಿಯೂ ಪುಣ್ಯವೂ—ಚೆನ್ನ[2]ಬಸವಣ್ಣ, ನಿನಗುಂಟಾಗಿ[2] ನಾನು ಬದುಕಿದೆನಯ್ಯ, ಕೂಡಲ ಸಂಗಮದೇವ. ೭೦೦-೧೨೭೪-17-57.

ಇಂತು ಬಸವರಾಜದೇವರು ಚಿಕ್ಕದಣ್ಣಾಯಕರು ಪ್ರಸಂಗವ ಮಾಡುತ್ತ ಪ್ರಭುದೇವರ ತೋಱಿ ನುಡಿವುತ್ತಿರಲು, ಆ ಪ್ರಸ್ತಾವಕ್ಕೆ ಸೊಡ್ಡಳ ಬಾಚರಸರು ಹೇಳಿದ ವಚನ:

[3]ಕಟ್ಟೆ[3]ಹೊಯ್ವುತಲೊಮ್ಮೆ, ಹೋಗಿ ನಿಲುವುತಲೊಮ್ಮೆ, [4]ಬೀಗಿ ನಗುತಲೊಮ್ಮೆ[4] ಮರುಳಿನಂತೆ, ಮಂಕಿನಂತೆ ದೆಸೆದೆಸೆಯ ನೋಡುತ್ತ, ಅಂಗಡಿ ರಾಜಬೀದಿಯ ಶೃಂಗಾರಂಗಳ ನಲಿನಲಿದು ನೋಡುತ್ತ, ಇತ್ತರದ ಭದ್ರದ ಮೇಲೆ ನಾಟ್ಯವನಾಡುವವರ ನೋಡಿ ನಗುತ್ತ, ನೋಡುವ ಗಾವಳಿಯ ಜನರನಟ್ಟಿ ಹೊಯ್ವಂತೆ ಹರಿವುತ್ತ, [5]ಗುದಿ[5] ಇಕ್ಕಿದಂತೆ ನಿಂದಿರೆ ಬೀಳುತ್ತ, ನಾಟ್ಯವನಾಡುವವರಿಗೆ ಇದಿರಾಗಿ ತಾ ಮರಳಿಯಾಡುತ್ತ ಹಾಡುತ್ತ, ಬೈವುತ್ತ, ಕೆರಳಿ ನುಡಿವುತ್ತ, ವಾದ್ಯ ಮೇಳಾಪಮಂ ಕಂಡು ಆಳಿಗೊಂಡು ನಗುತ್ತ, ಹಸ್ತವನಾಡಿಸಿ ಗತಿಯನುಚ್ಚರಿಸಿ ಕಯ್ಯೊಡನೆ ಮರುಳಾಟವನಾಡುತ್ತ, ಮೆಲ್ಲ ಮೆಲ್ಲನೆ ನೋಡಿ ನಿಂದು ನಡೆವುತ್ತ, ಎಂದಿನ ಸುಳುಹಿನೊಳಗಲ್ಲದ ಸುಳುಹು. ಬಸವಣ್ಣ [6]ನಿಮ್ಮಾಣೆ ಸೊಡ್ಡಳನಾಗದೆ ಮಾಣನು.[6] ೭೦೧-೧೨೭೫-17-58.

ಇದಕ್ಕೆ ಮಡಿವಾಳ ತಂದೆಗಳ ವಚನ:

ಬಾಲನಹನೊಮ್ಮೆ, ಲೋಲನಹನೊಮ್ಮೆ! ವೃದ್ಧನಹನೊಮ್ಮೆ, ಮತ್ತನಹನೊಮ್ಮೆ! ಹೊಳೆದು ತೋಱುತ್ತಲೊಮ್ಮೆ, ತೋಱೀಯಡುಗುತಲೊಮ್ಮೆ! ವಿಶ್ವವು ನೋಡಿ ಬೆಱಗಾಗುತ್ತಲಿರೆ ಇದ್ದ ಠಾವಿನಲ್ಲಿ ಇದ್ದು ಮುಂದೆ ತೋಱುತ್ತಿರಲು, ಸಂಪ್ರದಾಯದವರು ಒಡನೊಡನೆ ಹರಿತಂದು ಬಂದು ಹೇಳುತ್ತಿರಲು, ಹರಿದು ಬಂದು ಹತ್ತೆ ಸಾರಿದ. ಬಸವನ ಮಹಾಮನೆಯ ತಲೆಯೆತ್ತಿ ನೋಡಿದ. ಮುಗಿಲ ಮೂಲೆಯ ತಪ್ಪದೆ ಕುಸುರಿಗೆಲಸದ ನಂದಿಯ ಮಂಟಪಂಗಳ ಮೇಲುಪ್ಪರಿಗೆ ಭದ್ರಂಗಳ ನೋಡಿ ತಲೆದೂಗುತ್ತ—ಕಲಿದೇವರದೇವ ಬಸವನ ಮಹಾಮನೆಯ ಪ್ರದಕ್ಷಿಣ ಬಂದು ದ್ವಾರದ ಮುಂದೆ ನಿಂದಿರ್ದನು. ೭೦೨-೧೨೭೬-17-59.*

ಮಲೆತು ಮೆಟ್ಟುತ್ತ ತನುವನೊಲೆವುತ್ತ, ತಲೆದೂಗಿ ಮನವನಲ್ಲಾಡಿ ನೋಡಿದ. ಭುವನ ಭುವನೇಶ್ವರವ ಹಿಂದು ಮುಂದು ನೋಡಿ ನಗುತ್ತ, ಮುತ್ತಿನ ತೋರಣಕ್ಕೆ

---

[1] (ಶಿ) ಲೇವಳ (ಗೂ). ನೇವಣ (ಹ). [2] (ಶಿ) ಬಸವಣ್ಣ ನಿಗುಂಟಾಗಿ (ಗೂಹ). [3] (ಶಿ) ಅಟ್ಟೆ (ಹ) ಅಟ್ಟೆ ಹಾವುತಲೊಮ್ಮೆ (ಗೂ). [4] (ಗೂಹ) × (ಶಿ). [5] (ಹ) ಗುಡಿ (ಗೂಶಿ) [6] (ಶಿ) ಸೊಡ್ಡಳನಾಗದೆ ಮಾಣನು (ಗೂ) ನಮ್ಮ ಸೊಡ್ಡಳನಾಗದೆ ಮಾಣನು ನಿಮ್ಮಾಣೆ (ಹ).

* ಇಲ್ಲಿಂದ ಪ್ರಭುದೇವರು ಶೂನ್ಯಸಿಂಹಾಸನವನೇಱಿದ ಸಂಪಾದನೆ ಪ್ರಾರಂಭವಾಗುವುದು ಗೂ ಪ್ರತಿಯಲ್ಲಿ.

ಹಾರೈಸಿ ಬಸವನರಮನೆಯ ಪೊಕ್ಕನು ಕಲಿದೇವರ ದೇವನು. ೭೦೩-೧೨೭೭-18-1.

ಶೂನ್ಯಸಿಂಹಾಸನದ ಮೇಲೆ ಮೂರ್ತಿಗೊಂಡ ಪ್ರಸ್ತಾವದ ವಚನ :

ಬಲಕ್ಕೆ ಮುರಿದನು ; ಪೌಳಿಯ ಉತ್ತರದ ಬಾಗಿಲಲ್ಲಿ ತಲೆವಾಗಿ ಹೊಕ್ಕ. ಗತಿಯು ಪವಣಿನಲ್ಲಿ, ಧವಳಾರವಪ್ಪ ಪಶ್ಚಿಮ ದ್ವಾರದಿಂ ತ್ರಿವಿಧಗತಿಯ ಶೂನ್ಯಸಿಂಹಾಸನದ ಮೇಲೆ ಮುಕ್ತಕೇಶದ ಪರಮಗುರುರಾಜನೆಱಗಿದ ಕಲಿದೇವರ ದೇವನು. ೭೦೪-೧೨೭೮ -18-2.

ಶೂನ್ಯಸಿಂಹಾಸನದ ಮೇಲೆ ಪ್ರಭುದೇವರು ಮೂರ್ತಿಗೊಂಡ ವಚನ :

ಬಟ್ಟಬಯಲಲ್ಲಿ ಒಂದು ಆನೆ ಇದ್ದಿತ್ತು. ಆನೆ ಬಂದು ಆನೆಯ ನುಂಗಿ ತಾನೆ ಉಳಿಯಿತ್ತು. ಅಂತರವಿಲ್ಲದ ಒಳಗು, ಆಲಂಬವಿಲ್ಲದ ಹೊಱಗು ನೋಡಾ ! ತಳವಿಲ್ಲದ ಕುಸುಮದ ಗದ್ದುಗೆಯಲ್ಲಿ ಒಡಲಿಲ್ಲದ ಘನವು ಬಂದು ಮೂರ್ತಿಗೊಂಡರೆ ವಿಚಿತ್ರವಾಯಿತ್ತು ಜಗಕೆಲ್ಲಾ ! ಕೂಡಲ ಸಂಗಮದೇವರ ಶರಣ ಪ್ರಭುದೇವರ ಶ್ರೀಪಾದಕ್ಕೆ ಆನು ನಮೋ ನಮೋ ಎಂಬೆನು. ೭೦೫-೧೨೭೯-18-3.

ಅಲ್ಲಿ ಹಡಪದಪ್ಪಣ್ಣಗಳ ವಚನ :

ನೆಲನ ಹೊದ್ದದು. ಆಕಾಶವ ಮುಟ್ಟದು. ಎಡೆಯಲೊಂದು ರೂಪಿಲ್ಲ. ಭಾವವೆಂಬ ಜ್ಞಾನವೇ ನಿವಾಸ. [1]ನಿಲವೆ[1] ಭಿತ್ತಿ, ನಿರಹಂಕಾರವೆ ಶಿಖರ, ಮಹದಹಂಕಾರವೆ ಶೃಂಗಾರ ಕಳಶ, ಸಹಸ್ರ ಪತ್ರದ ನವಕಮಲಸಿಂಹಾಸನದ ನಿತ್ಯವೇ ಮಲಗು : ನಿಜವೆಂಬ ವಿಸ್ತರದಲ್ಲಿ ನಿತ್ಯನಿರಾಳವೆಂಬ ಮಹಾಘನವು ಬಂದು ಮೂರ್ತಿಗೊಳಲು ಕಾಯದ ಕಂಗೆ ಕಾಣಬಾರದು, ಮನದ ಮುಂದೆ ಅಳವಡದು. ಭಾವದ ಬಗೆಗೆ ವೈದೋಱದು—ಬಸವಪ್ರಿಯಕೂಡಲ ಚೆನ್ನಸಂಗನಲ್ಲಿ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂಬೆನು. ೭೦೬-೧೨೮೦- 18-4.

ಅಲ್ಲಿ ಸೊಡ್ಡಳ ಬಾಚರಸರ ವಚನ :

ಆಕಾರವಿಲ್ಲದ ನಿರಾಕಾರದ [2]ಮಂಟಪಕ್ಕೆ[2] ನಿರಾಳವೆಂಬ ಗಂಡ ಬಂದು ಕುಳ್ಳಿದ್ದಿರಲು, ಮೂವರು ಹೆಮ್ಮಕ್ಕಳು ಸೇವೆಯ ಮಾಡುವರು, ಇಬ್ಬರು ಸಂಗವ ಮಾಡುತ್ತಿಪ್ಪರು, ಒಬ್ಬಾಕೆ ಪುರುಷನ ನುಂಗಿಕೊಂಡಿಪ್ಪಳು. ಇವರಱುವರ ಕೂಡೆ ಹೊಯಿಕಯ್ಯಾಗಿಪ್ಪವನ ಕಂಡು ಆನು ಪ್ರಭುವೆಂದಱಿದು ಆತನ ನಿಜಪಾದಕ್ಕೆಱಗಿ—ಎನ್ನ ಭವವ ಹಱಿದೆನು. ಎನ್ನ ಮಹಾದಾನಿ ಸೊಡ್ಡಳನ ಕಂಡ ಕಡುಸುಖವ ಉಪಮಿಸಬಾರದು. ೭೦೭-೧೨೮೧ -18-5.

ಇದಕ್ಕೆ ಬಸವರಾಜದೇವರ ವಚನ :

ಎನ್ನ ಗಂಡ ಬರಬೇಕೆಂದು ಆನು ಎನ್ನಂತರಂಗವೆಂಬ ಮನೆಯ ತೆಱಹು ಮಾಡಿ, ಅಷ್ಟದಳ[3]ಕಮಳ[3]ವೆಂಬ ಓವರಿಯೊಳಗೆ ನಿಜ[4]ನಿವಾಸವೆಂಬ[4] ಹಾಸುಗೆಯ ಹಾಸಿ, ಧ್ಯಾನ

---

[1] (ಗೂಶಿ) ನೆಲವೆ (ಹ). [2] (ಶಿ) ಮತಕ್ಕೆ (ಹಗೂ). [3] (ಶಿಹ) × (ಗೂ). [4] (ಶಿಗೂ) ವಾಸನೆಯೆಂಬ (ಹ).

ವೆಂಬ ಮೇಲುಕಟ್ಟ ಕಟ್ಟಿ, ಜ್ಞಾನವೆಂಬ ದೀಪವ ಬೆಳಗಿ, ಸತ್ಕ್ರೀಯೆಂಬ ಉಪಚಾರಂಗಳ ಹರಹಿಕೊಂಡು, ಪಶ್ಚಿಮ ದ್ವಾರವೆಂಬ ಬಾಗಿಲ ತೆಱೆದು, ಕಂಗಳೆ ಪ್ರಾಣವಾಗಿ ಬರವ ಹಾರುತಿರ್ದೆನಯ್ಯ ನಾನು. ಬಾರನೆಂದು ಉಮ್ಮಳಿಸಿಹಳೆಂದು, ತಾನೆ ಬಂದು ಎನ್ನ ಹೃದಯಸಿಂಹಾಸನದ ಮೇಲೆ ಮೂರ್ತಿಗೊಂಡರೆ, ಎನ್ನ ಮನದ ಬಯಕೆ ಸಯವಾಯಿತ್ತು. ಹಿಂದೆ ಹನ್ನೆರಡು ವರುಷದಲಿದ್ದ ಚಿಂತೆ ಇಂದು ನಿಶ್ಚಿಂತೆಯಾಯಿತು. ಕೂಡಲ ಸಂಗಮ ದೇವರು ಕೃಪಾಮೂರ್ತಿಯಾದ ಕಾರಣ ನಾನು ಬದುಕಿದೆನು. ೨೦೮-೧೨೮೨-18-6.

ಮತ್ತಂ ಬಸವರಾಜದೇವರು ಪ್ರಭುದೇವರಿಗೆ ಪಾದಾರ್ಚನೆಯ ಮಾಡುವ ಪ್ರಸ್ತಾವದ ವಚನ :

ಎನ್ನ ಮನವು ನಿಮ್ಮ ಚರಣವ ಕಂಡ ಬಳಿಕ ಬೆರಸಿಯಲ್ಲದೆ ಅಗಲಿ ಸೈರಿಸಲಾರೆನಯ್ಯ, ತ್ರಾಹಿ ತ್ರಾಹಿ! ಘನಮಹಿಮ ನಿಮ್ಮ ಪಾದಾರ್ಚನೆಗೆ ಎನ್ನ ಪರಮಾನಂದ ಜಲವ ತುಂಬುವೆನಯ್ಯ- ಪೂಜೆಯ ಮಾಡುವರೆ [1]ಎನ್ನ[1] ಹೃದಯಕಮಲವ[=ದಿ ?]ನರ್ಚಿಸುವೆ. ಆ-ರತಿಯಿಂದ ಆರತಿಯನೆತ್ತುವೆನೆನ್ನ ಮಹಾಪ್ರಕಾಶಧೂಪವ ಬೀಸುವೆನೆನ್ನ ಸ್ವಾನುಭಾವ ಗಂಧವನೀವೆ. ಈ ತೆಱನಲ್ಲದೆ ಅಷ್ಟವಿಧಾರ್ಚನೆ, ಷೋಡಶೋಪಚಾರವೆಂಬುದಕ್ಕೆ ಬೇಱೆ[3] ತೆಱಹ ಕಾಣೆನಯ್ಯ, ಕೂಡಲ ಸಂಗಮದೇವಯ್ಯ, ಪ್ರಭುವೆನ್ನ ಪ್ರಾಣಲಿಂಗವೆಂಬುದು ಎನಗಿಂದು ಕಾಣಬಂದಿತ್ತು ನೋಡಯ್ಯ. ೨೦೯-೧೨೮೩-18-7.

ದರ್ಶನ ಸುಖಾನಂದದ ಪ್ರಸ್ತಾವ:

ನಿಮ್ಮ ನೋಟವನಂತಸುಖ ! ನಿಮ್ಮ ಕೂಟ ಪರಮಸುಖ! [2]ಅವುಟ[2] ಕೋಟಿ ರೋಮಂಗಳೆಲ್ಲಾ ಕಂಗಳಾಗಿ ನೋಡುತಿದ್ದೆನು. ಕೂಡಲ ಸಂಗಮದೇವಯ್ಯ, ನಿಮ್ಮ ನೋಡಿ ನೋಡಿ ಎನ್ನ ಮನದಲ್ಲಿ ರತಿ ಹುಟ್ಟಿ ನಿಮಿರ್ದವೆನ್ನ ಕಳೆಗಳು. ೨೧೦-೧೨೮೪-18-8.

ವಚನದಲ್ಲಿ ನಾಮಾಮೃತ ತುಂಬಿ, ಎನ್ನ ನಯನದಲ್ಲಿ [3]ನೋಟ[3] ಮೂರುತಿ ತುಂಬಿ, ಎನ್ನ ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ, ಕೂಡಲ ಸಂಗಮದೇವ, ನಿಮ್ಮ ಚರಣಕಮಲದೊಳಗಾನು ತುಂಬಿ, ೨೧೧-೧೨೮೫-18-9.

ಕಂಡ ಕನಸು-ನಿಧಾನವ ಕಂಡೆನಯ್ಯ ! ಬಿಡಲಾಱದ ನಿಧಾನವ ಕಂಡೆನಯ್ಯ ಕೂಡಲಚೆನ್ನಸಂಗನೆಂಬ ನಿಧಾನವ ಕಂಡು ಬಿಡಲಾಱೆನು. ೨೧೨-೧೨೮೬-18-10.

ಕಾಣಬಾರದ ವಸ್ತು ಕೈಸಾರಿತಯ್ಯ, ಆನಂದದಿಂದ ಆಡುವೆ ಹಾಡುವೆ; ಎನ್ನ ಕಣ್ಣು ತುಂಬಿ ನೋಡುವೆ. ಎನ್ನ ಮನವೊಲಿದ ಭಕ್ತಿಯ ಮಾಡುವೆ, ಕೂಡಲಸಂಗಮ ದೇವಯ್ಯ, ನಿಮಗೆ. ೨೧೩-೧೨೮೭-18-11. ಮತ್ತಂ :

ಆಡಿ, ಕಾಲು ದಣಿಯವು ! ನೋಡಿ, ಕಣ್ಣು ದಣಿಯವು ! ಹಾಡಿ, [4]ಮನ[4] ದಣಿಯದಿನ್ನೇವೆನಿನ್ನೇವೆನಯ್ಯ ! ನಿಮ್ಮುವ ಕೈಮುಟ್ಟಿ ಪೂಜಿಸಿ, ಮನ ದಣಿಯದೊಲ್ಲದಿನ್ನೇವೆ ಕೂಡಲಸಂಗಮದೇವ, ನಿಮ್ಮ ಉದರವ ಬಗಿದು ಹೊಗುವ [1]ಭರ[1]ವೆನಗೆ, ೨೧೪-೧೨೮೮-18-12.

---

[1] (ಗೂಶಿ) × (ಹ). [2] (ಶಿ) ಓಟ (ಹ) ಅಷ್ಟ (ಗೂ). [3] (ಶಿಹ) × (ಗೂ). [4] (ಶಿಗೂ) ಬಾಯಿ (ಹ).

## ೧೮

ಇಂತು ಪ್ರಭುದೇವರು ಶೂನ್ಯಸಿಂಹಾಸನದ ಮೇಲೆ ಮೂರ್ತಿಗೊಂಡು ಕುಳ್ಳಿರ್ದಿರಲು ಬಸವರಾಜದೇವರು—ಪರಮಾನಂದಯುಕ್ತವಾದ ಸದ್‌ಭಕ್ತಿಯಿಂದ ಪ್ರಭುದೇವರಂ ಪೂಜಿಸಿ, ಆಡಿ ಹಾಡಿ ಓಲಾಡುತ್ತಿರಲು ; ಇತ್ತಲು, ಬಂದು ಕುಳ್ಳಿರ್ದ ಲಕ್ಷದ ಮೇಲೆ ತೊಂಬತ್ತಾಱು ಸಾವಿರ ಜಂಗಮವೆಲ್ಲವೂ—ಕ್ರೋಧದಿಂದ, ಬಸವರಾಜದೇವರ ಮೇಲೂ ಪ್ರಭುದೇವರ ಮೇಲೂ ಡಂಗುರವನಿಕ್ಕಿ ಎದ್ದು ಹೋದ ಪ್ರಸ್ತಾವ:

ಅರಳುಗಂಗಳವರಿಗೆ ಹರಳುಗಂಗಳವರು ಸೈರಿಸದಂತೆ, ತುಱುಬುಳ್ಳವರಿಗೆ [2]ಬಱು[2] ಮಂಡೆಯವರು ಸೈರಿಸದಂತೆ, ಅರಸನ ಕಂಡು ಪುರುಷನ ಮಱೆ[3]ದಂತೆ ಮಾಡಿದನೀ ವ್ರತಗೇಡಿ ಬಸವನು. ಮಹೇಂದ್ರಜಾಲಿಕನವನೊಬ್ಬನ ಪ್ರಭುವೆಂದು [3]ಕುಳ್ಳಿರಿಸಿ[3] ಕೊಂಡು ತನ್ನ ಪ್ರಾಣಲಿಂಗವೆಂದು, ನಮ್ಮ ತಿರುಗಿ ನೋಡಲೊಲ್ಲ. ಅವನಲ್ಲಿ ಏನು ಲೇಸ ಕಂಡನು ? ನಮ್ಮಲ್ಲಿ ಏನು [4]ಹೊಲ್ಲಹವ[4] ಕಂಡನು. ಕಂಚನೊಲ್ಲದೆ ಬಿಟ್ಟು, ಹಂಚ ಹಿಡಿದನು. ಅನಾಚಾರಿ ಅವನೊಬ್ಬ, ವ್ರತಗೇಡಿ ಬಸವನೊಬ್ಬ : ಇವರಿಬ್ಬರೂ ದೇವ ಲೋಕ ಮರ್ತ್ಯಲೋಕಕ್ಕೆ ಹೊಱಗು. [5]ಇವದಿರ[5] ಮುಖವ ನೋಡಲಾಗದೆನುತ ಹೋದರು ಕಲಿದೇವನ ಶರಣರು. ೭೧೫-೧೨೬೯-18-13.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

ಅಯ್ಯ, ಸಾತ್ವಿಕಶರಣರ ನುಡಿ ಹುಸಿಯೆ ? ಅದು ದಿಟ ದಿಟ ! ಒಳಗೆಂಬುದೇ ದೇವಲೋಕ, ಹೊಱಗೆಂಬುದೇ ಮರ್ತ್ಯಲೋಕ ! ಈ ಎರಡು ಲೋಕಕ್ಕೆ ಹೊಱಗಾಗಿ ನಾವಿರಲು—ಈ ಎರಡು ಲೋಕದೊಳಗೆಯು ತಾವೆ ಇರಲಿ ಗೊಗೇಶ್ವರ. ೭೧೬-೧೨೭೦-18-14.

ಆ ಪ್ರಸ್ತಾವದೊಳು ಪ್ರಭುದೇವರು—ತಮ್ಮ ನಿಂದಿಸುತ್ತ ಎದ್ದುಹೋದ ಜಂಗಮವ ವಿಡಂಬಿಸುವ ಪ್ರಸ್ತಾವದ ವಚನ:

ಅಂಗ-ಜಂಗುಳಿಗಳೆಲ್ಲಾ ಅಶನಕ್ಕೆ ನೆರೆದರು. ಲಿಂಗದ ಹವಣನಿವರೆತ್ತ ಬಲ್ಲರು? ಕಾಯಜೀವಿಗಳು ಕಳವಳಧಾರಿಗಳು—ದೇವರ ಸುದ್ದಿಯನಿವರೆತ್ತ ಬಲ್ಲರು? ಮದ್ಯ ಉಂಡು ಮದವೆದ್ದ ಜೋಗಿಯಂತೆ ನುಡಿವರು. ಗೊಗೇಶ್ವರ, ನಿಮ್ಮ ಶರಣರನಿವರೆತ್ತ ಬಲ್ಲರು ? ೭೧೭-೧೨೭೧-18-15.

ಮತ್ತಂ, ಆ ಪ್ರಸ್ತಾವದೊಳು ಚಿಕ್ಕದಣ್ಣಾಯಕರು ವಿಡಂಬಿಸುವ ಪ್ರಸ್ತಾವದವಚನ:

ಅತಿಮಥನವೆಂಬ ಶೂನ್ಯಸಿಂಹಾಸನವನೇಱಿಕೊಂಡು—ನಾವೆ ಹಿರಿಯರು, ನಾವೆ

[1] (ಗೂ) ಭರವಸ (ಶಿಹ) Note: ಇದು "ಭರವಶ"ವಾದರೆ ಈ ಪಾಠವೆ ಮೇಲು.
[2] (ಶಿ) ಹಱು (ಗೂಹ). [3] (ಹಗೂ) ಘುಳಿಸಿ (ಶಿ). [4] (ಶಿಗೂ) ಹೊಲ್ಲೆಹವ (ಹ)
[5] (ಶಿ) ಇವಂದಿರ (ಗೂ) ಇವರ (ಹ).

ದೇವರೆಂಬರು; ತಮ್ಮ ತಾವಱಿಯರು! [1][ಅದ್ಭುತ][1] ಮದಭಂಜಕರ ಮೆಚ್ಚ ನಮ್ಮ ಕೂಡಲಚೆನ್ನಸಂಗಯ್ಯನು. ೭೧೮-೧೨೯೨-18-16.

ಧರೆಯ ಮೇಲೆ ಸುಳಿವ ಲಾಂಛನಧಾರಿಗಳೆಲ್ಲರೂ ಹದಿನೆಂಟು ಜಾತಿಯ ಮನೆಯ ಲುಂಡು ಕೆಟ್ಟರಯ್ಯ, ಗಿರಿಯಲಿಪ್ಪ ಜಡೆಯ ಧಾರಿಗಳೆಲ್ಲಾ ಫಲ[2]ವೃಕ್ಷಂ[2]ಗಳನುಂಡು ಕೆಟ್ಟರಯ್ಯ, ತಱಗೆಲೆಯ ಮೆದ್ದು ತಪಸಲಿಪ್ಪವರೆಲ್ಲರೂ ವಾಯು[3]ಭಕ್ಷಣ[3]ನುಂಡು ಕೆಟ್ಟರಯ್ಯ, ಅಱುಕೆಯ ಇಂದ್ರಿಯಂಗಳಂ ಕಟ್ಟಿ, ಕುಱುಹಿನ ರಾಜ್ಯಕ್ಕೆ ಬಂದು, ನರಕಕ್ಕೀಡಹರ ಹಿರಿಯರೆಂಡೆನ್ನದೆನ್ನ ಮನವು. ಇದು ಕಾರಣ, ಕೂಡಲಚೆನ್ನಸಂಗಯ್ಯ ನೊಲ್ಲದಿದ್ದರೆ ಅವರ ಬೆನ್ನಲ್ಲಿ ಹೋಗಲಿ, ನಾನು ಪ್ರಭುದೇವರ ಪಾದವ ಬಿಡೆನು. ೭೧೯-೧೨೯೩-18-19.

ಆ ಪ್ರಸ್ತಾವದೊಳು ಸೊಡ್ಡಳ ಬಾಚರಸರು ಹೇಳಿದ ವಚನ:

ವಿಪಿನದೊಳು ಮದಕರಿಯ ಹಿಂಡು [4]ಅನಂತ[4] ಲೀಲೆಯೊಳಾಡುತ್ತಿರಲು, ಕೇಸರಿ ಬರಲು, ಮದಕರಿಗಳೆಲ್ಲಾ ಕೆದಱಿ ಓಡುವ ತೆಱನಂತೆ! ಸಾಕಾರ ಸೊಡ್ಡಳ, ನಿಮ್ಮ ಶರಣ ಪ್ರಭುದೇವರು ಬರಲೊಡನೆ ಹರೆದುದಯ್ಯ ನೆರೆದ ಶಿವಗಣಂಗಳು. ೭೨೦-೧೨೯೪-18-20.

ಇಂತು, ಜಂಗಮವೆಲ್ಲಾ ಕ್ರೋಧದಿಂದ ಮುಳಿದು ಹೋಗಲು, ಬಸವರಾಜದೇವರು ಅತ್ಯಂತ ಭೀತರಾಗಿ ಪ್ರಭುದೇವರೊಡನೆ ಬಿನ್ನೈಸುವ ವಚನ:

ಅಯ್ಯ, ನಿಮ್ಮ ಶರಣರ ಸಂಗವೆನಗೆ ಪರಮಸುಖವಯ್ಯ, ಅಯ್ಯ, ನಿಮ್ಮ ಶರಣರ ಅಗಲಿಕೆ ಎನ್ನ ಪ್ರಾಣವಿಯೋಗವಯ್ಯ. ಶಿವ ಶಿವಾ! ಇನ್ನೆಂತಯ್ಯ ಸಂತವಿಡುವೆನು ಇನ್ನೆಂತಯ್ಯ? [5]ಎನಗೇ[5]ಗತಿ? ಕೂಡಲಸಂಗಮದೇವ, ನಿಮ್ಮ ಶರಣರ ಮುನಿಸೆನಗೆ ಬಿಡಿಸ ಬಾರದ ತೊಡಕು. ೭೨೧-೧೨೯೫-18-21.

ಗುರು ಮುನಿದರೆ ಒಂದು ದಿನ ತಾಳುವೆ, ಲಿಂಗ ಮುನಿದರೆ ಅರೆದಿನ ತಾಳುವೆ; ಜಂಗಮ ಮುನಿದರೆ ಕ್ಷಣಮಾತ್ರ ತಾಳಿದರೆ—ಎನ್ನ ಪ್ರಾಣದ ಹೋಕು ನೋಡಾ ಕೂಡಲಸಂಗಮದೇವ. ೭೨೨-೧೨೯೬-18-22. ಮತ್ತಂ:

ಅರಸು ಮುನಿದರೆ ನಾಡೊಳಗಿರಬಾರದು. ಪತಿ ಮುನಿದರೆ ಸತಿಗೆ ಇರಬಾರದು. ಕೂಡಲಸಂಗಮದೇವ, ಜಂಗಮ ಮುನಿದರೆ ನಾನೆಂತು ಬದುಕುವೆ. ೭೨೩-೧೨೯೭-18-23.

ಇದಕ್ಕೆ ಪ್ರಭುದೇವರು ಬಸವರಾಜದೇವರ ಮನವ ಸಂತೈಸಿ ಬೋಧಿಸುವ ವಚನ:

ಅಂಜಬೇಡ, ಅಳುಕಬೇಡ, ಹೋದವರಾರು? ಇದ್ದವರಾರು? ಎಲೆ ಮರುಳೆ! ಒಂದು ಮುಖದಲ್ಲಿಪ್ಪ ದೇವನೊಬ್ಬನೆ, ಹಲವು ಮುಖದಲ್ಲಿಪ್ಪ ದೇವನೊಬ್ಬನೆ. ನಾಮ ಹಲವಲ್ಲದೆ ಕಾರ್ಯ ಒಂದೆ ನೋಡಾ! ಮನದೊಳಗಣ ಘನವು ತನುವನಗಲುವುದೆ?

---

[1] (ಗೂ) ಅದು ಭೂತ (ಉ ಶಿ ಹ). [2] (ಗೂಶಿ) ಪತ್ರ (ಹ). [3] (ಶಿ) ಭಕ್ಷನ (ಹ) ಭಕ್ಷಣ (ಗೂ). [4] (ಶಿ) ಅನಂದ (ಹಗೂ). [5] (ಹಶಿ) ಎನಗೇನು (ಗೂ).

ಗೊಗೇಶ್ವರ ಲಿಂಗದ ವಿಯೋಗಕ್ಕೆ ತೆಱಹ ತೋಱಾ, ಸಂಗನ ಬಸವಣ್ಣ. ೭೨೪-೧೨೯೮-18-24 ಮತ್ತಂ:

ಮತಿಯೊಳಗೆ ದುರ್ಮತಿ ಹುಟ್ಟಿ ಕಲಿ ಗಸಣಿಗೊಳಗಾದ ಪರಿಯ ನೋಡಾ. ಜ್ಞಾನವನು ಅಜ್ಞಾನ ನುಂಗಿದ ಬಳಿಕ—ಭಾನು ಗ್ರಹಣದೊಳಗಾದಂತೆ ಇದ್ದಿತ್ತು. ಕ್ಷೀರವುಳ್ಳ [1]ಪಶುವಿನ[1] ಶಿಶು ತಾಯನಗಲಿ ಅಱಿಯದ ಮೋಹದಂತೆ ಇದ್ದಿತ್ತು. ಹೇಳುವಲ್ಲಿ ಯುಕ್ತನು, ಕೇಳುವಲ್ಲಿ [2]ಮು[2]ಕ್ತನು ಎಂಬುದು [3]ಅ ಜ್ಞಾನ[3]ಭಾವಕ್ಕೆ ಬಂದಿತ್ತು. ನೀರ ಮೇಗಣ ಲಿಪಿಯನೋದ ಬಲ್ಲವರುಂಟೆ ಸಾರಾಯ [4]ವೇದ್ಯವಪ್ಪರಿಗಲ್ಲದೆ ?[4] ಕನ್ನಡಿಯೊಳಗೆ ನೋಡಲು ಭಿನ್ನ ಉಂಟೇ ಅಯ್ಯ? ತನ್ನ ಕಣ್ಣಿನಲ್ಲಿ ಕಾಣದಂತೆ ಇದ್ದಿತು—[5]ದರ್ಪಣದೊಳಗಣ[5] ಬೆಳಗಿನೊಳಗಣ ಬೆಳಗು. ಗೋಗೇಶ್ವರನಿಪ್ಪೆಡೆಯ ತಿಳಿದು ನೋಡೈ ಸಂಗನ ಬಸವಣ್ಣ. ೭೨೫-೧೨೯೯-18-25.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ಅದ್ವೈತವನಂತರಂಗದಲ್ಲಿ ಅಱಿದು, ಹೊಱಗೆ ದಾಸೋಹವ [6]ಮಱೆದರೆಂತಯ್ಯ,[6] ಉಭಯಸಂದೇಹದಲ್ಲಿ ನಿಜವಪ್ಪು[7]ದು ? ![7] ನಿಮ್ಮ ಶರಣರ ಮನ ನೊಂದಲ್ಲಿ ನಾನು ಸೈರಿಸಿ ಕೊಂಬೆನೆಂತಯ್ಯ ? ಕೂಡಲಸಂಗಮದೇವ, ಹಾವೂ ಸಾಯದೆ, ಕೋಲೂ ನೋಯದಂತೆ ಮಾಡಯ್ಯ ನಿಮ್ಮ ಧರ್ಮ. ೭೨೬-೧೩೦೦-18-26.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

ಒಂದಾದುದು ಎರಡಪ್ಪದೆ? ಎರಡಾದುದು ಒಂದಪ್ಪದೆ? ಪರಿಣಾಮದ ವೇಳೆಯಲ್ಲಿ ಸಂದೇಹ ಹುಟ್ಟಲುಂಟೆ ? ಬಂದ ಜಂಗಮದ ನಿಂದ ನಿಲವನಱಿಯದೆ ಹಿಂದನೆಣಿಸಿ ಹಲವ ಹಂಬಲಿಸುವರೆ? ಈ ಒಂದು ನಿಲವಿಗೆ ಪರಿಣಾಮವ ಮಾಡಬಲ್ಲರೆ, ನಿನ್ನ ಲಕ್ಷದ ಮೇಲೆ ತೊಂಬತ್ತಾಱು ಸಾವಿರ ಜಂಗಮಕ್ಕೆ ಪರಿಣಾಮಹುದು ನೋಡಾ. ಗೊಗೇಶ್ವರನೆಂಬ ಲಿಂಗದ ನಿಲವನಱಿಯದೆ ಮರುಳಾದೆಯಲ್ಲಾ ಸಂಗನ ಬಸವಣ್ಣ. ೭೨೭-೧೩೦೧-18-27.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ದೇವ ದೇವ ಮಹಾಪ್ರಸಾದ!! ನಿಮ್ಮಡಿಗಳೆಂದಂತಲ್ಲದೆ, ಎನಗೆ ಬೇಱೆ ಸ್ವತಂತ್ರ ಉಂಟೆ? ಸಂದು-ಸಂಶಯ ಉಂಟೆ ? ದರ್ಪಣದೊಳಗಣ ಪ್ರತಿಬಿಂಬ—ನೋಡುವ ಮುಖಕ್ಕೆ ಭಿನ್ನಭಾವವುಂಟೆ ? ಚರಿಸಿ ಬಹ ಅನಂತ ಸುಳುಹಿನೊಳಗೆ ನೀನೊಬ್ಬನೇ. ನಿನ್ನೊಳಗೆ ಅನಂತ ಸುಳುಹು ಅಡಗಿದವು. ನಿಮಗೆ ಮಾಡಿದ ಸಯಿದಾನವ ನಿಮಗೆ ನೀಡುವೆನು, ಅವಧರಿಸಬೇಕಯ್ಯ ಕೂಡಲಸಂಗಮದೇವ. ೭೨೮-೧೩೦೨-18-28.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

---

[1] (ಹ)×(ಗೂಶಿ). [2] (ಹಶಿ) ಯು (ಗೂ). [3] (ಶಿ) ಅಜ್ಞಾನ (ಗೂ) ಜ್ಞಾನ (ಹ). [4] (ಹ) ದೇಹವಪ್ಪರಿಗಲ್ಲದೆ (ಶಿ) ವೇದ್ಯರಿಗಲ್ಲದೆ (ಗೂ). [5] (ಶಿ) ದರ್ಪಣದೊಳಗಣ ಬೆಳಗು ಆ (ಹ). [6] (ಶಿ) ಮರೆದಿದರ್ದರೆಂತಯ್ಯ. (ಹ) ಮಾಡದಿದ್ದರೆಂತಯ್ಯ (ಗೂ) [7] (ಶಿಹ) ದೇ (ಗೂ).

ಮಾಡಿ, ತನುವಿನ ಅವಗುಣಂಗಳಂ ಹುಡಿಗುಟ್ಟಿ ರಂಗವಾಲಿಯನಿಕ್ಕಿ, [1]ಅಕಾಯ[1]ವೆಂಬ ಬಿಂದಿಗೆಯಲ್ಲಿ ಪರಮಾನಂದವೆಂಬ ಅಗ್ಘವಣಿಯಂ ತುಂಬಿ,ಸಮರಸದಿಂದ ಮಜ್ಜನಕ್ಕೆಱೆ[3]ಯಲು, ಹೃದಯಕಮಲವೆಂಬ ಪುಷ್ಪಮಂ ಸಲಿಸಿ, ಸೌಖ್ಯತರಶಾಂತಿಯೆಂಬ ಗಂಧವನಿಟ್ಟು, ಅಕ್ಷಯವೆಂಬ ಅಕ್ಷತೆಯನಳವಡಿಸಿ, ಸದ್ಭಾವವೆಂಬ ಧೂಪಮಂ ಬೀಸಿ, ಸುಜ್ಞಾನವೆಂಬ ನಿವಾಳಿಯನೆತ್ತಿ, ನಿತ್ಯನಿರಂಜನವೆಂಬ ನೀರಾಜನಮಂ ಬೆಳಗಲು, ಬ್ರಹ್ಮನಾದವೆಂಬ ಘಂಟೆಯಂ ಬಾರಿಸಿ ನಿತ್ಯಲಿಂಗಾರ್ಚನೆಗೆಡೆ ಮಾಡಲು; ಇದರ [2]ಮರ್ಮ-[2]ಕರ್ಮಸ್ಥಿತಿಯನಱಿದು ಶಿವಲಿಂಗಾರ್ಚನೆಯಂ ಮಾಡಬಲ್ಲಡೆ, ಮರ್ತ್ಯದಲ್ಲಿ ನಾನಾರನೂ ಕಾಣೆನು. ಕೂಡಲಸಂಗಮದೇವ, ಪ್ರಭು ಬಂದು ಶಿವಲಿಂಗಾರ್ಚನೆಯಂ ಮಾಡಲು ನಾನೇ ಪರಿಚಾರಕನು. ೭೪೯-೧೩.೨೩-18-52.

ಇಂತು ಪ್ರಭುದೇವರು ತಮ್ಮ ಕರಸ್ಥಲದ ಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವ ಪ್ರಸ್ತಾವದೊಳು ನಿವಾಳಿಯನೆತ್ತುತ್ತ ಹಾಡಿದ ಮಂಗಳ ಪದಂಗಳು :

ರಾಗ : [3]ಲಳಿತೆ[3]

ಮಂಗಳ ಮಂಗಳ ಗೊಗ್ಗೇಶ್ವರನ ಶರಣ ಲಿಂಗೈಕ್ಯಂಗೆ ॥ ಪಲ್ಲವ ॥

ಜಗವೆಲ್ಲವನೂರು ಮಾಡಿ ಊರೆಲ್ಲವ ಮನೆಯ ಮಾಡಿ
ಹೊಗದೆಸೆಯಿಲ್ಲದ ಸುಳುಹ ನೋಡಿರೇ
ಸುಳುಹಿನ ಭೇಧವನಱಿಯದ ಕಾರಣ
ದೇವಲೋಕ-ಮರ್ತ್ಯಲೋಕವೆಲ್ಲಾ ಭ್ರಮೆಗೊಂಡಿತ್ತಲ್ಲಾ ! ॥ ೧ ॥

ಎಂಬತ್ತು ನಾಲ್ಕು ಲಕ್ಷ ಯೋನಿಮುಖಜೀವಿಗಳಿಗೆ
ಎಂಬತ್ತು ನಾಲ್ಕು ಲಕ್ಷಾರಾಧನೆ
[4]ಒಂದೊಂದಱಾ[4]ರಾಧನೆಯನೊಂದೊಂದಱಿಯದೆ
ಗೊಂದಣಗೊಂಡು ಲಯವಾದುವಲ್ಲಾ. ॥ ೨ ॥

ಭಕುತಿ-ಯುಕುತಿಯನಱಿಯ ಷೋಡಶೋಪಚಾರವಱಿಯ
ಭಾವಸಂಕಲ್ಪ ವಿಕಲ್ಪವನಱಿಯ
ನಾಮ-ಸೀಮೆಗಳೆಲ್ಲವ ನೇಮಿಸಿ ಕಳೆದಂಗೆ
[5]ಆವಾವ ಲೋಕ ಕಂಪಿತವಾತಂಗೆ[5] ॥ ೩ ॥

---

[1] (ಹ) ಆಕಾಶ (ಶಿ) ಅಕ್ಷಯ (ಗೂ). [2] (ಗೂಶಿ) ಮರ್ಮ (ಹ). [3] (ಶಿ) ದೇಶಿ (ಗೂಹ). [4] (ಗೂಶಿ) ಒಂದೊಂದಾ (ಹ). [5] (ಶಿ) ಆವಲೋಕ ಕಲ್ಪಿತ ವಾದಂಗೆ (ಗೂ) ಆವಲೋಕ ಕಂಪಿತವಾತಂಗೆ (ಹ).

ಕುಲವಳಿದು ಛಲವಳಿದು ಬಲುಹಳಿದು ನಿಲಲು
ಸೂತ್ರದ ಜಂತ್ರವಳಿಯಲು
ಫಲಸಿದ್ಧಿ[1]ಯನೆಯ್ದಿ[1] [2]ನಿಷ್ಫಲ[2]ಸಿದ್ಧಿಯನೆ ಬಿಟ್ಟು
ಭಕ್ತ್ಯಂಗನೆಯ ಮರ್ತ್ಯಕ್ಕೆ ತಂದಂಗೆ ॥ ೪ ॥

ಮಧ್ಯಸ್ಥಾನದ ಲೋಕಕ್ಕೆ ಹೋಗಿ ಮಱುವಾಳ
ನಱಿಯದ ಪರಿಯ ನೋಡಿರೇ
ತನುರುಚಿಯನೆ ಮಱೆದು ಘನರುಚಿಯ [3]ಪಿಡಿದಂಗೆ[3]
ತನ್ನಂತೆ ಮಾಡಿದ ಗೋಗೇಶ್ವರಲಿಂಗಂಗೆ ॥ ೫ ॥

ಅಂತು ಪದಸಹ ವಚನ ೭೫೪–೧೩೨೮–18–57.

[1] (ಶಿ) ಯೆನಿಸಿ (ಗೂಹ). [2] (ಹಗೂ) ನಿಷ್ಪತಿ (ಶಿ). [3] (ಶಿ) ಱಿದನ (ಗೂಹ).

*ಮತ್ತಂ ಪ್ರಭುದೇವರ ಆರೋಗಣೆ ಪರಿಯಾಣ :

ಅಂಗದಲಳವಟ್ಟ ಲಿಂಗಕ್ಕೆ ಅಂಗವೆ ಭಾಜನ! ಪ್ರಾಣದ ಮೇಲಣ ಲಿಂಗಕ್ಕೆ ಮನವೆ ಭಾಜನ ! ಅಱಿವಿನ ಮೇಲಣ ಲಿಂಗಕ್ಕೆ ನಿರ್ಭಾವವೆ ಭಾಜನ ! ಕೂಡಲಸಂಗಮ ದೇವಯ್ಯ ಪ್ರಭುದೇವರು ಆರೋಗಣೆಯ ಮಾಡುವರೆ, ಭಕ್ತಿ ಪರಿಯಾಣವಲ್ಲದೆ ಬೇಱೆ [4]ಮತ್ತೆ[4] ಭಾಜನವ ಕಾಣೆನು. ೭೫೫-೧೩೨೯-19-1.

ಮತ್ತಂ ಪರಿಯಾಣದಲ್ಲಿ ಸಕಲ ಪದಾರ್ಥವ ನೀಡುವ ಪ್ರಸ್ತಾವ; ಪ್ರಭುದೇವರ ವಚನ :

ಘನವಪ್ಪ ಪರಿಯಾಣದಲ್ಲಿ ಒಂದನುವಿನ ಬೋನವನಳವಡಿಸಿ, ಪರಿಪರಿಯ ಪದಾರ್ಥಂಗಳು ಬಗೆ ಬಗೆಯಿಂದ ಬರಲು, ನೋಡದ ಮುನ್ನವೆ ರೂಪರ್ಪಿತವಾಯಿತ್ತು. ಮುಟ್ಟದ ಮುನ್ನವೆ ಸೋಂಕರ್ಪಿತವಾಯಿತ್ತು. ರುಚಿಸದ ಮುನ್ನವೆ [5]ಸುಖ[5]ವರ್ಪಿತ ವಾಯಿತ್ತು. [6]ಅವಧಾರು,[6] ಅವಧಾರು ಲಿಂಗವೇ! ನಿನ್ನ ಮನಕ್ಕೆ ಬಂದ ಪದಾರ್ಥವ ನಿನ್ನ [7]ಘನಕ್ಕೆ[7] ನೀನರ್ಪಿಸಿವರೆ, ಎನ್ನ ಮನಕ್ಕೆ ಬಂದ ಪದಾರ್ಥವ ನಾ ನಿಮಗರ್ಪಿಸು ವೆನು. ಗೊಗೇಶ್ವರ, ನಿನಗೆ ಭರಿತಬೋನವನಳವಡಿಸಿ ನೀಡಬಲ್ಲನಾಗಿ ಎನಗೂ ನಿನಗೂ ಸಂಗನ ಬಸವಣ್ಣನ [8]ಪ್ರಸಾದವನಾರೋಗಿಸು ದೇವ[8] ೭೫೬-೧೩೩೦-19-2.

ಮತ್ತಂ ಪ್ರಭುದೇವರ ಆರೋಗಣೆ :

ಕಾಯದಲಾದ ಅರ್ಪಿತ ಅರ್ಪಿತವಲ್ಲ. ಪ್ರಾಣದಲಾದ ಅರ್ಪಿತ ಅರ್ಪಿತವಲ್ಲ. ಭಾವದ ಲಾದ ಅರ್ಪಿತ ಅರ್ಪಿತವಲ್ಲ. ಅಱಿವಿನಲಾದ ಅರ್ಪಿತ ಅರ್ಪಿತವಲ್ಲ. ನೆನಹಿಲ್ಲದ ಅವಧಾನ, ಮಱಹಿಲ್ಲದಾರೋಗಣೆ. ತಟ್ಟದ ಮುಟ್ಟದ ಅರ್ಪಿತ. ಗೊಗೇಶ್ವರ ಲಿಂಗದ ಆರೋಗಣೆಯನಿಂದು ಸಂಗನ ಬಸವಣ್ಣನಿಂದ ಕಂಡೆನು. ೭೫೭-೧೩೩೧-19-3.

ಆ ಪ್ರಸ್ತಾವದೊಳು ಬಸವರಾಜದೇವರ ವಚನ :

ಕೈಹಾರ ನೀಡಿದರೆ ಮನಹಾರ ಕೊಳುತ್ತೈದಾನೆ. ಅಹುದಹುದು ಸ್ವಾಮಿಯ ಹಸಿವು ಲೋಕಕ್ಕೆ ಹೊಸತು. ಕೂಡಲಸಂಗಮದೇವ ನೆಱೆ[3] ಹಸಿದ, ಮೊಱೆಮೊಱೆದಲ್ಲಿ ನೀಡಿ. ೭೫೮-೧೩೩೨-19-4.

---

* 'ಗೂ' ಪ್ರತಿಯಲ್ಲಿ ಇಲ್ಲಿಂದ "ಪ್ರಭುದೇವರ ಆರೋಗಣೆ" ಎಂಬ ವಿಭಾಗ ಮೊದಲಾಗುವುದು.
[4] (ಹಶಿ) × ಗೂ [5] (ಶಿಗೂ) ರಸರಸಾಯನದ ಸುಖ (ಹ). [6] ವಾಸಿಸದ ಮುನ್ನವೆ ಸುಗಂಧ ವರ್ಪಿತವಾಯಿತ್ತು. ಕೇಳದ ಮುನ್ನವೆ ಶಬ್ದವರ್ಪಿತವಾಯಿತ್ತು. ನೆನೆಯದ ಮುನ್ನವೆ ಪರಮ ಪರಿಣಾಮವರ್ಪಿತವಾಯಿತ್ತು. ಅವಧಾರು (ಹ) ಸುಖ (ಶಿಗೂ). [7] (ಗೂ) ಮನಕ್ಕೆ (ಶಿ) ಪ್ರಾಣಕ್ಕೆ (ಹ). [8] (ಶಿಗೂ) ಪ್ರಸಾದ ಆ ಪರಮಪ್ರಸಾದವ ಸಾವಧಾನದಿಂದ ಆರೋಗಿಸು ದೇವ (ಹ).

[1]ನೊಱಹಾರ[1] ನೀಡಿದರೆ ತೆಱಹಾರ A[2]ಕೊಳುತ್ತೈದಾನೆ·A[2] ಅಹುದಹುದು ಮತ್ತೇನು ? ! ದೇವರ ಹಸಿವು ನಮಗೆ [3]ಹೊಸತಲ್ಲ.[3] ದೆಸೆದಿಕ್ಕೆಲ್ಲಾ ವಿಶ್ವತೋಮುಖ [4]ವಾದ[4] ಕೂಡಲ ಸಂಗಮದೇವಂಗೆ ದೆಸೆದೆಸೆಯಲ್ಲಿ ನೀಡಿ[5]ರೇ.[5] ೭೫೯-೧೩೩೩-19-5.

ಇದಕ್ಕೆ ಚಿಕ್ಕದಣ್ಣಾಯಕರ ವಚನ :

[6]ಅನಾಹತದಲ್ಲಿ[6] ಶಿವ—ತನ್ನ ಲೀಲಾವಿನೋದದಿಂದ—ನೀವು ಸಹಿತ ಮೂರ್ತಿಯಾದನು. ಹೊಱಗೆ ಆಕಾರವ ಧರಿಸಿ, ಒಳಗೆ ನಿರವಯಕ್ಕೆ ಆರೋಗಣೆಯ ಮಾಡಿಸಲು, ಕೂಡಲ ಚೆನ್ನಸಂಗಮದೇವ, [7]ಪ್ರಭುದೇವರು[7] ಅಪರಿಮಿತದಾರೋಗಣೆಗೆ ಬಸವಣ್ಣ-ಮಡಿವಾಳ ನೆಂಬೆರಡು ತೋಳ ಧರಿಸಿದನು ಏನೆಂದುಪಮಿಸುವೆನು ! ೭೬೦-೧೩೩೪-19-6.

[8]ಮಡಿವಾಳಯ್ಯಗಳ ವಚನ[8] :

[9]ತನುಮುಖಕ್ಕೆ[9] ನೀಡಿದ ಬೋನ ಅನುವಾಗಿ ಅಳವಡದ ಮುನ್ನ—[10]ಮನಮುಖಕ್ಕೆ[10] ಸರಿಯಾಯಿತ್ತು. ಮನಮುಖಕ್ಕೆ ನೀಡಿದ ಬೋನ ಅನುವಾಗಿ ಅಳವಡದ ಮುನ್ನ—ನೋಡ ನೋಡಲೈಕ್ಯವಾಯಿತ್ತು. ಆಕಾಶ ಬಾಯ್ದೆಗೆದಂತೆ ಆರೋಗಣೆಯ ಮಾಡುತಿದ್ದನು, ಮಾಡಿಸುವ ಗರುವರಾರೋ ? ! ಕಲಿದೇವರ ದೇವನ [11]ಅನುವಱಿದು[11] ನೀಡುವರೆ ಸಂಗನ ಬಸವಣ್ಣಂಗಲ್ಲದೆ ಮತ್ತಾರಿಗೂ ಅಳವಡದು. ೭೬೧-೧೩೩೫-19-7.

ಹಡಪದಪ್ಪಣ್ಣಗಳ ವಚನ :

ಹೆಡಗೆಹಾರ, ಮೊಱಹಾರ, [12]ಗೆರಸಿ[12]ಹಾರ, [13]ಮಡಕೆಹಾರ[13] ದೆಸೆದೆಸೆಯಲ್ಲಿ ತಂದು ನೀಡುತ್ತಿರಲು ಹೊಸಪರಿಯಲಾರೋಗಣೆಯನವಧರಿಸುತ್ತಿರ್ದನು. ಆ[14]ವಾ[14]ವ ದೆಸೆಯಲ್ಲಿ ತಂದು ನೀಡುತ್ತಿದ್ದರೆ ಆ[15]ಯಾ[15] ದೆಸೆದೆಸೆಗ[16]ಳೆಲ್ಲಾ[16] ಬಾಯಾಗಿ ಕೊಳುತಿರ್ದನು. ಎತ್ತೆತ್ತ ನೋಡಿದಡತ್ತತ್ತ ಮುಖವಗೆಯ ಹೊಯ್ದಂತೆ ತೆಱಹಿಲ್ಲ. ಒಂದು ನಿಮಿಷವೆಡಹಿದರೆ—ಅಕ್ಕಿಗಚ್ಚು, ನುಚ್ಚು, ತೌಡು ಮೊದಲಾಗಿ ಹೆಚ್ಚಿದವು ನಿಮಿಷದೊಳು. ಭಕ್ತಿಬಂಧುಗಳೆಲ್ಲಾ ತಮ್ಮ ತಮ್ಮ ಮಠದ ಸಯದಾನವ ತಂದು [17]ಸಾರಗಟ್ಟಿ[17]

---

[1] (ಹಗೂ) ಮೊಱಹಾರವ (ಶಿ). A[2] (ಹಗೂ) ಕೊಳುತ್ತೈದಾನೆ (ಶಿ). [3_4] ಹೊಸತಲ್ಲ. ದೆಸೆ ದಿಕ್ಕೆಲ್ಲ ವಿಶ್ವತೋಮುಖದ (ಶಿ) ಹೊಸತಲ್ಲ. ದಶದಿಕ್ಕೆಲವನೊಳಕೊಂಡು ವಿಶ್ವತೋಮುಖವಾದ (ಹ) ಹೊಸತಲಾ! ದೆಸೆದಿಕ್ಕೆಲ್ಲಾ ವಿಶ್ವತೋ ಮುಖದ (ಗೂ). [4] (ಹ) × (ಶಿಗೂ). [5] (ಹ) × (ಗೂಶಿ). [6] (ಹಗೂ) ಅನಾಹಸ್ತದಲ್ಲಿ (ಶಿ). [7] (ಹ) ಪ್ರಭುದೇವರ (ಶಿಗೂ). [8] (ಶಿಗೂ) ಇದಕ್ಕೆ ದುಡಿವಾಳಯ್ಯಗಗಳ ದಚನ (ಹ). [9] (ಹಗೂ) ತನುಮನಕ್ಕೆ (ಶಿ). [10] (ಶಿಗೂ) ಮನಮುಖಕೇ (ಹ) (ಶಿಹ) × (ಗೂ). [11] (ಶಿ) ಅನುವರಿದು (ಹ) ಅನುವಱಿದು (ಗೂ). [12] (ಹಗೂ) ಕೆರಸಿ (ಶಿ). [13] (ಹ) (ಗೂ) × (ಶಿ). [14] (ಹ) × (ಗೂಶಿ). [15] ಯಾಯಾ (ಹ). [16] (ಗೂಹ) ಳೆಲ್ಲವೂ (ಶಿ). [17] (ಶಿಹಲು) ಸಾರೆಗಟ್ಟಿ (ಗೂ).

ತನಗುಳ್ಳ ನಿಧಾನ ತನಗಿಲ್ಲದಂತೆ ಬಂಧುಗಳೆಲ್ಲರ ನುಂಗಿ, ಅಂಬುಧಿ [1]ಬತ್ತಿತ್ತು[1], ಅದ್ಭುತ ಸತ್ತಿತ್ತು, ರಣರಂಗವತ್ತಿತ್ತು. ಇರುಳು-ಮಾಣಿಕವ ನುಂಗಿ ಮರಣವಾದ ಬಳಿಕ, ಅಮೃತದ ಪುತ್ಥಳಿಯ ಹಾಲ [2]ಕುಡಿಯ[2] ಕರೆದಡೆ ಗೊಗೇಶ್ವರ ಲಿಂಗಕ್ಕೆ ಊಟ ವೆಂಬುದಿಲ್ಲ ಕಾಣಾ ಸಂಗನ ಬಸವಣ್ಣ. ೭೯-೧೩೦೩-18-29. ಮತ್ತಂ :

ಕಾಯದಲ್ಲಿ ಕಾಯ ಸವೆದು, ಪ್ರಾಣದಲ್ಲಿ ಪ್ರಾಣ ಸವೆದು ನಿಶ್ಚಿಂತವಾದ ಬಳಿಕ—ಹಸಿವು-AತೃಷೆಗಳೆಂಬವುA ಅಳಿದುಹೋದವು—ಕೇಳಾ! ಉಂಡಹೆನೆಂಬ ಬಯಕೆ ಒಲ್ಲೆನೆಂಬ ವೈರಾಗ್ಯವಿಲ್ಲ. ಇದು ಸ್ವಭಾವತೃಪ್ತಿಯೊಳಗೆ ಅಡಗಿತ್ತು. ಇದು ಕಾರಣ ನಮ್ಮ ಗೊಗೇಶ್ವರ ಲಿಂಗಕ್ಕೆ ಆರೋಗಣೆ ಇಲ್ಲ ಕಾಣಾ ಸಂಗನ ಬಸವಣ್ಣ. ೭೩೦-೧೩೦೪-18-30.

ಇದಕ್ಕೆ ಚಿಕ್ಕದಣ್ಣಾಯಕರ ವಚನ :

ಒಲ್ಲೆನೆಂದರೆ ಅದೆ ಭಂಗ, ಒಲುವೆನೆಂದರೆ ಅದೆ ಭಂಗ! ಒಲ್ಲೆ-ಒಲುವೆನೆಂಬೆರಡಸು ಅಳಿದು ತೃಪ್ತನಾದೆನೆಂದರೆ ಅದೆ ಕೊಱತೆ. ಕೂಡಲಚೆನ್ನಸಂಗಯ್ಯ—ಭಕ್ತನಾಧೀನ ವಾಗಿ ಇಲ್ಲಿಗೆ ನಡೆದು ಬಂದ ಬಳಿಕ, ಉಪಚಾರ ಉಂಟೆ ಅಯ್ಯ? ೭೩೧-೧೩೦೫-18-31.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

ಭಕ್ತನಾಧೀನವಾಗಿ [3]ಭಕ್ತಿಯ[3] ಬೇಡ ಬಂದವನಲ್ಲ. ಮುಕ್ತಿಯಾಧೀನವಾಗಿ ಮುಕ್ತಿಯ ಬಯಸಿ ಬಂದವನಲ್ಲ. ಅಶನಾತುರನಾಗಿ ವಿಷಯವ ಬಯಸಿ ಬಂದವನಲ್ಲ. ಗೊಗೇಶ್ವರನ ಶರಣ ಸಂಗನ ಬಸವಣ್ಣ ಮಾಡುವ ಭಕ್ತನಲ್ಲಾಗಿ, ನಾನು ಬೇಡುವ ಜಂಗಮವಲ್ಲ, ಕೇಳಾ ಚೆನ್ನಬಸವಣ್ಣ. ೭೩೨-೧೩೦೬-18-32.

ಇದಕ್ಕೆ ಬಸವಣ್ಣನ ಪ್ರತ್ಯುತ್ತರ:

ಆನು ನಿಮ್ಮಲ್ಲಿ [4]ಪ್ರಪಂಚನಱಿಯೆ[4]ನಯ್ಯ, ನಿಮ್ಮ ಪಾದದಲ್ಲಿ ತದ್ಗತವಾಗಿಪ್ಪೆ. ಭಕ್ತಿ-ಯುಕ್ತಿ-ವಿರಕ್ತಿಯ ಉಪಚಾರವ ನಾನಱಿಯೆನು. ಕೂಡಲಸಂಗಮದೇವ, ಭಿನ್ನವಿಲ್ಲದ ಭೃತ್ಯಾಚಾರಕ್ಕೆ ಬಂದ ಪದಾರ್ಥವ ನೀನೆಂದೆ ಚಿತ್ತೈಸಯ್ಯ. ೭೩೩-೧೩೦೭-18-33.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

ಕಾಯವೆಂಬ ಕಲ್ಪಿತವಳಿದು, ಪ್ರಾಣವೆಂಬ ಸೂತಕ ಹಱಿದು, ನಿಜಭಕ್ತಿ ಸಾಧ್ಯ ವಾದಲ್ಲದೆ ಲಿಂಗಪರಿಣಾಮ ವೇದಿಸಬಾರದು. ಆನು ಮಾಡಿದೆ, ನೀವು ಕೈಕೊಳ ಎಂದರೆ ಅದೇ ಅಜ್ಞಾನ. ಎಮ್ಮ ಗೊಗೇಶ್ವರಲಿಂಗಕ್ಕೆ ಕುಱುಹಳಿದು, ನಿಜ ಉಳಿದವರಲ್ಲದೆ ಪದಾರ್ಥವ ನೀಡ ಬಾರದು, ಕಾಣಾ ಸಂಗನ ಬಸವಣ್ಣ. ೭೩೪-೧೩೦೮-18-34.

ಇದಕ್ಕೆ ಪ್ರಭುದೇವರಿಗೆ ಬಸವರಾಜದೇವರ ಬಿನ್ನಹದ ಪ್ರತ್ಯುತ್ತರ:

---

[1] (ಹಗೂ) ಬೆಂದಿತ್ತು (ಶಿ(. [2] (ಗೂಹ) ಕುಡಿಕೆಯ (ಶಿ.) A (ಗೂ) ತೃಷೆಯಂಗಳೆಂಬವು (ಶಿಪ). [3] (ಶಿಗೂ) ಭಕ್ತನ (ಹ). [4] (ಶಿ) ಪ್ರಪಂಚಿನಉಪಚಾರವನಱಿಯೆ (ಗೂಹ).

ಮಱಹಿಂದಲಾದ ಕುಱುಹಿನ ಕಾಯುವ ಧರಿಸಿಕೊಂಡು ಬಂದರೆ—ಅದು ಎನಗೆ ಕುಂದಲ್ಲ ನೋಡು ದೇವ. ನಿಮ್ಮ ಲೀಲೆಯಿಂದ ಹಿಂದಾಱು ಜನ್ಮದಲ್ಲಿ ಬಂದರೆ—ಅದ ನಿಮ್ಮ ಜಂಗಮಭಕ್ತಿಯಿಂದ ಕಳೆದೆ ನೋಡಯ್ಯ. ಕಾಯವಿಲ್ಲದ ಜಂಗಮಕ್ಕೆ ಪ್ರಾಣ ವಿಲ್ಲದ ಮಾಟ—ಒಲ್ಲೆನೆಂಬುದಕ್ಕೆ ಕಾರಣವೇನು, ಹೇಳಾ ಕೂಡಲಸಂಗಮದೇವ? ೭೩೫-೧೩೦೯-18-35.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

ತಾನಿಟ್ಟ ಬೇತಾಳ ತನ್ನ ತಿಂದಿತೆಂಬಂತೆ, ನಿನ್ನ ಭವಾವಳಿಯನೆತ್ತುವನ್ನಕ್ಕರ ಎನ್ನ ಮಱವೆ ಎನಗೆ ಎಚ್ಚಱಿಕೆಯಾಯಿತ್ತು. ಎನ್ನ ಪೂರ್ವ ನಿರ್ವಾಹವಾಯಿತ್ತು. ನಿನ್ನ ವರ್ಮ ತಿಳಿಯದೆನಗೆ. ಅದೆಂತೆಂದರೆ: ಹಿಂದೆ ನೀನೇನಾಗಿದ್ದೆಯೆಂಬುದನಱಿಯೆನಾಗಿ—ಇಂದು ನಿಮ್ಮ ಮನೆಯಲಾರೋಗಣೆಯಾಗದು ಕಾಣಾ, ಸಂಗನ ಬಸವಣ್ಣ, ಗೊಗೇಶ್ವರಂಗೆ. ೭೩೬-೧೩೧೦-18-36.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ಅಯ್ಯ, ಏಳೇಳು ಭವಾಂತರದಲ್ಲಿ ಶಿವಭಕ್ತನಾಗಿ ಬಾರದಿದ್ದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ! ನಿಮ್ಮ ಪ್ರಸಾದಕಲ್ಲದೆ ಬಾಯ್ದೆಱೆಯೆನಯ್ಯ! ಅದೆಂತೆಂದರೆ: ಪ್ರಥಮ ಭವಾಂತರದಲ್ಲಿ—ಶಿಲಾದನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು, ನಿಮ್ಮ ಭೃತ್ಯನ ಮಾಡಿಕೊಂಡಿದ್ದಿರಯ್ಯ. ಎರಡನೆಯ ಭವಾಂತರದಲ್ಲಿ—ಸ್ಕಂದನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು, ಕಾರುಣ್ಯವ ಮಾಡಿಕೊಂಡಿದ್ದಿರಯ್ಯ. ಮೂಱನೆಯ ಭವಾಂತರದಲ್ಲಿ—ನೀಲಲೋಹಿತನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು, ನಿಮ್ಮ ಲೀಲಾವಿನೋದದಿಂದಿರಿಸಿಕೊಂಡಿದ್ದಿರಯ್ಯ. ನಾಲ್ಕನೆಯ ಭವಾಂತರ ದಲ್ಲಿ—ಮನೋಹರನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು ನಿಮ್ಮ ಮನಃಪ್ರೇರಕ ನಾಗಲೆಂದಿರಿಸಿಕೊಂಡಿರುತ್ತಿದ್ದಿರಯ್ಯ. ಐದನೆಯ ಭವಾಂತರದಲ್ಲಿ—ಕಾಲಲೋಚನನೆಂಬ ಗಣೇಶ್ವರನ ಗೂಡಿ, ಹೆಸರಿಟ್ಟು ಕರೆದು, ಸರ್ವಕಾಲ ಸಂಹಾರವ ಮಾಡಿಸುತ್ತಿದ್ದಿರಯ್ಯ. ಆಱನೆಯ ಭವಾಂತರದಲ್ಲಿ—ವೃಷಭನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು, ನಿಮಗೇಱುವ ವಾಹನವಾಗಿರಿಸಿಕೊಂಡಿದ್ದಿರಯ್ಯ. ಏಳನೆಯ ಭವಾಂತರದಲ್ಲಿ—ಬಸವ ದಣ್ಣಾಯಕನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು, ನಿಮ್ಮ ಒಕ್ಕು ಮಿಕ್ಕುದಕ್ಕೆ ಯೋಗ್ಯನಾಗಲೆಂದಿರಿಸಿಕೊಂಡಿದ್ದಿರಯ್ಯ. ಇದು ಕಾರಣ, ಕೂಡಲಸಂಗಮದೇವ, ನೀ ಬರಿಸಿದ ಭವಾಂತರದಲ್ಲಿ ಬರುತ್ತಿದ್ದೆನಯ್ಯ ೭೩೭-೧೩೧೧-18-37.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

ಕೆಳಗೇಳು ಲೋಕಂಗಳಿಲ್ಲದ ಮುನ್ನ, ಮೇಲೇಳು ಲೋಕಂಗಳಿಲ್ಲದ ಮುನ್ನ, ಸಹಸ್ರ ಬ್ರಹ್ಮಾಂಡಂಗಳಿಲ್ಲದ ಮುನ್ನ—ಅಲ್ಲಿಂದತ್ತತ್ತ, ಬಸವಣ್ಣ, ನೀನು ಲಿಂಗಭಕ್ತ, ಜಂಗಮ ಪ್ರಾಣಿ. ಶಶಿಧರನ ಶರಣಂಗೆ ವೃಷಧರ ಸ್ವಾಯತವಾಗಿ ನಮ್ಮ ಗೊಗೇಶ್ವರ ಲಿಂಗಕ್ಕೆ ಬಸವಣ್ಣನೇ ಭಕ್ತನೆಂದು ಇಂದಱಿದೆನಯ್ಯ. ೭೩೮-೧೩೧೨-18-38.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ಅಯ್ಯ, ನೀವೆನ್ನ ಬಲ್ಲಿರಲ್ಲದೆ, ನಾ ನಿಮ್ಮ ಬಲ್ಲೆನೇ? ನಿಮ್ಮ ನಿಲವ ನೋಡಿ[1]ಹೆ[1]ನೆಂದರೆ— ನಿಮ್ಮ [2]ಘನ[2]ವೆನ್ನ ಮನಕ್ಕೆ ಸಾಧ್ಯವಾಗದ ಕಾರಣ-ಅಂತಿಂತೆಂದುಪಮಿಸಲಮ್ಮದೆ ಇದ್ದೆ ನೋಡಯ್ಯ, ನಿತ್ಯತೃಪ್ತ ಮಹಿಮ, ನಿಮಗೆಂದಳವಡಿಸಿದ ಪದಾರ್ಥವನು ಸುಚಿತ್ತದಿಂದಲವಧರಿಸಿ ಸಲಹಯ್ಯ ಪ್ರಭುವೆ ಕೂಡಲಸಂಗಮದೇವ. ೭೩೯-೧೩೧೩-18-39.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ.

ಸಮತೆಯೆಂಬ ಕಂಥೆಯ ತೊಟ್ಟು ಸುಬುದ್ಧಿಯೆಂಬ ಟೊಪ್ಪರವನಿಕ್ಕಿ, ವಿಷಯವೆಂಬ ಹಾವುಗೆಯ ಮೆಟ್ಟಿ,A[3]ಮದ[3]ವೆಂಬ [4]ಕುಳಿಯ[4] ಬೀಳದೆ, [ಮಚ್ಚರವೆಂಬ ಚೇಳ ಮೆಟ್ಟದೆ, ಕ್ರೋಧವೆಂಬ ಕೊರಡನೆಡಹದೆ]A ಗೊಗೇಶ್ವರನ ಶರಣ ಬಂದೆನು ಭಕ್ತಿ ಭಿಕ್ಷೆಯನಿಕ್ಕೈ ಸಂಗನ ಬಸವಣ. ೭೪೦-೧೩೧೪-18-41.

ಕಡೆಯಿಲ್ಲದ ದೇಶವ [5]ತೊಳಲಿದೆನು.[5] ಹವಣಿಲ್ಲದ ಕಂಥೆಯ ತೊಟ್ಟೆನು. ಹಸಿವಿಲ್ಲದ ಕಪ್ಪರವ ಹಿಡಿದು ಭಕ್ತಿಭಿಕ್ಷವ ಬೇಡ ಬಂದೆ. ಗೊಗೇಶ್ವರ ಹಸಿದನುಣಲಿಕ್ಕೇಳಾ ಸಂಗನ ಬಸವಣ್ಣ. ೭೪೧-೧೩೧೫-18-42.

ಪೌರ್ಣಮಿ ಬಪ್ಪನ್ನಕ್ಕರ ಬಾಯಿ ಬಂಧನದಲ್ಲಿದ್ದ ಚಕೋರನಂತಿದ್ದೆನಯ್ಯ. ಉಣಲಾಗದೆಂಬ ಶಾಸ್ತ್ರವಿಡಿದು ಇದ್ದವನಲ್ಲ. ಉಣಲಾಗದೆಂಬ ಶಾಸ್ತ್ರ ಉಂಟೆ ಲಿಂಗವಂತಂಗೆ? ಅಹೋ ರಾತ್ರಿ ಅಷ್ಟಭೋಗಂಗಳ ಲಿಂಗಕ್ಕೆ ಕೊಟ್ಟು ಕೊಳಬೇಕು. ಮಾಡುವ ನೀಡುವ ನಿಜಭಕ್ತರಿಲ್ಲದ ಕಾರಣ ಬಾಯ್ದೆಱೆಯದಿರ್ದೆನು. ಮಾಡಿ ನೀಡುವೆನೆಂಬ ಶಬ್ದಕ್ಕೆ ಸಂತೋಷದಾಪ್ಯಾಯನ ಹಿರಿದಾಯಿತ್ತು. ನೀಡೈ ಸಂಗನ ಬಸವಣ್ಣ ಗೊಗೇಶ್ವರಂಗೆ. ೭೪೨-೧೩೧೬-18-40.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ರೂಹಿಲ್ಲದ ಸುಯಿಧಾನವ ನೀಡುವೆ. ರುಚಿಯಿಲ್ಲದ ಪದಾರ್ಥವ ಮಥನಿಸದೆ ನೀಡುವೆನು—ಲಿಂಗಕ್ಕೆಂದು ಲಿಂಗಪದಾರ್ಥವನಂಗಮುಖವ ಮಱೆದು ನಿಮಗೆ ನೀಡುವೆ, ಕಾಮಿಸದೆ-ಕಲ್ಪಿಸದೆ-ಭಾವಿಸದೆ-ಭ್ರಮಿಸದೆ ನಿಮ್ಮ ಪರಿಯಾಣಕ್ಕೆ ನೀಡುವೆನು. ಸುಚಿತ್ತ ಸಮಾಧಾನದಿಂದವಧರಿಸಬೇಕೆಯ್ಯ ಕೂಡಲಸಂಗಮದೇವಯ್ಯ. ೭೪೩-೧೩೧೭-18-46.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

---

[1] (ಶಿ) ಮಾಡಿಹೆ (ಗೂಹ). [2] (ಗೂಹ) ಮನ,(ಶಿ). Aತಮಂಧವೆಂಬ ಕುಣಿಯ ಬೀಳದೆ, ವೈರಾಗ್ಯವೆಂಬ ಕೊರಡನೆಡಹದೆ, ಮದವೆಂಬ ಚೇಳ ಮೆಟ್ಟದೆ (ಗೂ) (ಹ) ಮದವೆಂಬ ಕುಳಿಯ ಬೀಳದೆ, ಮಚ್ಚರವೆಂಬ ಚೇಳಮೆಟ್ಟದೆ ಕ್ರೋಧವೆಂಬ ಕೊರಡ ಮೆಟ್ಟದೆ ನೆಡಹದೆ ತಮವೆಂಬ ಕುಳಿಯದಾಂಟ (ಶಿ). [3] (ಶಿ) ತಮಂಧ (ಗೂಹ). [4] ಕುಣಿಯ (ಹ). [5] (ಹಶಿ) ತಿರುಗಿದೆನು (ಗೂ).

ನಿಮ್ಮ ಲೀಲೆ, ನಿಮ್ಮ ವಿನೋದ; ನಿಮ್ಮ ಹಱಿ[3], ನಿಮ್ಮ ಕೊಳಲು. [1]ಆನಿದಕ್ಕೆ[1] ಬೇಕೆನ್ನೆ ಬೇಡೆನ್ನೆ! ಮೇಘವಹ್ನಿ ಧರೆಗೆಱಗುತ್ತ ಲೋಕವ ಬೆಸಗೊಂಡಿತ್ತೆ? ಉದರಾಗ್ನಿ ಧರೆಗೆಱಗುತ್ತ [2]ಭೂತಂಗಳ[2] ಬೆಸಗೊಂಡಿತ್ತೆ? ಗೊಗೇಶ್ವರನ ಅಲ್ಲಮನ ನಿರುಪಮ ಮಹಿಮೆ ಎಂತಿದ್ದಿತ್ತು ಅಹಗೆ ನೀನು ಮಾಡುವುದಲ್ಲದೆ, ನಾನಿದಕೆ ಬೇಕೆನ್ನೆನು ಬೇಡೆನ್ನೆನು. ೭೪೪-೧೩೧೮-18-47.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ :

ಮಾಡುವ-ಮಾಡಿಸಿಕೊಂಬ ಈ ಎರಡಱ ನಡುವೆ ಸಂದು-ಭೇದ ಉಂಟೇ, ದೇವ, ಕಾಯ-ಪ್ರಾಣದ ಸಂಗದಂತೆ ಇದ್ದಿತಲ್ಲದೆ? "ಬಲ್ಲಂತೆ ಮಾಡು, ಬಲ್ಲಂತೆ ನೀಡು-Aನಾನಱಿಯೆ"Aನೆಂಬುದು ನಿಮಗುಚಿತವೆ? ಮಾಡುವಲ್ಲಿ ನೀಡುವಲ್ಲಿ, ಹೇಳಿ ಮಾಡಿಸಿಕೊಂಬುದಲ್ಲದೆ—ಕೈ ಕಲಸಿದರೆ ಬಾಯಿಗೆ ಹಂಗುಂಟೆ ಕೂಡಲಸಂಗಮದೇವ? ೭೪೫-೧೩೧೯-18-48.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ :

ಉಳ್ಳವರ [3]ಹಗೆವ[3] ತೆಗೆವನ್ನಕ್ಕರ, ಇಲ್ಲದವರ ಹರಣ ಹೋಯಿತ್ತೆಂಬ ಗಾದೆ ಎನಗಾಯಿತ್ತಯ್ಯ! ಮಾತು ಬಣ್ಣಿಸಲು ಹೊತ್ತು ಹೋಯಿತ್ತಯ್ಯ! [4]ನಿನಗದೆ ಹಱಿನುಡಿಗೆ[4] ಕಡೆಯಿಲ್ಲ. ಒಬ್ಬರ ನೋಡುವಾಗ ಅಱುವತ್ತು ಮನುಷ್ಯರ ನೋಡವ ಹಾಂಗೆ ಆಗುತ್ತಿದೆ. ಶೂನ್ಯಸಿಂಹಾಸನ ಬವರಿಗೊಡುತ್ತಿದೆ. ಪ್ರಾಣ ಹೆಡತಲೆಯಲ್ಲಿ ಹೋಗುತ್ತಿದೆ. ಗೊಗೇಶ್ವರ ಹಸಿದನು, ಪದಾರ್ಥವ ನೀಡೈ ಸಂಗನ ಬಸವಣ್ಣ. ೭೪೬-೧೩೨೦-18-49.

ಇದಕ್ಕೆ ಬಸವರಾಜದೇವರ ವಚನ :

ಶುದ್ಧವಾಯಿತೆಂಬೆನೆ? ಸುಯಿಧಾನಿ ನಾನಲ್ಲ. ಅನುವಾಯಿತ್ತೆಂಬೆನೆ? ಅವಧಾನಿ ನಾನಲ್ಲ. ಸುಯಿಧಾನ-ಅವಧಾನದರ್ಪಿತವ ಮುನ್ನಱಿಯೆ. ಇದ್ದ ಪರಿಯಲ್ಲಿ ನೀಡಿದರೆ ಬಂದ ಪರಿಯಲ್ಲಿ ಕೈಕೋ ಕೂಡಲಸಂಗಮದೇವ. ೭೪೭-೧೩೨೧-18-50.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ :

ಅಹುದಹುದು ಕಿಂಕುರ್ವಾಣ! ಮಝು ಭಾಪು! ಭಾಪು! ಬಲ್ಲವರು ಬಲ್ಲೆವೆಂಬಿರೇ? ಲಿಂಗವಂತರ ಮಹಿಮೆ ಹೀಂಗಿರಬೇಡ? ಗೊಗೇಶ್ವರನ ಆಪ್ಯಾಯನವನಡಗಿಸುವ [5]ಅನುವನು[5] ನೀನಲ್ಲದೆ ಮಹೀತಳದೊಳು ಮತ್ತೆ ಬಲ್ಲವರಾರು ಹೇಳಾ ಸಂಗನ ಬಸವಣ್ಣ ೭೪೮-೧೩೨೨-18-51.

ಇದಕ್ಕೆ ಬಸವರಾಜದೇವರ ವಚನ :

ಅಗ್ಘವಣಿಯವಸರ ಸದಾಚಾರ ಸತ್ಕ್ರಿಯೆಯೆಂಬ ಭೂಮಿಯ ಮೇಲೆ, ಸರ್ವಶುದ್ಧವೆಂಬ ಗೋಮಯಮಂ ತಂದು, ವಿನಯಾರ್ಥವೆಂಬ ಉದಕದಿಂದ ಸಮ್ಮಾರ್ಜನೆಯಂ

---

[1] (ಹಶಿ) ಅದಕ್ಕೆ (ಗೂ). [2] (ಶಿಗೂ) ಭೂತಳಂಗಳ (ಹ). A (ಹ) ನಾನಱಿವೆ (ಶಿ). [3] (ಶಿ) ಹಗೆಯುವ (ಗೂಶಿ). [4] ನಿನಗೆ ಹರಿನುಡಿಗೆ (ಹ). [5] (ಹ) ಅನುಮಾನವನು (ಗೂಶಿ).

ನೀಡುತ್ತಿದ್ದರೆ ಅದ್ಭುತದಾರೋಗಣೆಯ ಕಂಡು, ಹರಿದು ಹರಿದು, ಪಾಕಪ್ರಯತ್ನವಂ ಮಾಡಿ ಎನುತ್ತೆ, ಬಸವಪ್ರಿಯ ಕೂಡಲಚೆನ್ನಸಂಗಯ್ಯನಲ್ಲಿ, ಸಂತೋಷದಲೋಲಾಡುತ್ತಿರ್ದನು ಎನ್ನ ಪರಮಗುರು ಬಸವಣ್ಣನು. ೭೬೨-೧೩೩೬-19-8.

ಬಸವರಾಜದೇವರ ವಚನ :

ಅರಿದರಿದು! ಎನಗಿಂದು ಕಂಗೆ ಮಂಗಳವಾಯಿತ್ತು. ಒಂದಹುದು ಒಂದಾಗದೆಂಬ ಭ್ರಮೆಯವನಲ್ಲ, ಬೇಕು ಬೇಡೆಂಬ ಜಂಜಡದವನಲ್ಲ. [1]ಎಡವಱಿಯದ[1] ನೋಟ, ನುಡಿಯ ಸಡಗರವಱಿತು ಎಡೆಯಾಟ ಕೋಟಲೆಯ ಕಳೆಯ ಬಂದನು. ನೋಡುವರ ಮನದ ಸುಖದ ಸಾಗರದ ನಿಧಿಯನೇನೆಂದುಪಮಿಸುವೆನು?! ಎನ್ನ ಉಭಯಕರ್ಮವ ಕಳೆದು ತನ್ನೊಳಗೆ ಇಂಬಿಟ್ಟುಕೊಳ ಬಂದನು ಕೂಡಲಸಂಗಮದೇವ ಕೃಪಾಮೂರ್ತಿ. ೭೬೩-೧೩೩೭-19-9.

ಬೆದಱಿಸುವ ಸಂಗ, ಬೆಚ್ಚಿಸುವ ಸಂಗ, [2]ಬಿಚ್ಚಿಬಿಸುಡುವ[2] ಸಂಗ, ತನ್ನ ನಚ್ಚಿ ಮಚ್ಚಿ ಮುಯ್ಯಾಂತೆನೆಂದರೆ ಮೇಳವಾಡುವ ಸಂಗ. ಬೋಳೈಸುವ ಸಂಗ, [3]ಆಳಿಗೊಳಿಸುವ[3] ಸಂಗ, ಇದಿರ ಕೈಯಲ್ಲಿ ಅಳಲಿಸುವ ಸಂಗ, ಒತ್ತಿ ನೋಡುವ ಸಂಗ ಒಳಹೊಱಗೆನ್ನದೆ. ಕೂಡಲಸಂಗಮದೇವಯ್ಯ, ಮಡಿವಾಳ ಮಾಚಿತಂದೆಯ ಕೃಪೆಯುಳ್ಳನ್ನಕ್ಕರ ನಾನಂಜೆನು. ೭೬೪-೧೩೩೮-19-10.

ಇದಕ್ಕೆ ಮಾಚಿತಂದೆಗಳ ಪ್ರತ್ಯುತ್ತರ:

ಮಾಚಿತಂದೆಯ ಕೈಲಾಗದು, ಹೋಚಿತಂದೆಯ ಕೈಲಾಗದು. ಇಚ್ಚೆಗೆಟ್ಟಂತೆ ಇರಲಾಗದು, ಅಜ್ಜೊತ್ತಿದಂತೆ ಇರಬೇಕು. ಅತಿಜೋದ್ಯವಾಗಿ ಎಚ್ಚರಿಕೆಯ [4]ಮುಚ್ಚು[4] ಮಱಹಿಲ್ಲದೆ ಬೆಚ್ಚಂತಿರಬೇಕು. ಮಚ್ಚು ಪಲ್ಲಟ[5]ವಾಗದೆ[5] [6]ಅಚ್ಚರಿಯ[6] ಭಕ್ತಿಭರಿತವಾಗಿರಬೇಕು. ಕಲಿ ಕರುಳನೊತ್ತಿ ಮುಂದಕ್ಕೆ [7]ನಡೆವ[7]ನಲ್ಲದೆ ಎಡೆಗೋಲನಾಸೆ ಮಾಡುವನೆ ಹೇಳಾ? ಕಲಿದೇವರ ದೇವನ ಅಂಕೆಗೆ ಝುಂಕೆಗೆ ಬೆಚ್ಚಿ ಬೆದಱಿ ಓಡದಿರು [8]ವೀರಕಂಕಣವ[8] ಕಟ್ಟು ಸಂಗನ ಬಸವಣ್ಣ. ೭೬೫-೧೩೩೯-19-11.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ಸಮಧಾನ ಸವೆಯಿತ್ತೆಂದು ಬೆದಱಿದೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಷಡ್ವಿಧಪದಾರ್ಥಂಗಳು ಅವಸರಕ್ಕೆ ಒದಗದೆ ಇದ್ದಲ್ಲಿ, ಮನವಳುಕಿ ಬೆದಱಿದೆನಾದರೆ ನಿಮ್ಮ ಭಕ್ತರಿಗೆ ಸಲ್ಲೆನು. [9]ಒಡವೆ ಸವೆದರೆ ಒಡಲನೆ ಸಲಿಸುವೆನು.[9] ಕಡೆಮುಟ್ಟ ಪೂರೈಸದಿದ್ದೆನಾದರೆ ಮಡಿವಾಳ ಮಾಚಿತಂದೆಯ ಪಾದಸಾಕ್ಷಿಯಾಗಿ ಕೂಡಲಸಂಗಮದೇವರಿಗೆ ದೂರವಹೆನು. ೭೬೬-೧೩೪೦-19-12.

---

[1] (ಹಗೂಉ) ಎಡೆವಱಿಯದೆ (ಶಿ). [2] (ಗೂಉ) ಬೆಚ್ಚಿ ಓಡಿಸುವ (ಹ) ಓಡಿಸುವ (ಶಿ). [3] (ಗೂಹ) ಆಳಿಗೊಳುವ (ಶಿ). [4] ಮುಚ್ಚು (ಉ) ಮಚ್ಚು (ಶಿಗೂ) ಮೆಚ್ಚು (ಶಿ). [5] (ಗೂಹ) ವಾಗೆ (ಶಿ). [6] (ಶಿ) ಆಶ್ಚರ್ಯ (ಗೂ). ಆರ್ಯ (ಹ) [7] (ಪಶಿ) ಹರಿವ (ಗೂ). [8] (ಶಿ) ವೀರಗಂಕಣವ (ಗೂಹ). [9] (ಗೂಉ) ಒಡನೆ ಸವೆದರೆ ಒಡನೆ ಸಲುವೆನು (ಶಿ) ಒಡವೆ ಸವೆದರೆ ಸಲುವೆ (ಹ) [ಒಡವೆ ಸವೆದರೆ ಒಡನೆ ಸಲುವೆನು?].

ಅಳವಡಿಸಿದ ಪದಾರ್ಥ ಅರ್ಪಿತಕ್ಕೆ ಸರಿಯಾಯಿತ್ತು. ಅಳವಡಿಸದ ಮುನ್ನವೆ [1]ಕೊಳು[1] ತೈದಾನೆ ಶಿವನು. ಸಂದ ಪದಾರ್ಥ ಸಲಲಿ. ಕೂಡಲಸಂಗಮದೇವರ ಆರೋಗಣೆಯ ಅವಸರಕ್ಕೆ ಸಂಚಿತಸಯಧಾನವ ತೆಗೆಸಿರೇ ಸೊಡ್ಡಳ ಬಾಚರಸರೇ. ೨೬೭–೧೩೪೧–19–13.

ಇದಕ್ಕೆ ಸೊಡ್ಡಳ ಬಾಚರಸರ ವಚನ:

ಬನ್ನಿ ಕರಣಿಕರು ನೀವು ಲೆಕ್ಕವಂ ಹೇಳಿ ಧಾನ್ಯ-ಧಾನ್ಯಂಗಳ [2]ಸಂಚವನು[2]: ಹೊಸ ಜೋಳ ಅಱುವತ್ತು ಲಕ್ಷ ಖಂಡುಗ, ಶಾಲಿಧಾನ್ಯ ಮೂವತ್ತು ಲಕ್ಷ ಖಂಡುಗ, ಗೋಧಿ ಹನ್ನೆರಡು ಲಕ್ಷ ಖಂಡುಗ, [3]ಕಡಲೆ ಬತ್ತೀಸ ಲಕ್ಷ ಖಂಡಗ[3], ಹೆಸಱು ಮೂವತ್ತು ಲಕ್ಷ ಖಂಡುಗ, ನವಣೆ-ಹಾರಕ-ಬರಗು-[4]ಸಾವೆ-ಮಾಷಿಗಳೆಂಬ[4] ಧಾನ್ಯಂಗಳು ಐವತ್ತು ಲಕ್ಷ ಖಂಡುಗ ! [5][ಹೊಸ ಸುಗ್ಗಿಯ ವೇಳೆಗೆ ಬಹ ಧಾನ್ಯಕ್ಕೆ ಲೆಕ್ಕವಿಲ್ಲ, ಈಗ ಬಂದಿಹ ಧಾನ್ಯಕ್ಕೆ ಹವಣಿಲ್ಲ][5]. ಮಹಾದಾನಿ ಸೊಡ್ಡಳನ ಆರೋಗಣೆಯ ಅವಸರಕ್ಕೆ ಅಳವಟ್ಟ ಸಯಧಾನವಿನಿತನವಧರಿಸಯ್ಯ, ಸಂಗನ ಬಸವಣ್ಣ. ೨೬೮–೧೩೪೨–19–14.

ಬಸವರಾಜದೇವರ ವಚನ :

ಎಣಿಕೆಗೆ ಬಂದ ಸಯಧಾನ [6]ಕ್ಷಣಕ್ಕೆ ಮುನ್ನ ಪಾಕವಾಗಲು,[6] ಗಣನೆಯಿಲ್ಲದೆ ನೀಡುತ್ತಿರಲು, ತೋಱದ ಮುನ್ನವೆ ಅರ್ಪಿತವಾದುವು. ಇಂತು ಎಣಿಸಿ ನೀಡಿಹೆನೆಂದರೆ ಮನಕ್ಕೆ ಸಾಧ್ಯವಲ್ಲ. ಬಯಲು ಬಾಯ್ದೆಗೆದಂತೆ ಉಣುತ್ತಿದ್ದನು ಕೂಡಲಸಂಗಮದೇವನು. ೨೬೯–೧೩೪೩–19–15.

[7]ಉಂಡಲಿಗೆ-ಕಡುಬು-ಮಂಡಗೆ-ಸೂಸಲು[7] ಬೆಲ್ಲ-ದ್ರಾಕ್ಷಿ-ಸಕ್ಕರೆ ಸರಿಭಾಗವಾದ ಹೊಸ ಹೆಸಱ ಭಕ್ಷ್ಯ [8]ಹನ್ನಿ[8] ಖಂಡುಗ. ಸುಲಿಗಡಲೆಯ ಕಜ್ಜಾಯ ಹದಿನೆಂಟು ಖಂಡುಗ ಅಕಾಲ ಮಾವಿನ ಹಣ್ಣು ಇಪ್ಪತ್ತು ನಾಲ್ಕು ಲಕ್ಷ, ಕಡೆಯಿಲ್ಲದ ಕದಳಿಯ ಫಲ [9]ಮುಪ್ಪತ್ತಾಱು[9] ಲಕ್ಷ, ಚಾರ ಬೀಜ ಎಂಬತ್ತು [10]ನಾಲ್ಕು[10] ಖಂಡುಗ. ತವರಾಜ-ಹೆತ್ತ ತುಪ್ಪ-ಹಲಸಿನಹಣ್ಣು ಮನ ಮೀರೆ. ಹಾಲಕೆನೆ ಹದಿನೆಂಟು ಖಂಡುಗ. ಉತ್ತುತ್ತಿ [11]ಚೆಲು[11] ಪಾಲ [12]ಘಟ್ಟಗೆ ಕಟ್ಟಳೆ[12]ಯಿಲ್ಲ. [13][ಮನ ಒಲಿದುದ][13]ನಾರೋಗಣೆಯ ಮಾಡು ದೇವ ಕೂಡಲಸಂಗಮ[14]ದೇವ.[14] ೨೭೦–೧೩೪೪–19–16.

ಕಯ್ಯಲ್ಲಿ ಮುಟ್ಟದ ಪದಾರ್ಥ ಕಯ್ಯೊಳಗೆ ಐಕ್ಯ, ಕಂಗಳು ತಾಗಿದ ಪದಾರ್ಥ

---

[1] (ಶಿಹ) ಕೈಕೊಳು (ಗೂಉ) [2] (ಶಿಗೂ) ಸಂಚವನು ಇಷ್ಟೆಂಬುದ (ಹ) [3] (ಗೂಹ) × (ಶಿ) [4] (ಗೂ) ಮಾಷಿಗಳೆಂಬ (ಹ) ಸಾವೆಸಾಸಿಗಳೆಂಬ (ಶಿ) ಸಾವೆ ಮಾಸಿಗಳೆಂಬ (ಉ) [5] ಹೊಸ ಸುಗ್ಗಿ ಈ ವೇಳೆಗೆ ಬಹಬತ್ತ ಅಗಣಿತ (ಗೂ) ಹೊಸ ಸುಗ್ಗಿಯ ಧಾನ್ಯ ಲೆಕ್ಕವಿಲ್ಲಿ. ಈ ವೇಳೆಗೆ ಬಹಬತ್ತ ಅಗಣಿತ ಈಗ ಬಂದಿಹ ಧಾನ್ಯಕ್ಕೆ ಹವಣಿಲ್ಲ (ಹ) ಹೊಸ ಸುಗ್ಗಿಯ ವೇಳೆಗೆ ಬಹ ಭತ್ತ ಅಗಣಿತ (ಶಿ) [6] (ಶಿ) ಕ್ಷಣಕ್ಕೆ ಪಾಕವಾಗಲು (ಗೂ) ಕ್ಷಣಕ್ಕೆ ಮುನ್ನ ಮುಕ್ತವಾಗಲು (ಹ) [7] (ಹ) ಖಂಡ ಮಂಡಗೆ (ಗೂಶಿ) (ಉ) [8] (ಶಿಹ) ಪನ್ನಿ (ಗೂ) [9] (ಶಿ) × (ಹಗು) [10] (ಶಿ) × (ಹಗೂ) [11] ಚಿಲು (ಶಿಗೂ) [12] (ಶಿ) ಘಟ್ಟ ಕಟ್ಟಣೆ (ಹಗೂ) [13] ಮನ ಒಲಿದ ಕಜ್ಜಾಯವ (ಹ) [14] (ಗೂಶಿ) ದೇವ ಪ್ರಭುವೆ (ಹ).

ಕಂಗಳೊಳಗೆ ಐಕ್ಯ. ನಾಲಗೆ ತಾಗಿದ ಪದಾರ್ಥ ನಾಲಗೆಯೊಳಗೆ ಐಕ್ಯ, ನೀಡುವ ಪರಿಚಾರಕರು ಬೇಸತ್ತರಲ್ಲದೆ ಆರೋಗಣೆಯ ಮಾಡುವ ದೇವನೆತ್ತಲೆಂದಱಿಯಸು. ಬ್ರಹ್ಮಾಂಡವನೊಡಲೊಳಗಳವಡಿಸಿಕೊಂಡು ಬಂದ ದೇವಂಗೆ ಆರೋಗಣೆಯ ಮಾಡಿಸಿಹೆನೆಂಬ ಅಹಂಕಾರದಲ್ಲಿ ಇದ್ದೆನಾಗಿ ನಾನು ಕೆಟ್ಟ ಕೇಡನೇನೆಂಬೆನಯ್ಯ ! ಕೂಡಲಸಂಗಮದೇವರ ತೃಪ್ತಿಯ ತೆಱನ ಬಲ್ಲಡೆ ಹೇಳಾ ಮಡಿವಾಳ ಮಾಚಯ್ಯ. ೭೭೧-೧೩೪೫-19-17.

ಇದಕ್ಕೆ ಮಡಿವಾಳತಂದೆಗಳ ವಚನ :

ಮರುಳುಗೊಂಡೆಯಲ್ಲಾ ಬಸವಣ್ಣ. ಪಿತ್ತ ತಲೆಗೇಱಿತ್ತೆ ನಿನಗೆ? [2]ನೆಱೆ[3][2]ಯಱಿದವರು ಮರುಳಹರೆಂಬ ನಾಣ್ಣುಡಿ ದಿಟವಾಯಿತ್ತು. ಜಗದಗಲಕ್ಕೆ ಮಿಗೆಯಗಲ ದೇವಂಗೆ ಕುಱುಹಿನ ಪದಾರ್ಥಂಗಳು ನಿಲುಕಲಾಪವೆ? ಎಡೆಯಲೊಬ್ಬರಲಾಗದು, [3]ಮಾಡುವರೆ ಕಡೆಯಿಲ್ಲ, ಎಡೆಯಲ್ಲಿ[3] ಕೆಡುವುದು ನಿನ್ನ ಭಕ್ತಿ, ಕಲಿದೇವರ ದೇವನ ತೃಪ್ತಿಯ [4]ತೆರನ[4] ಚೆನ್ನ ಬಸವಣ್ಣ ಬಲ್ಲ ಕೇಳಿ ನೋಡಾ ಸಂಗನ ಬಸವಣ್ಣ. ೭೭೨-೧೩೪೬-19-18.

ಇದಕ್ಕೆ ಬಸವರಾಜದೇವರ ವಚನ :

ಧನಮದದಿಂದ, ಸಯಧಾನಮದದಿಂದ, ಮಾಡಿದೆನೆಂಬುದು ಕಡೆಮುಟ್ಟದೆ ಹೋಯಿತ್ತು. ಹಸ್ತಪರುಷದಿಂದ ಮುಟ್ಟಿ ಮಾಡಿದುದೆಲ್ಲವೂ [1]ಸವೆಯಿತ್ತು.[1] ದೃಷ್ಟಿಪರುಷದಿಂದ ನೋಡಿ ಮಾಡಿದೆನೆಂಬುದೆಲ್ಲವೂ ಹೆಚ್ಚಿತ್ತು. ವಾಕ್ ಪರುಷದಿಂದ ನುಡಿದು ಮಾಡಿದುದೆಲ್ಲವೂ ಅಂತರಿಸಿತ್ತು. ಮನ-ಪರುಷದಿಂದ ನೆನೆದು ಮಾಡಿದುದೆಲ್ಲವೂ ನಿಂದಿತ್ತು. ಭಾವಪರುಷದಿಂದ ಭಾವಿಸಿದ ಪದಾರ್ಥವೆಲ್ಲವೂ ನಿರ್ಭಾವದತ್ತ [2]ಎಯ್ದಿಸದಾಯಿತ್ತು.[2] ಇಂತೀ ಪಂಚಪರುಷದಿಂದ ಮುಟ್ಟನೀಡಿದ ಪದಾರ್ಥ ತೋಱಿದ ಮುನ್ನ ಅಮಳೋಕ್ಯವಾದವು. ಕೂಡಲಸಂಗಮದೇವರ ತೃಪ್ತಿಯ[3]ನಱಿದೆನೆಂದು[3] ಕೆಟ್ಟೆನು. ೭೭೩-೧೩೪೭-19-19 ಮತ್ತಂ :

ತ್ರೋಱಲಿಲ್ಲದ ಸಿಂಹಾಸನದ ಮೇಲೆ ಹೇಳಬಾರದ ಘನವು ಬಂದೆಱಗಿದರೆ, ತೋಱಿ ಮೆಱೆವ ಸಂಗಮನಾಥನೆದ್ದು ಹೋದನು. ನೀಡ ನೀಡ ಸಯಧಾನವೆಲ್ಲವೂ ನಿರ್ವಯಲಾಯಿತ್ತು. ಮಾಡ ಮಾಡ ಸಯಧಾನವ ಮರಳಿ ನೋಡಲಿಲ್ಲ. ಇದೇನ ಹೇಳುವೆ ಅನಿಯಮ ಚರಿತ್ರವನು ! ಇದೆಂತುಪಮಿಸುವೆನು ವಿಸ್ಮಯವನು ? ಕೂಡಲಸಂಗಮದೇವರ ತೃಪ್ತಿಯ ತೆಱನ ಬಲ್ಲರೆ ಹೇಳಯ್ಯ ಚೆನ್ನಬಸವಣ್ಣ. ೭೭೪-೧೩೪೮-19-?0.

ಇದಕ್ಕೆ ಚಿಕ್ಕದಣ್ಣಾಯಕರ ಪ್ರತ್ಯುತ್ತರ :

ಪಂಚಾಶತ್ ಕೋಟಿ ವಿಸ್ತೀರ್ಣಭೂಮಂಡಲ [4]ಮೊದಲಾದ[4] ನವಖಂಡ ಪೃಥ್ವಿ

---

[1] (ಹಶಿ) ಸವೆಯಿತ್ತು (ಗೂ). [2] (ಹ) (ಉ) ವೇದಿಸದಾಯಿತ್ತು. (ಗೂಶಿ) ನೆಯ್ದಿ ಸವೆಯಿತ್ತು (ಗೂ R. ೩ಈ). [3] (ಹ) ನಱಿದಿಹೆನೆಂದು (ಗೂಶಿ). [4] (ಶಿಗೂ) ಮೊದಲಾದ ಬ್ರಹ್ಮಾಂಡದೊಳಗೆ (ಹ).

ಯೆಲ್ಲವೂ ಒಂದು [1]ಭುವನದೊಳಗಡಗಿತ್ತು[1]. ಅಂತಹ ಈರೇಳು ಭುವನವನೊಳಕೊಂಡ ಮಹಾಘನಕ್ಕೆ ಸಯಧಾನವ ನೀಡಿಹೆನೆಂಬ ಸ್ವಾಮಿಯ ಮರುಳುತನವನೇನೆಂಬೆನು. ಕೂಡಲ ಚೆನ್ನಸಂಗಮದೇವರ [2]ತೃಪ್ತಿಯ ತೆಱನನೊಲಿವರೆ[2] ನೀನು ಬೋನ, ನಾನು ಪದಾರ್ಥ. ಇದಱಿಂದ ಮೇಲೇನೂ ಘನವಿಲ್ಲ ಕಾಣಾ ಸಂಗನ ಬಸವಣ್ಣ. ೭೭೫-೧೩೪೯ -19-22.

ಇದಕ್ಕೆ ಬಸವರಾಜದೇವರ ವಚನ:

ಎನ್ನ ಕಾಯದ ಕತ್ತಲೆ ಹಿಂಗಿತ್ತು, ಚೆನ್ನಬಸವಣ್ಣ, ಇಂದಿನಲ್ಲಿ. ಎನ್ನ ತನು-ಮನ-ಧನದ ಲೋಭವಳಿದು ತಳವೆಳಗಾಯಿತ್ತು ಚೆನ್ನಬಸವಣ್ಣ, ಇಂದಿನಲ್ಲಿ. ಎನ್ನ ನೆಡೆಗೊಂಡ ಅಹಂಕಾರ ನಿರ್ವಯಲಾಯಿತ್ತು, ಚೆನ್ನಬಸವಣ್ಣ, ಇಂದಿನಲ್ಲಿ. ಕೂಡಲ ಸಂಗಮದೇವರ ತೃಪ್ತಿಯ ತೆಱನ ನೀನು ತೋಱಿದೆಯಾಗಿ, ನಾನು ಬದುಕಿದೆನು ಕಾಣಾ ಚೆನ್ನಬಸವಣ್ಣ ೭೭೬-೧೩೫೦-19-23.

ಇದಕ್ಕೆ ಚೆನ್ನಬಸವರಾಜದೇವರ ವಚನ:

ಎನ್ನ ಹೊಗಳಲಿಕೆ ನಿಮಗೆ ತೆಱಹಿಲ್ಲ. ನಿಮ್ಮ ಹೊಗಳಲಿಕೆ ಎನಗೆ ತೆಱಹಿಲ್ಲ. ಒಬ್ಬರನೊಬ್ಬರು ಹೊಗಳಲಿಕೆ ಹೊತ್ತು ಹೋಯಿತ್ತಲ್ಲದೆ ಸಂಗಮನಾಥನ ಆಪ್ಯಾಯನಕ್ಕೆ ಪದಾರ್ಥವ ನೀಡಲಿಲ್ಲ. ಕೂಡಲ ಚೆನ್ನಸಂಗಯ್ಯಂಗೆ ಪದಾರ್ಥವನಳವಡಿಸಿ [3]ನಡೆಯಿರೇ[3] ಸಂಗನ ಬಸವಣ್ಣ. ೭೭೭-೧೩೫೧-19-24.

ಇದಕ್ಕೆ ಬಸವರಾಜದೇವರ ವಚನ:

ಧನ ಸವೆದರೆ ತನುವನರ್ಪಿಸುವೆ. ತನು ಸವೆದರೆ ಮನವನರ್ಪಿಸುವೆ. ಮನ ಸವೆದರೆ ಭಾವವನರ್ಪಿಸುವೆ. ಭಾವ ಸವೆದರೆ ನಿರ್ಭಾವವನರ್ಪಿಸುವೆ. ಕೂಡಲ ಸಂಗಮದೇವಯ್ಯ, ಚೆನ್ನಬಸವಣ್ಣ [4]ನೆನಗೆ[4] ತೆತ್ತಿಗನಾದ ಬಳಿಕ ನಾನು ನಿಮ್ಮಲ್ಲಿ [5]ಕೂಡೆ[5] ಅರ್ಪಿಸಿ ಶುದ್ಧನಪ್ಪೆನಯ್ಯ. ೭೭೮-೧೩೫೨-19-25. ಮತ್ತಂ:

ಆದಿಯ ಲಿಂಗವ ತಂದಾತನಲ್ಲಯ್ಯನು. ಅನಾದಿಯ ಲಿಂಗವ ತಂದಾತನಲ್ಲಯ್ಯನು. ಭಾಪುರೆ ಜಂಗಮವೆ, ನಿರ್ವಯಲನವಗ್ರಹಿಸಿದಿರಿ. ನಿನಗೋಸುಗರ ಮಾಡುವ ಸಯಧಾನವನು ನಡೆಗೆಟ್ಟು ಮಾಡುವೆನು, ನುಡಿಗೆಟ್ಟು ಮಾಡುವೆನು. ಸರ್ವಕುಳಕ್ಕೆ ನೀನೆಂದು ಅಲ್ಲಯ್ಯನ ಪ್ರಸಾದಕ್ಕೆ ಕೈಯ್ಯನಾನುವೆನು. ನವಬ್ರಹ್ಮರ ಕೇರಿಯೊಳಗೆ ಅಲ್ಲಯ್ಯನ ಪ್ರಭೆ! ರುದ್ರಭೂಮಿಯೊಳಗೆ ಅಲ್ಲಯ್ಯನ ಪ್ರಭೆ! ಬಂದು ನಿಂದ ನಿಲವಿಂಗೆ ಅಲ್ಲಯ್ಯನ ಪ್ರಭೆ! ಸಯಧಾನವಿಲ್ಲದಿರೆ ಎನ್ನ ನೀಡುವೆನು ಕೂಡಲ ಸಂಗಮದೇವಯ್ಯ. ೭೭೯-೧೩೫೩-19-26. ಮತ್ತಂ:

ದೇವ ದೇವ ಮಹಾಪ್ರಸಾದ, ಅವಧರಿಸಯ್ಯ ಎನ್ನ ಬಿನ್ನಪವ: ಅತಳ-ವಿತಳ-ಸುತಳ

---

[1] (ಶಿಗೂ) ಜಂಬೂದ್ವೀಪವೆಂಬ ಭುವನದೊಳಗಡಗಿತ್ತು (ಹ). [2] (ಗೂಶಿ) ಕೃಪೆಯ ತೆರನಱಿದು ಮಾಡಿ ಓಸರಿಸುವರೆ (ಹ). [3] (ಹ) ನಡೆಯಿಸಿರೆ (ಶಿಗೂ). [4] (ಹಶಿ) × (ಗೂ). [5] (ಶಿಉ) ಕೂಡಿ (ಹಗೂ).

-ತಳಾತಳ-ರಸಾತಳ-ಮಹೀತಳ-ಪಾತಾಳದಿಂದತ್ತತ್ತ ನಿಮ್ಮ ಚರಣ! ಭೂಲೋಕ, ಭುವರ್ಲೋಕ – ಸ್ವರ್ಲೋಕ – ಮಹರ್ಲೋಕ-ಜನಲೋಕ-ತಪೋಲೋಕ-ಸತ್ಯಲೋಕ ದಿಂದತ್ತತ್ತ ನಿಮ್ಮ ಉತ್ತಮಾಂಗ! ತರುವಿನೊಳಗೆ ಅನಲಭರಿತವಾಗಿದ್ದು ಮಥನ ದಿಂದ ತೋಱಿ ಆಹುತಿಗೊಂಬಂತೆ—ಸರ್ವಕರ್ತ ನಿತ್ಯಾನಂದಮಯನೆ, ಭಕ್ತಿಲೀಲಾ ವಿನೋದನೆ, ಕೂಡಲ ಸಂಗಮದೇವ, ಸುಚಿತ್ತದಲ್ಲಿ ಮನಮೀಸಲ ಬೋನವನಾರೋಗಿ ಸಯ್ಯ. ೭೮೦-೧೩೫೪-19-27. ಮತ್ತಂ:

ಕಾಲ ಮುಟ್ಟದ ಸಯಧಾನ! ಕಲ್ಪಿತವಿಲ್ಲದ ಸಯಧಾನ! ಅನಂತರತಿಯೆಂಬ ಹೆಂಗೂಸು ಮುಟ್ಟದ ಸಯಧಾನ! ಭಾಳಲೋಚನನೆಂಬ ಜಂಗಮ ಮುಟ್ಟದ ಸಯಧಾನ! ಎಲ್ಲಿಯೂ ಮುಟ್ಟದ ಸಯಧಾನವ ನಿಮಗರ್ಪಿಸಿದೆನು. ಆರೋಗಿಸಯ್ಯ ಪ್ರಭುವೇ ಕೂಡಲ ಸಂಗಮದೇವ. ೭೮೧-೧೩೫೫ 19-28.

ಇದಕ್ಕೆ ಚಿಕ್ಕದಣ್ಣಾಯಕರ ವಚನ : ಪರಿಯಾಣ :

ಅಂಗ ಲಿಂಗಕ್ಕೆ ಭಾಜನವೆಂಬರು; ಅಂಗ ಲಿಂಗಕ್ಕೆ ಭಾಜನವಲ್ಲ. ಕಾಯಗುಣಂಗಳ ಕಳೆದು, ಮಾಯಾತಮಂಧವ ಹಿಂಗಿಸಿ, ಮನವೆಂಬ ಘನಪರಿಯಾಣವ ಬೆಳಗಿ, ಷಡಾಧಾರಚಕ್ರವೆಂಬ ಅಡ್ಡಣಿಗೆಯನಿಕ್ಕಿ, ಸಕಲ ಇಂದ್ರಿಯಂಗಳೆಂಬ ಕೆಲವಟ್ಟಲ ನಳವಡಿಸಿ, ಜ್ಞಾನಪ್ರಕಾಶವೆಂಬ ದೀಪಸ್ತಂಭಮಂ ಬೆಳಗಿ, ಸಕಲಕರಣಂಗಳೆಂಬ ಮೇಲು ಸಾಧನಮಂ ಹಿಡಿದು, ಸದ್ ಭಕ್ತ್ಯಾನಂದವೆಂಬ ಬೋನಮಂ ಬಡಿಸಿ, ವಿನಯ ವಿವೇಕವೆಂಬ ಅಭಿಘಾರಮಂ ಗಡಣಿಸಿ, ಪ್ರಸನ್ನ ಪರಿಣಾಮದ ಮಹಾರುಚಿಯೆಂಬ ಚೆಲುಪಾಲ ಘಟ್ಟಿಯಂ ತಂದಿಳುಪಿ, ಸುಚಿತ್ತ ಸುಯಿಧಾನದಿಂದ ನಿಮ್ಮ ಹಸ್ತದ ಅವಧಾನವೇ ಅನುವಾಗಿ; ಬಸವಣ್ಣನೇ ಬೋನ, ನಾನೇ ಮೇಲೋಗರವಾಗಿ, ನಿಮ್ಮ ಪರಿಯಾಣಕ್ಕೆ ನಿವೇದಿಸಿದೆನು, ಆರೋಗಣೆಯ ಮಾಡಯ್ಯ ಕೂಡಲ ಚೆನ್ನಸಂಗಮದೇವ. ೭೮೨-೧೩೫೬-19-29. ಮತ್ತಂ:

ಕಾಯವೆಂಬ ಘಟಕ್ಕೆ ಕರಣಾದಿಗಳೆ ಸಯಧಾನ: ಅದಕ್ಕೆ ಚೈತನ್ಯ ಜಲವಾಗಿ, ಸಮತೆಯೆಂಬ ಮುಚ್ಚಳಿಗೆ ಧೃತಿಯೆಂಬ ಸಮಿಧೆ, ಮತಿಯೆಂಬ ಅಗ್ನಿಯಿರಲು, ಬಹಿರ್ಜ್ಞಾನವೆಂಬ ದರ್ವಿಯಲ್ಲಿ ಘಟ್ಟಿಸಿ ಪಕ್ವಕ್ಕೆ ತಂದು ಭಾವದಲ್ಲಿ ಕುಳ್ಳಿರಿಸಿ ಪರಿಣಾಮದೋಗರವ ನೀಡುವೆನಯ್ಯ ಕೂಡಲ ಚೆನ್ನಸಂಗಮದೇವ. ೭೮೩-೧೩೫೭-19-30. ಮತ್ತಂ:

[1]ಕಂಗಳಾಶ್ರಯದ[1] ಸೋಂಕಿನ ಸುಖಸಂಬಂಧವನು ಮಹದಾಶ್ರಯಕ್ಕೆ ತಂದು ಸೂಸಲೀಯದೆ ನಿಮಗರ್ಪಿಸುವೆ. [2][ನಾಸಿಕದ ಘ್ರಾಣದ ಆಶ್ರಯವನು][2] ತಟ್ಟು

[1] (ಗೂ) (ಉ) ಕಂಗಳಾಶ್ರಿಮದ (ಶಿ) ಕಂಗಳಾಶ್ರಮದ (ಹ). [2] ನಾಸಿಕ ದಾಶ್ರಯವನು (ಗೂಉ) ಸರ್ವೇಂದ್ರಿಯಂಗಳನು (ಹ) ನಾಸಿಕದ ಘ್ರಾಣದ ಅನಾಶ್ರಿಮವನು (ಶಿ).

ಮುಟ್ಟಲ್ಲದೆ ನಿಮಗರ್ಪಿಸುವೆನು. ಆಪ್ಯಾಯನದಲ್ಲಿ ಅಂಗವಿಸುವ ಚರಾಚರ [1][ಚೈತನ್ಯಾತ್ಮನ ಘನಲಿಂಗ ಮಧ್ಯಕ್ಕೆ][1] ತಂದು ನಿಮಗರ್ಪಿಸುವೆ. ಗುರುಲಿಂಗ[2] ಪ್ರಸಾದಿ-ಶಿವಲಿಂಗ ಪ್ರಸಾದಿ-ಶರಣಪ್ರಸಾದಿ[2]–ಮಹದನುಭಾವಪ್ರಸಾದಿಯಾದ ಜಂಗಮವೆ ಲಿಂಗವೆಂಬುದ ನಱಿದೆನಾಗಿ, ಕೂಡಲ ಚೆನ್ನಸಂಗ, ಬಸವಣ್ಣನ ಪ್ರಸಾದದಿಂದ ನಾನು ಪ್ರಸಾದಿಯಾದೆನಾಗಿ, ನಾನು ನಿಮಗೆ ಪ್ರಸಾದವಾದೆನು. ಆರೋಗಿಸಯ್ಯ ಪ್ರಭುವೆ. ೭೮೪–೧೩೫೮–19–31.

ನೀನಳವಡಿಸಿಕೊಟ್ಟ ಪದಾರ್ಥ ನಿಮಗರ್ಪಿತವಯ್ಯ. ನಿಮ್ಮ ಆರೋಗಣೆ ಮಹಾ ಆರೋಗಣೆ. ಸಕಲಗಣಂಗಳಿಗೆ ಹಿತಾರ್ಥ. ಕೂಡಲ ಚೆನ್ನಸಂಗಮದೇವ, ನಿನಗೆ ಕ್ಷುತ್ತಿಲ್ಲಾಗಿ ನಾನು ಅರ್ಪಿತವ ಮಾಡಲಿಲ್ಲಯ್ಯ. ೭೮೫-೧೩೬೦–19–32.

ಗುರುವೇ ಬೋನ, ಶಿಷ್ಯನೇ ಮೇಲೋಗರ: ಲಿಂಗಕ್ಕೆ ಪದಾರ್ಥವರ್ಪಿತವಯ್ಯ. ಘನಕ್ಕೆ ಮನವೇ ಅರ್ಪಿತ! ಮನಕ್ಕೆ ಮಹವೇ ಅರ್ಪಿತ! ಘನದೊಳಗೆ ಮನವು ತಲ್ಲೀಯವಾದ ಬಳಿಕ ಅರ್ಪಿಸುವ ಭಕ್ತರಾರು? ಆರೋಗಿಸುವ ದೇವರಾರು? ನಿತ್ಯತೃಪ್ತ[3]ನುಣಕಲಿತನೆಂದರೆ[3] ಅರ್ಪಿಸಲುಂಟೆ, ದೇವಾ, ಮತ್ತೊಂದನು?! ಕೂಡಲ ಚೆನ್ನಸಂಗಮದೇವ, ಬಸವಣ್ಣನೇ ಬೋನ, ನಾನೇ ಪದಾರ್ಥ! ಸುಚಿತ್ತದಿಂದಲಾರೋಗಿಸಯ್ಯ ಪ್ರಭುವೇ. ೭೮೬–೧೩೬೧-19–33.

ಇದಕ್ಕೆ ಪ್ರಭುದೇವರು ತೃಪ್ತಿಯಾಗಿ ನಿರೂಪಿಸಿದ ವಚನ:

ಮನಯುಕ್ತಿ ವಿವೇಕವೆಂಬ ಅಕ್ಕಿಯನು ಗುಪಿತವೆಂಬ ಒರಳೊಳಗಿಕ್ಕಿ, ಅಭಿನ್ನ ಮಥನವೆಂಬ ಒನಕೆಯಲ್ಲಿ ಥಳಿಸಿ, ಕಲ್ಮಷವೆಂಬ ತೌಡ ಹಾಱಿಸಿ, ಸಮತೆಯೆಂಬ ಸಲಿಲದಲ್ಲಿ ಜಾಲಿಸಿ, ಅಳಿಪೆಂಬ ಹರಳ ಕಳೆದು, ದಯಾಮೃತವೆಂಬ ಹಾಲುಬೋನವ ಮಾಡಿ, ಸಮರಸರುಚಿರದಿಂದ ಶಾಕಪಾಕಂಗಳಂ ಮಾಡಿ; ನೆನಹದ ಲವಲವಿಕೆ ಅಭಿಘಾರವಾಗಿ, ನಿರ್ಮಲವೆಂಬ ಶಿವದಾನವನಳವಡಿಸಿ, ಕಾಯ್ದಿದ್ದಿರಯ್ಯ ಪಂಚೇಂದ್ರಿಯವೆಂಬ ಸೊಣಗ ಮುಟ್ಟದಂತೆ! ಕಾಯ್ದಿದ್ದಿರಯ್ಯ ಷಡುವರ್ಗವೆಂಬ ತೊತ್ತಿರು ಮುಟ್ಟದಂತೆ! ಕಾಯ್ದಿದ್ದಿರಯ್ಯ ಅಷ್ಟಮದವೆಂಬ ಮಕ್ಕಳು ಮುಟ್ಟದಂತೆ! ಇನಿತು ಮುಖ್ಯವಾದ ಹೀನಂಗಳಾವುದೂ ಮುಟ್ಟದಂತೆ ಕಾಯ್ದಿದ್ದಿರಾಗಿ, ಈ ಬೋನ ಗೊಗೇಶ್ವರಲಿಂಗಕ್ಕೆ ಅರ್ಪಿತವಾಯಿತ್ತು ಕಾಣಾ ಚೆನ್ನಬಸವಣ್ಣ. ೭೮೭–೧೩೬೨–19–34. ಮತ್ತಂ:

ಭರಿತಬೋನ, ಭರಿತಬೋನವೆಂದು ಭ್ರಮೆಗೊಂಡು ಭ್ರಮಿತರಾಯಿತೀ ಲೋಕವೆಲ್ಲ! ಭರಿತಬೋನವೇ ದಿಟವಾಯಿತ್ತಾದರೆ ಮರ್ತ್ಯದಲ್ಲಿ ಸುಳಿಯಲುಂಟೇ?! ಚತುರ್ವಿಧ

---

[1] (ಹ) ಚೈತನ್ಯಕ್ಕೆ ಮಧ್ಯಕ್ಕೆ (ಶಿ) ಚೈತನ್ಯ ಮಧ್ಯಕ್ಕೆ (ಗೂಲು). [2] (ಹ) ಪ್ರಸಾದಿ ಅನುಭವಪ್ರಸಾದಿ ಶರಣಪ್ರಸಾದಿ (ಶಿ) ಪ್ರಸಾದಿ ಅನುಭಾವಪ್ರಸಾದಿ ಶರಣಪ್ರಸಾದಿ (ಗೂಲು). [3] (ಹ) ನು ಉಣಲಿ ಕಲಿತನೆಂದರೆ (ಶಿ) ಉಣಕಲಿತನೆಂದರೆ (ಗೂ).

ಅರ್ಪಿತದೊಳಗೆ ಆವುದು ಭರಿತವೆಂಬುದನಱಿಯರಾಗಿ, ಗೊಗೇಶ್ವರಲಿಂಗದಲ್ಲಿ ಭರಿತ ಬೋನದ ಅನು ಚೆನ್ನಬಸವಣ್ಣಂಗಾಯಿತ್ತು. ೭೮೮-೧೩೬೩-19-35.

ಪ್ರಭುದೇವರು ಬಸವಣ್ಣನೊಡನೆ ನಿರೂಪಿಸಿದ ಪ್ರತ್ಯುತ್ತರ :

ತನು ಶುದ್ಧವಾಯಿತ್ತು ಬಸವ, ಇಂದೆನ್ನ! ಮನ ಶುದ್ಧವಾಯಿತ್ತು ಬಸವ, ಇಂದೆನ್ನ! ಭಕ್ತಿ-ಯುಕ್ತಿ-ಮುಕ್ತಿ ಶುದ್ಧವಾಯಿತ್ತು ಬಸವ ಇಂದೆನ್ನ! ಇವೆಲ್ಲವೂ ಶುದ್ಧವಾಯಿತ್ತು ಬಸವ ಇಂದೆನ್ನ! ನಮ್ಮ ಗೊಗೇಶ್ವರಲಿಂಗಕ್ಕೆ ಆದಿಯಾಧಾರವಾದೆಯಲ್ಲಾ ಸಂಗನ ಬಸವಣ್ಣ! ೭೮೯-೧೩೬೪-19-42.

ಚೆನ್ನಬಸವಣ್ಣನ ಸ್ತುತಿ :

ಬಸವ ನಿನಗೇಳು ಜನ್ಮ, ಎನಗೆ ನಾಲ್ಕು ಜನ್ಮ. ಚೆನ್ನಬಸವಣ್ಣಂಗೆ ಒಂದೆ ಜನ್ಮ! ನೀನು ಗುರುವೆನಿಸಿಕೊಳಬೇಡ. ನಾನು ಜಂಗಮವೆನಿಸಿಕೊಳಬೇಡ. ನಾವಿಬ್ಬರೂ ಚೆನ್ನಬಸವಣ್ಣನ ಒಕ್ಕುಮಿಕ್ಕ ಪ್ರಸ್ತಾದವ ಕೊಂಡೊಡೆ ಗೊಗೇಶ್ವರ ಸಾಕ್ಷಿಯಾಗಿ ನಮ್ಮ ಭವಂ ನಾಸ್ತಿಯಹುದು ಕಾಣಾ ಸಂಗನ ಬಸವಣ್ಣ. ೭೯೦-೧೩೬೫- x.

ಇದಕ್ಕೆ ಬಸವರಾಜದೇವರ ವಚನ :

ಕಾಣಬಾರದ ಘನವ ಕರಸ್ಥಲದಲ್ಲಿ ತೋಱಿದ. ಹೇಳಬಾರದ ಘನವ ಮನಸ್ಥಲದಲ್ಲಿ ತೋಱಿದ. ಉಪಮಿಸಬಾರದ ಘನವ ನಿಮ್ಮ ತೃಪ್ತಿಯ ಮುಖದಲ್ಲಿ ತೋಱಿದ. ಇಂತೀ ತ್ರಿವಿಧವು ಏಕಾರ್ಥವಾಗಿಪ್ಪ ಭೇದವ ಚೆನ್ನಬಸವಣ್ಣ ತೋಱಿದನಾಗಿ ಆನು ಬದುಕಿಪೆನು ಕಾಣಾ ಕೂಡಲಸಂಗಮದೇವ. ೭೯೧-೧೩೬೬-19-44.

ಇದಕ್ಕೆ ಪ್ರಭುದೇವರು ಚೆನ್ನಬಸವಣ್ಣನ ಸ್ತುತಿಯಿಸುವ ವಚನ :

ಗುರುಶಿಷ್ಯರಿಬ್ಬರ ಮಧ್ಯದಲ್ಲಿ ಒಂದು ಮಗು ಹುಟ್ಟಿತ್ತು ನೋಡಾ! ಗುರುವಿಂಗೆ ಗುರುವಾದ ಪರಿಯೆಂತೋ? ಶಿಷ್ಯಂಗೆ ಶಿಷ್ಯನಾದ ಪರಿಯೆಂತೋ? ಆದಿಯ ಲಿಂಗವ ಸಾಧ್ಯವ ಮಾಡಿ ತೋಱಿದ ಗೊಗೇಶ್ವರನ ಶರಣ ಚೆನ್ನಬಸವಣ್ಣಂಗೆ ಶರಣೆಂದು ಬದುಕಿದೆನು ಕಾಣಾ ಸಂಗನ ಬಸವಣ್ಣ. ೭೯೨-೧೩೬೭-19-45. ಮತ್ತಂ :

ಅದೃಷ್ಟಕರಣದ ಮೇಲಣ ಪೂರ್ವಾಶ್ರಯವ [1]ಕಳೆವುದು[1]. ಗುರುವಿನ ಹಸ್ತ ಮುಟ್ಟಿತ್ತೆಂಬ ಸಂದಣಿಯಲ್ಲಿ ಹೋಗದು! ಪಂಚೇಂದ್ರಿಯ ಲಿಖಿತವ ತೊಡೆದು ಲಿಂಗಲಿಖಿತವ ಬರೆವುದು—ಶಿಷ್ಯನ ಕೈಯಲಲ್ಲದೆ ಗುರುವಿನ ಕೈಯಲಾಗದು. ಭವಿ ಮಾಡುವ ಬೋನವ ಭಕ್ತ ಕಾಣಬಾರದ ಹಾಂಗೆ ಅರ್ಪಿಸುವ ಬೇದವಱಿದು, ಪ್ರಸಾದದ ಪೂರ್ವಾಶ್ರಯವ ಕಳೆದು, ರೂಪಿಸಬಲ್ಲೆವೆಂದರೆ ಹಱಿಯದು. ಗುರುವಿಲ್ಲದ ಶಿಷ್ಯ, ಶಿಷ್ಯನಿಲ್ಲದ ಗುರು— ಇಂತೀ ಒಂದಕ್ಕೊಂದು ಇಲ್ಲದೆ ಗೊಗೇಶ್ವರಲಿಂಗದಲ್ಲಿ ಸಹಜದುದಯವಾದ ನಮ್ಮ ಚೆನ್ನಬಸವಣ್ಣಂಗೆ ನಮೋ ನಮೋ ಎಂಬೆನು. ೭೯೩-೧೩೬೮-19-46.

ಬಸವರಾಜದೇವರು ಚೆನ್ನಬಸವರಾಜದೇವರ ಸ್ತುತಿಸುವ ಪ್ರಸ್ತಾವದ ವಚನ :

ಲೋಕದಿಚ್ಛೆಯ ನಡೆವವನಲ್ಲ. ಲೋಕದಿಚ್ಛೆಯ ನುಡಿವವನಲ್ಲ. ಲೋಕವಿರಹಿತ ಶರಣ, ಶರಣವಿರಹಿತ ಲೋಕವೆಂಬುದು ಕಾಣಬಂದಿತ್ತು ನೋಡಾ! ಲಿಂಗವೇ

[1] (ಹ) ಕಳೆದು (ಗೂಶಿ)

ಗೂಡಾಗಿ, ಜಂಗಮವೆ ಸ್ವಾಯತವಾಗಿ, ಪ್ರಸಾದವೆ ಪ್ರಾಣವಾಗಿ, ಪರಿಣಾಮದಲ್ಲಿಪ್ಪ ನೋಡಯ್ಯ. ಕೂಡಲಸಂಗಮದೇವ, ನಿಮ್ಮ ಶರಣ ಚೆನ್ನಬಸವಣ್ಣಂಗೆ ನಮೋ ನಮೋ ಎಂಬೆನು. ೭೯೪-೧೩೭೦-19-48.

ಇದಕ್ಕೆ ಚೆನ್ನಬಸವಣ್ಣಂ ಬಸವಣ್ಣನ ಸ್ತುತಿಯಿಸಿಹನು :

ಅಂಗದ ಮೇಲೆ ಆಚಾರಲಿಂಗ ಸ್ವಾಯತವಾಯಿತ್ತು., ಪ್ರಾಣದ ಮೇಲೆ ಜಂಗಮ ಲಿಂಗ ಸ್ವಾಯತವಾಯಿತ್ತು. ಆತ್ಮನ ಮೇಲೆ ಸಮ್ಯಕ್ ಜ್ಞಾನಲಿಂಗ ಸ್ವಾಯತ ವಾಯಿತ್ತು. ಇಂತೀ ತ್ರಿವಿಧಕ್ಕೆ ತ್ರಿವಿಧ ಸ್ವಾಯತವಾಗಿಪ್ಪ ನಮ್ಮ ಕೂಡಲ ಚೆನ್ನ ಸಂಗಮದೇವರ ಶರಣ ಸಂಗನ ಬಸವಣ್ಣಂಗೆ ನಮೋ ನಮೋ ಎನುತ್ತಿದ್ದೆನು. ೭೯೫-೧೩೭೧-19-49. ಮತ್ತಂ:

ತನು ಗುರುವಿನಲ್ಲಿ ಸವೆದು, ಮನ ಲಿಂಗದಲ್ಲಿ ಸವೆದು, ಧನ ಜಂಗಮದಲ್ಲಿ ಸವೆದು; ತನುವೆ ಗುರುವಾಗಿ, ಮನವೆ ಲಿಂಗವಾಗಿ, ಧನವೆ ಜಂಗಮವಾಗಿ; ಈ ತ್ರಿವಿಧವೂ ಐಕ್ಯವಾಗಿ, ನಿಂದಲ್ಲಿ ನಿಜಭರಿತನಾಗಿ, ಕಾಯವಿಡಿದು ಕರ್ಮವಿರಹಿತನಾಗಿ, ಕೂಡಲ ಚೆನ್ನಸಂಗನಲ್ಲಿ ಸಂಗನ ಬಸವಣ್ಣನು ಉಪಮಾತೀತನಾಗಿದ್ದನು. ೭೯೬-೧೩೭೨-19-50.

ಮತ್ತಂ ಚೆನ್ನಬಸವಣ್ಣನು ಪ್ರಭುದೇವರ ಸ್ತುತಿಯಿಸಿಹನು :

ಮನೆಯೊಳಗಣ ಕಿಚ್ಚು ಕಾನನವ ಸುಟ್ಟಿತ್ತು. ಕಾನನ ಬೆಂದಲ್ಲಿ ಮನೆ ಉರಿ ಹತ್ತಿತ್ತು! ಮನೆ ಬೆಂದು ಕಂಭ ಉರಿಯಿತ್ತು. ಆ ಕಂಭದ ಮೇಲೊಂದು ರತ್ನವಿದ್ದುದ ಕಂಡೆ. ಅದಱ ಬೆಳಗು ಮೂಱು ಲೋಕವ ತುಂಬಿತ್ತಲ್ಲಾ! ಇದು ಕಾರಣ ಕೂಡಲ ಚೆನ್ನ ಸಂಗನಲ್ಲಿ ಪ್ರಭುದೇವರ ನಿಲವಿಂಗೆ ನಾನು ಶರಣೆನುತಿದ್ದೆನು. ೭೯೭-೧೩೭೩-19-51.

ಅಂಗದಲ್ಲಿ ಲಿಂಗವಱತು, ಲಿಂಗದಲ್ಲಿ ಅಂಗವಱತು ಒಡಲುಪಾಧಿ ಎಂಬುದಿಲ್ಲ ನೋಡಾ! ನಿಂದರೆ ನೆಳಲಿಲ್ಲ, ಸುಳಿದರೆ ಹಜ್ಜೆ ಇಲ್ಲ. ಅಪರಿಮಿತ ಘನಮಹಿಮನ ನೇನೆಂಬೆನು ? ಶಬ್ದವಱಿದು ಸಾರಾಯನಲ್ಲ, ಗತಿವಿಡಿದು ಆರೂಢನಲ್ಲ, ಈ ಎರಡೂ ಅಳಿದುಳಿದ ನಿಶ್ಚಿಂತನು. ತನಗೆ ತಾ ನಿಜವಾದ ಕೂಡಲ ಚೆನ್ನ ಸಂಗನಲ್ಲಿ ಪ್ರಭುದೇವರ ಪಾದಕ್ಕೆ ನಮೋ ನಮೋ ಎನುತ್ತಿದ್ದೆನು. ೭೯೮-೧೩೭೪-19-52.

ಇಂತು ಪ್ರಭುದೇವರು-ಚೆನ್ನಬಸವಣ್ಣನು ಒಬ್ಬರನ್ನೊಬ್ಬರು ಕೊಂಡಾಡುತಿಪ್ಪ ಪ್ರಸ್ತಾವದೊಳು ಬಸವರಾಜದೇವರು ಲಕ್ಷದ ಮೇಲೆ ತೊಂಬತ್ತಾಱು ಸಾವಿರ ಜಂಗಮದ ಮುನಿಸ ತಿಳುಹಿಕೊಡಬೇಕೆಂದು ಪ್ರಭುದೇವರಿಗೆ ಬಿನ್ನಹಂ ಮಾಡುವ ವಚನ:

ಚಂದ್ರಮ ಅಮೃತಕರನಾದಡೇನಯ್ಯ, ಒಳಗೆ ಕಳಂಕು ಬಿಡದನ್ನಕ್ಕರ? ಸೂರ್ಯ ಮಹಾ ಪ್ರಕಾಶನಾದಡೇನಯ್ಯ, ಅಸ್ತಮಾನಕ್ಕೆ "ಅಸ್ತಂಗತ"ನೆಂಬ ಹೀನ ಬಿಡದನ್ನಕ್ಕರ? ಆನು ನಿಮ್ಮ ಕೃಪೆಯ ಹಡೆದು ಫಲವೇನಯ್ಯ, ನಿಮ್ಮ ಶರಣರು ಎನ್ನ ಮೇಲೆ ಮುನಿದು ಹೋದ ಬಳಿಕ? ಕೂಡಲಸಂಗಮದೇವಯ್ಯ, ನಿಮ್ಮ ಶರಣರ ಮನದಲ್ಲಿ ಎನ್ನ ಮೇಲೆ ಕರುಣ ಹುಟ್ಟಿ ಬಪ್ಪಂತೆ ಮಾಡಯ್ಯ. ೭೯-೧೩೭೫-19-54.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ: ಜಂಗಮವಿಡಂಬನಸ್ಥಲ:

ಜಂಗಮ ಘನವೆಂಬೆನೆ? ಜಂಗಮ ಬೇಡಿದಾಗಳೆ ಕಿಱಿದಾಯಿತ್ತು. ಲಿಂಗ ಘನವೆಂಬೆನೆ? ಕಲುಕುಟಿಗರ ಕೈಯಲ್ಲಿ ಮಾಡಿಸಿಕೊಂಡು ಕಿಱಿದಾಯಿತ್ತು. ಭಕ್ತ ಘನವೆಂಬೆನೆ? ತನು-ಮನ-ಧನವಂಚಕನಾಗಿ ಕಿಱಿದಾದ. ಇಂತೀ ತ್ರಿವಿಧದಲ್ಲಿ ಪರಿಣಾಮವಿಲ್ಲ. ಗೊಗೇಶ್ವರಲಿಂಗದ ಘನವ ಬಲ್ಲರಾರು ಹೇಳೈ ಸಂಗನ ಬಸವಣ್ಣ. ೮೦೦-೧೩೭೬-19-61. ಮತ್ತಂ:

ತನು ಬತ್ತಲೆ ಇದ್ದರೇನಯ್ಯಾ—ಮನ ಶುಚಿಯಾಗದನ್ನಕ್ಕರ? ಮಂಡೆ ಬೋಳಾದಡೇನು—ಭಾವ ಬಯಲಾಗದನ್ನಕ್ಕರ? ಭಸ್ಮವ ಹೂಸಿದಡೇನು—ಕರಣಾದಿ ಗುಣಂಗಳನೊತ್ತಿ ಮೆಟ್ಟಿ ಸುಡದನ್ನಕ್ಕರ? ಇಂತೀ ಆಶೆಯ ವೇಷದ ಭಾಷೆಗೆ ಗೊಗೇಶ್ವರ ಸಾಕ್ಷಿಯಾಗಿ ಛೀ ಎಂಬೆನು ಕಾಣಾ ಸಂಗನ ಬಸವಣ್ಣ. ೮೦೧-೧೩೭೭-19-62ಮತ್ತಂ:

ಆಶೆಯೆಂಬ ಶೂಲದ ಮೇಲೆ ವೇಷವೆಂಬ ಹೆಣನ ಕುಳ್ಳಿರಿಸಿ, ಧರೆಯ ಮೇಲುಳ್ಳ ಹಿರಿಯರೆಲ್ಲರೂ ಇಹಗೆ ಸವೆದು ಹೋದರು ನೋಡಾ! ಆಸೆಯ ಮುಂದಿಟ್ಟುಕೊಂಡು ಸುಳಿವ ಹಿರಿಯರ ಕಂಡು ಗೊಗೇಶ್ವರಲಿಂಗಕ್ಕೆ ಹೇಸಿಕೆಯಾಯಿತ್ತು ಕಾಣಾ ಸಂಗನ ಬಸವಣ್ಣ. ೮೦೨-೧೩೭೮-19-63. ಮತ್ತಂ:

ಆಚಾರವಱಿಯದೆ, ಕ್ರಿಯಾಕಾ[=ಚಾ ?]ರ ಉಡುಗದೆ, ವಿಭವವಳಿಯದೆ, ಕೋಪ ವಡಗದೆ, ತಾಪ ಮುಱೆಯದೆ, ಬಱಿದೆ ನನೆದ ಹೊರಸಿನಂತೆ ಬೆಬ್ಬಳಿಸಿ ಬೆಬ್ಬನೆ ಬೆಱೆವರ ಕೇಡಿಂಗೆ ನಾನು ಬೆಱಗಾದೆನು ಕಾಣಾ ಗೊಗೇಶ್ವರ. ೮೦೩-೧೩೭೯-19-64 ಮತ್ತಂ:

ತಮ್ಮ ತಾವಱಿಯರು. ಹೇಳಿದರೂ ಕೇಳರು. ಆಱಱ ಹೊಲಬನೇನೆಂದೂ ಅಱಿಯರು. ಎಂಟಱ ಕಂಟಕವ ಮುನ್ನಱಿಯರು. ಏಱಿದ ಬೆಟ್ಟವನಿಳಿಯಲಱಿಯದವರನೇನೆಂಬೆ ಗೊಗೇಶ್ವರ. ೮೦೪-೧೩೮೦-19-65. ಮತ್ತಂ:

ಅಱಿದ ಶರಣಂಗೆ ಆಚಾರವಿಲ್ಲ. ಆಚಾರವಿಲ್ಲದವಂಗೆ ಲಿಂಗವಿಲ್ಲ. ಲಿಂಗವಿಲ್ಲದ ಶರಣನ ಸುಳುಹು ಜಂಗಮಕ್ಕೆ ವಿಪರೀತ ಚರಿತ್ರವದು. ಪ್ರಕಟವಲ್ಲ ನೋಡಾ!

ಸಂಸಾರಿ ಬಳಸುವ ಬಳಕೆಯನೆಂತೂ ಹೊದ್ದನು. ಸಟೆಯ ಹಿಡಿದು, ದಿಟವ ಮಱೆದು ಇಲ್ಲದ ಲಿಂಗವನುಂಟೆಂದು ಪೂಜಿಸುವರಾಗಿ—ಆಚಾರ ಉಂಟು, ಆಚಾರ ಉಳ್ಳವಂಗೆ ಗುರು ಉಂಟು, ಗುರು ಉಳ್ಳವಂಗೆ ಲಿಂಗ ಉಂಟು, ಲಿಂಗಪೂಜಕಂಗೆ ಭೋಗ ಉಂಟು! ಈ ಬಱುಬಾಯ ಬಣ್ಣಕರೆಲ್ಲರೂ ಪೂಜಕರಾದರು. ಗೊಗೇಶ್ವರ ಲಿಂಗವು ಅಲ್ಲಿ ಇಲ್ಲವೆಂಬುದನು ಈ ವೇಷಲಾಂಛನರೆತ್ತ ಬಲ್ಲುದೈ ಹೇಳಾ ಸಂಗನ ಬಸವಣ್ಣ. ೬೦೫-೧೩೬೩-19-66.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ :

ಘನಗಂಭೀರವಾರಿಧಿಯೊಳಗೆ ತೋಱುವ ವಿಚಾರಂಗಳು ಆ ವಾರಿಧಿಯ ಬಿಟ್ಟು ತೋಱಬಲ್ಲವೆ ? ತೋಱಿದರೆ ಆ ವಾರಿಧಿ ತನ್ನ ತಾನು ಜಱೆದುಕೊಂಬುದೇ ? ನಿಮ್ಮೊಳಗಡಗಿದ ಪ್ರಮಥರೆಲ್ಲರ ಗುಣಾದಿಗುಣಂಗಳನು ನಿಮ್ಮಡಿಗಳೆತ್ತಲುಂಟೆ ? ಜಗದೊಳಗೆ ಕೂಡಿ ಪರಿಪೂರ್ಣವಾದ ಬಳಿಕ, ಇದಿರ ನೋಡಿ ಜಱೆದು ನುಡಿವ ಠಾವಾವುದು ಹೇಳಯ್ಯ ? ಕೂಡಲಸಂಗಮದೇವ, ನಿಮ್ಮಲ್ಲಿ ನೀವು ಪರಿಣಾಮಿಸಿಕೊಂಬುದಲ್ಲವೆ ಭಿನ್ನ ಮಾಡಲುಂಟೇ ? ೬೦೬-೧೩೬೪-19-67. ಮತ್ತಂ :

ಕುಲವ ನೋಡದೆ, ಛಲವ ನೋಡದೆ, ನಿಲವ ನೋಡದೆ ಕೂಡಿದ ಬಳಿಕ ಅಲ್ಲಿ ಹೆಚ್ಚು ಕುಂದನಱಸಲುಂಟೇ ? ಮುಂದುವಱಿದು ಜಂಗಮಕ್ಕೆ ನಿಮ್ಮ ಕಾರುಣ್ಯವನುಪದೇಶ ಮಾಡಿದ ಬಳಿಕ ಬಂದುದ ಬಂದಂತೆ ಸಮನಿಸಿಕೊಳ್ಳಬೇಕಲ್ಲದೆ, ಅಂತಿಂತೆನ ಬಾರದು ಕೇಳಯ್ಯ. ನೀನು ನಿರಾಕಾರ-ಸಾಕಾರವೆಂಬೆರಡು ಮೂರ್ತಿಯ ಧರಿಸಿಪ್ಪೆಯಾಗಿ, ಒಂದ ಜಱೆದು, ಒಂದ ಹಿಡಿದಹೆನೆಂದರೆ; ಅದೇ ಕೊಱತೆ ನೋಡಾ ಪ್ರಭುವೆ, ಕೂಡಲಸಂಗಮದೇವ. ೬೦೭-೧೩೬೫-19-68.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ :

ಆಕಾರ-ನಿರಾಕಾರವೆಂಬೆರಡೂ ನಾನೆ ! ದಿಟ ದಿಟ ತಪ್ಪದು ಕೇಳಾ ! ಆಕಾರಕ್ಕೆ ಭಾವವೆ ಪ್ರಾಣ, ನಿರಾಕಾರಕ್ಕೆ ಮಹಾಜ್ಞಾನವೆ ಪ್ರಾಣ. ಇಂತೀ ಉಭಯಕುಳಕ್ಕೆ ಇದು ಲಕ್ಷಣ ಕೇಳಾ ! ಎರಡಱೊಳಗೆ ಆವ ಮುಖದಲ್ಲಿ ಇಪ್ಪಾತನು—ಆ ಮುಖದಲ್ಲಿ ಶುದ್ಧನಾಗದನ್ನಕ್ಕರ, ಗೊಗೇಶ್ವರಲಿಂಗಕ್ಕೆ ದೂರವು ಕಾಣಾ ಸಂಗನ ಬಸವಣ್ಣ. ೬೦೮-೧೩೬೬-19-69.

ಇದಕ್ಕೆ ಬಸವಣ್ಣನ ಪ್ರತ್ಯುತ್ತರ :

ಅಱಿವಿಲ್ಲದ ಕಾಯವುಂಟೆ ? ಅಱಿವಿಲ್ಲದ ಪ್ರಾಣ ಉಂಟೆ ? ಅಱಿವಿಲ್ಲದ ನಿಲವು ಉಂಟೆ ? ಭಾವವಿಲ್ಲದ ಭಕ್ತಿಯುಂಟೆ ? ಕೂಡಲಸಂಗಮದೇವ, ನೀವು ಪರಿಪೂರ್ಣರಾಗಿಪ್ಪಿರಾಗಿ ಅವಗುಣಕ್ಕೆ ತೆಱಹಿಲ್ಲ. ೬೦೯-೧೩೬೭-19-70.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ :

ಅಹುದಹುದು ಬಸವಣ್ಣ ! ನೀನೆಂದುದನಲ್ಲೆನಬಹುದೇ ? ಎನ್ನ ಮನದ ಕಪ್ಪ ಕಳೆದು ನಿರ್ಲೇಪವ ಮಾಡಿ, ಎನ್ನ ನಿರ್ವಯಲಲ್ಲಿ ನಿಲಿಸಿ ಪ್ರತಿಷ್ಠೆಯ ಮಾಡುವಾತ ನೀನೆಂಬುದು ಸತ್ಯವಚನ ನೋಡಾ ! ಗೊಗೇಶ್ವರನ ಮಹಾಗಣಂಗಳಿದ್ದಲ್ಲಿಗೆ ಹೋಗಿ, ಮುನಿಸ ತಿಳುಹಿಕೊಂಡು ಬಾರಾ ಸಂಗನ ಬಸವಣ್ಣ. ೬೧೦-೧೩೬೮-19-71.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

[1]ಕಾಲದಿಂದ[1] ಕಡೆನುಟ್ಟ ಮಾಡಿದ ಲೇಸು—ಒಂದು ದಿನ ಉದಾಸೀನವ ಮಾಡಿದರೆ, ಅದೆಲ್ಲವೂ ವ್ಯರ್ಥವಾಗಿ ಹೋಹುದು ಕೇಳಯ್ಯ. ಸಾವಿರ ನೋಂಪಿಯ [2]ನೋಂತು[2] ಒಂದು ಬಾರಿ ಹಾದರವನಾಡಿದರೆ, [3]ಆ ನೋಂಪಿಯೆಲ್ಲವೂ[3] ನೀರಲ್ಲಿ ನೆರೆದು ಹೋಹಂತೆ ಕೇಳಯ್ಯ. [4]ನಾನೇಸು[4] ಭಕ್ತಿಯ ಮಾಡಿದರೇನು? ನಿಮ್ಮ ಶರಣರ ಮನವೆಳ್ಳನಿತು ನೊಂದರೆ—ಎನ್ನ ಭಕ್ತಿಯ ಅಭಿಮಾನ ಹೋಯಿತ್ತಯ್ಯ! ಕೂಡಲಸಂಗಮದೇವ, ನಿಮ್ಮ ಶರಣರ ಮುನಿಸನಾವ ಪರಿಯಲ್ಲಿ ತಿಳುಹುವೆ ಹೇಳಾ ಪ್ರಭುವೆ? ೮೧೧–೧೩೭೯–19–72.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

ಎಡದ ಕಾಲಲೊದೆದರೆ, ಬಲದ ಕಾಲ ಹಿಡಿವುದು. ಬಲದ ಕಾಲಲೊದೆದರೆ ಎಡದ ಕಾಲ ಹಿಡಿವುದು, ತ್ರಾಹಿ ತ್ರಾಹಿ [5]ತಪ್ಪೆನ್ನದೆಂದು[5] ಗೊಗೇಶ್ವರನ ಶರಣರನೊಡಗೊಂಡು ಬಾರೈ ಸಂಗನ ಬಸವಣ್ಣ. ೮೧೨–೧೩೮೦–19–73.

ಇದಕ್ಕೆ ಬಸವರಾಜದೇವರು ಮಹಾಶಿವಗಣಂಗಳಲ್ಲಿಗೆ ಬಂದು ಮುನಿಸ ತಿಳುಹಿ ಕರೆವ ಪ್ರಸ್ತಾವದ ವಚನ:

ತೊತ್ತಿನ ತೊತ್ತಿನ ಮಱುತೊತ್ತಿನೊಡನೆ ಮುನಿವುದು ನಿಮಗೆ ಗುಣವೇ ಅಯ್ಯ? ಅಯ್ಯ, ನಿಮ್ಮ ಧರ್ಮದವ ನಾನಯ್ಯ! ಒಮ್ಮೆಗೆ ಕೃಪೆಯ ಮಾಡಿ ಕರುಣಿಸಯ್ಯ. ಕೂಡಲಸಂಗಮದೇವ, ಇಲಿಗಂಜಿ ಮನೆಯ ಸುಟ್ಟವರುಂಟೆ? ೮೧೩–೧೩೮೧–19–74 ಮತ್ತಂ:

ಆನು ಭಕ್ತನಲ್ಲ, ಆನು ಯುಕ್ತನಲ್ಲ; ನೀವು ಮಾಡಿದ ಸೂತ್ರದ ಬೊಂಬೆ ನಾನಯ್ಯ. ಎನಗೆ ಬೇಱೆ ಸ್ವತಂತ್ರ ಉಂಟೆ? ನೀವೆನ್ನ ಮಾನಾಭಿಮಾನಕ್ಕೊಡೆಯರಾದ ಬಳಿಕ ಎನ್ನ ತಪ್ಪ ಲೆಕ್ಕಿಸದೆ ಬಿಜಯಂಗೆಯ್ವುದಯ್ಯ ಕೂಡಲಸಂಗಮದೇವ. ೮೧೪–೧೩೮೨–19–75, ಮತ್ತಂ:

ಎನ್ನ ಭಕ್ತಿ ಎಲವದ ಕಾಯ ಫಲದಂತೆ ನೋಡಯ್ಯ. ಹೊಱಗೆ ಹೆಂಪು, ಒಳಗೆ ಬೂರವಯ್ಯ! ನಿಮ್ಮ ದೇವರೆಂದು ಪೂಜಿಸಿ, ಮಾನವರೆಂದು ಮಱೆವೆ! ಸಗುಣ-ನಿರ್ಗುಣವೆರಡೂ ಅಳವಡದ ಸಂದೇಹಿ ನಾನಯ್ಯ. ಕೂಡಲಸಂಗಮದೇವ, ಎನ್ನ ಪರಾಧವ ಸೈರಿಸುವರೆ ನೀವಲ್ಲದೆ ಮತ್ತಾರನೂ ಕಾಣೆ. ಶರಣಾರ್ಥಿ ಶರಣಾರ್ಥಿ! ಕೃಪೆಯಿಂದ ಕರುಣಿಸಯ್ಯ. ೮೧೫–೧೩೮೩–19–76.

ಇದಕ್ಕೆ ಶರಣರ ಪ್ರತ್ಯುತ್ತರ—ಸೊಡ್ಡಳಬಾಚರಸರು ಹೇಳಿದ ಪ್ರಸ್ತಾವ:

ಹಿಡಿದುದ ಬಿಟ್ಟು, ಬಿಟ್ಟುದ ಹಿಡಿದ ಬಳಿಕ, ಅಂತಿರಬೇಕಲ್ಲದೆ ಇನ್ನು ಹಿಡಿವು ತಪ್ಪಿದ ವಸ್ತುವನಱಸಿ ಹಿಡಿಯಲುಂಟೇ? ಮುನಿದು ಹೂವಿನೋಳಿಟ್ಟು, ಒಸೆದು ಆನೆಯನೇಱಿಸಿಹೆ

[1] (ಗೂಶಿ) ಕೂಡಿದ ಕಾಲದಿಂದ (ಹ) [2] (ಶಿಗೂ) ನೋಂತು ಒಬ್ಬ ಸತ್ಪುರುಷನ ಪಡೆದು (ಹ) [3] (ಗೂಶಿ ಮೊದಲು ನೋಂತ ಆ ಸಾವಿರ ನೋಂಪಿಯೆಲ್ಲವೂ (ಹ) [4] (ಹ) ನಾನೆಷ್ಟು (ಉ) (ಗೂ) ನಾನೇನು (ಶಿ) [5] (ಹ ಗೂ ಉ) ತಪ್ಪೆನ್ನದು (ಶಿ).

ನೆಂದರೆ ಶಿವಶರಣರ ಮನವು ತಿಳಿಯದು ನೋಡಾ. ಒಡೆದ ಮುತ್ತು ನಾಣ್ಯಕ್ಕೆ ಸಲ್ಲದು. ಒಡೆದ ಹಾಲು ಅಮೃತಕ್ಕೆ ಸಲ್ಲದು. ನಾವೇತಕಯ್ಯ ನಿನಗೆಂದು ಸೊಡ್ಡಳನ ಶರಣರು ನಿರೂಪವ ಕೊಡಲು ಎನ್ನ ಪರಮಾರಾಧ್ಯರು ಸಂಗನ ಬಸವಣ್ಣ ತಿಳುಹುತಿದ್ದನು. ೮೧೬-೧೩೯೪-19-77.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ :

ಎಡದ ಪಾದದಲೊದೆದರೆ, ಬಲದ ಪಾದವ ಹಿಡಿವೆ. ಬಲದ ಪಾದದಲೊದೆದರೆ ಎಡದ ಪಾದವ ಹಿಡಿವೆ. ತ್ರಾಹಿ ತಾಹಿ! ತಪ್ಪೆನ್ನದು, ಕ್ಷಮೆ ನಿಮ್ಮದು! ಕೂಡಲ ಸಂಗಮದೇವ, ನಿಮ್ಮ ಕರುಣದ ಕಂದ ನಾನು. ೮೧೭-೧೩೯೫-19-78.

ಎನ್ನಂತರಂಗ ನೀವಯ್ಯ. ಎನ್ನ ಬಹಿರಂಗ ನೀವಯ್ಯ. ಎನ್ನಱಿವು ನೀವಯ್ಯ! ಎನ್ನ ಮಱಹು ನೀವಯ್ಯ. ಎನ್ನ ಭಕ್ತಿ ನೀವಯ್ಯ, ಎನ್ನ ಯುಕ್ತಿ ನೀವಯ್ಯ. ಎನ್ನ ಆಲಸ್ಯ ನೀವಯ್ಯ, ಎನ್ನ ಪರವಶ ನೀವಯ್ಯ. ಸಮುದ್ರವ ಹೊಕ್ಕ ಕಾಲುವಳ್ಳದಲ್ಲಿ ಕೊಱತೆಯನಱಸುವುದೆ ಆ ಸಮುದ್ರವು? ಎನ್ನ ಲೇಸು—ಹೊಲ್ಲೆಹವೆಂಬುದು ನಿಮ್ಮ ದೆಂಬುದ ನೀವೆ ಬಲ್ಲಿರಿ. ಇದಕ್ಕೆ ನಿಮ್ಮ ಪಾದವೆ ಸಾಕ್ಷಿ, ಎನ್ನ ಮನವೆ ಸಾಕ್ಷಿ ಕೂಡಲ ಸಂಗಮದೇವ. ೮೧೮-೧೩೯೬-19-79.

ಇದಕ್ಕೆ ಚೆನ್ನ ಬಸವರಾಜದೇವರ ವಚನ :

ಆರಿಗೆ ಮಾಡ ಬಹುದಯ್ಯ ಸದ್ಭಕ್ತಿಯೆಂಬುದನು? ಆರಿಗೆ ತಿಳಿವುದಯ್ಯ ಶಿವಜ್ಞಾನದ ಸೆಱಗು? ನಿರಾಳದ **ಸಿಂಹಾಸನದ** ಮೇಲೆ ನಿರವಯ ಬಂದೆಱಗಿದರೆ, ಆ ನಿರಾಕಾರ ಪದಾರ್ಥವನರ್ಪಿಸಿ ಪ್ರಸನ್ನವ ಹಡೆದ. ಸಾಕಾರ ಸಿಂಹಾಸನದ ಮೇಲೆ ಮೂರ್ತಿಗೊಂಡ ಸಂಗಮನಾಥ ಮುನಿದೆದ್ದು ಹೋದರೆ ತನುವಿನೊಳಗೆ ತನುವಾಗಿ ಹೊಕ್ಕು, ಮನದೊಳಗೆ ಮನವಾಗಿ, ಭಾವದೊಳಗೆ ಭಾವವಾಗಿ ವೇಧಿಸಿ, ಶಿವಶರಣರ ಮನದ ಕಂದು-ಕಲೆಯು ಕಳೆದು ತನ್ನತ್ತ ತಿರುಗಿಸಿ ಪ್ರಸನ್ನವಡೆದ. ಇಂತೀ ಉಭಯ ನಿರ್ಣಯದಲ್ಲಿ ನಿಸ್ಸೀಮ ನಾದ ಕೂಡಲ ಚೆನ್ನಸಂಗಮದೇವರ ಶರಣ ಬಸವಣ್ಣಂಗೆ ತ್ರೈಜಗದೊಳಗೆ ಆರನೂ ಸರಿಗಾಣೆ. ೮೧೯-೧೩೯೭-19-80.

ಇಂತು ಬಸವರಾಜದೇವರು ಬೇಡಿಕೊಳಲು ಮಹಾಗಣಂಗಳು ಮುನಿಸು ತಿಳಿದು ಪ್ರಸನ್ನರಾದ ಪ್ರಸ್ತಾವ—ಮತ್ತಂ, ಚಿಕ್ಕದಣ್ಣಾಯಕರ ವಚನ :

ಭಕ್ತಿಯುಕ್ತಿಯ ಹೊಲಬ ಮೂಱು ಲೋಕದೊಳಗೆ ಬಲ್ಲವರಾರನೂ ಕಾಣೆ. ಲಿಂಗದಲ್ಲಿ ಭಕ್ತಿ ಮಾಡಿದರೆ, ಭವ ಹಱಿಯದೆಂದು, ಜಂಗಮ ಮುಖಲಿಂಗವೆಂದು ಅಱಿದು, ಅರ್ಚಿಸಿ ಪೂಜಿಸಿ ದಾಸೋಹವ ಮಾಡಿ ಪ್ರಸನ್ನತೆಯ ಹಡೆದ [ಬಸವಣ್ಣನು]. ಆ ಪ್ರಸನ್ನತೆಯ ರುಚಿಯನುಪಮಿಸಬಾರದು. ಆ ಬಸವಣ್ಣನ ಭಕ್ತಿ ಪ್ರಸಾದವ ಕೊಂಡು ನಾನು ಬದುಕಿದೆನು. ಆ ಬಸವಣ್ಣನ ಪ್ರಸಾದವ ಕೊಂಡು ಅಲ್ಲಮಪ್ರಭು ತೃಪ್ತ ನಾದನು. ಅಲ್ಲಮಪ್ರಭುವಿನ ಕೊಂಡ ಪ್ರಸಾದದ ತೃಪ್ತಿ, ಲಕ್ಷದ ಮೇಲೆ ತೊಂಬತ್ತಾಱು ಸಾವಿರ ಜಂಗಮಕ್ಕೆ ತೃಪ್ತಿಯಾಯಿತ್ತು. ಆ ಲಕ್ಷದ ಮೇಲೆ ತೊಂಬತ್ತಾಱು ಸಾವಿರ

ಜಂಗಮ ತೃಪ್ತಿಯಾದಲ್ಲಿ ಸಚರಾಚರವೆಲ್ಲವೂ ಕೂಡೆ ತೃಪ್ತಿಯಾಯಿತ್ತೆಂದರೆ-ಇಲ್ಲವೆಂದು ಬಿಜ್ಜಳ ತರ್ಕಿಸಲು, ಕಪ್ಪೆಯ ಒಡಲೊಳಗೆ ಪ್ರಭುವಿನ ಪ್ರಸಾದವ ತೋಱನೇ ಬಸವಣ್ಣನು ? ಇದು ಕಾರಣ ಕೂಡಲಚೆನ್ನಸಂಗಮದೇವರಲ್ಲಿ ಬಸವಣ್ಣನ-ಪ್ರಭುದೇವರ ಪ್ರಸಾದದ ಘನವು ತ್ರೈಲೋಕದೊಳಗೆ ಬೆಳವಿಗೆಯಾಯಿತ್ತು. ೮೨೦-೧೩೯೮-19-82.

ಇದಕ್ಕೆ ಪ್ರಭುದೇವರ ವಚನ:

ಲಿಂಗ-ಜಂಗಮವೆಂಬ ಸಕೀಲವನಱಿದು, ಲಿಂಗಾರ್ಚನೆ-ಜಂಗಮಾರ್ಚನೆಯ ಮಾಡಲು, ಆ ಲಿಂಗವೇ ಜಂಗಮದೊಳಗಡಗಿ, ಆ ಜಂಗಮವೆ ಪರಾಪರವೆಂದಱಿದು ತೋಱಿತ್ತು. ಆ ಜಂಗಮವೆಂಬ ಘನವು ನಿಮ್ಮೊಳಗಡಗಿದ ಕಾರಣ, ಗೊಗೇಶ್ವರ, ನಿಮ್ಮ ಅನುವನಱಿದು ಸಂಗನ ಬಸವಣ್ಣನು ತನ್ನ ಪ್ರಸಾದವನಿಕ್ಕಿದರೆ, ನಿಮ್ಮ ಪ್ರಮಥರೆಲ್ಲರೂ ಜಯ ಜಯ ಎನುತಿರ್ದ ಕಾರಣ, ನಾನು ಬಸವಣ್ಣಂಗೆ ನಮೋ ನಮೋ ಎನುತಿರ್ದೆನು. ೮೨೧-೧೩೯೯-19-83.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ತೊಱೆಯುದಕವ ಕೆಱೆಯುಂಡು ತೃಪ್ತವಾಗಲು, ಆ ಕೆಱೆಯುದಕವ ಹಲಕೆಲವು ಸ್ಥಾವರ-ಜಂಗಮಂಗಳುಂಡು ತೃಪ್ತಿವಡೆದಂತೆ, ಪ್ರಭುದೇವರ ತೃಪ್ತಿ ಅಸಂಖ್ಯಾತ ಮಹಾಗಣಂಗಳೆಲ್ಲಕ್ಕೆ ತೃಪ್ತಿಯಾಯಿತ್ತು ನೋಡಾ ! ಬಸಿಱಪೆಂಡತಿ ಉಂಡಲ್ಲಿ ಒಡಲ ಶಿಶು ತೃಪ್ತಿಯಾದಂತೆ, ಸಚರಾಚರವೆಲ್ಲವೂ ತೃಪ್ತಿಯಾದವು ನೋಡಾ, ಕೂಡಲ ಸಂಗಮದೇವಾ, ನಿಮ್ಮ ಶರಣ ಪ್ರಭುದೇವರ ಮಹಿಮೆಗೆ ನಮೋ ನಮೋ ಎಂಬೆನು. ೮೨೨-೧೪೦೦-19-84.

ಇದಕ್ಕೆ ಪ್ರಭುದೇವರು ಬಸವಣ್ಣನ ಸ್ತೋತ್ರವ ಮಾಡುವ ವಚನ:

ಪ್ರಾಣಲಿಂಗದ ಪೂರ್ವಾಶ್ರಯವ ಕಳೆಯಲೆಂದು ಬಸವಣ್ಣ ಲಿಂಗಪ್ರಾಣಿಯಾದ. ಲಾಂಛನದ ಪೂರ್ವಾಶ್ರಯವ ಕಳೆಯಲೆಂದು ಜಂಗಮಪ್ರಾಣಿಯಾದ. ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು ಮಹಾಪ್ರಸಾದಿಯಾದ. ಇಂತೀ ತ್ರಿವಿಧದ ಪೂರ್ವಾಶ್ರಯವ ಕಳೆಯಲೆಂದು ಬಸವಣ್ಣನು ಮರ್ತ್ಯಕ್ಕೆ ಬಂದನು ಕಾಣಾ ಗೊಗೇಶ್ವರ. ೮೨೩-೧೪೦೧-19-85.

ಆದಿಯಾಧಾರಮಂ ಮಾಡಿ, ಅಜಕೋಟಿಬ್ರಹ್ಮಾಂಡಗಳಂ ಮಾಡಿ, ಈರೇಳು ಭುವನಂಗಳಂ ಮಾಡಿ, ಹರ—ಲೀಲೆಯಾಡುವಲ್ಲಿ; ಹರಿ-ವಿರಿಂಚಿ-ಸುರಾಸುರರ ಶಿರೋಮಾಲೆಯ ಇಕ್ಕಿಕೊಂಡಾಡುವಲ್ಲಿ—ಪಾದ ರಸಾತಳಕ್ಕಿಳಿದು ಭುವನ ಜಲಮಯವಾದಲ್ಲಿ; ಹಸ್ತ-ಮಕುಟ ತಾಗಿ ಸಕಲ ಲೋಕಂಗಳೆಲ್ಲವೂ ನಿರವಯಲಾದಲ್ಲಿ; ನಿಜದ ಬೆಳಗಿನ ಬೆಳಗಿನೊಳಗೆ ಸೋಹಂ ಎನಲು, ವಿಚಾರದಿಂದ ಘನ-ಮನವಾದಂದು ಗೊಗೇಶ್ವರ, ನೀನೆ ಲಿಂಗ, ನಾನೆ ಜಂಗಮ, ಬಸವಣ್ಣನೇ ಭಕ್ತ. ೮೨೪-೧೪೦೨-19-86. ಮತ್ತಂ:

ಭೂವಳಯ ಮಧ್ಯದಲ್ಲಿ ಎಂಟೆಸಳ ಮೇಲೆ ಸುಳಿವವನ ಎಚ್ಚರಿಅಲೀಯ. ಕಂಟಕ ವಿರಹಿತ; ನಂಟರಿಗೆ ವಿರೋಧಿ, ಇಳೆಯ ಗುಣವಿರಹಿತನು. ಗಗನಕಮಲಕುಸುಮ [1]ಪರಿಮಳ[1]ದೊಳಗೆ ಪರಿಣಾಮಿ ನೋಡಾ! [2]ನಾ[2]ನೆಂಬುದ ಹುಸಿ ಮಾಡಿ, ಲಿಂಗ-ಜಂಗಮ ದಿಟವೆಂದು ಸಕಲ ಸುಖಭೋಗಂಗಳನರ್ಪಿಸಿದ. ಗೊಗೇಶ್ವರ, ನಿಮ್ಮ ಶರಣ ಬಸವಣ್ಣಂಗಲ್ಲದೆ ಇನ್ನಾರಿಗೆಯೂ ಅಳವಡದು. ೮೨೫-೧೪೦೩-19-87.

ಹಾಳುಮನೆ[3]ಯೊಳಗಿದ್ದು[3], ಹೊಸತಿಲಲ್ಲಿ ನಿಂದಿದ್ದು, ಆರೂ ಬಾರದ ಬಟ್ಟೆಯ ನೋಡುತ್ತ—ಆರಿಂಗಾಗದಿರವು ನಮಗಾಯಿತ್ತೆನುತಲ್ಲಿ ಆರಯ್ಯ ಬಂದವಂಗೆ ಶಂಕೆಯಿಲ್ಲ[?]. ಕಾಲಿಲ್ಲದೆ ಬಂದವರು, ಕೈಯಿಲ್ಲದೆ ಕೊಂಬವರು. [4][ಮೇಲು ಓಲೆ][4], ಇದ್ದವರು ನುಡಿವಾಗ, ಮಾರಾರಿಯ ಬೆಳಸನಾರಯ್ಯ ಸಂತವಿಡುವರೆಂದರೆ—ಸಾರಾಯಂಗಲ್ಲದೆ ಮತ್ತಿನ್ನಾರಿಂಗಹುದು ಹೇಳಾ? ಸಂತೆಯ ಗುಡಿಸಿಲ ಸೂಳೆಗೆ [5]ಕೊಂತವನೊತ್ತೆಯ ಕೊಟ್ಟರೆ[5] ಎಂತು ಬಚ್ಚಿಡಬಹುದು? ಮರಳುತನವು, ಶಂಕಿಸಿತು ಎನ್ನ ಮನವು—ಹಿಂದು ಮುಂದು ಕೂಡುವರಿಲ್ಲೆಂದು ಉಮ್ಮಳದಲ್ಲಿ. ಗೊಗೇಶ್ವರ, ನಿಮ್ಮ ಶರಣ ಬಸವಣ್ಣನ ಪ್ರಸಾದವ ಕೊಂಡು ನಿರುಪಮ ಸುಖಿಯಾದೆನು. ೮೨೬-೧೪೦೪-19-88.

ಆದಿಯಲ್ಲಿ ಬಸವಣ್ಣನುತ್ಪತ್ತಿಯಾದ ಕಾರಣ—ನಾಗಲೋಕದ ನಾಗಗಣಂಗಳಿಗೆ ಬಸವಣ್ಣನ ಪ್ರಸಾದ, ಮರ್ತ್ಯಲೋಕದ ಮಹಾಗಣಂಗಳಿಗೆ ಬಸವಣ್ಣನ ಪ್ರಸಾದ, ದೇವಲೋಕದ ದೇವಗಣಂಗಳಿಗೆ ಬಸವಣ್ಣನ ಪ್ರಸಾದ. ಗೊಗೇಶ್ವರ, ನಿಮ್ಮಾಣೆ ಎನಗೆಯೂ ನಿನಗೆಯೂ ಬಸವಣ್ಣನ ಪ್ರಸಾದ. ೮೨೭-೧೪೦೫-19-89. ಮತ್ತಂ:

ಎತ್ತಿದ ಮಣಿಮಕುಟದ [6]ಮೇಲೆ[6] ಸುತ್ತಿದ ನಾಗಭೂಷಣದ [7]ಪಡೆ[7]ಯೊಂದು ಕೋಟಿ—ಶಿವನಿಪ್ಪ ನೆಲೆಯನಾರೂ ಅಱಿಯರಯ್ಯ. ಇಕ್ಕಿದ ಕರೋಟಿ ಮಾಲೆಯೊಳಗಿಪ್ಪ ರುದ್ರರು ಕೋಟಿ—ಶಿವನಿಪ್ಪ ನೆಲೆಯನಾರೂ ಅಱಿಯರಯ್ಯ. ಇಕ್ಕಿದ ರುಂಡಮಾಲೆಯೊಳಗಿಪ್ಪ ಮುಂಡಧಾರಿಗಳು ಕೋಟಿ—ಶಿವನಿಪ್ಪ ನೆಲೆಯನಾರೂ ಅಱಿಯರಯ್ಯ. ಖಂಡಕಪಾಲವ ಧರಿಸಿಪ್ಪ ಮುಂಡಧಾರಿಗಳೊಂದು ಕೋಟಿ—ಶಿವನಿಪ್ಪ ನೆಲೆಯನಾರೂ ಅಱಿಯರಯ್ಯ. ಎಲೆ ಗೊಗೇಶ್ವರ, ನಿಮ್ಮ ಪೂರ್ವಾಚಾರಿ ಸಂಗನ ಬಸವಣ್ಣನೊಬ್ಬನೇ ಬಲ್ಲನು. ೮೨೮-೧೪೦೬-19-90 ಮತ್ತಂ:

ಕಡುಜಲಕ್ಕೆ ಇದಿರಾಗಿ ಹರಿವ ಸ್ವಾಮಿಯ ಬರವ ಕಂಡು ಬಿಡದೆ [8]ಬೆಂಬತ್ತಿ ಸೂಸುವ[8] ಪರಿಯ ನೋಡಾ! ನಡೆ-ನುಡಿ-ಚೈತನ್ಯ-ಒಡಲನೊಂದು ಮಾಡಿ ಬಿಡದೆ ವೇಧಿಸುವ ಬೆಡಗ ಕಂಡೆನಯ್ಯ. ಕಡೆಗೆ ಸೂಸದ ದೃಷ್ಟಿ, ಹಿಡಿದು ತೊಲಗದ ಹಸ್ತ,

---

[1] (ಹ) ಪರಿಣಾಮ (ಗೂಶಿ). [2] (ಹ) ತಾ (ಗೂಶಿ). [3] (ಹ)ಯ (ಗೂಶಿ). [4] ಮೇಲು ತಲೆ (ಗೂ) ಮೇಲುವಾಲೆ (ಹ) ಮೇಲೆ ತಲೆ (ಶಿ). [5] (ಹ) ಕೊಂತವ ಕೊಂಡರೆ (ಗೂಶಿ). [6] (ಹ) ಮೇಲಣ (ಶಿಗೂ). [7] (ಹಶಿ) ಪೆಡೆ (ಗೂ). [8] (ಹ) ಬೆಂಬತ್ತಿಸುವ (ಗೂಶಿ)

ಬಿಡಬೇಡ ತನಗೆನ್ನದ ಸಜ್ಜನ ಮಡದಿ, ತನ್ನ ಗಂಡನ ಅಡಗಿ ಕೂಡುವ ಭೇದ: ನಡು ವಿರುಳು [1]ಕೂಡೆ ನಿಮಿರಿ[1] ಬೆಳಗಾಯಿತ್ತು. ಮಾಡಿ ನೀಡುವವನ ಕಂಡು ನಾಡು-ಬೀಡೆಲ್ಲಾ ನೆರೆದು ಕೊಡ ಕೈಯಲ್ಲಿ ಕೊಟ್ಟರೆ ತೃಪ್ತರಾಗಿ [2]ಮಾಡುವರು[2] ಹರಸುವರು, ನೋಡುವರು ಮನದಣಿಯೆ [3]ಕೂಡುವರು[3] ಕೋಟಿ, ಸಹಜ ಒಂದೇ ಎಂದು ಜೋಡ ತೊಡದಾತನ ನೈಯಲ್ಲಿ ಕೂಡೆ ಘಾಯವಿಲ್ಲದುದ ಕಂಡು ನೋಡಿರೇ. ಮುಸೆಮುಟ್ಟದ ಮಹಂತನ ಬೇಡುವೆನು ಕರುಣವನು. ಪಾದವ ನೊಸಲಲ್ಲಿ [4]ಸೂಡಿ[4] ಗೊಗೇಶ್ವರನ ಶರಣ ಬಸವಣ್ಣಂಗೆ ನಮೋ ನಮೋ ಎಂಬೆನು. ೮೭೯-೧೪೦೭-19-91. ಮತ್ತಂ:

ಯುಗದ ಉತ್ಸಾಹವ ನೋಡಿರೇ! ಪಂಚಶಕ್ತಿಗಳಿಗೆ ಪಂಚಪ್ರಧಾನರು. ಅವರಾಗು ಹೋಗನಾ ಶರಣನೇ ಬಲ್ಲ. ಆ ಶರಣನು ತಾನು ತಾನಾಗಿ, ಆಱು ದುರುಶನಕ್ಕೆ ಯಾಚಕ ನಲ್ಲ. ಮೂಱು ದರುಶನಕ್ಕೆ ಮುಯ್ಯಾನುವನಲ್ಲ. ವೇದ-ಶಾಸ್ತ್ರಾಗಮ-ಪುರಾಣ-ಛಂದಸ್ಸು-ನಿಘಂಟುಗಳೆಂಬವಕ್ಕೆ ಭೇದಕನಲ್ಲ. [5]ಅದೇಕೆಂದಡೆ[5]: ಅವಱಂಗದ ಮೇಲೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪ್ರಸಾದವಿಲ್ಲ, ಪಾದೋದಕವಿಲ್ಲದ ಭಾಷೆ. ಆ ಗುರು-ಲಿಂಗ-ಜಂಗಮ-ಪ್ರಸಾದ-ಪಾದೋದಕವೇಕಾರ್ಥವಾದ ಕಾರಣ, ಪ್ರಾಣಿ ಗಳೆಲ್ಲವೂ ಪ್ರಣಮಂಗೆಯ್ವುತ್ತಿದ್ದವು. ಜೀವಿಗಳೆಲ್ಲವೂ ಜಯ ಜೀಯ ಎನುತಿದ್ದವು. ಆತ್ಮಂಗಳೆಲ್ಲವೂ ಅನುವ ಬೇಡುತ್ತಿದ್ದವು. ಗೊಗೇಶ್ವರ, ಸಂಗನ ಬಸವಣ್ಣನ ಪಾದಕ್ಕೆ ಈರೇಳು ಭುವನವೆಲ್ಲವೂ ಜಯ ಜಯ ಎನುತ್ತಿದ್ದವು. ೮೩೦-೧೪೦೮-19-92.

ಇದಕ್ಕೆ ಬಸವರಾಜದೇವರು ಪ್ರಭುದೇವರ ಸ್ತೋತ್ರವ ಮಾಡುವ ವಚನ:

ಹೊನ್ನಿನ ಆಪ್ಯಾಯನಕ್ಕೆ ಬೋಳಾದವನಲ್ಲ. ಮಣ್ಣಿನ ಆಪ್ಯಾಯನಕ್ಕೆ ಬೋಳಾದವ ನಲ್ಲ. ಹೆಣ್ಣಿನ ಆಪ್ಯಾಯನಕ್ಕೆ ಬೋಳಾದವನಲ್ಲ. ಕೂಡಲಸಂಗಮದೇವರಲ್ಲಿ, ಎನಗಾರೂ ಇಲ್ಲವೆಂದು ಬೋಳಾದನೆನ್ನ ಪ್ರಭುದೇವರು. ೮೩೧-೧೪೦೯-19-93.

ಶ್ರೋತ್ರದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ತ್ವಕ್ಕಿನಲ್ಲಿ ಬ್ರಹ್ಮಚಾರಿ ಯಾಗಿರಬೇಕು ಶರಣನು. ನೇತ್ರದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ಜಿಹ್ವೆ ಯಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ನಾಸಿಕದಲ್ಲಿ ಬ್ರಹ್ಮಚಾರಿಯಾಗಿ ಚರಿ[=ಲಿ?]ಸದಿರಬೇಕು ಶರಣನು. ಇಂತೀ ಪಂಚೇಂದ್ರಿಯಂಗಳಲ್ಲಿ ಬ್ರಹ್ಮಚಾರಿ ಯಾಗಿ ಕೂಡಲಸಂಗಮದೇವರಲ್ಲಿ ಎನ್ನನಾಗು ಮಾಡಲಿಕ್ಕೆ ಬ್ರಹ್ಮಚಾರಿಯಾದರು ಪ್ರಭುದೇವರು. ೮೩೨-೧೪೧೦-19-94.

ಬಸುಱಿ[3] ಬಾಯಾಗಿ, ಬಾಯೆ ಬಸುಱಾಗಿ ಇಪ್ಪುದ ತೊಡೆದ. ಕಣ್ಣೆ ತಲೆಯಾಗಿ, ತಲೆಯೆ ಕಣ್ಣಾಗಿರಿಸಿದ. ಕಾಲೆ ಕೈಯಾಗಿ, ಕೈಯೆ ಕಾಲಾಗಿ ನಡೆಸಿದ. ನೆಳಲ ಸುಟ್ಟು

---

[1] (ಶಿ) ಕೂಡಿನಿಮಿರಿ (ಗೂ) ಕೂಡೆನಿಮಿಲಿ (ಹ). [2] (ಶಿ) ಮಾಡುವರ (ಗೂಹ) [3] (ಹಶಿ) ಕೊಡುವರು (ಗೂ). [4] (ಶಿಹ) ಸೂಡುವೆ (ಗೂ). [5] (ಹ) ಅಂದೆಂತೆಂದಡೆ (ಶಿಗೂ).

[1]ಉಡುಗೊಱೆ[1]ಯನೆನಗೆ ಕೊಟ್ಟನು[1]. ಮಥನವಿಲ್ಲದ ಸಂಗಸುಖವನೆನಗೆ ತೋಱಿಸಿದನು. ಕೂಡಲಸಂಗಮದೇವ, ಪ್ರಭುವಿನ ಶ್ರೀಪಾದಕ್ಕೆ ಶರಣೆನುತ್ತಿದ್ದೆನು. ೮೩೩-೧೪೧೧-19 95. ಮತ್ತಂ:

ವೀರ[2]ದನುಜೆಯರೆಲ್ಲಾ[2] ಧಾರಿಣಿ ಎಂಬುದಱೊಳಗೆ [3]ಸಾರಂಗ[3]ವಿದ್ದುದನಾರೂ ಅಱಿಯರಲ್ಲಾ, [4]ದ್ವಾರಾವತಿಯ[4] ಪುರದೊಳಗೆ ಪರವು ಬಂದಿದ್ದರೆ ಶರೀರಸಂಬಂಧವ ಮಾಡಲಱಿಯರಲ್ಲಾ. ಕರಗಸವ ಕಳೆದುಕೊಂಡು, ಪರಶುರಾಮನ ಗೆಲಿದು, ಸುರರೊಳಗೆ ಸುಳಿದಾಡಲಱಿಯರಲ್ಲಾ. ವಾರಿಧಿಯನೇಱಿಕೊಂಡು, ಮರಣವೆಂಬುದ ನಿಲಿಸಿ, ತ್ರಿಪುರವ ಮೂರ್ತಿಗೊಳಿಸಲಱಿಯರಲ್ಲಾ. ಮೇರುವೆಂಬುದ ಹೊಕ್ಕು, ನೂಱೆಂಟನೆಣಿಸಿಕೊಂಡು ನಿರಾಕಾರದಲಡಗುವರಿನ್ನಾರು ಹೇಳಾ! ಸಾಸಿರದ ಮೇಲೆ ನೂಱೆಂಬತ್ತೆಂಟು ರಾಶಿಪರುಷವೇಧಿಗಳಾಗಲಱಿಯರಲ್ಲಾ. ಕೂಡಲಸಂಗನ ಶರಣರ ಸಂಬಂಧವು ಪ್ರಭುವಿಂಗಲ್ಲದೆ ಮತ್ತಾರಿಗೆಯೂ ಆಳವಡದು. ೮೩೪-೧೪೧೨-19-96. ಮತ್ತಂ:

ನೀಲದ ಮಱಿಯೊಂದು ಮಾಣಿಕವ ನುಂಗಿದರೆ, ವಜ್ರ ಬಂದು ಅದ ಬೇಡವೆಂದುಗುಳಿಸಿತ್ತು ನೋಡಾ! ಅಡಗಿದ ಮಾಣಿಕ್ಯ ನೀಲದ ತಲೆಯ ಮೆಟ್ಟಿ ಆನಂದ ನಾಟ್ಯವನಾಡುತ್ತಿದ್ದಿತ್ತು. ಅಂಬರದೊಳಗಣ ಮುಗ್ಧೆ ಕಂಗಳ ಮುತ್ತಿನ ಮಣಿಯ ಮಥನವಿಲ್ಲದೆ ನುಂಗಿ ಉಗುಳುತ್ತಿದ್ದಳು. ಲಿಂಗ-ಜಂಗಮವೆಂಬುದ ಇಂದಱಿದು ಸುಖಿಯಾದೆನು. ಕೂಡಲಸಂಗಮದೇವರಲ್ಲಿ ಪ್ರಭುವಿನ ಕೃಪೆಯಿಂದ ನಾನು ಬದುಕಿದೆನು. ೮೩೫-೧೪೧೩-19-97.

ನೀರ ಒರಳ ಮಾಡಿ, ನೆಳಲ ಒನಕೆಯ ಮಾಡಿ, ಆಕಾರವಿಲ್ಲದಕ್ಕಿಯ [5]ಥಳಿಸು[5]ತ್ತಿರಲು; ಮೇರುಗಿರಿಯಾಕಳ ಕಱೆದು, ಆ ಕ್ಷೀರದಲ್ಲಿ ಅಡಿಗೆಯ ಮಾಡಿ ನಾರಿಯು ಬಸುಱೊಳಗೆ ಗಂಡ ಬಂದು ಕುಳ್ಳಿರಲು, ಮಾಡಿದಡಿಗೆಯ [6]ಮನ[6] ಉಂಡು ಹೋಗಲು, ಮೇಲು ಕೈಯ ತಲೆ [7]ಹಿಡಿದು[7] ಸಂತೋಷದಿಂದ ಪ್ರಾಣಸಖಿ ತನ್ನ ಗಂಡಂಗೆ ನೀಡುತ್ತಿರಲು, ಅರಳು[8]ವುಟ್ಟಿಗೆ[8]ಯಲ್ಲಿ ಹೊರಳಿ ಕೂಡುವ ಭೇದ, ಮರಳಿ ಕೂಡಲಿಕೆಂತು ರಪಣವಿಲ್ಲ. ,ಕೆರಳಿ ಮುಳಿದು ಘುಡು ಘುಡಿಸಿ ಮೇಲು ಘರ್ಜಿಸಲೊಡನೆ ತೆರಳಲಮ್ಮದೆ ಅಂಜಿ ಒಳಗಡಗಿದ. ಶರಣಸತಿ-ಲಿಂಗಪತಿಯೆಂಬ ಭಾಷೆಗೆ ನೀವು ಹರನ ಬಟ್ಟೆಯ ನೋಡಿ ಸುಯ್ಯಬೇಡ. ಜನನಮರಣವಿರಹಿತ ಕೂಡಲಸಂಗನ ಅನುಭಾವ. ಪ್ರಭುವಿನ ಶ್ರೀಪಾದದೊಳಗಿದ್ದು ಸುಖಿಯಾದೆನು. ೮೩೬-೧೪೧೪-19-98.

---

[1] (ಶಿ) ಸೀರೆಯನೆನಗೆ ಉಡುಗೊಱೆಯ ಕೊಟ್ಟನು (ಹಗೂ). [2] (ಶಿ) ದನುಜರೆಲ್ಲಾ (ಹಗೂ). [3] (ಹಶಿ) ಸಾಗರ (ಗೂ). [4] (ಗೂಶಿ) ಧಾರಾವತಿಯ (ಹ). [5] (ಹಶಿ) ಥಳಿಸು (ಗೂ). [6] (ಗೂಶಿ) ಮನದಣಿಯ (ಹ). [7] (ಗೂR.ಉ) ಹಿರಿದು (ಶಿಹಗೂ). [8] (ಹ) ಹುಟ್ಟಿಗೆ (ಗೂ) ಉಟ್ಟಿಗೆ (ಶಿ).

ಪ್ರಭುದೇವರು ಚಿಕ್ಕದಣ್ಣಾಯಕರ ಹೊಗಳಿದ ವಚನ :

ಬಸವಣ್ಣ, ನಿನ್ನ ಹೊಗಳತೆ ಅಂತಿರಲಿ, ಎನ್ನ ಹೊಗಳತೆ ಅಂತಿರಲಿ. ಗುರುವಾಗಲಿ ಬಹುದು, ಲಿಂಗವಾಗಲಿ ಬಹುದು, ಜಂಗಮವಾಗಲಿ ಬಹುದು—ಇಂತೀ ತ್ರಿವಿಧವೂ ಆಗಬಹುದು. ನಿನ್ನ ಆಚಾರಕ್ಕೆ ಪ್ರಾಣವಾಗಿ, ಎನ್ನ ಜ್ಞಾನಕ್ಕೆ ಆಚಾರವಾಗಿ, ಈ ಉಭಯ ಸಂಗದ ಸುಖದ ಪ್ರಸನ್ನಕ್ಕೆ ಪರಿಣಾಮಪ್ರಸಾದಿಯಾಗಿ ಬಂದ ಘನ-ಮಹಿಮನು—ಗೊಗೇಶ್ವರಲಿಂಗದಲ್ಲಿ—ಚೆನ್ನಬಸವನಾಗಬಾರದು ಕಾಣಾ ಸಂಗನ ಬಸವಣ್ಣ. ೮೩೭-೧೪೧೫-19-99 ಮತ್ತಂ :

ಪ್ರಕೃತಿಗುಣ ಉಳ್ಳನ್ನಕ್ಕರ ಭಕ್ತನಲ್ಲ. ಕಾಮಕ್ರೋಧ-ಲೋಭ-ಮೋಹ-ಮದ-ಮತ್ಸರ ಉಳ್ಳನ್ನಕ್ಕರ [1]ಮಾಹೇಶ್ವರ[1]ನಲ್ಲ, ಹಸಿವು-ತೃಷೆ-ವಿಷಯಂಗಳುಳ್ಳನ್ನಕ್ಕರ ಪ್ರಸಾದಿಯಲ್ಲ. ಆಚಾರದಲ್ಲಿ ಅನುಭಾವಿ, ಪ್ರಸಾದದಲ್ಲಿ ಪರಿಣಾಮಿ. ಗೊಗೇಶ್ವರ ಲಿಂಗದಲ್ಲಿ ಚೆನ್ನಬಸವಣ್ಣನೆಂಬ ಪ್ರಸಾದಿಗೆ ನಮೋ ನಮೋ ಎಂಬೆನು. ೮೩೮-೧೪೧೬-18-100. ಮತ್ತಂ :

ಆದಿ ವಿಡಿದು ಬಹಾತ ಭಕ್ತನಲ್ಲ. ಅನಾದಿವಿಡಿದು ಬಹಾತ [2]ಮಾಹೇಶ್ವರ[2]ನಲ್ಲ. ಸ್ಥಲವಿಡಿದು ಬಹಾತ [3]ಪ್ರಸಾದಿಯಲ್ಲ[3]. [4]ಲಿಂಗವಿಡಿದು ಬಹಾತ [ಪ್ರಾಣಲಿಂಗಿಯಲ್ಲ][4]. ಶೂನ್ಯಕಾಯ ನಿಶ್ಶೂನ್ಯಂಗಿಕ್ಕಿ ಪ್ರಾಣಲಿಂಗಪ್ರಸಾದವ ಕೊಳಬಲ್ಲನಾಗಿ, ಗೊಗೇಶ್ವರ ಲಿಂಗದಲ್ಲಿ ಚೆನ್ನಬಸವಣ್ಣಂಗೆ ನಮೋ ನಮೋ ಎಂಬೆನು. ೮೩೯-೧೪೧೭-10-101. ಮತ್ತಂ :

ಸದ್ಯೋಜಾತ ಬದ್ಧಜ್ಞಾನಿ, ವಾಮದೇವನಾತುರಜ್ಞಾನಿ, ಅಘೋರ ಕೋಪಜ್ಞಾನಿ, ತತ್ಪುರುಷ ಕ್ಷಣಿಕಜ್ಞಾನಿ, ಈಶಾನನತೀತಜ್ಞಾನಿ. ಈ [5]ಪರಿಯಲ್ಲ[5] ನೋಡಾ ! ಗೊಗೇಶ್ವರಲಿಂಗದಲ್ಲಿ ಅವಿರಳಜ್ಞಾನಿ ಚೆನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನು. ೮೪೦-೧೪೧೮-19-102. ಮತ್ತಂ.

[6]ವೀರ[6]ಧಾರಿಣಿಯೊಳಗೆ ನಾರಿ ಶೃಂಗಾರವ ಮಾಡಿ, ಈರೇಳು ಭುವನವನಮಳೋಕ್ಯವ ಮಾಡಿ, ಬಿಂದು ಶಕ್ತಿಯ ಭೇದ [7]ಸಂದ ಯೋಗ[7]ಸುಖವ ತಂದು ಮೂರ್ತಿಗೊಳಿಸಿದವರಾರು ? ಒಂದೆರಡಱ ನುಡಿಯ ಮತ್ತೊಂದು ಗ್ರಹಿಸಿತ ಕಂಡೆ. ಬಿಂದುವಿನ ರಸದ ಪರೀಕ್ಷೆಯ Aಭೇದವ A, ಚಂದ್ರಕಾಂತದ ಗಿರಿಗೆ ಅರುಣಚಂದ್ರನೊಡನೆ ಇಂಬಿನಲ್ಲಿಪ್ಪ ಪರಿಯ ನೋಡಾ. ಅಂಗೈಯ ತಳದೊಳು [8]ನೋಲೆ[8], ಕಂಗಳಲ್ಲಿ ಉರಸನ್ನೆ, ಇಂಬಿನಲ್ಲಿ ನೆರೆವ ಸುಖ. ಅಂದಿನಾದಿಯ ಪ್ರತಿಬಿಂಬ ಇಂದೆನಗೆ ತೋಱಿತ್ತು.

---

[1] (ಹ) ಶರಣ (ಹಶಿ). [2](ಹ) ಭಕ್ತ (ಗೂ) × (ಶ್ರಿ). [3] (ಹ) ಭಕ್ತನಲ್ಲ (ಗೂ) ಭಕ್ತನಲ್ಲ ಪ್ರಸಾದಿಯಲ್ಲ (ಶಿ). [4] ಭಕ್ತನಲ್ಲ (ಶಿಗೂ) ಇಷ್ಟಲಿಂಗದಲ್ಲಿ ಪ್ರಸಾದವ ಕೊಂಬಾತ ಪ್ರಾಣಲಿಂಗಿಯಲ್ಲ, ಲಿಂಗವಿಡಿದು ಬಹಾತ ಶರಣನಲ್ಲ, ಭಿನ್ನ ವಿಡಿದು ಬಹಾತ ಐಕ್ಯನಲ್ಲ (ಹ). [5] (ಗೂಹ) ಪರಿಯಲ್ಲಿ (ಶಿ). [6] (ಗೂಹ) ನೀರ (ಶಿ). [7] (ಶಿ) ಸಂಚಯೋಗದ (ಗೂ) ಸಂಚ ವೋಗದ (ಹ) (ಗೂ). A (ಹಗೂ)×(ಶಿ) [8] (ಗೂಶಿ) ಮೇಲೆ (ಹ).

ಗೊಗ್ಗೇಶ್ವರನ ಶರಣ ಚೆನ್ನಬಸವಣ್ಣಂಗೆ ಶರಣೆನುತಿರ್ದೆನು. ೮೪೧-೧೪೮೯-19-103.

ವಸುಧೆಯ ಮುಟ್ಟದೆ, ರಸವನೊಸರಲೀಯದೆ, ರಸದಲ್ಲಿ ಕಟ್ಟ ಬಲ್ಲರೆ ಅದು ಯೋಗ. ಹೊಱಗಿದ್ದ ರಸವ ಕಟ್ಟಬಲ್ಲೆವೆಂಬರೆಲ್ಲಾ ಅಂಜನಸಿದ್ಧರಾಗಿ ಹೋದರು. [1]ಸುಷುಮ್ನಾ ಸುಮನ ಸುಮುದ್ರೆಯ ಮಧ್ಯದ[1] ಕೂಪಕಂಭದ ಮೇಲೆ ಪಂಚೇಂದ್ರಿಯವೆಂಬ ಗುಹ್ಯವ ತೊಡೆದು ರಸವ ಕಟ್ಟಬಲ್ಲ ಗೊಗ್ಗೇಶ್ವರನ ಶರಣ ಚೆನ್ನಬಸವಣ್ಣಂಗೆ ನಮೋ ನಮೋ ಎನುತಿದ್ದೆನು. ೮೪೨-೧೪೯೦-19-104.

ಚೆನ್ನಬಸವಣ್ಣ ಪ್ರಭುದೇವರ ಹೊಗಳುವ ವಚನ:

ರೂಪಿಲ್ಲದ ರೂಪು, [2]ನಿರ್ಣಯ[2]ವಿಲ್ಲದ ನಿಷ್ಪತ್ತಿ, ಸೀಮೆಯ ಮೀಱಿದ ನಿಸ್ಸೀಮ, ಗಮನವಿಲ್ಲದ ಅಗಮ್ಯ, ನುಡಿಯುಡುಗಿದ ನಿಶ್ಶಬ್ದ, ಪರವನಱಿಯದ ಪರಿಣಾಮಿ, ಕೂಡಲ ಚೆನ್ನಸಂಗನ ಶರಣ ಪ್ರಭುದೇವರಿಗೆ ನಮೋ ನಮೋ ಎನತಿರ್ದೆನು. ೮೪೩-೧೪೯೧-19-105.

ಚಿಕ್ಕದಣ್ಣಾಯಕರು ಬಸವರಾಜದೇವರ ಹೊಗಳುವ ವಚನ:

ಅಂತರಂಗದಲ್ಲಿ ಪ್ರಭುದೇವರನೊಳಕೊಂಡ. ಬಹಿರಂಗದಲ್ಲಿ ಎನ್ನನೊಳಕೊಂಡ. ಈ ಉಭಯ ಸಂಗದ ಮಧ್ಯದಲ್ಲಿ ನಿಜೈಕ್ಯನಾಗಿದ್ದನು. ಪ್ರಸಾದದಲ್ಲಿ ಪರಮಾನಂದಸುಖಿ, ಅಱಿವಿನಲ್ಲಿ ಕುಱುಹಳಿದ ಘನದ ನಿಲವು. ಕೂಡಲಚೆನ್ನಸಂಗಮದೇವ, ಬಸವಣ್ಣನ ಪಾದಕ್ಕೆ ನಮೋ ನಮೋ ಎಂಬೆನು. ೮೪೪-೧೪೯೩-19-107. ಮತ್ತಂ:

ಶಿಶುವೆನ್ನಬಹುದೇ ನಂಬಿಯಣ್ಣನ? [3][ಶಿವನ ಕುಂಟಣಿ ಮಾಡಿದನು?][3]. ಸೂಕ್ಷ್ಮವೆನ್ನಬಹುದೇ ರವಿಯನು? ಜಗವ [4][ಬೆಳಗುವುದು][4]. ದೃಷ್ಟಿ ಕಿಱಿದೆನಬಹುದೇ? ಸೃಷ್ಟಿಯ ನು ಕಾಬುದು! ಭಾವ ಕಿಱಿದೆನಬಹುದೇ? ಬಳ್ಳಲಿಂಗ[5]ವಾದನು[5] ಕೂಡಲ ಸಂಗಮದೇವಯ್ಯ, ಯುಗ-[6]ಜುಗ[6]ವೆಲ್ಲವನು ಮೀಱಿದ ಶರಣನ ಕಿಱಿದೆನಬಹುದೇ ಚೆನ್ನಬಸವಣ್ಣನ?! ೮೪೫-೧೪೯೪-19-108.

ಇದಕ್ಕೆ ಬಸವಣ್ಣ—ಚೆನ್ನಬಸವಣ್ಣನ ಹೊಗಳುವ ವಚನ:

ಒತ್ತಿ ಹೊಸೆದ ಕಿಚ್ಚ ನಾ ಮಾಡಿದೆನೆಂದು ಮುಟ್ಟ ಹಿಡಿದಡೆ ಕೈ ಬೇಯದಿಹುದೇ? ಎನ್ನಿಂದಾಯಿತ್ತು [7]ಎನ್ನದಿರು ಮನವೆ! ನಾನು ಮಾಡಿದೆನೆನ್ನದಿರು ಮನವೆ.[7] ಕೂಡಲ ಸಂಗಮದೇವ ಕೇಳಯ್ಯ, ಚೆನ್ನಬಸವಣ್ಣನ ಪಾದಕ್ಕೆ ನಮೋ ನಮೋ ಎಂಬೆನು. ೮೪೬-೧೪೯೫-19-109. ಮತ್ತಂ:

---

[1] (ಹ) ಸುಷುಮ್ನ ಸೂಕ್ಷ್ಮನಿಧಿಯಮಧ್ಯದ (ಗೂ) ಸುಷುಮ್ನ ಸುಮನೀಯ ಮಧ್ಯದ (ಶಿ). [2] (ಹಶಿ) ನಿಜ (ಗೂ). [3] ಇಡೀ ವಚನದ ವಾಕ್ಯವಿನ್ಯಾಸವನ್ನು ನೋಡಿದರೆ ಇಲ್ಲಿ ಏನೋ ಒಂದು ಮಾತು ಅಲಿಖಿತವಾಗಿದೆಯೆನ್ನಬಹುದು; ಅದು ಹೀಗಿದ್ದಿರಬಹುದು: "[ಶಿವನ ಕುಂಟಣಿ ಮಾಡಿದನು]". [4] (ಹಶಿ) ಬೆಳಗುವ. [5] (ಹ) ವಾದುದನು (ಶಿಗೂ). [6] (ಶಿಗೂ) ಜಗ (ಹ). [7] (ಹ) ಎನ್ನಿಂದ ಹೋಯಿತ್ತು ಎನ್ನದಿರು (ಗೂ) ಎನ್ನಿಂದಾಯಿತ್ತು ಎನ್ನದಿರು (ಶಿ).

ಲಿಂಗಗಂಭೀರದೊಳಗೆ ಜಗ ಹುಟ್ಟಿದರೇನು? ಆ ಲಿಂಗದಿಂದ ಘನವೆ? ಶಿವಲಿಂಗದೊಳಗೆ ಜಗ, ಜಗದೊಳಗೆ [1]ಶಿವ[1]ಲಿಂಗ! ಲೋಕಾದಿ ಲೋಕಂಗಳಿಗೆ ನೀನು ಭಕ್ತಿಯ ಕಂದೆಱೆದು ತೋಱಿದೆ. ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿದ್ದೆನು. ೮೪೭-೧೪೨೬-19-110. ಮತ್ತಂ:

ಪ್ರಾಣಲಿಂಗ ಪ್ರವೇಶಿತನಾಗಿ ಪ್ರಸಾದದಲ್ಲಿ ಸನ್ನಿಹಿತನಯ್ಯ. ಲಿಂಗಾರ್ಪಿತವಲ್ಲದೆ ಅನರ್ಪಿತವ ಮುಟ್ಟಲೀಯನಯ್ಯ. ಅಂಗಗುಣಂಗಳೆಲ್ಲವನತಿಗಳೆದು ಪ್ರಸಾದದಲ್ಲಿ ಬ್ರಹ್ಮಚಾರಿಯಾದನು ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನು. ೮೪೮-೧೪೨೭-19-111. ಮತ್ತಂ:

ಸರ್ವಾವಧಾನಿ ಸಮಯಪ್ರಸಾದಿ ನೋಡಯ್ಯ! ಲಿಂಗಾರ್ಪಿತದಲ್ಲಿ ಸರ್ವಾವಧಾನಿ ನೋಡಯ್ಯ. ಅಯ್ಯ, [2]ಅನಾಹತಂಗಳ[2] ಮುನ್ನವೆ ಇರಲೀಯ, ಕೂಡಲಸಂಗಮ ದೇವರಲ್ಲಿ ಚೆನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು. ೮೪೯-೧೪೨೮-19-112.

ಅಂಗವಿಕಾರ[3]ವಳಿದು ಸತಿಸಂಗವಱಿಯ[3] ನೋಡಾ! ದೇಹಗುಣಂಗಳಿಲ್ಲಾಗಿ [4]ನಿರ್ದೇಹ[4]ಪ್ರಸಾದಿ ನೋಡಯ್ಯ. ಅಶನ-ವ್ಯಸನಾದಿ[5]ಗಳೆಲ್ಲವೂ ಬೆಂದವು[5] ನೋಡಯ್ಯ. ಈ ಎಲ್ಲಾ ಗುಣಂಗಳಳಿದುಳಿದ ಕೂಡಲಸಂಗಮದೇವರಲ್ಲಿ ಸಾವಧಾನಪ್ರಸಾದಿ ಚೆನ್ನಬಸವಣ್ಣನು. ೮೫೦-೧೪೨೯-19-113.

ಘನವನಱಿದು ಘನವ ವೇಧಿಸಿ ಘನಗುರುವ ತನ್ನೊಳಗೆ ಬೈಚಿಟ್ಟ [6]ಪರಿಯ[6] ನೋಡಾ! ಗುರು-ಲಿಂಗ-ಜಂಗಮದಲ್ಲಿ ತನು-ಮನ-ಧನವ ವೇಧಿಸುವ ಪರಿಯ ನೋಡಯ್ಯ. ಕಾಯಪ್ರಸಾದದಲ್ಲಿ ಸ್ವಾಯತವ ಮಾಡಿಕೊಂಡಿಪ್ಪ ಪರಿಯ ನೋಡಾ. ಷಡುಸ್ಥಲದಲ್ಲಿ ಸ್ವಾಯತವಾದ ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನು. ೮೫೧-೧೪೩೦-19-114. ಮತ್ತಂ:

ನಿರ್ಲೇಪವಾದ, ನಿಜಗುಣಿಯಾದ ನೋಡಯ್ಯ. ಕಾಮಿಸದ ಕಲ್ಪಿಸದ ಪ್ರಸಾದಿ ನೋಡಯ್ಯ! ಬಯಸಲಿಲ್ಲದ ಪ್ರಸಾದಿ! ಗುರುವಿನ ಮುಖದಿಂದ ಬಂದ ಪ್ರಸಾದವಲ್ಲದೆ ಮತ್ತೇನನೂ ಮುಟ್ಟಲೀಯನು—ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನು. ೮೫೨-೧೪೩೧-19-115. ಮತ್ತಂ:

ಅರ್ಪಿತವ ಮಾಡುವ ಅವಧಾನವು, ಅನ್ಯವ ಸೋಂಕದ ಅವಧಾನವು, ಅರಿಷಡ್ವರ್ಗಂಗಳ ಮುಟ್ಟಲೀಯದ ಅವಧಾನದ ಪರಿಯ ನೋಡಾ! ಪಂಚಭೂತವೆಂಬ ಭವಿಯ ಕಳೆದು ಪ್ರಸಾದಿಯಾಗಿಪ್ಪ ಪರಿಯ ನೋಡಾ. ಪಂಚೇಂದ್ರಿಯಂಗಳ ಗುಣವಳಿದು ಪಂಚವಿಂಶತಿ ತತ್ವದಲ್ಲಿ ಪರಿಣಾಮಿ ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನು. ೮೫೩-೧೪೩೨-19-116.

---

[1] (ಹ) × (ಗೂಶಿ). [2] (ಹಶಿ) ಅನಾಯತಂಗಳ (ಗೂ). [3] ವಳಿದು ಸತಿಯ ಸಂಗವಱಿಯ (ಗೂ) ವಳಿದು ಸತಿಸಂಗನಱಿಯ (ಹ) ವಳಿದ ಸತಿಸಂಗವಱಿಯಳು (ಶಿ). [4] (ಹಶಿ) ನಿರ್ದೇಹಿ (ಗೂ). [5] (ಗೂಹ) ಗಳೆಲ್ಲಂಜಿದವು (ಶಿ). [6] (ಹಶಿ) ಪರಿಣಾಮಿಯ (ಗೂ).

ಚೆನ್ನಬಸವಣ್ಣನು ಬಸವಣ್ಣನ ಸ್ತುತಿಸುವ ವಚನ :

ಭಕ್ತ-ಮಾಹೇಶ್ವರ-ಪ್ರಸಾದಿ-ಪ್ರಾಣಲಿಂಗಿ-ಶರಣ-ಐಕ್ಯರೆಂದು ಬೇಱು ಮಾಡಿ ನಡೆದು, ಬೇಱು ಮಾಡಿ ನುಡಿವ ಭಿನ್ನವಲ್ಲ. ಅಂತರಂಗದಲ್ಲಿ ಅಱಿವು ಪರಿಪೂರ್ಣ. ಬಹಿರಂಗದಲ್ಲಿ ದಾಸೋಹ ಸಂಪನ್ನ. ಮನೋವಾಕ್ಕಾಯ ಕರ್ಮಂಗಳಲ್ಲಿ ಸದ್‌ಭಕ್ತಿ ಸಂಪನ್ನ. ಎಡೆದೆಱಹಿಲ್ಲದೆ ಲಿಂಗಸಂಪನ್ನ. ಸರ್ವಾಂಗದಲ್ಲಿ ಸರ್ವಾಚಾರಸಂಪನ್ನ. ಕೂಡಲ ಚೆನ್ನಸಂಗನಲ್ಲಿ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು. ೭೫೪-೧೪೩೩-19-117. ಮತ್ತಂ :

ಮಾತು ಮಾಣಿಕವ ನುಂಗಿ, ಜ್ಯೋತಿ ಕತ್ತಲೆಯ ನುಂಗಿ, ಆಳು ಅಳ್ದನ ನುಂಗಿ, ಉಗುಳಲಿಲ್ಲದ ಮಥನ—ಮಥನವಿಲ್ಲದ ಸಂಗ. ಮರಣವಿಲ್ಲದ ಉದಯ, ಅಳಲಿಲ್ಲದ ಶೋಕ. [1]ಸಮರಸದಲ್ಲಿ[1] ಉದಯದ ಬೆಳಗನು ಮದಗಜ ಒಳಕೊಂಡು ಮಾವತಿಗನ ನುಂಗಿ ಉಗುಳದಲ್ಲಾ! ಸದಮದದ [2]ಬರಿ[2] ಕೈಯೊಳಗೆ ಈರೇಳು ಭುವನವನೊದಱಿ ಹಾಯ್ಕಿ ತಾನೆ ನಿಂದುದಲ್ಲ—ಸದಮಲಜ್ಞಾನಸಂಪನ್ನ, ಕೂಡಲ ಚೆನ್ನಸಂಗನಲ್ಲಿ ಬಸವಣ್ಣಂಗೆ [3]ಸಾಧ್ಯ[3]ವಾಯಿತ್ತು. ೭೫೫-೧೪೩೪-19-118. ಮತ್ತಂ :

ಉರಿಯ ಸೀರೆಯನುಟ್ಟು, ಕಡೆಸೆಱಗ ಬಿಡಬೀಸಿ, ಮಡದಿ ತನ್ನ ಕೆಳದಿಯರನೊಡಗೊಂಡು ಆಡುತ್ತಿರೆ—ಪತಿ ಬಂದು ಮುಡಿಯ ಹಿಡಿದು, ಉಟ್ಟ ಸೀರೆಯನುಗಿಯೆ, ಮಡದಿ ಒಡಗೂಡುತ್ತಿರೆ, ಸಮರಸದಲ್ಲಿ ಸತಿಯಳಿದು ಪತಿಯಾಗಿ, ಪತಿಯಳಿದು ನಿಃಪತಿಯಾಗಿ, ಸತಿ-ಪತಿ-ನಿಃಪತಿಯೆಂಬ ತ್ರಿವಿಧವು ಏಕಾರ್ಥ[4]ವಾದ[4], ಕೂಡಲ ಚೆನ್ನಸಂಗನಲ್ಲಿ, ಬಸವಣ್ಣನ ಪಾದಕ್ಕೆ ನಮೋ ನಮೋ ಎನುತಿರ್ದೆನು. ೭೫೬-೧೪೩೫-19-119.

ಮತ್ತಂ ಚೆನ್ನಬಸವಣ್ಣನು ಬಸವಣ್ಣನ ಸ್ತುತಿಯಿಸಿದ ಪದಂಗಳು :

**ರಾಗ : ಭೂಪಾಳಿ**

ಪರಮ ಮೂರತಿ ಪರಮಜ್ಞಾನಿ ಲೋಕ ಲೌಕಿಕ ಪ್ರಪಂಚ
ನಿಃಪ್ರಪಂಚ ನಿರ್ನಾಮ ನಾಮ ನಿಷ್ಕಾಮಿಯಾಗಿ ‖ ಪಲ್ಲವ ‖

ಕಾಯಗುಣಂಗಳ ತಂದು ಜೀವದೊಳಗಿರಿಸಿ
ಪ್ರಾಣಲಿಂಗಕೆ ಸಮಾಧಾನ ಮಾಡಿ
[5]ಆಶ್ರಮವ ಸ್ವೀಕರಿಸನನಾಶ್ರಮವ ನೀಕರಿಸಿ[5]
ದ್ವೈತಾದ್ವೈತನು ಅಲ್ಲ ಲಿಂಗಸಂಗಿ. ‖ ೧ ‖

---

[1] (ಹಶಿ) ಸಮರಸವಿಲ್ಲದ (ಗೂ). [2] (ಹಶಿ) ಭರಿ (ಗೂ). [3] (ಶಿ) ಸಯ (ಹಗೂ). [4] (ಗೂಶಿ) ವಾದ ಬಳಿಕ (ಹ). [5] (ಹಗೂ) ಆಶ್ರಿಮವನೀಕರಿಸಿ ಅನಾಶ್ರಿಮವ ಸ್ವೀಕರಿಸ (ಶಿ).

ಕಾಯಶೂನ್ಯ ಲಿಂಗ, ಪ್ರಾಣಶೂನ್ಯ ಶರಣ
ಭಾವಭೇದಂಗಳಿಲ್ಲವಾಗಿ
ಒಳಹೊಱಗುವನು ಸರ್ವಾಂಗ ಲಿಂಗದಲ್ಲಿ
ಅನುಭವಕೆ ತರಲಿಲ್ಲದನುಪಮನು ‖ ೨ ‖

ಕಾರಣವಕಾರಣ ಕಲ್ಪಿತವಕಲ್ಪಿತ
ಸಂಕಲ್ಪ-ವಿಕಲ್ಪನಲ್ಲ ಸುಜ್ಞಾನಿಯಾಗಿ
ಸಾವಯವ-ನಿರವಯವ ಸಂಗಿ-ನಿಸ್ಸಂಗಿ
ಪರಮಾತ್ಮ ತಾನಾದ ನಿರ್ಬೋಧ ಬೋಧಿ ‖ ೩ ‖

ನಿರ್ಭಾವ-ನಿರ್ನಾಮ ನಿರ್ದೇಹ-ದೇಹಿ
ನಿರ್ಗುಣಕೆ ಅವಯವಾಕಾರರೂಪ
ಪರತತ್ತ್ವವನೆ ಬಿಟ್ಟು ಉಭಯವಳಿದುಳಿದಾತ
ತ್ರಿವಿಧ ಸಂಪನ್ನ[1]ನೀತನುಭಯ[1]ಲಿಂಗಿ ‖ ೪ ‖

ಲಿಂಗಭುಕ್ತಾ ಶೇಷಭುಕ್ತಾಚ ಪ್ರಾಣಿ
ನಿರ್ಗಮನ ಗಮನಿಗೆ ಗಮನವಿಲ್ಲ
ಸ್ವತಂತ್ರ ಕೂಡಲ ಚೆನ್ನ ಸಂಗಯ್ಯನಲ್ಲಿ
ಅಸಾಧ್ಯ ಸಾಧಕನಾದ ಲಿಂಗಸಂಗಿ ‖ ೫ ‖

ಅಂತು ಪದಂಗಳು ಸಹ ವಚನ ೮೬೧-೧೪೪೦-19-124.

ಆ ಪ್ರಸ್ತಾವದೊಳು ಮಡಿವಾಳ ಮಾಚಿತಂದೆಗಳು ಪ್ರಭುದೇವರ ಸ್ತುತಿಯಿಸಿಹರು:

ತನುಗುಣವಳಿದು ಲಿಂಗಸಂಗಿಯಾದ. ಮನಗುಣವಳಿದು ಜ್ಞಾನಸಂಬಂಧಿಯಾದ. ಪ್ರಾಣಗುಣವಳಿದು ಪ್ರಸಾದಸಂಬಂಧಿಯಾದ. ಭಾವಭ್ರಮೆಯಳಿದು ನಿಜಲಿಂಗಸಂಬಂಧಿಯಾದ. ಇಂತೀ ಚತುರ್ವಿಧಸಂಬಂಧಿಯಾಗಿ ಶೂನ್ಯಸಿಂಹಾಸನವನಿಂಬುಗೊಂಡ, ಕಲಿದೇವ, ನಿಮ್ಮ ಶರಣ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂಬೆನು. ೮೬೨-೧೪೪೧-19-126. ಮತ್ತಂ:

ಲಿಂಗಬೆಱಗಿನ ಪರಮಸುಖಿಯನೇನೆಂಬೆನಯ್ಯ? ಕಂಗಳ ಕಳೆಯ ಸಂಗವನಗಲಿದ ಅಂಗವಿರಹಿತನನೇನೆಂದುಪಮಿಸುವೆ? ನೋಟದಲ್ಲಿ ಅನಿಮಿಷ, ಕೂಟದಲ್ಲಿ ನಿಸ್ಸಂಗಿ! ಎಡೆಯಾಟದಲ್ಲಿ ನಿರ್ಗಮನ, ನಿಂದಲ್ಲಿ ನಿರಾಳ! [2]ಸುಳಿದಲ್ಲಿ[2] ಪರಿಪೂರ್ಣ! ಘನಕ್ಕೆ ಘನಮಹಿಮನು, ಕಲಿದೇವ, ನಿಮ್ಮ ಶರಣ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎನುತ್ತಿರ್ದೆನು. ೮೬೩-೧೪೪೨-19-127.

ಸಂಸಾರಸಾಗರದ ತೆರೆಸರಸವ ಹಿಂಡಿ ಹಿಳಿದಾಡಿದನಯ್ಯ. ಸವೆಱಿಕೊಂಡು ಹರಿದು

---

[1] (ಹ) ನಿಜದುಭಯ (ಶಿ). [2] (ಹಶಿ) ಸುರಾಳವಲ್ಲಿ (ಗೂ).

ಹತ್ತುವನಲ್ಲ. ಮರಳಿ ನೋಡುವನಲ್ಲ. ಇಂತಪ್ಪ ವೀರರುಂಟೇ? ಇಂತಪ್ಪ ಧೀರರುಂಟೇ? ಇಂತಪ್ಪ ಪೌರುಷದ ಚರಿತನಾಗಿ, ಮಾಯೆಯ ಹಿಂಗಿಸಿ ಮುಯ್ಯಾಂತು, ಮುಂದಣ ನಿಲವನಾಗುಮಾಡಿದ. ನಿಜೈಕ್ಯ ನಿರ್ವಯಲ ನಿಷ್ಪತಿಗೆ ನಿಜವಾಗಿ, ನಿರಾಳದೊಳಗೆ ತಾನೆ ತೊಳಲುತ್ತಿರ್ದನು. ಕಲಿದೇವ, ನಿಮ್ಮ ಲಿಂಗೈಕ್ಯ ಪ್ರಭುದೇವರ ಶ್ರೀಪಾದದಲ್ಲಿ ಭೃಂಗನಾಗಿಪ್ಪೆನು. ೮೬೪-೧೪೪೩-19-128.

ಪ್ರಭುದೇವರು ಮಡಿವಾಳ ಮಾಚಿತಂದೆಗಳ ಸ್ತೋತ್ರವ ಮಾಡಿದ ವಚನ:

ಲಿಂಗಗಂಭೀರಸುನಾದಜಂಗಮಗಂಭೀರವೆ ತನುಗುಣ ಚರಿತ್ರ, ಜಂಗಮಗಂಭೀರ ಅನಾಹತವೆ ಮನಗುಣ[1]ಸ್ವಭಾವ;[1] ಈ ಎರಡಱ [2]ಸಂಬಂಧವೆ ಸಹಜಜ್ಞಾನ, ಆ ಮಹಾಜ್ಞಾನವೆ ಒಡಲು,[2] [ಆಚಾರವೆ ವಸ್ತ್ರ]. ಪರಮಾನಂದ ಜಲದಲ್ಲಿ ಅಲುಬಿ, ಮಹಾಜ್ಞಾನ ಪ್ರಕಾಶದಲ್ಲಿ ಆಱಿಸಿ, ಅನಾಹತಮಥನದಲ್ಲಿ ಘಟ್ಟಿಸಿ, ಆ ವಸ್ತ್ರವನೆನಗೆ ಕೊಟ್ಟರೆ, ಉಡದ ಮುನ್ನವೆ ಉರಿ ಹತ್ತಿತ್ತು ನೋಡಾ! ಆ ಉರಿಯು ಕಣ್ಣಿಗೆ ಕಾಣ ಬಾರದು, ಮನಕ್ಕೆ ನೆನೆಯ ಬಾರದು. ಉರಿ ಉಂಡು ಉಷ್ಣವಿಲ್ಲದ ಆ ಸ್ವಯಂ ಜ್ಯೋತಿಯ ನಿಜನಿವಾಸದಲ್ಲಿ ನಿಶ್ಚಿಂತನಾಗಿದ್ದು ಮಡಿವಾಳನ ಕೃಪೆಯಿಂದ ನಾನು ಬದುಕಿದೆನು ಕಾಣಾ ಗೊಗೇಶ್ವರ. ೮೬೫-೧೪೪೪-19-129. ಮತ್ತಂ:

ತಾಯಿಲ್ಲದ ಶಿಶುವಿಂಗೆ, ಶಿಶುವಿಲ್ಲದ ತಾಯಿ ಮೊಲೆಯನೂಡಿದಳು. ಮೊಲೆವಾಲ ನುಂಡ ಶಿಶು ತಾಯ ತಕ್ಕೈಸಿದರೆ, ತಾಯಾ ಶಿಶುವಿಂಗೆ ಸತಿಯಾದಳಲ್ಲಾ! ಸತಿಸಂಗದ ಸುಖವ ಪತಿಯಿಲ್ಲದಱಿದಲ್ಲಿ-ಸತಿ-ಪತಿ ಎಂಬೆರಡೂ ಅಳಿಯಿತ್ತು ನೋಡಾ! ಈ ನಿಜದ ನಿರ್ಣಯವ ತೋಱಿದನೆನಗೆ. ಗೊಗೇಶ್ವರನ ಶರಣ ಮಡಿವಾಳ ಮಾಚಿ ತಂದೆಗಳ ಪಾದಕ್ಕೆ ನಮೋ ನಮೋ ಎನುತಿದ್ದೆನು. ೮೬೬-೧೪೪೫-19-130.

ಚಿಕ್ಕದಣ್ಣಾಯಕರು ಮಡಿವಾಳ ಮಾಚಿತಂದೆಗಳ ಸ್ತೋತ್ರವ ಮಾಡುವ ವಚನ:

ಹೊಟ್ಟೆಯಲ್ಲಿ ಎನ್ನ ತೆಗೆದ. ಬೆನ್ನಿನಲ್ಲಿ ಬಸವರಾಜನ ತೆಗೆದ. ಬ್ರಹ್ಮರಂಧ್ರದಲ್ಲಿ ಅಲ್ಲಮನ ತೆಗೆದ. ಸಂಗನೋ, ಮಡಿವಾಳನೋ? ಮಡಿವಾಳನೋ, ಸಂಗನೋ? ಕೂಡಲಚೆನ್ನಸಂಗನಲ್ಲಿ ಮಡಿವಾಳ ಸ್ವಾಯತ ನಮ್ಮ ಬಸವಣ್ಣಂಗೆ. ೮೬೭-೧೪೪೬-19-131.

* ಅಂಗದ ಮೇಲಣ ಲಿಂಗವು ಹಿಂಗದಂತಿರಬೇಕು. ಅಂಗಕ್ಕೆ ಲಿಂಗಕ್ಕೆ ಸಂಬಂಧ ವೇನೋ, ಮನ ಮುಟ್ಟದನ್ನಕ್ಕರ? ಕಾಯ ಕಾಯಕವ ಮಾಡುತ್ತಿರಲು, ಮನ ಲಿಂಗ ದಲ್ಲಿ ಬೆರಸಿ ತೆಱಹಿಲ್ಲದಿಪ್ಪ ಮಡಿವಾಳನ ಪರಿಯ ನೋಡಾ! ಅಂಗ-ಲಿಂಗ-ಸಂಗವೆಂಬ

---

[1] (ಹಶಿ) ಚರಿತ್ರ (ಗೂ). [2] (ಶಿಹ) ಸಂಬಂಧವೆ ಒಡಲು (ಗೂ). * ಮುಂದಿನ ಶೂನ್ಯ ಸಂಪಾದನಕಾರರು ಕಾಯಕದ ಮಹತ್ವಸ್ಥಾಪನೆಗಾಗಿ ಕಾಲದಿಂದ ಕಾಲಕ್ಕೆ ಹೊಸ ಸಂಪಾದನೆಗಳನ್ನು ಪ್ರಕ್ಷೇಪಿಸುವಲ್ಲಿ ಇಂತಹ ವಚನಗಳಿಂದ ಪ್ರೇರಣೆ ಪಡೆದಿರಬಹುದು.

ಸಂದುಸಂಶಯವಳಿದು ಸರ್ವಾಂಗಲಿಂಗ ಸಂಬಂಧಿ, ಕೂಡಲಚೆನ್ನಸಂಗಯ್ಯನಲ್ಲಿ ಮಡಿವಾಳ ಮಾಚಯ್ಯನು. ೮೬೮-೧೪೪೭–19.132.

ಮಡಿವಾಳ ತಂದೆಗಳು ಚಿಕ್ಕದಣ್ಣಾಯಕರ ಸ್ತುತಿಸಿದರು:

ಮಾಯದ ಮಾಯದ ಸಂಭ್ರಮದೊಳಗೆ ಸಿಲುಕಿತ್ತು ನೋಡಾ ಭುವನವೆಲ್ಲವೂ. ಮಾಯಕ್ಕೆ ಹೊಱಗಾದ ನಿರ್ಮಾಯನ ಕಂಡೆನು. ತಾನೆಂಬ ನುಡಿಗೆ ನಾಚಿ, ನೀನೆಂಬ ನುಡಿಗೆ ಹೇಸಿ, ತಾನು ತಾನಾದ ಘನಮಹಿಮನು. ಕಾಯದಲ್ಲಿ ಕುಱುಹಿಲ್ಲ, ಭಾವದಲ್ಲಿ ಭ್ರಮೆಯಿಲ್ಲ, ಜ್ಞಾನ ತಾನೆಂಬ ಭೇದವಿಲ್ಲ. ಸಾವಯನಲ್ಲ, ನಿರವಯನಲ್ಲ—ಕಲಿದೇವರದೇವ, ನಿಮ್ಮ ಶರಣ ಚೆನ್ನಬಸವಣ್ಣನು. ೮೬೯-೧೪೪೮–19–133.

ಅತಿಶಯವನತಿಗಳೆದು, ನಿರತಿಶಯಸುಖದೊಳಗೆ ಪರಮಸುಖಿಯಾಗಿಪ್ಪರಾರು ಹೇಳಾ? ನಿಜದ ನಿರ್ಣಯವಱಿದು, ಭಜನೆ ಭಾವನೆಯಳಿದು, [1]ತ್ರಿಜಗ[1] ಪತಿಯಾಗಿಪ್ಪರಾರು ಹೇಳಾ? [2]ಕೋಡಗದ[2] ಮನದೊಳಗೆ ಗಮನವಿರಹಿತನಾಗಿ ಗಮನಗೆಡದಿಪ್ಪರಿನ್ನಾರು ಹೇಳಾ? ಹಗೆಯಲ್ಲಿ ಹೊಕ್ಕು, ಹಗೆಯಳಿದು ಸುಖಿಯಾಗಿ, ತನಗೆ ತಾ ಕೆಳೆಯಾಗಿಪ್ಪರಾರು ಹೇಳಾ? ಒಳಗು ಹೊಱಗು ಸರ್ವಾಂಗವೆಲ್ಲಾ ಲಿಂಗವಾಗಿರಬಲ್ಲ ಪರಮಾರ್ಥರಾರು ಹೇಳಾ? ಕಲಿದೇವರ ದೇವ, ನಿಮ್ಮ ಶರಣ ಚೆನ್ನಬಸವಣ್ಣನ ನಿಲವನಱಿದು ಶರಣೆಂದು ನಾನು ಸುಖಿಯಾದೆನು. ೮೭೦-೧೪೪೯-19–134.

ಮಡಿವಾಳಯ್ಯಗಳು ಬಸವರಾಜದೇವರ ಸ್ತುತಿಯಿಸಿಹರು:

ಮಾರಾರಿಯ ಬೆಸನದಿಂದ ಧಾರಿಣಿಗವತರಿಸಿ, ಸಾರಾಯದ ಸದ್ಭಕ್ತಿಯ ತೋಱಿದನು ಶಿವಶರಣರೆಲ್ಲರಿಗೆ. ಭಕ್ತಿಯ ಸಂಚವ, ಮುಕ್ತಿಯ ಭೇದವ ಸತ್ಯಶರಣರಿಂಗೆಲ್ಲಾ ಉಪದೇಶವ ಮಾಡಿ, ನಿತ್ಯಲಿಂಗಾರ್ಚನೆಯೊಳಗೆನ್ನನಿರಿಸಿ ರಕ್ಷಿಸಿದಾತ ಬಸವಣ್ಣ ಕಾಣಾ ಕಲಿದೇವರ ದೇವ. ೮೭೧-೧೪೫೦–19–135. ಮತ್ತಂ:

ಅಱು ಜನ್ಮದವನೆಂಬರು ಬಸವಣ್ಣನ. ಗಾಱು ಮಾತ ಕೇಳಲಾಗದು. ಆಱು ಸ್ಥಳ ಆಱು ಪಥವ [3][ತೋಱಲಿಕೆ ತಾ ಪರಶಿವ[3] ಮೂರ್ತಿಯಾದ. ಆಱಾಱು ತತ್ವಂಗಳ ಮೇಲಣಾತ ಬಸವಣ್ಣನಯ್ಯ][3] ಕಲಿದೇವ. ೮೭೨-೧೪೫೧–19–136.

ಕಾಲ್ಯಾಣವೆಂಬ ಪಟ್ಟಣದೊಳಗೆ ಛತ್ತೀಸಪುರದ ಮಹಾಗಣಂಗಳು. ಒಂದು ಪುರದವರು ಅಗ್ಘವಣಿಯ ತಹರು. ಎರಡು ಪುರದವರು ಸಮ್ಮಾರ್ಜನೆ-ರಂಗವಾಲಿಯ ಮಾಡುವರು. ಮೂರು ಪುರದವರು ಲಿಂಗಾರ್ಚನೆಗೆ ನೀಡುವರು. ನಾಲ್ಕು ಪುರದವರು ಲಿಂಗಕ್ಕೆ ಬೋನವ ಮಾಡುವರು. ಐದು ಪುರದವರು ಅರ್ಪಿತಕ್ಕೆ ನೀಡುವರು. ಆಱು ಪುರದವರು

---

[1] (ಶಿಗೂ) ತ್ರಿಜಗಾಧಿ (ಹ) [2] (ಗೂ) X (ಶಿ) ಕೊಂಡಗದ (ಹ). [3] ತೋಱಲಿಕೆ ತಾ ಪರಶಿವ ಮೂಱು ಮೂರ್ತಿಯಾದ ಆಱಾಱು ತತ್ವಂಗಳ ಮೇಲಣಾತ ಬಸವಣ್ಣ ಕಾಣಾ (ಗೂ) ತಾ ತೋಱಲಿಕೆ ಪರಶಿವ ಮೂಱು ಮೂರ್ತಿಯಾದ ಆಱಾಱು ತತ್ವಂಗಳ ಮೇಲಣ ಬಸವಣ್ಣನೆ (ಶಿ) ಆಱು ವ್ರತವನೂ ಆಱು ಆಚಾರವನೂ ತೋಱಲಿಕೆ ತಿಳಿದಾತ ತಾ ಶಿವಮೂರ್ತಿಯಾದ ಆಱು ತತ್ವಂಗಳ ಮೇಲಣ ಬಸವಣ್ಣನಯ್ಯ (ಹ).

ಪ್ರಸಾದದಲ್ಲಿ ತದ್ಗತವಾಗಿಹರು. ಏಳು ಪುರದವರು ಧ್ಯಾನಾರೂಢರಾಗಿಹರು. ಮುಂದಣ ಪುರದವರು ನಿಶ್ಚಿಂತ ನಿವಾಸಿಗಳಾಗಿಹರು. ಈ ಪುರದ ಗಣಂಗಳು ಓಲೈಸುವ ಬಸವನ ಮಹಾಮನೆಯ ಮಡಿವಾಳ ನಾನು ಕಾಣಾ ಕಲಿದೇವರ ದೇವ.೮೭೩-೧೪೫೨-19-137.

ಶಿವಶಕ್ತಿ ಸಂಪುಟವಾದ ಮಹಾಮಹಿಮರ ನಿಲವು ನಾದದ ಉತ್ಪತ್ತಿಯ ಸೋಂಕದು, ಬಿಂದುವಿನಾಶ್ರಯದಲ್ಲಿ ಬೆಳೆಯದು, ಶುಕ್ಲಶೋಣಿತವೆಂಬ ಪಂಚವರ್ಣಾಶ್ರಮವನು ಹೊದ್ದದು, ಅಷ್ಟದಳಕಮಳವ ಮುಟ್ಟದು, ಪ್ರಾಣಾಪಾನ-ವ್ಯಾನೋದಾನ-ಸಮಾನ-ನಾಗ-ಕೂರ್ಮ-ಕೃಕರ-ದೇವದತ್ತ-ಧನಂಜಯವೆಂಬ ದಶವಾಯುಗಳಿಚ್ಛೆಯಲ್ಲಿ ಸುಳಿದಾಡದು! ಜ್ಞಾನದಲ್ಲಿ ಬೆಳೆವುದು, ನಿರಾಲಂಬದಲ್ಲಿ ಆಡುವುದು, ಹೃದಯಕಮಲ ಪದ್ಮ ಪತ್ರದ [1]ಉಸುರು ನಾಸಿಕ ಶಿರ[1]ಸಂಪುಟ ಜಂಗಮದಾಟವನಾಡುವುದು, ಲಿಂಗದ ನೋಟವ ನೋಡುವುದು, ಮಹಾ[2]ಜ್ಞಾನ[2]ದಲ್ಲಿ ಬೆಳಗುವುದು, ನಿಜಸಿರಾಳದಲ್ಲಿ ನಿವಾಸಿಯಾಗಿಪ್ಪುದು, ಕಲಿದೇವರ ದೇವ, ನಿಮ್ಮ ಶರಣ ಬಸವಣ್ಣನ ನಿಲವು. ೮೭೪-೧೪೫೩-19-138. ಮತ್ತಂ:

ಅಷ್ಟತನುವಿನಲ್ಲಿ ಹುಟ್ಟದ ನಿಷ್ಕಾಮಪದದಲ್ಲಿ ಮುಟ್ಟುವ [3]ಭರದಲ್ಲಿ[3]—ವಿದ್ಯದೊಳಗಣ [4][ದ್ವಾರಮಂಟಪ][4]ದೊಳಗಣ ಸಹಜವನರಿದಂಗಲ್ಲದೆ, ಲಿಂಗವೆನಬಾರದು ಜಂಗಮವೆನಬಾರದು, ಪ್ರಸಾದವೆನಬಾರದು.[5]ದ್ವಾರಮಂಟಪ[5]ದೊಳಗಣ ಸಹಜವನರಿಯದೆ ಕರಣಂಗಳಿಗೆ ಗುರಿಯಾದರು ಕರಣ[6]ಲಿಂಗಾರ್ಚಕರು.[6] ಕರಣ ಮರಣ ತಪ್ಪದಿದೆಂತೋ! ಇವನೆಲ್ಲವನತಿಗಳೆದು, ನಿಜಲಿಂಗಾರ್ಚನೆಯ ತೋರಿ, ನಿಜೈಕ್ಯದೊಳಗಿರಿಸಿದಾತ ಬಸವಣ್ಣ ಕಾಣಾ ಕಲಿದೇವಯ್ಯ. ೮೭೫-೧೪೫೪-19-139.

ಬಸವರಾಜದೇವರು ಮಡಿವಾಳ ತಂದೆಗಳ ಸ್ತೋತ್ರವ ಮಾಡುವ ವಚನ:

ಎನ್ನ ಕಾಯದ ಕರಸ್ಥಲದಲ್ಲಿ ಪ್ರಭುದೇವರ ಕಂಡೆನು. ಎನ್ನ ಪ್ರಾಣದ ಕರಸ್ಥಲದಲ್ಲಿ ಚೆನ್ನಬಸವಣ್ಣನ ಕಂಡೆನು. ಎನ್ನ ಸರ್ವಾಂಗದ ಕುಲಸ್ಥಲದಲ್ಲಿ ಮಡಿವಾಳನ ಕಂಡೆನು. ಸಂಗನೋ ಮಡಿವಾಳನೋ ಎಂದು ನುಡಿಯಲರಿಯೆ, ಮಡಿವಾಳನೋ ಸಂಗನೋ ಎಂದು ನುಡಿಯಲರಿಯೆ; ಎನ್ನೊಡಲ ಗುಣಂಗಳ ಕೆಡಿಸಿ ಕಡೆಯ ಕಾಣಿಸಿದ, ಎನ್ನನುಳುಹಿದ—ಪರಮಯೋಗಿ, ಕೂಡಲಸಂಗಮದೇವ, ಮಡಿವಾಳ ಮಾಚಯ್ಯನ ಪಾದಕ್ಕೆ ನಮೋ ನಮೋ ಎನುತ್ತಿದ್ದೆನು. ೮೭೬-೧೪೫೫-19-140. ಮತ್ತಂ:

ಆಚಾರದನುವನಂಗದಲ್ಲಿ ನೆಲೆಗೊಳಿಸಿ ತೋರಿದ, ಅನುಭಾವದನುವ ಪ್ರಾಣದಲ್ಲಿ ನೆಲೆಗೊಳಿಸಿ ತೋರಿದ, ಮಹಾಜ್ಞಾನದನುವ ಸರ್ವಾಂಗದಲ್ಲಿ ನೆಲೆಗೊಳಿಸಿ ತೋರಿದ. ಇಂತೀ ತ್ರಿವಿಧಸ್ಥಲದ ನಿರ್ಣಯವನೆನಗೆ ಅರುಹಿದ ಕಾರಣ, ಕೂಡಲಸಂಗಯ್ಯ, ಮಡಿವಾಳ ಮಾಚಯ್ಯನ ಶ್ರೀ ಪಾದಕ್ಕೆ ನಮೋ ನಮೋ ಎನುತಿದ್ದೆನು. ೮೭೭-೧೪೫೬-19-141.

---

[1] (ಶಿ) ಉಸರನಾಲಿಸಿ (ಹಗೂ). [2] (ಗೂಶಿ) ಘನ (ಹ). [3] (ಶಿಹ) ಭಾವದಲ್ಲಿ (ಗೂ). [4] ಆಧಾರ ಮಂಟಪ (ಗೂ) (ಹ) ದಾರ ಮಂಟಪ (ಶಿ). [5] (ಹಗೂ) ದಾರಾ ಮಂಟಪ (ಶಿ) [6] (ಹ) ಲಿಂಗಾರ್ಚಕರಾದರು (ಗೂಶಿ).

[1]ಇಲ್ಲಿ ಹಡಪದಪ್ಪಣ್ಣಗಳು ಪ್ರಭುದೇವರ ಸ್ತುತಿಸುವ ವಚನ[1]

ಅನಿಮಿಷನಾದ ನಿಬ್ಬೆಱಗಿನ ಲಿಂಗೈಕ್ಯ ಭಾವವನೆಯ್ದಿ, ಜ್ಞಾನವೆ ಪರಮಾಶ್ರಯವಾಗಿಪ್ಪ ಲಿಂಗೈಕ್ಯನು. ಮಹವನೊಳಕೊಂಡ ಮಹಿಮಲಿಂಗೈಕ್ಯನು. ಬಸವಪ್ರಿಯ ಕೂಡಲಚೆನ್ನಸಂಗಯ್ಯ, ನಿಮ್ಮ ಶರಣ ಪ್ರಭುದೇವರಿಗೆ ನಮೋ ನಮೋ ಎನುತಿರ್ದೆನು. ೮೭೮-೧೪೫೭-19-142.

ನಿರಾಕಾರದ ಶಕ್ತಿಯಲ್ಲಿ ನಿರಾಳವೆಂಬಾತನು ನಿಶ್ಶೂನ್ಯವೆಂಬ ಸಿಂಹಾಸನದ ಮೇಲೆ ಘನವಾಗಿ ತೊಳಗಿ ಬೆಳಗುತ್ತಿದ್ದನು. ದೆಸೆಯಲ್ಲಾ ಮುಖವಾಗಿ, ಮುಖವೆಲ್ಲಾ ಜಗವಾಗಿ, ಅಖಂಡ ಪರಿಪೂರ್ಣ ಪರಬ್ರಹ್ಮ ತಾನಾದನು. ಈ ಮಹಿಮನ ನೆನೆದರೆ ಮನೋಮುಕ್ತಿ, ಕಂಡರೆ ರೂಪಮುಕ್ತಿ, ನುಡಿಸಿದರೆ ಶಬ್ದಮುಕ್ತಿ, ಸಂಗವ ಮಾಡಿದರೆ ಸರ್ವಾಂಗಲಿಂಗೈಕ್ಯ. ಬಸವಪ್ರಿಯ, ಕೂಡಲಚೆನ್ನಸಂಗಯ್ಯ, ನಿಮ್ಮ ಪ್ರಭುವಿನ ಶ್ರೀಪಾದಕ್ಕೆ ಶರಣೆಂದು ಬದುಕಿದೆನು. ೮೭೯-೧೪೫೮-19-143.

ನಾಗಾಯಕ್ಕಗಳ ಸ್ತೋತ್ರ:

ಎನ್ನ ಭವದ ಬಳ್ಳಿಯ ಬೇರು ಹಱಿಯಿತಯ್ಯ, ಬಸವಣ್ಣನ ಒಕ್ಕುದ ಕೊಂಡೆನಾಗಿ. [2]ಎನ್ನ ಮನದ ಕಾಯಕ[2] ಹಿಂಗಿತಯ್ಯ, ಚೆನ್ನಬಸವಣ್ಣನ ಕರುಣವ ಹಡೆದೆನಾಗಿ. ಎನ್ನ ಅಂತರಂಗದ ಸಂದು-ಸಂಶಯ ತೊಲಗಿದವಿಂದು, ಬಸವಣ್ಣ ಪ್ರಿಯ ಚೆನ್ನಸಂಗಯ್ಯ, ಎನ್ನ ಪರಮಗುರು ಪ್ರಭುವಿನ ಶ್ರೀಪಾದವ ಕಂಡೆನಾಗಿ. ೮೮೦-೧೪೫೯-19-144.

ಅಱಿಯದೆ ಮಱಹಿಂದ ಭವದಲ್ಲಿ ಬಂದೆನಲ್ಲಾ! ಇನ್ನು ಆಱಿದ ಬಳಿಕ ಬಳಲಲುಂಟೆ? ಹೃದಯಕಮಲಮಧ್ಯದಲ್ಲಿ ನಿಜವು ನೆಲೆಗೊಂಡ ಬಳಿಕ, ಪುಣ್ಯ ಪಾಪವೆಂಬಿವಕ್ಕೆ ಹೊಱಗಾದೆನು. ಭುವನ ಹದಿನಾಲ್ಕಱೊಳಗೆ ಪರಿಪೂರ್ಣ ನಿರಂಜನ ಜ್ಯೋತಿಯಾಗಿ ಬೆಳಗುವ ಪ್ರಭುವ ಕಂಡು ಬದುಕಿದೆನು ಕಾಣಾ ಬಸವಣ್ಣಪ್ರಿಯ ಚೆನ್ನಸಂಗಯ್ಯ. ೮೮೧-೧೪೬೦-19-145.

ಸೊಡ್ಡಳ ಬಾಚರಸರ ಸ್ತೋತ್ರ:

ಬಱನಲ್ಲಿ ಅಱಲುಗೊಂಡವಂಗೆ ಅಮೃತ ಸಿಕ್ಕಿದಂತೆ, ಜರಾಮರಣದುಃಖಿ [3]ಮಱುಜೆವಣಿಗೆಯ[3] ಕಂಡಂತೆ, ಭವದ ಬಾಗಿಲ ಹೊಗದೆ ಬದುಕಿದೆನಯ್ಯ. ನಿತ್ಯನ ಕಂಡು, ಒಳಗೆ ಬೆಳಗುವ ಪ್ರಕಾಶ ಹೊಱಗೆ ಮೂರುತಿಗೊಂಡಂತೆ ಕಂಗೆ ಮಂಗಳವಾಯಿತ್ತಯ್ಯ. ಮಹಾಘನದಲ್ಲಿ ಸಾಕಾರಸೊಡ್ಡಳನ ಶರಣ ಪ್ರಭುವಿನ ನಿಲವಿಂಗೆ ನಮೋ ನಮೋ ಎನುತ್ತಿದ್ದೆನು. ೮೮೨-೧೪೬೧-19-146.

ಮನದ [4]ಸಂಚ[4]ದೋವರಿಯೊಳಗೆ ಮಿಂಚಿನ ಗೊಂಚಲು ಬಳ್ಳಿವರಿಯಿತ್ತಯ್ಯ. ಎನ್ನ

---

[1] (ಪ) ಹಡಪದಪ್ಪಣಗಳ ಸ್ತೋತ್ರ (ಶಿ). [2] (ಶಿ) ಎನ್ನ ಮನದ ಕಪಟ (ಗೂ) ಎನ್ನ ಕಾಯದ ಕರ್ಮ (ಹ). [3] (ಪ) ಮಱು ಜವಣೆಯ (ಶಿ) ಮಱು ಜೀವಣೆಯ (ಗೂ) ಮರುಜವಣೆಯ (ಹ). [4] (ಗೂಶಿ) ಸಂಚಲ (ಹ).

ಕಾಯದ ಕಂಗಳೊಳಗೆ ನಿರುಪಮಸುಖ ಸಾಧ್ಯವಾಯಿತ್ತು. ಬಯಸುವ ಬಯಕೆ ಕೈಸಾರಿತ್ತು. ಅಱಿಸುವ ಅಱಿಕೆ [1]ಬಂದಿತ್ತು[1] ಆಹಾ, ಕರತಳಾಮಳಕವಾಯಿತಲ್ಲಾ! ಸತ್ಯಶರಣರ ದರುಶನವೇನ ಮಾಡದೋ?! ಮಹಾದಾನಿ ಸೊಡ್ಡಳನ ಶರಣ ಪ್ರಭುದೇವರ ಪಾದವ ಕಂಡು ಬದುಕಿದೆನಯ್ಯ! ೮೮೩-೧೪೬೨-19-147.

ಕಕ್ಕಯ್ಯಗಳ ಸ್ತುತಿ :

[2]ಕಷ್ಟ[2]ಕುಲದಲ್ಲಿ ಹುಟ್ಟಿದ ಕರ್ಮವ ಕಳೆದು, ಮುಟ್ಟಿ ಪಾವನವ ಮಾಡಿ, ಕೊಟ್ಟನಯ್ಯ ಎನ್ನ ಕರಸ್ಥಳಕ್ಕೆ ಲಿಂಗವ. ಆ ಲಿಂಗ ಬಂದು ಸೋಂಕಲೊಡನೆ ಎನ್ನ ಸರ್ವಾಂಗದ ಅವಲೋಹವಳಿಯಿತ್ತಯ್ಯ. ಎನ್ನ ತನುವಿನಲ್ಲಿ ಗುರುವ ನೆಲೆಗೊಳಿಸಿದ. ಎನ್ನ ಮನದಲ್ಲಿ ಜಂಗಮವ ನೆಲೆಗೊಳಿಸಿದ. ಎನ್ನ ಅಱುವಿನಲ್ಲಿ ಪ್ರಸಾದವ ನೆಲೆಗೊಳಿಸಿದ. ಇಂತು ತ್ರಿವಿಧಸ್ಥಾನಶುದ್ಧವ ಮಾಡಿದ ಬಸವಣ್ಣನ ಕರುಣದಿಂದ ಪ್ರಭುವಿನ ಶ್ರೀಪಾದವ ಕಂಡು ಬದುಕಿದೆನು ಕಾಣಾ ಅಭಿನವ ಮಲ್ಲಿಕಾರ್ಜುನ. ೮೮೪-೧೪೬೩-19-150. ಮತ್ತಂ :

ಆಶೆಯಾಮಿಷವಳಿದು, ಹುಸಿ-ವಿಷಂಗಳೆಲ್ಲಾ ಹಿಂಗಿ, ಸಂಶಯಸಂಬಂಧ [3]ವಿಸಂಬಂಧ[3]ವಾಯಿತ್ತು ನೋಡಾ. ಎನ್ನ ಮನದೊಳಗೆ ಘನಪರಿಣಾಮವ, ಕಂಡು ಮನ ಮಗ್ನವಾಯಿತ್ತಯ್ಯ. ಅಭಿನವ ಮಲ್ಲಿಕಾರ್ಜುನ, ನಿಮ್ಮ ಶರಣ ಪ್ರಭುದೇವರ ಕರುಣದಿಂದ ಬದುಕಿದೆನು. ೮೮೫-೧೪೬೪-19-151.

ಮೋಳಿಗೆಯ ಮಾರತಂದೆಗಳ ಸ್ತುತಿ :

[4]ಬಡವರ[4] ನಿಧಾನ-ಕಡವರ ಕೈಸಾರಿತ್ತಯ್ಯ, ಕಾಣಾಬಾರದ ಬಯಲು ರೂಪಗೊಂಡಿತ್ತಯ್ಯ, ನಿರಾಳ ನಿರ್ಣಯದ ಮೇಲೆ ನಿಂದಿತ್ತು! ಎನ್ನ ಭಾವದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪ ಪ್ರಭುದೇವರ ಕಂಡು ಬದುಕಿದೆನು ಕಾಣಾ ನಿಃಕಳಂಕ ಮಲ್ಲಿಕಾರ್ಜುನ. ೮೮೬-೧೪೬೫-? ಮತ್ತಂ :

ನೆನಹಿನ ನಿಧಿಯ ನೋಡಾ! ಎನ್ನನುವಿನ ಘನವ ನೋಡಾ! ಆಹಾ ಎನ್ನ ಪುಣ್ಯವೇ, ಆಹಾ ಎನ್ನ ಕಂಗಳ ಮನೆಯ ಮಾಡಿಕೊಂಡಿಪ್ಪ ನಿತ್ಯ ಬೆಳಗೇ; ಎನ್ನ ಧ್ಯಾನದೊಳಗಣ ದೃಢವೇ, ಎನ್ನ ಸುಖದೊಳಗಣ ಸುಗ್ಗಿಯೇ; ನಿಃಕಳಂಕ ಮಲ್ಲಿಕಾರ್ಜುನ, ನಿಮ್ಮ ಶರಣ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂಬೆನು. ೮೮೭-೧೪೬೬-19-153.

ಏಕಾಂತರಾಮತಂದೆಗಳ ಸ್ತುತಿ :

ಲೋಕಾಂತವಳಿದು, ಏಕಾಂತ ಉಳಿದಲ್ಲಿ; ಏಕ್ಯೈಕ ಮೂರ್ತಿಯ ಸಂಗ ಸಮನಿಸಿತ್ತೆನಗೆ. ಎನ್ನನುಡಿ ಆತನ ಕಿವಿಗಿನಿದಾಯಿತ್ತು, ಆತನ ನುಡಿ ಎನ್ನ ಕಿವಿಗಿನಿದಾಯಿತ್ತು; ಇಬ್ಬರ ನುಡಿಯು ಒಂದೆಯಾಗಿ ನಿಶ್ಶಬ್ದ ವೇಧಿಸಿತ್ತು. ಈ ಸುಖದ ಸೋಂಕಿನ ಪುಣ್ಯದ

---

[1] (ಹ) ನಿಂದಿತ್ತು (ಶಿ). [2] ಕನಿಷ್ಠ (ಶಿ). [3] (ಹಶಿ) × (ಗೂ). [4] (ಶಿಹ) ಬಡವಂಗೆ (ಗೂ).

ಫಲದಿಂದ ಅನುಪಮಚರಿತ್ರ ಅಲ್ಲಮಪ್ರಭುದೇವರ ನಿಲವ ಕಂಡು ನಾನು ಧನ್ಯನಾದೆನು ಕಾಣಾ ಏಕಾಂತ ವೀರಸೊಡ್ಡಳ. ೮೮೮-೧೪೬೭-19-154.

ಕೂರ್ಮನ ಶಿಶುವಿನ ಸ್ನೇಹದಂತಿಪ್ಪ ದೇವನೆನಗಿಂದು ಪ್ರತ್ಯಕ್ಷ ಕಣ್ಣ ಮುಂದೆ ಗೋಚರವಾದ ನೋಡ! ಎನ್ನಂತರಂಗದಲ್ಲಿ ಹೂಣೆಹೊಕ್ಕು, ವಿನಯ ಸದ್ಗೋಷ್ಠಿಯ ಮಾಡುವ [1]ನಿಷ್ಕಳ[1] ಚೈತನ್ಯನು ಸಕಲರೂಪಸನ್ನಿಹಿತನಾದ ನೋಡಾ. ಬಟ್ಟ ಬಯಲು ಗಟ್ಟಿಗೊಂಡಂತೆ, ಏಕಾಂತ ವೀರಸೊಡ್ಡಳ, ನಿಮ್ಮ ಶರಣ ಪ್ರಭುದೇವರ ನಿಲವು. ೮೮೯-೧೪೬೮-19-155.

ಶಂಕರದಾಸಿಮಯ್ಯಗಳ ವಚನ:

ಹರನಿರೂಪದಿಂದ ಧರೆಗೆ ಬಸವಣ್ಣನವತರಿಸಿದ ಕಾರಣ, ಶಿವಾಚಾರ ಸದಾಚಾರ ವೆಂಬುದು ಧರೆಗೆ ವಿಖ್ಯಾತವಾಯಿತ್ತು. ಶಿವಗಣ-ಪ್ರಮಥಗಣಂಗಳೆಂಬ ಮಹಾಮಹಿಮರ ಸುಳುಹು ಧರೆಯ ಮೇಲೆ ಕಾಣಬಂದಿತ್ತು ನೋಡಯ್ಯ. ಪರುಷವ ಸಾಧಿಸಿದಂತಾಯಿತ್ತು ನಿಮ್ಮ ಶರಣರ ಸಂಗದಿಂದ. ಎನ್ನ ನಂದಿಯ ಮೊಗವಾಡ ನೊಸಲ ಕಣ್ಣೆಂಬ ಅಹಂಕಾರವ ಮುಂದುಗೊಂಡಿದ್ದೆನಯ್ಯ. ಎನ್ನ ಮದ ಉಡುಗಿ, ಸಂಗನ ಬಸವಣ್ಣನ ಕರುಣದಿಂದ ಪ್ರಭುವೆಂಬ ನಿರಾಳವ ಕಂಡು ಬದುಕಿದೆನು ಕಾಣಾ ನಿಜಗುರುಶಂಕರದೇವ. ೮೯೦-೧೪೬೯-19-156. ಮತ್ತಂ:

ಕಾಯದ ಮದವಳಿದಲ್ಲದೆ ಮಾಯಾವಿಕಾರವಳಿಯದು. ಮಾಯಾವಿಕಾರ ಹಿಂಗಿದಲ್ಲದೆ ಭವನಾಶವಾಗದು. ಭವನಾಶವಾದಲ್ಲದೆ ಲಿಂಗಸಂಬಂಧವಳವಡದು. ಲಿಂಗಸಂಬಂಧವಳವಟ್ಟಲ್ಲದೆ ಸುಖವು ಸಾಧ್ಯವಾಗದು. ಅನುಪಮ ಸುಖ ಪರಿಣಾಮಕ್ಕೆ ಮಹಾನುಭಾವಿಗಳ ಸಂಗದಲಲ್ಲದೆ ವಿಶ್ರಾಮವಿಲ್ಲ. ಇಂತಪ್ಪ ಮಹಾನುಭಾವದ ಮೂರ್ತಿ ಸಂಗನ ಬಸವಣ್ಣನ ಕೃಪೆಯಿಂದಲೆನಗೆ ನಿಜವು ಕಾಣಬಂದಿತ್ತು. ಇದು ಕಾರಣ, ನಿಜ ಗುರುಶಂಕರದೇವರ ಶರಣ ಪ್ರಭುದೇವರ ಶ್ರೀಪಾದವ ಕಂಡು ನಿಶ್ಚಿಂತನಾದೆನಯ್ಯ. ೮೯೧-೧೪೭೦-19-157.

ಅಲ್ಲಿ ಮೇದರ ಕೇತಯ್ಯಗಳ ವಚನ:

ಎನ್ನ ಕಾಯದ ಕಳವಳವ ನಿಲಿಸಿ ಗುರುಲಿಂಗವ ತೋಱಿದ, ಎನ್ನ ಮನದ ವ್ಯಾಕುಳವ ನಿಲಿಸಿ ಜಂಗಮಲಿಂಗವ ತೋಱಿದ. ಇಂತು ಅಂತರಂಗ-ಬಹಿರಂಗದಲ್ಲಿ ತಾನೆಯಾಗಿ ಎನ್ನ ಪಾವನವ ಮಾಡಿದನು. ಅಮರಗಣಂಗಳು ಮುಳಿದು ಎನ್ನ ಕೈಲಾಸ ಕೊಯ್ದರೆ, ಸದ್ಯೋಮುಕ್ತಿಯ ತೋಱಲೆಂದು ಮರ್ತ್ಯಕ್ಕೆ ಮರಳಿ ತಂದ ಸಂಗನ ಬಸವಣ್ಣನೆ ಗುರುವೆನಗೆ, ಸಂಗನ ಬಸವಣ್ಣನೆ ಪರವೆನಗೆ. ಸಂಗನ ಬಸವಣ್ಣನ ಕರುಣ ದಿಂದ ಘನಕ್ಕೆ ಘನಮಹಿಮ ಅಲ್ಲಮಪ್ರಭುವಿನ ಶ್ರೀ ಪಾದವ ಕಂಡು ಬದುಕಿದೆನು ಕಾಣಾ [2]ಗವಱೇಶ್ವರ[2]ಲಿಂಗ. ೮೯೨-೧೪೭೧-19-158. ಮತ್ತಂ:

---

[1] (ಶಿ) ನಿಷ್ಕಳಂಕ (ಹ) (ಗೂ). [2] (ಶಿ) (ಗೂ R. ಅ) ಗವರೇಶ್ವರ (ಹ) (ಗೂ R. ಆ ಇ ಈ) ಗೌರೇಶ್ವರ (ಗೂ).

ಪ್ರಾಣಸ್ಥಲದಲ್ಲಿ ಆಪ್ಯಾಯನವಾಯಿತ್ತು. ಲಿಂಗ-ಜಂಗಮ-ತನುಸ್ಥಲದಲ್ಲಿ ಆಪ್ಯಾಯನವಾಯಿತ್ತು. ಆಚಾರಲಿಂಗಸ್ಥಲ-ಗುರುಲಿಂಗಸ್ಥಲ— ಈ ಉಭಯಸ್ಥಲವಾಗಿ ತಾನೆಂದೆ ತೋಱುತ್ತಿದ್ದುದು. ಆ ತೋಱುವ ತೋಱಿಕೆಯೆ ಬಸವಣ್ಣನೆಸಗೆ. ಆ ಬಸವಣ್ಣನ ಕರುಣದಿಂದ ಪ್ರಭುದೇವರ ಶ್ರೀಪಾದವ ಕಂಡು ಬದುಕಿದೆನು ಕಾಣ [1]ಗವಱೇಶ್ವರ[1]ಲಿಂಗ. ೮೯೩-೧೪೭೨-19-159.

ಘಟ್ಟಿವಾಳ ಮುದ್ದಣ್ಣಗಳ ವಚನ :

ನೀರೊಳಗೆ ಕಿಚ್ಚಿದ್ದು ನೆಳಲ ಸುಟ್ಟಿತ್ತು. ನೆಳಲ ಸುಟ್ಟ ವಿಭೂತಿಯನಿಟ್ಟುಕೊಂಡರೆ ಭೂಮಿ ಸತ್ತಿತ್ತು. ಆಕಾಶ ಹೊತ್ತಿತ್ತು, ದೇಪನ ದೇವತ್ವ ಕೆಟ್ಟಿತ್ತು. ದೇವಿಯ ಒಕ್ಕತನ ಮುಱಿಯಿತ್ತು. ಹೇಳಬಾರದ ಠಾವಿನಲ್ಲಿ ಕಾಣಬಾರದ ಲಿಂಗ ಮೂರ್ತಿಗೊಂಡರೆ, ನೋಡಬಾರದ ಪೂಜೆಯಾಯಿತ್ತು, ಚಿಕ್ಕಯ್ಯಪ್ರಿಯಸಿದ್ಧಲಿಂಗ ಪ್ರಭುದೇವರ ನಿಲವ ಕಂಡು ಇಲ್ಲ ಇಲ್ಲವೆನುತ್ತಿದ್ದೆನು. ೮೯೪-೧೪೭೩-15-54.

ಯೋಗದ ಹೊಲಬ ಸಾಧಿಸಬಾರದು : ಯೋಗನೆಂಟರ ಹೊಲಬಲ್ಲ, ಯೋಗ ಒಂಬತ್ತಱ ನಿಲವಲ್ಲ, ಯೋಗವಾಱಱ ಪರಿಯಲ್ಲ. ಧರೆಯ ಮೇಗಣ ಅಗ್ನಿ ಮುಗಿಲ ಮುಟ್ಟದೆ ಇಪ್ಪರೆ ಯೋಗ. [2]ಜ್ಞಾನ[ದ] ಕಂಗಳ ಬೆಳಗು ಶಶಿಯ[2] ಮುಟ್ಟಿದವೆಂದಡೆ ಘನಮನವನೊಳಕೊಂಡುದೆ ಯೋಗ. ವನಿತೆಯರಱುವರನು ಪತಿಯೊಮ್ಮೆ ಕೂಡಿ ಛಲವಳಿದು ಇರಬಲ್ಲಡದು ಯೋಗ. ಘನಮಹಿಮ ಪ್ರಭುವಿನ ಸಮರಸಯೋಗವ ಕಂಡು ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲವೆಂದೆನು. ೮೯೫-೧೪೭೪-15-55.

---

[1] (ಶ್ರೀ) (ಗೂ R. ಆ) ಗವರೇಶ್ವರ (ಹ) (ಗೂ R. ಅ ಇ ಈ) ಗೌರೇಶ್ವರ (ಗೂ) [2] ಜ್ಞಾನ ಕಂಗಳ ಶಶಿಯ (ಶಿ) ಜ್ಞಾನದ ಕಂಗಳ ಬೆಳಗು ಶಶಿಯ (ಗೂ) ಜ್ಞಾನದ ಕಂಗಳ ಬೆಳಗು ಸಸಿಯ (ಹ).

ಇಂತು ಎಲ್ಲಾ ಅಸಂಖ್ಯಾತರೂ ಪ್ರಭುದೇವರ ಸ್ತೋತ್ರಮಂ ಮಾಡುತ್ತಿರಲು, ಆ ಪ್ರಸ್ತಾವರೊಳು ಆ ಪ್ರಭುದೇವರು—ಬಸವರಾಜದೇವರು, ಮಡಿವಾಳಮಾಚಿತಂದೆಗಳು ಮೊದಲಾದ ಸಮಸ್ತ ಅಸಂಖ್ಯಾತರಿಗೆ ತಮ್ಮ ಅವತಾರದ ಅವಸಾನಮಂ ನಿರೂಪಿಸುವ ಪ್ರಸ್ತಾವ:

ಅನುವನಱಿಯದೆ, ಆದಿಯ ವಿಚಾರಿಸದೆ, ಅನಾದಿಯಲ್ಲಿ ತಾನಾರೆಂಬುದ ನೋಡದೆ ಮಾಡಿ [1]ಫಲವೇನು[1] ? ನಿಶ್ಯಬ್ದಂ ಬ್ರಹ್ಮ ಉಚ್ಯತೇ ಎಂಬ ಘನವು ಹೊಗಳತೆಗೆ ಸಿಕ್ಕುವುದೆ, ಎಲೆ ಮರುಳುಗಳಿರಾ ? ಆದಿಯಲ್ಲಿ ಬಸವಣ್ಣನು ಏಳು ನೂಱಿಪ್ಪತ್ತಮರಗಣಂಗಳು ಸಹಿತ ಶಿವನಾಣತಿಯಿಂದ ಮರ್ತ್ಯಕ್ಕೆ ಬಂದನೊಂದು ಕಾರಣದಲ್ಲಿ. ಬಂದ ಮಣಿಹ ಪೂರೈಸಿತ್ತು—ಸಂದ ಪುರಾತರೆಲ್ಲರೂ ಕೇಳಿ—ಇಂತು ನೀವೆಲ್ಲರೂ ನಿಮ್ಮ ನೀವು ತಿಳಿದುನೋಡಿ ನಿಜವನೆಯ್ದುವುದು. ಇನ್ನು ನಮ್ಮ ಗೊಗೇಶ್ವರಲಿಂಗಕ್ಕೆ ಸುರಾಳದ ಸುಳುಹಿಲ್ಲ. ೮೯೬-೧೪೭೫-20-1. ಮತ್ತಂ:

ಸಾವನ್ನಕ್ಕರ ಸರವ ಮಾಡಿದರೆ ಇನ್ನು ಕಾದುವ ದಿನವಾವುದು ? ಬಾಳುವನ್ನಕ್ಕರ ಭಜಿಸುತ್ತಿದ್ದರೆ ತಾನಹ ದಿನವಾವುದು ? ಅರ್ಥವುಳ್ಳನ್ನಕ್ಕರ ಅಱಿವುತ್ತಿದ್ದರೆ ನಿಜವನೆಯ್ದುವ ದಿನವಾವುದು ? ಕಾರ್ಯಕ್ಕೆ ಬಂದು, ಆ ಕಾರ್ಯ ಕೈಸಾರಿದ ಬಳಿಕ, ಇನ್ನು ಮರ್ತ್ಯಲೋಕದ ಹಂಗೇಕೆ ? ತನಿರಸ ತುಂಬಿದ ಅಮೃತಫಲ ಒಮ್ಮಿಂಗೆ ತೊಟ್ಟು ಬಿಡುವುದು—ನೋಡಿರೇ ದೃಷ್ಟಾಂತವ ! ಬಸವಣ್ಣ ಚೆನ್ನಬಸವಣ್ಣ ಮೊದಲಾದ ಪ್ರಮಥರು ಗೊಗೇಶ್ವರಲಿಂಗದಲ್ಲಿ ನಿಜವನೆಯ್ದಿ ನಿಶ್ಚಿಂತರಾಗಿರಯ್ಯ. ೮೯೭-೧೪೭೬-20-2.

ಇದಕ್ಕೆ ಬಸವರಾಜದೇವರ ಬಿನ್ನಹ:

ದೇವದೇವ, ಮಹಾಪ್ರಸಾದ. ಅವಧರಿಸು ದೇವ, ಎನ್ನ ಬಿನ್ನಪವ: ಕಾಯದ ಮಾಯದ ಸಡಗರದಲ್ಲಿ ಹುಟ್ಟಿಸಿದಿರಿ ಎನ್ನ, ಅದು ನಿಮ್ಮ ಲೀಲಾವಿನೋದ. ಪರವಾದಿ ಒರೆಗಲ್ಲಾಪಲ್ಲಿ ಮೂನ್ನೂಱಱುವತ್ತು ಸತ್ತ ಪ್ರಾಣವನೆತ್ತಿ ಮೂವತ್ತಾಱು ಕೊಂಡೆಯವ ಪರಿಹರಿಸಿ, ಎಂಬತ್ತೆಂಟು ಪವಾಡವ ಮೆಱಿದಿರಿ, ಅದು ನಿಮ್ಮ ಲೀಲಾವಿನೋದ. ಎನ್ನ ಮನದ ಮಲಿನವ ತೊಳೆಯಲೆಂದು ಬಂದು, ಶೂನ್ಯಸಿಂಹಾಸನದ ಮೇಲೆ ಮೂರ್ತಿಗೊಂಡು, ನಿಮ್ಮ ನಿಜಮಹಿಮೆಯನೆಲ್ಲಾ ಪ್ರಮಥರ ಮುಂದೆ ತೋಱಿ, ಎನ್ನ ಪಾವನವ ಮಾಡಿ, ಷಡುಸ್ಥಲಮಂ ಎನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ—ಎನ್ನ ನಿಮ್ಮಂತೆ

---

[1] (ಶಿ) ನಿಜವ ತಿಳಿಯದೆ ಬರಿದೆ ಮಾಡಿ ನೀಡಿ ಫಲವೇನು (ಹ) ಸ್ತೋತ್ರವ ಮಾಡಿ ಫಲವೇನು (ಗೂ).

ಮಾಡಿದಿರಿ, ಅದು ನಿಮ್ಮ ಲೀಲಾವಿನೋದ. ಕೂಡಲಸಂಗಮದೇವ, ಎನ್ನ ಮರ್ಮದ ಸಕೀಲವ ನೀ ಬಲ್ಲೆಯಾಗಿ ಎನಗೊಮ್ಮೆ ತಿಳುಹಿಕೊಟ್ಟು ಎನ್ನನುಳುಹಿಕೊಳ್ಳಾ ಪ್ರಭುವೆ. ೮೯೮-೧೪೭೭-20-3.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ :

ಕಾಯದೊಳಗೆ ಕಾಯವಾಗಿ ಭಾವದೊಳಗೆ ಭಾವವಾಗಿ, ಅಱಿವಿನೊಳಗೆ ಅಱಿವಿನ ತಿರುಳಾಗಿ, ಮಱಹು ಮಾರಡೆಯಿಲ್ಲದೆ ನಿಜಪದವು ಸಾಧ್ಯವಾದ ಬಳಿಕ, ಆವುದು ಮರ್ಮ, ಆವುದು ಕರ್ಮ ; ಆವುದು ಬೋಧೆ, ಆವುದು ಸಂಬಂಧ ! ಹೇಳಲಿಲ್ಲ, ಕೇಳಲಿಲ್ಲ. ಅದೇನು ಕಾರಣವೆಂದರೆ—ಬೆಸಗೊಂಬರೆ ತೆಱಹಿಲ್ಲವಾಗಿ. ಗೊಗೇಶ್ವರಲಿಂಗದಲ್ಲಿ ತೆಱೆ[3]-ಮಱೆ[3]ಯಾವುದು ಹೇಳಯ್ಯ ಸಂಗನ ಬಸವಣ್ಣ ? ೮೯೯-೧೪೭೮-20-4.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ :

ಶಾಂತಿಯ ಮಾಡಹೋದರೆ ಬೇತಾಳವಾಯಿತ್ತಯ್ಯ ! [1]ಸಿತಾಳ[1]ದಾಪ್ಯಾಯನವಾಯಿತ್ತೆಂದರೆ—ಪರಹಿತಾರ್ಥವಾಗಬೇಕೆಂದು ತೋಱಿದೆನೆನ್ನ ಲಿಂಗವನು. ನೇಮವ ಮಾಡಲೆಂದು ಕೊಟ್ಟರೆ ಕೊಂಡೋಡಿ ಹೋದವರುಂಟೆ ! [2]ಅನಿಮಿಷನು ಮೈಮಱೆ[3]ದು ಕುಳ್ಳಿದ್ದರೆ, ನಾನು ಅಭವನ ಮಹಾಮನೆಯ ಹೊಕ್ಕಡೆ, ಎನಗೆ-ಹೇಶ್ವತ [?]ವನೊಡ್ಡಿ[2] ಅಱಸೆಂದು ಕಳುಹಿದನು ಸ್ವತಂತ್ರನು. ಅಳಲಿ-ಬಳಲಿ ಆಡಿ-ಹಾಡಿ ಅನಂತ ಅವಸ್ಥೆಯಿಂದ ಲಕ್ಷದ ಮೇಲೆ ತೊಂಬತ್ತಾಱು ಸಾವಿರ ವಚನವ ಮಾಡಿ, ಆಚಾರ-ವಿಚಾರದಿಂದ ವಿಚಿತ್ರವನಭಯವ ಕೊಟ್ಟು ಕಳುಹಿದನಯ್ಯ. ಗೊಗೇಶ್ವರನ ಶರಣ ತೋಱದಡಱೆವೆನಯ್ಯ ನಮ್ಮ ಕೂಡಲಸಂಗಯ್ಯನೆಂಬ ಲಿಂಗವನು. ೯೦೦-೧೪೭೯-×

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ :

ಅಱಿವಿನೊಳಗಳ ಮಱಹು, ಮಱವಿನೊಳಗಣ ಅಱಿವು, ಅಱಿದು ಮಱೆದು ನೆನೆದರೆ ನೆಲೆಗೊಳನು, ಅಱಿವರಾರಯ್ಯ ಅಗಮ್ಯ ಲಿಂಗವನು. ಕೊಟ್ಟು ಕೊಂಡಾಡುವ ವ್ಯವಹಾರಕ್ಕೆಲ್ಲಿಯದೋ ! ನೀರಲೊದಗಿದ ಬೆಣ್ಣೆ, ಮುಗಿಲಲೊದಗಿದ [3]ಕಿಚ್ಚು[3], ಪವನ ಸಂಚದ ಶಬ್ದಕ್ಕೆ ಬಣ್ಣ ಉಂಟೆ? ಗೊಗೇಶ್ವರನೆಂಬ [4]ಲಿಂಗ[4]ನಿರಾಳದ ನಿಲವ ತೋಱಬಾರದು ಕೇಳಾ ಸಂಗನ ಬಸವಣ್ಣ. ೯೦೧-೧೪೮೦-×

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ :

ಅಱಿದೆನೆಂದಡೆ ಅಱಿವಿಂಗಸಾಧ್ಯ. ನೆನೆದೆನೆಂದಡೆ ನೆನಹಿಂಗಸಾಧ್ಯ. ಭಾವಿಸಿಹೆನೆಂದಡೆ ಭಾವಕ್ಕಸಾಧ್ಯ. [5]ವಾಙ್ಮನಕ್ಕಗೋಚರ[5]ಲಿಂಗವನಱಿವ ಪರಿ ಎಂತಯ್ಯ, ಗುರು ತೋಱದನ್ನಕ್ಕರ? ಗುರುಶಿಷ್ಯರ ಮಥನದಲ್ಲಿ ಸ್ವಯಂಜ್ಯೋತಿ ಲಿಂಗ ಉದಯವಪ್ಪುದೆಂಬ ಶ್ರುತಿ ಹುಸಿಯೆ? ಕೂಡಲಸಂಗಮದೇವ, ನಿಮ್ಮ ಮಹಾನುಭಾವಮಥನದಿಂದ ಎನ್ನಲ್ಲಿ ನಿಜವ ನೆಲೆಗೊಳಿಸಾ—ಪ್ರಭುವೆ. ೯೦೨-೧೪೮೧-20-5.

---

[1] (ಶಿ) ಶೀತಾಳ (ಹ). [2] (ಹ) ಅನಿಮಿಷನ ಮಹ ಮನೆಯ ಹೊಕ್ಕಡೆಯೆನಗೆ ಹೆಪ್ಪತವ ನೊಡ್ಡಿ (ಶಿ). [3] (ಶಿ) ಮಿಂಚು (ಹ). [4] (ಶಿ)×(ಹ). [5] (ಗೂ)ಅವಾಙ್ಮನಸಗೋಚರ (ಹ). ಅವಾಙ್ಮನಸಕ್ಕಗೋಸ್ಕರ (ಶಿ)

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

ಮಥನದ ಲೀಲೆಯಲಿ ಹುಟ್ಟುವುದೇ ಬ್ರಹ್ಮವು? ಶ್ರುತಿ-ಸ್ಮೃತಿಗಳಿಗೆ ಅಳವಡದು ನೋಡಾ! ಪೃಥ್ವಿಯೊಳಗಿಲ್ಲದ ಅಚಳವಪ್ಪ ಲಿಂಗವನು ಸಚರಾಚರದಲ್ಲಿ [1]ಭರಿತವೆಂತೆಂಬೆ?[1] ಇಲ್ಲದ ಲಿಂಗವನಲ್ಲಲ್ಲಿಗೆ ಉಂಟೆಂಬ [2]ನೀಲವಾರ್ತೆ[2]. ಗೊಗೇಶ್ವರ ಲಿಂಗವು ಸಾಧ್ಯವಾಗದು ಕಾಣಾ ಸಂಗನ ಬಸವಣ್ಣ. ೯೦೩-೧೪೬೨-20-6.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ಅನುಭಾವವಿಲ್ಲದ ಭಕ್ತಿ ಅನುವಿಂಗೆ ಬಾರದು. ಅನುಭಾವವಿಲ್ಲ[3]ದೆ[3] ಲಿಂಗ ಸಮರಸ ಸುಖಕ್ಕೆ ನಿಲುಕದು. ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೊಡದು. ಅನುಭಾವವಿಲ್ಲದೆ ಏನನೂ ಅಱಿಯಬಾರದು. ತನ್ನಲ್ಲಿ ಸನ್ನಿಹಿತ ಉಳ್ಳಡೆ ಶಿವಶರಣರ ಸಂಗವೇತಕ್ಕೆನಲುಂಟೆ? ಕೂಡಲಸಂಗಮದೇವಯ್ಯ, ನಿಮ್ಮ [4]ಅನುಭಾವವ[4] ಮಾತಿನ ಮಥನವೆಂದು ನುಡಿಯಬಹುದೇ? ೯೦೪-೧೪೬೩-20-7.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

[5]ನೆಲದತ್ತ[5] ಮುಂದಣ ಬಾಗಿಲು, ಮೂಱು ಮೊನೆಯ ಕಂಭದ ಶೂಲದಲ್ಲಿ ಒಂದು ದೇಗುಲ. ಅಲ್ಲಿ ಒಳಗಣ ಹೂವಿನ ಕಲ್ಲಿನಲ್ಲಿ ಸಿಲುಕಿತ್ತು—ನಾದಮೂರುತಿ ಲಿಂಗವಿಪ್ಪುದು. ಒಂದು ಮಾತನಾಡುವ[6]ರುಳ್ಳರೆ[6] ನುಡಿವುದು. ಗೊಗೇಶ್ವರ ಮೆಚ್ಚಲು ಬಹು ಮಾತಿನ ಮಾಲೆಯು ಅನುಭಾವಕ್ಕೆ ನಾಚುಪೆನು ಕಾಣಾ ಸಂಗನ ಬಸವಣ್ಣ. ೯೦೫-೧೪೬೪-20-8.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ಅಱಿವಿಂದಲಱಿವೆನೆಂದರೆ ಅಱಿವಿಂಗಸಾಧ್ಯ, ಅಱಿಯದೆ [7]ಅಱಿವ[7] ಪರಿ ಎಂತಯ್ಯ? ಭಾವಿಸಿ ಬೆರಸುವೆನೆಂದರೆ ಭಾವ ನಿರ್ಭಾವವೆಂದುದಾಗಿ ಮತ್ತೆ ಭಾವಿಸಿಯಲ್ಲದೆ[9] ಕಾಣಬಾರದಯ್ಯ. ವಾಙ್ಮನಕ್ಕಗೋಚರನೆಂದರೆ ನುಡಿಯಿಲ್ಲದೆ ನಡೆ ಸಾಧ್ಯವಹ ಪರಿ ಎಂತು ಹೇಳಯ್ಯ? ಹಲವು ಮಾತಿನ ನಿಲವು ಒಂದೆಂಬ ನುಡಿಯ ಗಡಣದ ನಿಜವ ಬಲ್ಲವರಾರು ಹೇಳಯ್ಯ? ನಿಮ್ಮ ಮಾತೆಂಬ ತತ್ವ [8]ಒಂದಲ್ಲದೆ[8] ಎರಡುಂಟೆ? ಕೂಡಲಸಂಗಮದೇವ, ಕಡೆಮುಟ್ಟ ನೋಡುವಡೆ ನುಡಿಗೆಡೆಯಿಲ್ಲ. ಕೃಪೆಯಿಂದ ಕರುಣವ ಮಾಡಯ್ಯ. ೯೦೬-೧೪೬೫-20-9.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

ಪ್ರಸಾದಲಿಂಗ ಉಳ್ಳನ್ನಕ್ಕರ ಪ್ರಾಣಲಿಂಗವೆಂಬ ವಾರ್ತೆ ಭಂಗ ನೋಡಾ, ಬಸವಣ್ಣ. ಬೀದಿಯಲ್ಲಿ ಕೊಡನೊಡೆದು ಬಯಲನುಡುಗಿದರೆ ಉಂಟೆ ಹೇಳಾ? ಗೊಗೇಶ್ವರಲಿಂಗವ

---

[1] (ಗೂ) ಭರಿತನೆಂಬೆ (ಶಿ) ಭರಿತನೆಂತೆಂಬೆ (ಹ). [2] (ಶಿ) ನಿಲಗವಾರ್ತೆ (ಹ) ಲಿಂಗವಾರ್ತೆ (ಗೂ). [3] (ಶಿ) (ಹ) ದ (ಗೂ). [4] (ಶಿ) (ಹ) ಅನುಭಾವ (ಗೂ). [5] (ಶಿ) ನೆಲದ (ಗೂಹ). [6] (ಹ) ರಳುಕಿ (ಗು) ರುಳ್ಳೊಡೆ (ಶಿ). [7] (ಶಿ) ಅಱುದ (ಗೂಹ). [8] (ಶಿಗೂ) ಒಂದೆಯಲ್ಲದೆ (ಹ).

ಬೇಱು ಮಾಡಿ ಅಱಿಸಲುಂಟೆ ಬಸವಣ್ಣ ?! ೯೦೭-೧೪೮೬-20-10.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ :

ಆದಿಯಲ್ಲಿ ಸಾಧ್ಯವೆಂಬೆನೆ? ಅಲ್ಲಿಂದತ್ತತ್ತ ! ಅನಾದಿಯಲ್ಲಿ ಸಾಧ್ಯವೆಂಬೆನೆ? ಅಲ್ಲಿಂದತ್ತತ್ತ ! ಸಾಧ್ಯಾಸಾಧ್ಯವೆಂಬ ಸೂತಕಶಬ್ದಕ್ಕತೀತ! ಆ ಲಿಂಗವೆ ಆಲಿಂಗನವಾಗಿ ಅವಿರಳಸಂಪನ್ನನಾದಲ್ಲಿ ಭೇದಭಾವ ಉಂಟೆಂಬೆನೆ? ಅದೇ ಭವಕ್ಕೆ ಬೀಜ! ಎನ್ನ ಪ್ರಾಣಲಿಂಗ ನಿಮ್ಮ ಪ್ರಾಣಲಿಂಗವಾಯಿತ್ತೆಂದು, ನಿಮ್ಮ ಪ್ರಾಣವೇ ಎನ್ನ ಪ್ರಾಣವಾಗಿ ನಿಮ್ಮನೇ ಬೇಡುವೆ, ಕೂಡಲ ಸಂಗಮದೇವ, ಎನ್ನ ಆದಿಲಿಂಗವ ತೋಱಾ ಪ್ರಭುವೆ! ೯೦೮-೧೪೮೭-20-11.

ಇದಕ್ಕೆ ಪ್ರಭುದೇವರ ವಚನ :

ಭಾವಿಸಿ, ದೃಷ್ಟಿನಟ್ಟು ಸ್ವೈವೆಱಗಾದುದ ಕಂಡೆ. ಕಲ್ಪಿಸಿ [1]ಮನ[1]ನಟ್ಟು ನಿಬ್ಬೆಱಗಾಯಿತ್ತಯ್ಯ ! ಗೊಗೇಶ್ವರ, ನಿಮ್ಮಲ್ಲಿ ಸರ್ವನಿರ್ವಾಣಿಯಾಗಿ ಸಂಗನ ಬಸವಣ್ಣನೆನ್ನ ಪ್ರಾಣಲಿಂಗವೆಂದಱಿದು, ಕಂಡೆ ನಿಮ್ಮ. ೯೦೯-೧೪೮೮-20-12.

ಇದಕ್ಕೆ ಚೆನ್ನಬಸವಣ್ಣನ ಬಿನ್ನಹ:

ಕೊಂಡಡಗಿದನೊಬ್ಬನು, ಕೊಟ್ಟಱಿಸಿದನೊಬ್ಬನು ! ಈರೇಳು ಭುವನದೊಳಗೆ ವೃಷಭನು ವಿಸ್ಮಯಗೊಂಡನು. ಭೂಮಿಯ ಜಲಗದೊಳೆದು ಹೇಮವನಱಸುವಂತೆ, ಅಱಸುತ್ತಿದ್ದನಯ್ಯ ಜಂಗಮದೊಳಗೆ ಲಿಂಗವನು. ಏಕೋ ನಿಷ್ಠೆಯಕಂಡರೆ AಏಕೊಂಡA ನಯ್ಯ ಶಿವನು. ಜಪಸಮಾಧಿಗಳೊಳಗೆ ಅಡಗಿದ್ದರೆ ಲಿಂಗವಾಗಿ ಬಂದಿರಿ, ಪ್ರಭುದೇವರು ನಿಮ್ಮಡಿಗಳು. ಅಸಂಖ್ಯಾತರಿಗೆ ಮಾಡಿದ ಸಯಧಾನವನೊಬ್ಬನೇ ಆಱಿಸಿ ಕೊಟ್ಟೆಂದು ಕೂಡಲ ಚೆನ್ನ ಸಂಗನಲ್ಲಿ ಲಿಂಗವೆಂದಱಿದನಯ್ಯ ನಿಮ್ಮನು ನಮ್ಮ ಸಂಗನ ಬಸವಣ್ಣನು. ೯೧೦-೧೪೮೯-X

ಇದಕ್ಕೆ ಪ್ರಭುದೇವರ ವಚನ :

ಎತ್ತೆತ್ತ ನೋಡಿದರೆ ಬಸವನೆಂಬ ಬಳ್ಳಿ. ಆ ಬಳ್ಳಿಯ ಹಿಡಿದೆತ್ತಿದರೆ ಲಿಂಗವೆಂಬ ಗೊಂಚಲು. ಆ ಲಿಂಗವೆಂಬ ಗೊಂಚಲ ಹಿಡಿ[2][ದೊ][2]ತ್ತಿದರೆ ಭಕ್ತಿ ರಸಮಯವಾಯಿತಯ್ಯ. ಇದನಾರಯ್ಯ ಅಮಳೋಕ್ಯವ ಮಾಡಬಲ್ಲವರು ? [3]ಅದಾರಯ್ಯ[3] [4]ಹೊಱಗ[4] ಪ್ರಜ್ವಲಿಸಿ ತೋಱಬಲ್ಲವರು ? ಬಸವಗುರು ಎನ್ನ ಕರಸ್ಥಲದ ಲಿಂಗದ ಆದಿಯನಱುಹಿ ತೋಱಿದ ಕಾರಣ, ಗೊಗೇಶ್ವರಲಿಂಗದ ನಿಲವ ನಿನ್ನಿಂದಱಿದೆ. ಈ ಉಳಿದ ಲೋಕಾದಿಲೋಕಂಗಳೆಲ್ಲಾ ಎನ್ನ ಮುಖದಲ್ಲಿ ಕಿಂಚಿತ್. ೯೧೧-೧೪೯೦-20-13.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ :

ಅಱಸುವ ಬಳ್ಳಿ ಕಾಲ ತೊಡಕಿದಂತಾಯಿತ್ತು. ಬಯಸುವ ಬಯಕೆ ಕೈಸಾರಿ

---

A (ಶಿ) ಕೈಕೊಂಡ (ಹ) [1] (ಗೂಹ) ದೃಷ್ಟಿ (ಶಿ). [2] ದೆ (ಶಿಹಗೂ) (ಹ) [3] ಅದಾರಯ್ಯ (ಹ) ಇದಾರಯ್ಯ (ಗೂಶಿ). [4] ಹೊಱಗೆ (ಗೂಹ) ಹೊಱಗ (ಶಿ).

ದಂತಾಯಿತ್ತು. ಹಲವು ದಿನಸಕೆ ನಂಟರು ತಾರ್ಕಣೆಗಂಡಂತಾಯಿತ್ತು. ಅಂದೊಮ್ಮೆ ಅನಿಮಿಷಂಗೆ ಕೋಳುವೋದ ಲಿಂಗವೆಂದು ಉಮ್ಮಹ ಉತ್ಸಾಹದಿಂದ ಮಂಗಳಾರತಿಯ ಬೆಳಗಿ, ನವರತ್ನದ ಹಾರ-ತೋರಣವ ಕಟ್ಟಿ, ಸಂತೋಷದಿಂದೆನ್ನ ಮನವು ತೊಟ್ಟನೆ ತೊಳಲಿ ತಿಟ್ಟನೆ ತಿರುಗಿ ದೃಷ್ಟವ ಕಂಡೆನಯ್ಯ. ಬಿಟ್ಟು ಹಿಂಗಿದವಯ್ಯ ಎನ್ನ ಭವ ಮಾಲೆಗಳು, ಗೊಗೇಶ್ವರನ ಶರಣ [1]ಪ್ರಭುದೇವರ[1] ಕರಸ್ಥಲದೊಳಗೆ ಕೂಡಲ ಸಂಗಮ ದೇವನೆಂಬ ಲಿಂಗವ ಕಂಡೆನಾಗಿ! ೯೧೨-೧೪೯೧- ×.

ಇದಕ್ಕೆ ಪ್ರಭುದೇವರ ವಚನ :

ಎನ್ನ ಕರಸ್ಥಲದೊಳಗೊಂದು ಮಹಾ ಬೆಳಗ ಕಂಡೆನಯ್ಯ! ಮಹಾಮಂಗಳ ನಿಳಯವಾಗಿ ತೋಱುತ್ತಿದೆ. ಗೊಗೇಶ್ವರನೆಂಬ ಲಿಂಗದ ಕಾಂತಿಗಳು—ಸಂಗನ ಬಸವಣ್ಣನ ನಿವಾಳಿಸುತ್ತಿದ್ದವಯ್ಯ. ೯೧೩-೧೪೯೨-20-18.

ಇದಕ್ಕೆ ಬಸವರಾಜದೇವರು—ಪ್ರಭುದೇವರ ಕರಸ್ಥಲದ ಲಿಂಗವನು ತನಗೆ ಬರ ಬೇಕೆಂದು ಬಿನ್ನೈಸುವ ವಚನ:

ಎನ್ನ ಕರಸ್ಥಲದ ಲಿಂಗವನು ಅನಿಮಿಷ ಕೊಂಡನು. ಅನಿಮಿಷನ ಕರಸ್ಥಲದ ಲಿಂಗವನು ನೀವು ಕೊಂಡಿರಿ. ನಿಮ್ಮ ಕರಸ್ಥಲವೇ ಎನ್ನ ಪರಸ್ಥಲವಾಯಿತ್ತು. ಕುಱುಹಳಿದಲ್ಲಿ ಕುಱುಹ ಕೊಂಬ ಪರಿಯೆಂತಯ್ಯ? ಕೊಡುವರು ಕೊಂಬವರೊಳಗೆ ಸಿಲ್ಕಿದ ಬಳಿಕ, ಕೂಡಲಸಂಗಮದೇವ, ನಿಮ್ಮ ಕರಸ್ಥಲದ ಲಿಂಗವು ಎನಗೆ ಸಾಧ್ಯವಹ ಪರಿಯೆಂತಯ್ಯ? ೯೧೪-೧೪೯೩- ×.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

ಮಱಹು ಬಂದಹುದೆಂದು ಶ್ರೀಗುರು ಕರಸ್ಥಳಕ್ಕೆ ಕುಱುಹ ಕೊಟ್ಟರೆ, ಆ ಕುಱುಹು ನೋಟದಲ್ಲಿ ಅಳಿದು, ಆ ನೋಟವು ಮನದಲ್ಲಿ ಅಳಿದು, ಆ ಮನ ಭಾವದಲ್ಲಿ ಅಳಿದು[5] ಆ ಭಾವ ಜ್ಞಾನದಲ್ಲಿ ಅಳಿದು, ಆ ಜ್ಞಾನ ಸಮರಸದಲ್ಲಿ ಅಳಿದ ಬಳಿಕ [2]ಇನ್ನಱಿವ[2] ಕುಱುಹಾವುದು ಹೇಳಾ? ನೀನಱಿಸುವಾ ಕುಱುಹು ಎನ್ನ ಕರಸ್ಥಲ. ಎನ್ನ ಕರಸ್ಥಲ ಸಹಿತ ನಾನು ನಿನ್ನೊಳಗೆ ನಿರ್ವಯಲಾದೆ. ಎನ್ನ ನಿರ್ವಯಲ ಲಿಂಗ ನಿನಗೆ ಸಾಧ್ಯ ವಾಯಿತ್ತಾಗಿ ನೀನೆ ಪರಿಪೂರ್ಣನಯ್ಯ. ನಿಮ್ಮಲ್ಲಿ ಮಹಾಘನ ಲಿಂಗವು ಸಾಧ್ಯವಾಗಿ ಗೊಗೇಶ್ವರ ಸಾಕ್ಷಿಯಾಗಿ, ನೀ ಬಯಸುವ ಬಯಕೆ ಸಂದಿತ್ತು ಕಾಣಾ ಸಂಗನ ಬಸವಣ್ಣ! ೯೧೫-೧೪೯೪- ×.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ಅಯ್ಯ, ಕೊಟ್ಟ ಲಿಂಗವ ಮರಳಿ ಕೊಂಡು ಬಾ ಎಂದು ಎನ್ನನಟ್ಟಿದನಯ್ಯ ಶಶಿಧರನು ಮರ್ತ್ಯಕ್ಕೆ. ನಿಮ್ಮ ಮುಖದಲ್ಲಿ ಎನ್ನ ಭವ ಹಱಿವುದೆಂದು ಹಱಹಿಕೊಂಡಿದ್ದೆ ನಯ್ಯ ದಾಸೋಹವನು. ನಿಮ್ಮ ಬರವ ಹಾರಿ [3][ಸವೆದವು][3] ಒಂದನಂತ ದಿನಂಗಳು.

---

[1] (ಹ) × (ಶಿ). [2] (ಹ) ಇನ್ನಱುವು (ಶಿ) [3] ಸದವ (ಶಿ) ಸವದವು (ಹ.)

ಇಂದೆನ್ನ ಪುಣ್ಯದ ಫಲದಿಂದ ಎನಗೆ ಗೋಚರವಾದಿರಿ. ಹಿಂದಣ ಸಂದೇಹ-ಸೂತಕ ಹಿಂಗಿತ್ತು. ಎನ್ನ ಪ್ರಾಣಲಿಂಗ ನೀವೆಯಾಗಿ ಎನ್ನ ಸರ್ವಾಂಗದಲ್ಲಿ ಸನ್ನಿಹಿತನಾಗಿ ಎನ್ನ ಚಿಂತೆಯ ನಿಶ್ಚಿಂತೆಯ ಮಾಡಾ ಕೂಡಲಸಂಗಮದೇವ. ೯೧೬-೧೪೯೫-×.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

[1]ಹಿಂದೆನ್ನ[1] ಗುರು ಅನಿಮಿಷಂಗೆ ಲಿಂಗವ ಕೊಟ್ಟನೆಂಬ ಸೂತಕ ಬೇಡ. ಅಂದು ಅನಿಮಿಷ ನಿನ್ನ [2]ಕೈಯಲಿ ಕೊಂಡರೆಂಬ[2] ಸಂಕಲ್ಪ ಬೇಡ. ಹಿಂದು-ಮುಂದೆಂಬ ಸಂದಳಿದು ನಿಜದಲ್ಲಿ ಭರಿತನಾದ ಬಳಿಕ ಕೊಡಲುಂಟೆ? [3]ಕೊಳಲುಂಟೆ[3] ಹೇಳಾ? ಹಿಡಿದರೆ ಸಿಕ್ಕದು! ಕೊಡುವೊಡೆ ಹೋಗದು! ಎಡೆಯಾಟದ ವ್ಯವಹಾರಕ್ಕೆ ಬಾರದು ನೋಡಾ! ರೂಪಿನ ಸಂಚವ ಕೆಡಿಸಿ, ನಿಜ ಸ್ವಯವಾಯ್ತು ನಿನಗೆ, ಗೊಗೇಶ್ವರನೆಂಬ ಲಿಂಗವ ನಿನ್ನ ಹೊಸತಾಗಿ ಕೊಡಲುಂಟೆ ಹೇಳಾ ಸಂಗನ ಬಸವಣ್ಣ. ೯೧೭-೧೪೯೬-×.

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ಸಕಲದಲ್ಲಿ ಸನ್ನಿಹಿತನಲ್ಲದವನು ನಿಷ್ಕಲದಲ್ಲಿ ನಿಜವನೆಯ್ದುವ ಪರಿಯೆಂತಯ್ಯ? ಲಿಂಗವ ಹೋಗಾಡಿದನೆಂಬ ನಿಂದೆಯ ಪ್ರಮಥರು ನುಡಿವುತ್ತಿರಲು ಲಿಂಗೈಕ್ಯವೆಂತಿ [=ತ?]ಪ್ಪುದು ಹೇಳಾ? ನಿಮ್ಮ ಪ್ರಮಥರು ಮೆಚ್ಚಿ ಅಹುದೆಂದು ಒಡಂಬಟ್ಟು ಎನ್ನ ತಾರ್ಕಣೆಯಪ್ಪಂತೆ ನಿಮ್ಮಲ್ಲಿ ಐಕ್ಯವ ಮಾಡಾ ಕೂಡಲಸಂಗಮದೇವ. ೯೧೮-೧೪೯೭-×.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ:

ನಿಂದೆಯೆಂಬುದು ಬಂದ ಭವದಲ್ಲಿಯೇ ಹೋಯಿತ್ತು. ಮುಂದೆ ಗುರುಕಾರುಣ್ಯವಾದಲ್ಲಿಯೇ ಹಿಂದು ಹಱೀಯಿತ್ತು. ಮರ್ತ್ಯಲೋಕದ ಮಹಾಗಣಂಗಳು ಮೆಚ್ಚಿ ದಾಸೋಹವ ಮಾಡಿದಲ್ಲಿಯೇ ಪ್ರಮಥಗಣಂಗಳು ತಮ್ಮೊಳಗೆ ನಿಮ್ಮನಿಂಬಿಟ್ಟುಕೊಂಡರು. ಅಂಗದ ಮೇಲೆ ಲಿಂಗ ಉಳ್ಳುದೆಲ್ಲವೂ ಸಂಗಮನಾಥನೆಂದಱೀದು ನಿನ್ನ ಸರ್ವಾಂಗದಲ್ಲಿ ಲಿಂಗಸನ್ನಿಹಿತವಾದಲ್ಲಿ, [ನಿನ್ನಲ್ಲಿ?] ಎನ್ನ ಪ್ರಾಣಲಿಂಗಸಂಬಂಧ ವಳವಟ್ಟಿತ್ತು. ಲಕ್ಷದ ಮೇಲೆ ತೊಂಬತ್ತಾಱು ಸಾವಿರ ಪ್ರಮಥರಿಗೆ ಮಾಡಿದ ಸಯಧಾನವ[4]ನೆಮ್ಮ[4] ಶಿವಲಿಂಗಕ್ಕೆ ಆರೋಗಿಸಲಿತ್ತು ತೃಪ್ತಿವಡಿಸಿದಲ್ಲಿಯೆ, ನಿನ್ನ ತನು-ಮನ-ಧನ-ಪ್ರಾಣಂಗಳು ಅರ್ಪಿತವಾದಲ್ಲಿ[ಯೇ] ಮಹಾಪ್ರಸಾದ ಸಾಧ್ಯವಾಯಿತ್ತು. ಆದಿಯ ಲಿಂಗವಿಡಿದು ನಾನು ನಿನ್ನಲ್ಲಿ ಅಡಗಿದ ಬಳಿಕ ಹಿಂದಣ ಸಂಕಲ್ಪ ವಳಿಯಿತ್ತು. ಸರ್ವಾಚಾರ ಸಂಪತ್ತು ನಿನ್ನಲ್ಲಿ ಸಯವಾದಲ್ಲಿ ಸರ್ವಸೂತಕ ತೊಡೆಯಿತ್ತು. ಗೊಗೇಶ್ವರಲಿಂಗವು ನಿನ್ನ ಹೃದಯಕಮಳದಲ್ಲಿ ನೆಲೆಗೊಂಡು, ನಿನ್ನ ಕರಸ್ಥಳದಲ್ಲಿ ತೊಳಗಿ ಬೆಳಗುತ್ತೈಧಾನೆ, [5]ಇನ್ನೊಮ್ಮೆ[5] ತಿಳಿದು ನೋಡಾ ಸಂಗನ ಬಸವಣ್ಣ. ೯೧೯-೧೪೯೮-×. ಮತ್ತಂ:

[1] (ಶಿ) ಇಂದೆನ್ನ (ಹ). [2] (ಹ) ಕೈಯಲ್ಲಿ ಕೊಂಡರೆಂಬ (ಶಿ) [3] (ಹ) × (ಶಿ). [4] (ಶಿ) ಮಹಾಘನ (ಹ). [5] (ಶಿ) ನೀ ನಿಮ್ಮೊಳ್ (ಹ).

ಅಂಗದ ಕೈಯಲ್ಲಿ ಲಿಂಗ, ಮನದ ಕೈಯಲ್ಲಿ ನಿಸ್ಸಂಸಾರ! ಎಂತಯ್ಯ, ಪ್ರಾಣ ಲಿಂಗ [1]ಲಿಂಗ ಪ್ರಾಣ[1]ವೆಂದು ಭಿನ್ನವಿಟ್ಟು ನುಡಿವೆನು? ಹೊಱಗೆ ಕುಱು[2]ಹಾಗಿ ತೋಱು[2]ತ್ತಿದೆ. ಇದು ಕೃತಯುಗದಲ್ಲಿ ಮೂರ್ತಿಯಾದ ಕರಸ್ಥಲವಲ್ಲ. ಇದು ತ್ರೇತಾಯುಗದಲ್ಲಿ ಮೂರ್ತಿಯಾದ ಕರಸ್ಥಲವಲ್ಲ. ಇದು ದ್ವಾಪರದಲ್ಲಿ ಮೂರ್ತಿಯಾದ ಕರಸ್ಥಲವಲ್ಲ. ಇದು ಕಲಿಯುಗದಲ್ಲಿ ಮೂರ್ತಿಯಾದ ಕರಸ್ಥಲವಲ್ಲ. ಕೆಳಗೇಳು ಲೋಕ, ಮೇಲೇಳು ಲೋಕ ಹುಟ್ಟದಲ್ಲಿಂದತ್ತತ್ತ ಮುನ್ನಲಾದ ಕರಸ್ಥಲ. ಸಂಗನ ಬಸವಣ್ಣನ ಕರಸ್ಥಲದೊಳಗೆ ಗೊಗೇಶ್ವರನೆಂಬ ಲಿಂಗ ತೊಳಗಿ ಬೆಳಗುತ್ತಿದ್ದುದ ಕಂಡು ನಮೋ ನಮೋ ಎನುತಿರ್ದೆನು. ೯೨೦-೧೪೯೯-20-16 ಮತ್ತಂ:

ಜಗತ್‌ಸ್ವಯಂಭು ಎಂಬ ಗಣೇಶ್ವರ[3]ನು[3] ಕರಸ್ಥಲದಲ್ಲಿ ಹಿಡಿದಾಡುತ್ತಿದ್ದ[4]ರೆ[4] ಆದಿಲಿಂಗನೆಂದು [5]ಬಗೆಯದೇ[5] ಲೋಕವೆಲ್ಲವೂ? ಗೊಗೇಶ್ವರ, ನಿಮ್ಮ ಶರಣ ಬಸವಣ್ಣ ನಚ್ಚಲಿಂಗವ ಹಿಡಿದ ಕಾರಣ, [6]ಬಱಿಯ ಲಿಂಗದ ಮಸಕವಾಯಿತ್ತು[6] ತ್ರಿಜಗದೊಳಗೆ. ೯೨೧ ೧೫೦೦-20-17. ಮತ್ತಂ:

ಅಳಿಯ ಬಳಿಯ ಸುಳಿವನಲ್ಲ, ಪ್ರಳಯವಿಲ್ಲದ ವಿಜಯನು! ಕಳಾಕುಳದ ಆತ್ಮನ ಅಂಗಸಂಗಿಯಲ್ಲ. ಸುಳುಹಿನೊಳಗೆ ಸೂಕ್ಷ್ಮನ ತಿಳಿದು ನೋಡುವರೆ—ಅಣಿಮಾದಿ [7]ಗುಣರಹಿತನಕಲ್ಪಿತ[7] ಮಹಿಮನನೇನೆಂಬೆನು?! ನೆಳಲ ಕಳವಳದ ಬಳಿಯ ಭಾವರೂಪನಲ್ಲ. ಬೆಳಗಿನೊಳಗಣ ಬೆಳಗು ಗೊಗೇಶ್ವರನೆಂಬ ನಿಲವು ಸಂಗನ ಬಸವಣ್ಣನ ಕರಸ್ಥಲದೊಳಗೆ ತೊಳಗಿ ಬೆಳಗುತಿದ್ದಿತ್ತು. ೯೨೨-೧೫೦೧-20-15. ಮತ್ತಂ:

ಗುರುಸ್ಥಲ-ಲಿಂಗಸ್ಥಲ-ಜಂಗಮಸ್ಥಲ-ಪ್ರಸಾದಸ್ಥಲವಡಗಿತ್ತಲ್ಲಾ ಸಂಗನಬಸವಣ್ಣನ ಕರಸ್ಥಲದೊಳಗೆ! ಇನ್ನಾರಿಗೆಯೂ ಸಾರದೀ ಭಕ್ತಿಸ್ಥಲ? ಇನ್ನಾರಿಗೆಯೂ ಸಾರದೀ ಲಿಂಗಸ್ಥಲ? ಗೊಗೇಶ್ವರ, ಸಂಗನ ಬಸವಣ್ಣನ ಮಱೆಯ ಹೊಕ್ಕು ನಾನು ಬದುಕಿದೆನು. ೯೨೩-೧೫೦೨-20-19.

ಚಿಕ್ಕದಣ್ಣಾಯಕರು ಬಸವರಾಜದೇವರ ಸ್ತುತಿಯಿಸಿಹರು:

[8]ಅಪ್ಪುವನಪ್ಪಿದ ಆಲಿಕಲ್ಲಿನಂತೆ[8], ಲಿಂಗವನಪ್ಪಿದ ಶರಣನ ದೇಹಿಯೆನಬಹುದೇ? ಅನಲನನಪ್ಪಿದ ಕರ್ಪುರದಂತೆ, ಕೂಡಲ ಚೆನ್ನ ಸಂಗಯ್ಯ, ನಿಮ್ಮ ಶರಣ ಬಸವಣ್ಣನ ನಿಲವು. ೯೨೪-೧೫೦೩-20-35. ಮತ್ತಂ:

ತಾ ಜಗ, ಜಗವೆಲ್ಲಾ ತಾನೆಂಬ ಅಱಿವಱಿತು, ಘನ ವೇದ್ಯ ರೂಪನಾಗಿ, ಅನ್ಯವಿಲ್ಲದ ಅನನ್ಯವನಱಿಯಲೆಲ್ಲಿಯದು?! ನಿರಂಜನ ನಿಜ ಚಿದ್ರೂಪ ತಾನಾಗಿ ಅಱಿವು

---

1 (ಹ) ಪ್ರಾಣಲಿಂಗ (ಶಿ) (ಗೂ). 2 (ಹ) × (ಶಿ). 3 (ಹ) ನ (ಶಿಗೂ). 4 (ಶಿಗೂ) ಲಿಂಗವ (ಹ). 5 (ಶಿ) ಬಗೆಯದೀ (ಹ) ಬಗೆಯದು (ಗೂ). 6 (ಶಿ) ಬಱಿಯ ಲಿಂಗದ ಮಸ್ತಕವಾಯಿತ್ತು (ಗೂ). ಬರಿಯಲಿಂಗದ ಸಂಗಸಮರಸವಾಯಿತ್ತಿಂದು (ಹ). 7 (ಶಿ) ಗುಣರಹಿತನುಅಕಲ್ಪಿತ (ಹ)ಗುಣರಹಿತನ, ಅಕಲ್ಪಿತ (ಗೂ). 8 (ಶಿ) ಅಪ್ಪುವನಪ್ಪಿದ ವಾರಿಕಲ್ಲಿನಂತೆ ವಾಯುವನಪ್ಪಿದ ಪರಿಮಳದಂತೆ (ಹಗೂ).

ತಾನೆಂಬ ಮಮತೆಗೆ ತೆಱಹಿಲ್ಲೆಂದು [1]ಆನೆನ್ನದೆ ತಾನೆನ್ನದೆ ಉಳಿದ[1] ಉಳುಮೆಯ ನುಪಮಿಸಬಹುದೇ? ಅನುಪಮ ಸುಖಸಾರಾಯ, ಕೂಡಲ ಚೆನ್ನಸಂಗ, ನಿಮ್ಮ ಶರಣ ಬಸವಣ್ಣನು! ೯೨೫-೧೫೦೪-20-36.

ಇದಕ್ಕೆ ಬಸವರಾಜದೇವರ ಪರಾಮರಿಕೆ:

ಆರತವಡಗಿತ್ತೆನ್ನ, ಬಯಕೆ ಸಮನಿಸಿತ್ತೆನ್ನ. ಸಂಕಲ್ಪ ಸವೆಯಿತ್ತೆನ್ನ. ಸ್ವಯವು ದೊರಕೊಂಡಿತ್ತೆನ್ನ. ನಿಮ್ಮ ನೋಡಿ ಎನ್ನ ಕಂಗಳು ಮಂಗಳದ ಮಸಕವಾಯಿತ್ತಯ್ಯ. ಒಳಗು-ಹೊಱಗು, ಹೊಱಗು-ಒಳಗೆಂಬುದ ತಿಳಿದು ಪ್ರಭುವಿನ ಕರುಣದಿಂದ ಕೂಡಲ ಸಂಗಮದೇವರಲ್ಲಿ ತೆಱಹಿಲ್ಲದಿದ್ದೆನು. ೯೨೬-೧೫೦೫-×. ಮತ್ತಂ:

ಏನೆಂಬೆನೇನೆಂಬೆ ಒಂದೆರಡಾಗದುದ?! ಎಂತೆಂಬೆನೆಂತೆಂಬೆ ಎರಡೊಂದಾಗದುದ?! ಅವಿರಳ ಘನ ಲಿಂಗೈಕ್ಯವ ಮಹಾದಾನಿ ಕೂಡಲ ಸಂಗಮದೇವಯ್ಯ ತಾನೆ ಬಲ್ಲ. ೯೨೭-೧೫೦೬-20-38. ಮತ್ತಂ:

ಘನಗಂಭೀರ ಮಹಾಘನದೊಳಗೆ ಘನಕ್ಕೆ ಘನವಾಗಿದ್ದೆನಯ್ಯ. ಕೂಡಲಸಂಗಮ ದೇವಯ್ಯನೆಂಬ ಮಹಾ ಬೆಳಗಿನೊಳಗೆ ಬೆಳಗಾಗಿದ್ದೆನೆಂಬ ಶಬ್ದಮುಗ್ಧವಾದುದ ನೇನೆಂಬೆನಯ್ಯ! ೯೨೮-೧೫೦೭-20-39. ಮತ್ತಂ:

ದೆಸೆ-ದಿಕ್ಕು [5]ಧರೆ[5]-ಗಗನವೆಂಬುದ ನಾನಱಿಯೆನಯ್ಯ. ಲಿಂಗಮಧ್ಯೇ ಜಗತ್ ಸರ್ವಂ, ಎಂಬುದ ನಾನಱಿಯೆನಯ್ಯ. ಅಂಬುಧಿಯೊಳಗೆ ಬಿದ್ದ ಆಲಿಕಲ್ಲಿನಂತೆ ಭಿನ್ನಭಾವವಿಲ್ಲದೆ ಶಿವಶಿವಾ ಎನುತಿದ್ದೆನು ಕಾಣಾ ಕೂಡಲಸಂಗಮದೇವ. ೯೨೯-೧೫೦೮-20-40. ಮತ್ತಂ:

ಅಱಿವನ್ನಕ್ಕರ ಅರ್ಚಿಸಿದೆ. ಅಱಿವನ್ನಕ್ಕರ ಪೂಜಿಸಿದೆ. ಅಱಿವನ್ನಕ್ಕರ ಹಾಡಿ ಹೊಗಳಿದೆ. ಅಱಿವುಗೆಟ್ಟು ಮಱಹು ನಷ್ಟವಾಗಿ, ಭಾವ ನಿರ್ಭಾವವಾಗಿ, ನಿಜ ಒಳಕೊಂಡಿತ್ತಾಗಿ ಕೂಡಲಸಂಗಯ್ಯನಲ್ಲಿ [2]ಸರ್ವನಿವಾಸಿ[2]ಯಾಗಿದ್ದೆನು. ೯೩೦-೧೫೦೯-20-41.

ಅಱಿಯಲಿಲ್ಲದ ಅಱಿವು ಅವಗ್ರಹಿಸಿತ್ತಾಗಿ, ಅಱಿಯಲಿಲ್ಲದ ಮಱೆ[3]ಯಲಿಲ್ಲದ ನಿಜವು ನಿಂದಿತ್ತಾಗಿ [3]ನಿರ್ನಾಮ[3]ವಾಯಿತ್ತು! ನಿಷ್ಪತ್ತಿಯಾಯಿತ್ತು! ಅಗಮ್ಯದಲ್ಲಿ ಗಮನಗೆಟ್ಟಿತ್ತು. ನಿಂದಲ್ಲಿ ನಿರಾಳವಾಯಿತ್ತು. ಕೂಡಲ ಸಂಗಮದೇವರಲ್ಲಿ ಶಬ್ದಮುಗ್ಧ ವಾಯಿತ್ತು. ೯೩೧-೧೫೧೦-20-42.

ಅಂತರಂಗ ಬಹಿರಂಗ ಆತ್ಮಸಂಗ ಒಂದೆಯಯ್ಯ. ನಾದ-ಬಿಂದು-ಕಳಾತೀತ ಆದಿಯಾ ಧಾರ ಒಂದೆಯಯ್ಯ. ಆರೂಢದ ಕೂಟದ ಸುಖವನು ಕೂಡಲ ಸಂಗಮದೇವ ತಾನೆ ಬಲ್ಲನು. ೯೩೨-೧೫೧೧-20-43. ಮತ್ತಂ:

---

[1] (ಹ) ಆನೆನ್ನ ತಾನೆನ್ನದುಳಿದು (ಗೂ) ಅವೆನ್ನ ತಾನೆಂದುಳಿದು (ಶಿ). [2] (ಹಗೂ) ನಿರ್ವಾಸಿ (ಶಿ). [3] (ಶಿಗೂ) ನಿರ್ಣಯ (ಹ).

ಸಮಸ್ತ ಕತ್ತಲೆಯ [1]ಮಸ್ತಕವ[1] ಕಳೆದಿಪ್ಪ ಇರವ ನೋಡ! [2]ಬೆಳಗಿನ[2] ಬೆಳಗು ಸಿಂಹಾಸನವಾಗಿ, ಬೆಳಗು ಬೆಳಗ ಕೂಡಿದ ಕೂಟವ ಕೂಡಲ ಸಂಗಯ್ಯ ತಾನೆ ಬಲ್ಲ. ೯೩೩-೧೫೧೨-20-44.

ಮತ್ತಂ ಚಿಕ್ಕದಣ್ಣಾಯಕರ ಸಮರಸದ ವಚನ:

ಅಱಿವಿನಾಶ್ರಯ[3]ಸಂಗವ[3] ಅಱಿತು ನೆಱೆ[3] ಮಾಡಲು, ಭಾವದಲ್ಲಿ ಸರ್ಪದಷ್ಟ[4]ವಾಗಿ ಆಕಾರ[4] ಪ್ರಾಣದಲ್ಲಿ ವಿಶ್ರಮಿಸಿತ್ತು. ಭಾವದಲ್ಲಿ ಭರಿತ, ನಿರ್ಭಾವದಲ್ಲಿ ನಿರುತ, ಕೂಡಲ ಚೆನ್ನಸಂಗಯ್ಯ ಸಕಳಾ[5]ಶ್ರಯ[5]ದಲ್ಲಿ ನಿರ್ಣಯ. ೯೩೪-೧೫೧೩--20-45.

[6]ಸ್ನೇಹದ[6] ಸುಖವ ನೋಟ ನುಂಗಿತ್ತು. ನೋಟದ ಸುಖವ ಕೂಟ ನುಂಗಿತ್ತು. ಕೂಟದ ಸುಖವ ಆಲಿಂಗನ ನುಂಗಿತ್ತು. ಆಲಿಂಗನದ ಸುಖವ ಸಂಗ ನುಂಗಿತ್ತು. ಸಂಗದ ಸುಖವ ಸಮರಸ ನುಂಗಿತ್ತು. ಸಮರಸದ ಸುಖವ ಪರವಶ ನುಂಗಿತ್ತು. ಪರವಶದ ಸುಖವ ಕೂಡಲ ಚೆನ್ನಸಂಗಯ್ಯ ತಾನೆ ಬಲ್ಲ. ೯೩೫-೧೫೧೪-20-46. ಮತ್ತಂ:

ಅಱಿಯಲಿಲ್ಲದ ಅಱಿವು, ಮಱೆಯಲಿಲ್ಲದ ಮಱಹು, ನೋ[7]ಡಲಿ[7]ಲ್ಲದ ನೋಟ, ಕೂ[7]ಡಲಿ[7]ಲ್ಲದ ಕೂಟ. ಬೆರಸಲಿಲ್ಲದ ಬೆಱಗು. ನಿಂದುದು ಕೂಡಲ ಚೆನ್ನಸಂಗಯ್ಯ [8]ಲಿಂಗೈಕ್ಯವು[8]. ೯೩೬-೧೫೧೫-20-47.

ಅಱಿವಿಂದಲಾದ ಮಱಹಿನ ಶಬ್ದವನಱಿಯಲಾಗದು. ಅಱಿದಡೆ ಅದಕ್ಕದೆ [9]ಭಂಗವು[9]. ಅಱಿವಱಿತು, ಮಱಹು ನಷ್ಟವಾಗಿ ಜ್ಞಾನ[10]ವೆಂದಲ್ಲಿ[10] ನಿರ್ಣಯವಿಲ್ಲವಯ್ಯ. ಜ್ಞಾನದೊಳಗಣ ಬುದ್ಧಿಯು ಭಸ್ಮವಾಗಿ [11]ಧರಿಸಿದಲ್ಲಿ[11] ಕೂಡಲ ಚೆನ್ನಸಂಗಯ್ಯ ಸರ್ವ [12]ನಿವಾಸಿ[12]. ೯೩೭-೧೫೧೬-20-48. ಮತ್ತಂ:

[13]ಏನೆಂಬೆ[13]ನೇನೆಂಬೆನಾಶ್ರಯವಿರಹಿತವ? [13]ಏನೆಂಬೆ[18]ನೇನೆಂಬೆ ನಾಮ ನಿರ್ನಾಮವ? ಏನೆಂಬೆನೇನೆಂಬೆ ಸಾರಾಯ [14]ಸನ್ಮತ[14]ವಲ್ಲದುದ? ಏನೆಂಬೆನೇನೆಂಬೆ ದೇವ, ಕ್ರೀಯುಮೀಱಿದ ಸಂಬಂಧವ? ಕೂಡಲ ಚೆನ್ನಸಂಗಮದೇವ, ನಾನೆಂಬುದಿಲ್ಲದುದ ನೇನೆಂದುಪಮಿಸುವೆ? ೯೩೮-೧೫೧೭-20-49. ಮತ್ತಂ:

ದೃಷ್ಟ ನಷ್ಟವಾದುದಕ್ಕೇನು ದೃಷ್ಟ? ಭಾವನಷ್ಟವಾದುದೇ ದೃಷ್ಟ! ಭಾವನಷ್ಟವಾದುದಕ್ಕೇನು ದೃಷ್ಟ? ಸ್ವಯ-ಪರ[15]ವನಱಿಯದುದೇ[15] ದೃಷ್ಟ! ಸ್ವಯಪರವನಱಿಯದುದಕ್ಕೇನು ದೃಷ್ಟ? ಕೂಡಲ ಚೆನ್ನಸಂಗಯ್ಯನೆನ್ನದುದೇ ದೃಷ್ಟ! ೯೩೯-೧೫೧೮-20-51. ಮತ್ತಂ:

---

1 (ಹಶಿ) ಮಸಕವ (ಗೂ). 2 (ಹಗೂ) ಬೆಳಗಿಗೆ (ಶಿ). 3 ದಸಂಗವ (ಹ) ಸಂಗ (ಗೂಶಿ). 4 (ಗೂಶಿ) ವಾಗಲು ಅಕಾರ (ಹ). 5 (ಶಿ) ಶ್ರಮ (ಗೂಹ). 6 (ಶಿ) ನೇಹದ (ಗೂ) ನೆಸಹಿನ (ಹ). 7 (ಗೂ) ಟವಿ (ಹಶಿ). 8 (ಗೂಹ) × (ಶಿ). 9 (ಗೂಹ) ಭವವು (ಶಿ). 10 (ಗೂ) ವೆಂಬಲ್ಲಿ (ಹ) ಬೆಂದಲ್ಲಿ (ಶಿ). 11 (ಶಿ) ಧರಿಸಿದ (ಹ) ಧರಿಸಿ (ಗೂ). 12 (ಗೂಹ) ನಿರ್ವಾಸಿ (ಶಿ). 13 (ಗೂಹ) ನೇನೇಂಬೆ (ಶಿ). 14 (ಹಶಿ) ಭರಿತ (ಗೂ). 15 (ಹ) ಪಱಿಯದುದೆ (ಗೂ) ವಾವುದೆಂದಱಿಯದುದೆ (ಶಿ).

ಸಹಜವೆನ್ನದೆ, ನಿಜವೆನ್ನದೆ; ಖಂಡಿತವೆನ್ನದೆ, ಪರಿಪೂರ್ಣವೆನ್ನದೆ, ಏನೂ [1]ಎನ್ನದೆ[1] ಕೂಡಲ ಚೆನ್ನ[2]ಸಂಗಯ್ಯ[2], ಲಿಂಗೈಕ್ಯವು. ೯೪೦-೧೫೧೯-20-52.

ಆನೆಂಬುದಿಲ್ಲ ನೀನೆಂಬುದಿಲ್ಲ, ಸ್ವಯವೆಂಬುದಿಲ್ಲ ಪರವೆಂಬುದಿಲ್ಲ, ಅಱಿವೆಂಬುದಿಲ್ಲ ಮಱಹೆಂಬುದಿಲ್ಲ, ಒಳಗೆಂಬುದಿಲ್ಲ ಹೊಱಗೆಂಬುದಿಲ್ಲ. ಕೂಡಲ ಚೆನ್ನಸಂಗನೆಂಬ ಶಬ್ದ ಮುನ್ನಿಲ್ಲ. ೯೪೧-೧೫೨೦-20-53. ಮತ್ತಂ:

ತನು ಬಯಲು ನಿರವಯದೊಳಡಗಿತ್ತು. ಮನ ಬಯಲು ನಿರವಯದೊಳಡಗಿತ್ತು. ಭಾವ ಬಯಲು ನಿರವಯದೊಳಡಗಿತ್ತು. ಬಯಲು ಬಯಲ ಬೆರಸಿ ಬಯಲೆಯಾಯಿತ್ತು. ಕೂಡಲ ಚೆನ್ನಸಂಗಯ್ಯನೆಂಬ ನುಡಿಯಡಗಿತ್ತು. ೯೪೨-೧೫೨೧-20-54.

ಮಡಿವಾಳಯ್ಯಗಳ ಪರಾಮರಿಕೆ:

ನಿತ್ಯ ಸತ್ಯದೊಳಗಡಗಿ, ಸತ್ಯವಾಚಾರದೊಳಗಡಗಿ, ಆಚಾರ ಅನುಭಾವದೊಳಗಡಗಿ, ಅನುಭಾವ ಜ್ಞಾನದೊಳಗಡಗಿ, [3][ಜ್ಞಾನ][3] ಮನೋಲಯದೊಳಗಡಗಿ, [4]ಮನೋಲಯವೆ[4] [A]ಮಹಾಘನವಾಯಿತ್ತು[A], ಕಲಿದೇವರದೇವ, ನಿಮ್ಮ ನಿಜೈಕ್ಯವು. ೯೪೩-೧೫೨೨-20-55. ಮತ್ತಂ:

ತನು ನಷ್ಟ, ಮನ ನಷ್ಟ, ನೆನಹು ನಷ್ಟ, ಭಾವ ನಷ್ಟ, ಜ್ಞಾನ ನಷ್ಟ; ಇಂತು ಪಂಚ ನಷ್ಟದೊಳಗೆ ನಾ ನಷ್ಟವಾದೆನು. ಆ ನಷ್ಟದೊಳಗೆ ನೀನು ನಷ್ಟವಾದೆ. ಕಲಿದೇವರದೇವನೆಂಬ ನುಡಿ 'ನಿಶ್ಶಬ್ದಂ ಬ್ರಹ್ಮ'ವೆಂದಿತ್ತು. ೯೪೪-೧೫೨೩-20-56. ಮತ್ತಂ:

ಅಱಿವಿ[5]ನೊಳಗಣ[5] ಕುಱುಹು ಮಱಹಿಂಗೆ ಬೀಜ. ಕುಱುಹಿನ ಮಱಹನಱಿವು ನುಂಗಿ ಘನಕ್ಕೆ ಘನ ವೇದ್ಯವಾದ ಬಳಿಕ ನಿತ್ಯ ಪರಿಪೂರ್ಣ ತಾನೆ. ಕಲಿದೇವರದೇವನು [6]ವಾಙ್ಮನಕ್ಕಗೋಚರನು.[6] ೯೪೫-೧೫೨೪-20-57.

ಎನ್ನ ಆಯತ ಅವಧಾನಗೆಟ್ಟಿತ್ತಯ್ಯ! ಎನ್ನ ಸ್ವಾಯತ ಸಂದಳಿಯಿತ್ತಯ್ಯ! ಎನ್ನ ಸಮಾಧಾನ ತರಹರವಾಯಿತ್ತಯ್ಯ! ಎನ್ನ ಅಱಿವು ನಿಜದಲ್ಲಿ ನಿಷ್ಪತ್ತಿಯಾಯಿತ್ತಯ್ಯ. ಕಲಿದೇವರದೇವಯ್ಯ ನಿಮ್ಮಲ್ಲಿ ಶಬ್ದಮುಗ್ಧವಾಗಿದ್ದೆನು. ೯೪೬-೧೫೨೫-20-58.

ತನುವಳಿಯಿತ್ತು, ಮನವಳಿಯಿತ್ತು, ಭಾವವಳಿಯಿತ್ತು, ಬಯಕೆಯಳಿಯಿತ್ತು, ನಿಜವೆಂಬುದಳಿಯಿತ್ತು, ನಾಮಸೀಮೆ ಬಯಲಲ್ಲಿ ಬೆರಸಿ, ಕಲಿದೇವರ ದೇವನಲ್ಲಿ ಬೆರಸಿ ಬೇಱಿಲ್ಲದಿದ್ದೆನು. ೯೪೭-೧೫೨೬-20-59.

ಹಡಪದಪ್ಪಣ್ಣಗಳ ಪರಾಮರಿಕೆ:

ಎನ್ನ ತನು ನಿಮ್ಮ ಸೇವೆಯಲ್ಲಿ ಸವೆದು, ಎನ್ನ ಮನ ನಿಮ್ಮ ನೆನಹಿನಲ್ಲಿ ಸವೆದು,

---

[1] (ಶಿ) (ಗೂ)ಎನ್ನದೆ ಇದ್ದುದೇ (ಹ) [2] (ಗೂಶಿ) ಸಂಗಯ್ಯನಲ್ಲಿ (ಹ). [3] ಮಹಾಜ್ಞಾನ (ಗೂಶಿ) ಆ ಜ್ಞಾನ (ಹ). [4] (ಗೂಶಿ) ಆ ಮನೋಲಯವೆ (ಹ). A (ಹ) ಮಹಾಘನವಾಯಿತ್ತು (ಗೂಶಿ). [5] (ಗೂಹ) ನೊಳು (ಶಿ). [6] (ಗೂ) ಅವಾಙ್ಮನಸಗೋಚರನು (ಶಿ) ವಾಙ್ಮನಸಿನ ಗೋಚರನು (ಹ).

ಎನ್ನ ಅಱಿವು ನಿಮ್ಮ ಘನದೊಳಗೆ ಸವೆದು, ನಿಶ್ಚಲನಿಜೈಕ್ಯವಾಗಿ, ಬಸವಪ್ರಿಯ ಕೂಡಲ ಚೆನ್ನಸಂಗಮದೇವ, ನೀ-ನಾನೆಂಬುದು ಏನಾಯಿತ್ತೆಂದಱಿಯೆನು. ೯೪೮-೧೫೨೭-20-68. ಮತ್ತಂ:

ಎನ್ನ ಆಚಾರ-ವಿಚಾರ ಬಸವಣ್ಣಂಗರ್ಪಿತವಾದವು. ಎನ್ನ ಅವಧಾನ-ಅನುಭಾವ ಬಸವಣ್ಣಂಗರ್ಪಿತವಾದವು. ಎನ್ನ ಸರ್ವಾಚಾರಸಂಪತ್ತು ಬಸವಣ್ಣನಲ್ಲಿ ವೇದ್ಯವಾಯಿತ್ತು. ಬಸವಪ್ರಿಯ ಕೂಡಲಚೆನ್ನಸಂಗಯ್ಯನಲ್ಲಿ ನಿಜನಿವಾಸಿಯಾಗಿದ್ದೆನು. ೯೪೯-೧೫೨೮-20-69.

[1]ಹರಿದು[1] ಹತ್ತಿ ಮುಟ್ಟಲಿಲ್ಲ. ಮುಟ್ಟಿ ಮರಳಿ ಇಳಿಯಲಿಲ್ಲ. ಬೆರಸಿಹೆನೆಂದು ನೆನೆಯಲಿಲ್ಲ. ಬಸವಪ್ರಿಯ ಕೂಡಲಚೆನ್ನಸಂಗಯ್ಯನಲ್ಲಿ ಶಬ್ದಕ್ಕೆ ಇಂಬಿಲ್ಲದಿದ್ದೆನು. ೯೫೦-೧೫೨೯-20-70.

ಸೊಡ್ಡಳ ಬಾಚರಸರ ಪರಾಮರಿಕೆ:

ಎನ್ನ ಕಾಯವೆಂಬ ಸಿಂಹಾಸನದಲ್ಲಿ ಪ್ರಾಣವೆಂಬ ಲಿಂಗವ ಮೂರ್ತಿಗೊಳಿಸಿ, ಧ್ಯಾನವೆಂಬ ಹಸ್ತದಲ್ಲಿ ಮುಟ್ಟಿ ಪೂಜಿಸುತ್ತಿರಲು, ಮೆಲ್ಲಮೆಲ್ಲನೆ ಸುತ್ತಿಮುತ್ತಿದ ಸಂಸಾರ ಬಯಲ ಬೆರಸಿ, ನೀ-ನಾನೆಂಬ ಭೇದವಳಿದು ಮಹಾದಾನಿ ಸೊಡ್ಡಳನಲ್ಲಿ ನಿಜಲಿಂಗೈಕ್ಯವಾಯಿತ್ತು. ೯೫೧-೧೫೩೦-20-71. ಮತ್ತಂ:

ಅಂಗ ಲಿಂಗಕ್ಕೆ ಗೂಡಾಯಿತ್ತು. ಲಿಂಗ ಅಂಗಕ್ಕೆ ಗೂಡಾಯಿತ್ತು. ಅಂಗ-ಲಿಂಗ-ಸಂಗವೆಂಬ ಸಂದಳಿದು ನಿಜಲಿಂಗೈಕ್ಯವಾಯಿತ್ತು. ಭಾವ-ನಿರ್ಭಾವ-ನಿಷ್ಪತಿಯಲ್ಲಿ ಮಹಾದಾನಿ ಸೊಡ್ಡಳಂಗೆ ಸರ್ವನಿರ್ವಾಣವಾಯಿತ್ತು. ೯೫೨-೧೫೩೧-20-72. ಮತ್ತಂ:

ಎನ್ನ ಅಷ್ಟವಿಧಾರ್ಚನೆ ಷೋಡಶೋಪಚಾರ ಹಂಗುಹಱಿದು ಸೋಹಂ ಸೋಹಂ ಎನುತಿದ್ದಿತ್ತು. ಸೋಹಮೆಂಬ ಸುಖದ ಸವಿಯ ಮಹಾದಾನಿ ಸೊಡ್ಡಳ ಆರೋಗಣೆಯ ಮಾಡಿ ನಿಜನಿವಾಸಿಯಾದ ಕಾರಣ, ನಾನು ನಾಮ-ಸೀಮೆಗೆಟ್ಟೆನು. ೯೫೩-೧೫೩೨-20-73.

ಅಕ್ಕನಾಗಾಯಿಗಳ ಪರವಶ:

ಎನ್ನ ತನು ಚೆನ್ನಬಸವಣ್ಣನ ಬಯಲ ಬೆರಸಿ, ಎನ್ನ ಮನ ಸಂಗನ ಬಸವಣ್ಣನ ನಿಜಪದವ ಬೆರಸಿ, ಎನ್ನ ಪ್ರಾಣ ಪ್ರಭುದೇವರ ಬಯಲ ಬೆರಸಿ, ಬಸವಪ್ರಿಯ ಚೆನ್ನ ಸಂಗನ ಶರಣರು ಒಬ್ಬರೊಂದ ಹಂಚಿಕೊಂಡ ಕಾರಣ, ಎನಗೇನೂ ಇಲ್ಲದೆ ಮಹಾಘನದಲ್ಲಿ ನಿಜನಿವಾಸಿಯಾಗಿದ್ದೆನು. ೯೫೪-೧೫೩೩-20-74.

ಎನ್ನ ಕುಲಸೂತಕವ ಕಳೆದ ಬಸವಣ್ಣ, ಎನ್ನ ಛಲಸೂತಕವ ಕಳೆದ ಬಸವಣ್ಣ. ಎನ್ನ ತನುಸೂತಕವ ಕಳೆದ ಬಸವಣ್ಣ, ಎನ್ನ ಮನಸೂತಕವ ಕಳೆದ ಬಸವಣ್ಣ. ಎನ್ನ ಪ್ರಾಣಸೂತಕವ ಕಳೆದ ಬಸವಣ್ಣ, ಎನ್ನ ಭಾವಸೂತಕವ ಕಳೆದ ಬಸವಣ್ಣ, ಎನ್ನಱಿವು

---

[1] ಹಱಿದು (ಗೂ).

ಮಱಹಿನ ಸಂದ ಬಿಡಿಸಿದ ಬಸವಣ್ಣ. ಎನ್ನ ತನ್ನಲ್ಲಿ ಇಂಬಿಟ್ಟುಕೊಂಡ ಬಸವಣ್ಣ, ತನ್ನ ಎನ್ನಲಿ ಇಂಬಿಟ್ಟುಕೊಂಡ ಬಸವಣ್ಣ. ನಿಜದ ನಿರ್ಣಯಲ [1]ಸಮಾಧಿಯ[1] ನಿಜ ನಿವಾಸದ ಬಾಗಿಲ ತೋಱಿದ ಬಸವಣ್ಣ. ಬಸವಣ್ಣಪ್ರಿಯ ಚೆನ್ನಸಂಗಯ್ಯನ ಹೃದಯ ಕಮಲದಲ್ಲಿ ಸಯವಾಗಿರಿಸಿದ ಎನ್ನ ತಂದೆ ಸಂಗನ ಬಸವಣ್ಣ. ೯೫೫-೧೫೩೪-20-75.

ಮೋಳಿಗಯ್ಯಗಳ ಪರವಶ:

ಎನ್ನ ಅಱಿವು-ಮಱಹು ಬಸವಣ್ಣಂಗರ್ಪಿತ. ಎನ್ನ ಆಚಾರ-ವಿಚಾರ ಬಸವಣ್ಣಂಗರ್ಪಿತ. ಎನ್ನ ಭಾವ-ನಿರ್ಭಾವ ಬಸವಣ್ಣಂಗರ್ಪಿತ. ಎನ್ನಂತರಂಗ-ಬಹಿರಂಗ ಬಸವಣ್ಣಂಗರ್ಪಿತ. ನೀ-ನಾನೆಂಬುದು ಬಸವಣ್ಣಂಗರ್ಪಿತ. ಇಂತು ಎನ್ನನೆ ಬಸವಣ್ಣಂಗೆ ನಿವೇದಿಸಿ ಅವಲಂಬವು ಇಲ್ಲದೆ ನಿರಾಲಂಬದಲ್ಲಿ ನಿವಾಸಿಯಾಗಿದ್ದೆನು ಕಾಣಾ ನಿಃಕಳಂಕ ಮಲ್ಲಿಕಾರ್ಜುನ. ೯೫೬-೧೫೩೫-20-76. ಮತ್ತಂ:

ಬಾಯೆಂಬಲ್ಲಿ ಬಳಿಸಂದೆನು. ಸಾಯೆಂಬಲ್ಲಿ ಸಯವಾದೆನು. ವಾಯೆಂಬಲ್ಲಿ ನಿರವಯವಾದೆನು. ನಿಃಕಳಂಕ ಮಲ್ಲಿಕಾರ್ಜುನ, ಬಸವಣ್ಣನ ನಿಜಪದದಲ್ಲಿ ಸಂದಿಲ್ಲದೆ ಬೆರಸಿ ನಮೋ ನಮೋ ಎಂಬ ಹಂಗಳಿದುಳಿದೆನು. ೯೫೭-೧೫೩೬-20-77.

ಡೋಹರಕಕ್ಕಯ್ಯಗಳ ಪರವಶ:

ಎನ್ನ ಕಷ್ಟಕುಲದ ಸೂತಕ, ನಿಮ್ಮ ಹಸ್ತ ಮುಟ್ಟಿದಲ್ಲಿ ಬಯಲಾಯಿತ್ತು. ಶುಕ್ಲ ಶೋಣಿತದಿಂದಾದ ಸೂತಕ, ಲಿಂಗ ಮುಟ್ಟಲೊಡನೆ ಬಯಲಾಯಿತ್ತು. ಎನ್ನ ತಟ್ಟಿದ ಮುಟ್ಟಿದ ಸುಖಂಗಳ ಲಿಂಗಮುಖಕ್ಕೆ ಅರ್ಪಿಸಿದೆನಾಗಿ ಎನ್ನ ಪಂಚೇಂದ್ರಿಯಂಗಳು ಬಯಲಾಯಿತ್ತು. ಅಭಿನವ ಮಲ್ಲಿಕಾರ್ಜುನ, ನಿಮ್ಮ ಮುಟ್ಟಿದ ಕಾರಣ ನಾನು ಬಯಲಾದೆನು. ೯೫೮-೧೫೩೭-20-78. ಮತ್ತಂ:

ನೆನೆಯಲಱಿಯೆ, ನಿರ್ಧರಿಸಲಱಿಯೆ, ಮನವಿಲ್ಲಾಗಿ; ಭಾವಿಸಲಱಿಯೆ, ಬಳಸಲಱಿಯೆ, ಭಾವ ನಿರ್ಭಾವವಾಯಿತ್ತಾಗಿ. ಧ್ಯಾನಮೌನವಱಿಯೆ ಧ್ಯಾನಾತೀತ ತಾನೆಯಾಯಿತ್ತಾಗಿ. ಜ್ಞಾತೃ-ಜ್ಞಾನ-ಜ್ಞೇಯಂಗಳೆಲ್ಲವ ಮೀಱಿ ಅಭಿನವ ಮಲ್ಲಿಕಾರ್ಜುನನಲ್ಲಿ ಪರಮಸುಖಿಯಾದೆನು. ೯೫೯-೧೫೩೮-20-79.

ಇಂತು ಎಲ್ಲಾ ಗಣಂಗಳು [1]ತಮ್ಮ ತಮ್ಮ[1] ನಿಜ ಪದದ ನಿಲುಕಡೆಯ ಹೇಳಿದ ಕಡೆಯಲ್ಲಿ, ಪ್ರಭುದೇವರು ತಮ್ಮ ಪರಾಮರಿಕೆಯ ಹೇಳುವ ಪ್ರಸ್ತಾವ:

ಮನದ ಕೊನೆಯಿಂದ ನೆನೆದ ನೆನಹು ಜನನ-ಮರಣವ ನಿಲಿಸಿ, ಜ್ಞಾನಜ್ಯೋತಿಯ ಉದಯ ಭಾನುಕೋಟಿಯ ಮೀಱಿ, ಸ್ವಾನುಭಾವದ ಉದಯ ಜ್ಞಾನಶೂನ್ಯದಲಡಗಿದ ಘನವನೇನೆಂಬೆನು ಗೊಗೇಶ್ವರ. ೯೬೦-೧೫೩೯-20-85.

ನಿರ್ವಿಕಲ್ಪವೆಂಬ ನಿಜದೊಳಗಯ್ಯ, ನಿರಹಂಕಾರಭಾವದಲ್ಲಿ ಇದ್ದೆನು. ನೋಡಿಹೆನೆಂದರೆ ನೋಡಲಿಲ್ಲ. ಕೇಳಿಹೆನೆಂದರೆ ಕೇಳಲಿಲ್ಲ. ಘನನಿರಂಜನದ ಬೆಳಗಿಂಬಾದುದು

---

[1] (ಹಗೂ) ಸಮಾಧಿಯಲಿ (ಶಿ). [2] (ಹಗೂ) ತಮ್ಮ (ಶಿ).

ಏನೆಂಬೆನು, ಗೊಗೇಶ್ವರ! ೯೬೧-೧೫೪೦-20-86. ಮತ್ತಂ:

ಘನವ ಕಂಡು ಮನ[1]ವವಗ್ರಹಿಸಿತ್ತು.[1] ಕಂಡು ಕಂಡು ಮಹಾಘನವಾಯಿತ್ತು. ತತ್ತಲ್ಲೀಯವಾಯಿತ್ತು. ತದ್ಗತ ಶಬ್ದಮುಗ್ಧವಾದುದನೇನೆಂಬೆನು ಗೊಗೇಶ್ವರ. ೯೬೨-೧೫೪೧-20-87.

ಬಯಲ ಬೆಳಗಿನ ಸುಖದ ಸವಿಯ ಬೆಳಗಲ್ಲದೆ ಕಾಣೆ. ಕಾಣೆನೆಂಬ ನುಡಿಗೆಡೆಯ ಕಾಣೆ. ಕುಱುಹಳಿದು, ಅಱಿವ ನೆಱೆಯಱಿದು, ಬೆರಸಿದೆನೆಂಬ ಬಱುನುಡಿಗೆ ನಾಚಿದೆನಯ್ಯ ಗೊಗೇಶ್ವರ. ೯೬೩-೧೫೪೨-20-88. ಮತ್ತಂ:

ಉಪಮೆ ಉಪಮಿಸಲಱಿಯದೆ ಉಪಮಾತೀತನೆಂದು ಉಪಮೆ ಅಳಲುತ್ತಿದ್ದಿತ್ತು. ಅಱಿವು ಅಱಿವಿನ ಮಱೆಯಲಿದ್ದುದನಱಿಯದೆ ಅಱಿವು ಕುಱುಹುವಿಡಿದಾಡುತ್ತಲಿದ್ದಿತ್ತು. [ಧ್ಯಾನ] ಧ್ಯಾನಿಸಲಱಿಯದೆ ಧ್ಯಾನಗೊಂಡು ನಿಂದಿತ್ತು. ಜ್ಞಾತೃ-ಜ್ಞಾನ-ಜ್ಞೇಯಕ್ಕೆ ಅಸಾಧ್ಯವಾಗಿ, ಜ್ಞಾನವು ವೇದ ವೇದ ವಿಜ್ಞಾನವೆಂದುವಾಗಿ, ತತ್ತ್ವಮಸಿ ವಾಕ್ಯಂಗಳರ್ಥವೆಲ್ಲವೂ ಹುಸಿಯಾಗಿ ಹೋದವು. ಸಚ್ಚಿದಾನಂದವೆಂದುದಾಗಿ ದ್ವೈತಾದ್ವೈತ ಬ್ರಹ್ಮವಾದಿಗಳೆಲ್ಲರೂ ಸಂಹಾರವಾಗಿ ಹೋದರು. ಬಂದೂ ಬಾರದು, ಹೊಂದಿಯೂ ಹೊಂದದು, ನಿಂದ ನಿರಾಳ ಗೊಗೇಶ್ವರ. ೯೬೪-೧೫೪೩-20-89. ಮತ್ತಂ:

ನಾನೆಂಬುದು ಪ್ರಮಾಣು, ನೀನೆಂಬುದು ಪ್ರಮಾಣು, ಸಯುವೆಂಬುದು ಪ್ರಮಾಣು, ಪರವೆಂಬುದು ಪ್ರಮಾಣು, ಪ್ರಮಾಣವೆಂಬುದು ಪ್ರಮಾಣು, ಅಪ್ರಮಾಣವೆಂಬುದು ಪ್ರಮಾಣು—[2]ಗೊಗೇಶ್ವರನೆಂಬುದು ಪ್ರಮಾಣು[2]. ೯೬೫-೧೫೪೪-20-91.

[1] (ಹಗೂ) ಮನವಗಮಿಸಿತು (ಶಿ). [2] (ಶಿ) ಗೊಗೇಶ್ವರನೆಂಬುದು ಅಪ್ರಮಾಣು (ಹಗೂ).

*ಇಂತು ಬಸವರಾಜದೇವರು ಚೆನ್ನಬಸವರಾಜದೇವರು ಪ್ರಭುದೇವರು ಮೊದಲಾದ ಅಸಂಖ್ಯಾತಮಹಾಗಣಂಗಳೆಲ್ಲರೂ ತಮ್ಮ ತಮ್ಮ ನಿಜಪದದ ನಿಜೈಕ್ಯಭೇದಮಂ ಪೇಳಲು, ಪ್ರಭುದೇವರು ಕೇಳ್ದು, ತಮ್ಮ ನಿಜಪದಮಂ ಪೇಳ್ದು, ಮತ್ತೆಲ್ಲಾ ಅಸಂಖ್ಯಾತರಿಗೆ ನಿರ್ವಾಹಸ್ಥಿತಿಗತಿಯಂ ನಿರೂಪಸುತ್ತಿದ್ದರದೆಂತೆಂದಡೆ:

ಅವಧಿಯಳಿಯಿತ್ತು, ವ್ಯವಧಾನ ಉಳಿಯಿತ್ತು. ನಿಜವೆ ನಿಜವನೊಡಗೂಡಿತ್ತು ಕೇಳಾ ಬಸವಣ್ಣ! ಕಲಿಯುಗದಲ್ಲಿ ಮುಂದೆ ಇರಬಾರದು ನಿಜಶರಣರಿಗೆ: ನಡೆ ನೀನು ಕಪ್ಪಡಿಯ ಸಂಗಯ್ಯನಲ್ಲಿ ಒಡಗೂಡು, ಉಳುವೆಯಲ್ಲಿ ನಿಜವನೆಯ್ದು ನಡೆ ಚೆನ್ನ ಬಸವಣ್ಣ, ಮಹವನೊಡಗೂಡು ಮಡಿವಾಳಯ್ಯ, ಸೊಡ್ಡಳಬಾಚರಸರು ಮೊದಲಾದ ಪ್ರಮಥರೆಲ್ಲರೂ ನಿಜವನೆಯ್ದುವುದು ನಿರ್ವಯಲ ಸಮಾಧಿಯಲ್ಲಿ. ಬಗಿದು ಹೊಗಿ ಲಿಂಗದೊಳಗೆ ಹೊಗುವರೆಲ್ಲರೂ. ನಡೆಯಿ ಕಾಯವೆರಸಿ ಕೈಲಾಸಕ್ಕೆ ಓಹವರು. ಕಾಯ ಸಹಿತೆಯ್ದುವುದು ನಿಮಗೆಲ್ಲರಿಗೆ ಉಪದೇಶಮಂತ್ರ ತಪ್ಪದು. ನಮಗೆ ಕದಳಿಯ ಹೊಕ್ಕು ನಿಜದಲ್ಲಿ ಒಡಗೂಡುವ ಪರಿಣಾಮ—ಇದು ನಮ್ಮ ಗೊಗೇಶ್ವರಲಿಂಗದಾಣತಿ ನಿಮಗೆಲ್ಲರಿಗೆ. ೯೬೬-೧೫೪೫-21-1.

ಇಂತು ಬಸವರಾಜದೇವರು ಮುಖ್ಯವಾದ ಅಸಂಖ್ಯಾತರೆಲ್ಲಕ್ಕೆ ನಿಜಸಮಾಧಿಯ ಹಜ್ಜೆಮಂ ನಿರೂಪಿಸಿ ಬೀಳ್ಕೊಂಡು, ಕಲ್ಯಾಣಮಂ ಪೊರಮಟ್ಟು, ಶ್ರೀ ಪರ್ವತಕ್ಕೆ ಬಿಜಯಂಗೆಯ್ವುತ್ತಿರಲಲ್ಲಿ ಗೊರಕ್ಷನೆಂಬ ಸಿದ್ಧನಂ ಕಂಡು, ಸಂಭಾಷಣೆಯಂ ಮಾಡಿ, ಅವನ ವಜ್ರದೇಹಮಂ ಅಸಿತಾಳಪತ್ರದಿಂ ಕಡಿದು ನೋಡಿ, ಪರೀಕ್ಷೆಯಂ ಕೊಂಡು, ಆತಂಗುಪದೇಶಮಂ ಮಾಡಿ ಕದಳಿಯಂ ಪೊಗುವಾಗಳು—ಆ ಕದಳಿಯ ಬಾಗಿಲೊಳು ನಿಂದು ಹೇಳಿದ ಪ್ರಸ್ತಾವದ ವಚನ:

ಕಾಯವೆಂಬ ಕಂತೆಯ ತೊಟ್ಟವರು ಬ್ರಹ್ಮನಾಗಲಿ, ವಿಷ್ಣುವಾಗಲಿ, ರುದ್ರನಾಗಲಿ, ಈಶ್ವರನಾಗಲಿ, ಸದಾಶಿವನಾಗಲಿ, ಪಂಚಮುಖ-ದಶಭುಜ-ತ್ರಿನೇತ್ರನಾಗಲಿ, ಅಂಗಾಲ ಕಣ್ಣು ಮೆಯ್ಯೆಲ್ಲ ಕಣ್ಣುಳ್ಳ ನಂದಿವಾಹನ ರುದ್ರನಾಗಲಿ, ಗಂಗಾಧರನಾಗಲಿ ಗೌರೀಪತಿಯಾಗಲಿ—ಮಾಯೆ ಕಾಡನೇ ಬಿಡಳು ನೋಡಾ! [1]ಕಾಯವೆಂಬ ಕಣ್ಣಡಿಯ ಕೊಟ್ಟು ಕೈಲಾಸದಲ್ಲಿದ್ದಡೆ ಅಗ್ಗದ ರುದ್ರನೆನ್ನ ನುಗ್ಗುನುರಿಯ ಮಾಡಿ ನೆಲಕ್ಕೆ ಹಾಯ್ಕಿದಡೆ,

---

* ಇಲ್ಲಿಂದ ಗೂಳೂರಿನಲ್ಲಿ "ಗೊರಕ್ಷನ ಸಂಪಾದನೆ ಮತ್ತು ಎಲ್ಲಾ ಗಣಂಗಳ ಐಕ್ಯ" ಎಂಬ ಪರಿಚ್ಛೇದ ಪ್ರಾರಂಭವಾಗುವುದು. [1] (ಶಿ) ನಾನು ಕಾಯವೆಂಬ ಕಂತೆಯ ತೊಟ್ಟು ಕೈಲಾಸದಲ್ಲಿ ಇದ್ದಡೆ ಅಗ್ಗದ ರುದ್ರನೆನ್ನ ನುಗ್ಗು ನುರಿಯ ಮಾಡಿ ನೆಲಕ್ಕೆ ಹಾಯ್ಕಿದಡೆ ಬಿದ್ದು ಎದ್ದು ಗುರುವಿನಿಂದ ಭವದಬಳ್ಳಿಯ ಹರಿದೆ ನೋಡಾ. ಹಿಂದಣಭವಕ್ಕಂಜಿ (ಹ).

ಬಂದು ಭವದ ಬಳ್ಳಿಯ ಹಱಿದೆ ನೋಡಾ! ಹಿಂದಣ ಭಯಕಂಜಿ, ಮುಂದೆ ಪರಲೋಕದ ಗತಿಯನೊಲ್ಲೆನೆಂದು ಜಱೆದು ಕಳೆದೊಡೆ, ಪುಣ್ಯ ಪಾಪಂಗಳೆಂಬೆರಡೂ ಹೊಱಗಾದವು. ಗೊಗೇಶ್ವರನೊಡ್ಡಿದ ಸಂಸಾರಸಾಗರವ ದಾಂಟಿ ನಿತ್ಯನಿಜನಿವಾಸದ ಬಾಗಿಲ ಕಂಡು ತಲೆವಾಗಿ ಹೊಕ್ಕೆನಯ್ಯ. ೯೬೭–೧೫೪೬–×

ಇಂತು ಕದಳಿಯ ಮುಂಬಾಗಿಲೊಳು ನಿಂದು ತನ್ನ ನಿಜನನಱಿದ ಪ್ರಭುದೇವರು ಆ ಕದಳಿಯ ಹೊಕ್ಕು ನಿರವಯದೊಳು ನಿವಾಸಿಯಾದ ಪ್ರಸ್ತಾವದ ವಚನ:

ಕಾಯವೆಂಬ ಮಹಾಕದಳಿಯ ಗೆಲಬಲ್ಲವರನಾರನೂ ಕಾಣೆ. ಸಂಸಾರಸಾಗರವೆಂಬ ಸಪ್ತಸಮುದ್ರ ಬಳಸಿಪ್ಪುದು. ಭವವೆಂಬ ಮಹಾರಣ್ಯದೊಳು ಪಂಚೇಂದ್ರಿಯವೆಂಬ ವಿಷದ ಮಳೆ ಸುರಿವುತ್ತಿರ್ಪುದು. ಕೋಪವೆಂಬ ಬಿರ್ಬುಲಿ ಮೊರೆವುತ್ತಿರ್ಪುದು. ಅಷ್ಟಮದವೆಂಬ ಮದಗಜಂಗಳು ಬೀದಿವರಿಯುತ್ತಿರ್ಪವು. ಕಾಮವೆಂಬ ಮೂಱಂಬಿನ ಸೋನೆ ಸುರಿಯುತ್ತಿರ್ಪುದು. ಮತ್ಸರವೆಂಬ ಮಹಾಸರ್ಪಂಗಳು ಕಿಡಿಯನುಗುಳುತ್ತಿರ್ಪವು. ಆಸೆಯೆಂಬ ಪಾಪಿಯ ಕೂಸು ಹಿಸಿಹಿಸಿದು ತಿನುತ್ತಿರ್ಪುದು. ತಾಪತ್ರಯವೆಂಬ ಕೆಂಡದ ಮಳೆ—ಅಡಿ ಇಡಬಾರದು. ಅಹಂಕಾರವೆಂಬ ಗಿರಿಗಳು ಅಡ್ಡಬಿದ್ದಿಪ್ಪವು. ಪಂಚಭೂತಂಗಳೆಂಬ ಭೂತಪ್ರೇತಂಗಳ ಭಯ ದಿಟ್ಟಿಸ ಬಾರದು. ಮಾಯೆಯೆಂಬ ರಕ್ಕಸಿ ಹಸಿಯ ತಿನುತಿರ್ಪಳು. ವಿಷಯವೆಂಬ ಕೂಪ ಬಳಸ ಬಾರದು. ಮೋಹವೆಂಬ ಬಳ್ಳಿ [1]ಕಾಲ ಕುತ್ತ[1] ಬಾರದು. ಲೋಭವೆಂಬ [2]ಮಸೆದಡಾಯುಧ[2]ವನೊಡೆಯುಚ್ಚ ಬಾರದು. ಇಂತಪ್ಪ ಕದಳಿಯ ಹೊಗಲಱಿಯದೆ ದೇವ-ದಾನವ-ಮಾನವರೆಲ್ಲರೂ ಮತಿಗೆಟ್ಟು ಮರುಳಾಗಿ [3][ಹೆಱ][3] ತೆಗೆದೋಡಿದರು. ಅಂಗಾಲ ಕಣ್ಣು ಮೈಯೆಲ್ಲ ಕಣ್ಣವರು ತಲೆಬಾಲಗೆಟ್ಟರು. ನಾನೀ ಕದಳಿಯ ಹೊಕ್ಕು ಹೊಯಿದಾಡಿ, ಮುಳ್ಳುಮಸೆ ಮುಟ್ಟದೆ, [4]ಕಳಿವರಿದು[4] ಗೆಲಿದುತ್ತರಿಸಿ ಗೊಗೇಶ್ವರನೆಂಬ ಲಿಂಗದ ನಿಜಸಮಾಧಿಯಲ್ಲಿ ನಿಂದು ಪರವಶನಾಗಿ, ನಿರಾಳಕ್ಕೆ ನಿರಾಳವಾಗಿದ್ದೆನಯ್ಯ. ೯೬೮–೧೫೪೭–21–12.

ಇಂತು ಪ್ರಭುದೇವರು ನಿಜಪದವನೆಯ್ದಲು ಬಸವರಾಜದೇವರು ಸ್ತುತಿಸಿದ ವಚನ:

ಲಿಂಗಗಂಭೀರ ಮನಗೆಟ್ಟಿತ್ತಲ್ಲಾ! ಜಂಗಮಗಂಭೀರ ಸುಳುಹುಗೆಟ್ಟಿತ್ತಲ್ಲಾ! ಪ್ರಸಾದಗಂಭೀರ ರೂಪುಗೆಟ್ಟಿತಲ್ಲಾ! ಆಚಾರಗಂಭೀರ ಅವಯವಗೆಟ್ಟಿತಲ್ಲಾ! ಜ್ಞಾನಗಂಭೀರ ನಡೆ-ನುಡಿಗೆಟ್ಟಿತಲ್ಲಾ! ಕೂಡಲಸಂಗಮದೇವರಲ್ಲಿ ಪ್ರಭುದೇವರು ನಿಜವನೆಯ್ದಲು ಬಸವಣ್ಣನೊಡನೆ [?] ಒಡನೆ ಬಳಿಸಂದಿತಯ್ಯ! ೯೬೯–೧೫೪೮–21–13.

ಚಿಕ್ಕದಣ್ಣಾಯಕರ ವಚನ:

ಎನ್ನ ಅನುಭಾವದ ಅಗಮ್ಯವೆ, ಎನ್ನ ಅಱಿವಿನ ವಿಶ್ರಾಮವೆ, ಎನ್ನ ಭಾವದ [5]ಬಗೆಯೆ,[5] ಎನ್ನ ನಿಜದ ನಿಲವೆ, ಎನ್ನ ಪರಿಣಾಮದ ಮೇರುವೆಯೆ, ಎನ್ನ ಮನದ

---

[1] (ಗೂಶಿ) ಕಾಲುಗುತ್ತ (ಹ). [2] (ಶಿಹ) ಮಸೆದಡ್ಡಾಯುಧ (ಗೂ). [3] ಹೊಱ (ಗೂಶಿಹ). [4] (ಹಶಿ) ಕದಳಿವರಿದು (ಗೂ). [5] (ಶಿ) ಬಯಕೆಯೆ (ಗೂಹ).

ಮಹಿಮನೆ— ನಿಮ್ಮ ಸುಳುಹೆತ್ತಡಗಿತ್ತು? ಎಲೆ ಲಿಂಗವೇ, ನಿನ್ನ ನಾಮವೆತ್ತ ನಿರ್ನಾಮವಾಯಿತ್ತು? ಎಲೆ ಪರಮಗುರುವೇ, ಕೂಡಲಚೆನ್ನಸಂಗಯ್ಯನಲ್ಲಿ ಉರಿಯುಂಡ ಕರ್ಪುರದಂತಾದೆಯಲ್ಲಾ ಪ್ರಭುವೆ. ೯೨೦-೧೫೪೯-21-14.

ಆ ಪ್ರಸ್ತಾವದೊಳು ಮಡಿವಾಳಮಾಚಿತಂದೆಗಳು ಸ್ತುತಿಯಿಸಿದ ವಚನ:

ಅಷ್ಟತನುವಿನ ನಿಷ್ಕಾಪರವ ಬಿಟ್ಟು ಬಟ್ಟಬಯಲಲ್ಲಿ ನಿಂದ ನಿಜವ ನೋಡಾ! Aಹತ್ತೆಂಬA ಪ್ರಾಣವ ಸುತ್ತಿ ಸುಳಿಯಲೀಸದೆ— ಒತ್ತಿ ಸುಟ್ಟು ಸಯವಾದ ಘನ ಚೈತನ್ಯವ ನೋಡಾ. ನಿಷ್ಠೆನಿಬ್ಬರ ತೊಟ್ಟು ಬಿಟ್ಟು ಸಚ್ಚಿದಾನಂದವಾದ ಪರಿಯ ನೋಡಾ! ಕಲಿದೇವರ ದೇವ, ಪ್ರಭುದೇವರ ನಿಲವಿಂಗೆ ನಮೋ ನಮೋ ಎನುತಿದ್ದೆನು. ೯೨೧-೧೫೫೦-21-15.

ಆ ಪ್ರಸ್ತಾವದೊಳು ಸೊಡ್ಡಳ ಬಾಚರಸರು ಸ್ತುತಿಯಿಸಿದ ವಚನ:

ನಿಜತತ್ತ್ವದ BನಿರವಯಲುB ನಿರ್ವಾಹವಾಯಿತ್ತು. ನೆನೆವರ ಪರುಷ ಘನವನೊಡಗಲಸಿತ್ತು. ಭಕ್ತರ ಭಾಗ್ಯ ಮುಕ್ತಿಯನೆಯ್ದಿತ್ತು. ಬಸವಣ್ಣ-ಚೆನ್ನಬಸವಣ್ಣನ ಮಹಾಮನೆಯಲ್ಲಿ ಮಹಾದಾನಿ ಸೊಡ್ಡಳನ ಶರಣ ಪ್ರಭುದೇವರು [1]ನಿರವಯಲ[1] ಬೆರಸಲೊಡನೆ [2]ಸತ್ಯ[2]ಲೋಕದ ಬಾಗಿಲ ಕದ ತೆಱೆಯಿತ್ತು. ೯೨೨-೧೫೫೧-21-16.

ಆ ಪ್ರಸ್ತಾವದೊಳು ಸೊಡ್ಡಳಬಾಚರಸರು ಲಿಂಗೈಕ್ಯವಾಗಲು, ಬಸವರಾಜದೇವರು ನಿರೂಪಿಸಿದ ಪ್ರಸ್ತಾವದ ವಚನ:

ಎಮ್ಮವರಿಗೆ ಸಾವಿಲ್ಲ, ಎಮ್ಮವರು DಸಾವನಱಿಯರುD. ಸಾವೆಂಬುದು ಸಯವಲ್ಲ. ಲಿಂಗದಲ್ಲಿ ಉದಯವಾದ ನಿಜೈಕ್ಯರಿಗೆ [3]ಆ ಲಿಂಗದಲ್ಲಿ[3]ಯಲ್ಲದೆ ಬೇಱೆ ಮತ್ತೊಂದೆಡೆಯಿಲ್ಲ. ಕೂಡಲಸಂಗಮದೇವರ ಶರಣ ಸೊಡ್ಡಳ ಬಾಚರಸರು ನಿಜಲಿಂಗದ ಒಡಲೊಳಗೆ ಬಗಿದು ಹೊಕ್ಕಡೆ ಉಪಮಿಸಬಲ್ಲನರ ಕಾಣೆನು. ೯೨೩-೧೫೫೨-21-17.

ಅರಸೂ ವಿಚಾರವೂ, ಸಿರಿಯೂ ಶೃಂಗಾರವೂ ಸ್ಥಿರವಲ್ಲ ಕೇಳಿರೇ! ಮರ್ತ್ಯ[4]ಲೋಕ[4]ದೊಳಗೆ ಕೆಟ್ಟುಹುದು [< ಕೆಟ್ಟಹುದು < ಕೆಟ್ಟಪುದು] ಕಲ್ಯಾಣ. [5]ಹಾಳಾದುಹುದು[5] [ಹಾಳಾದಹುದು < ಹಾಳಾದಪುದು] ಕಲ್ಯಾಣ. ಲೋಕವಱಿಯಲು ಶಿವಾಚಾರದಭಿಮಾನದಲ್ಲಿ ಜಗದೇವ-ಮೊಲ್ಲೆಯ ಬೊಮ್ಮಣ್ಣಗಳ ಕೈಯಲ್ಲಿ ಮಡಿದಹನು ಬಿಜ್ಜಳನು. ಕೂಡಲಸಂಗಮದೇವರು ತಮ್ಮ ಕವಳಿಗೆಯ ತೊಡೆದಹರು. ೯೨೪-೧೫೫೩-21-18.

ಕರ್ತನಟ್ಟಿದರೆ ಮರ್ತ್ಯದಲ್ಲಿ ಮಹಾಮನೆಯ ಕಟ್ಟಿದೆ. ಸತ್ಯಶರಣರಿಗೆ ತೊತ್ತುಭೃತ್ಯನಾಗಿ ಸವೆದು ಬದುಕಿದೆನು. ಕರ್ತನ ಬೆಸನು ಮತ್ತೆ ಬರಲೆಂದಟ್ಟಿದರೆ ಕೂಡಲಸಂಗಮದೇವರ ನಿರೂಪಕ್ಕೆ ಮಹಾಪ್ರಸಾದವೆಂದೆನು. ೯೨೫-೧೫೫೪-21-19.

---

A (ಹ) (ಗೂ) ಹತ್ತೆಟ್ಟಸಿ (ಶಿ). B (ಶಿ) ನಿರವಯವು (ಹಗೂ). 1 (ಹ) ನಿರವಯವ (ಗೂಶಿ). 2 (ಗೂಶಿ) ಶಿವ (ಹ). D (ಹಗೂ) ಸಾವರನಱಿಯರು (ಶಿ). 3 (ಗೂಹ) ಅಲ್ಲಿಂದಲ್ಲಿ (ಶಿ). 4 (ಹಶಿ) × (ಗೂ). 5 (ಹಶಿ) ಹಾಳಹುದು (ಗೂ).

ಆ ಪ್ರಸ್ತಾವದೊಳು ಬಸವರಾಜದೇವರು ಎಲ್ಲಾ ಅಸಂಖ್ಯಾತ ಮಹಾಗಣಂಗಳನು ತಮ್ಮ ನಿಜವಾಸಕ್ಕೆ ಕಳುಹುತ, ತಮ್ಮ ಲಿಂಗೈಕ್ಯವುಂ ಬಿನ್ನಪಂಗೆಯ್ದು ಕಳುಹಿಸಿಕೊಂಬ ಪ್ರಸ್ತಾವದ ವಚನ :

ಆನು ನಿಮ್ಮ ಬಂಟರ [1]ಬಂಟರ[1] ಬಂಟ ನಾನಯ್ಯ, ಆನು ನಿಮ್ಮ ಲೆಂಕರ ಲೆಂಕ ನಾನಯ್ಯ, ಆನು ನಿಮ್ಮ ತೊತ್ತಿರ ಪ[2]ಡಿ[2]ಗವ ತೆಗೆವ ಪಡಿದೊತ್ತಯ್ಯ, ಕೂಡಲಸಂಗನ ಶರಣರೆಲ್ಲರಿಗೆ ಸಂಗನ ಬಸವನ ಬಿನ್ನಪ : [3]ಕವಳಿಗೆ[3] ಸಂದಿತ್ತು. [4]**ನಿಜಪದ**[4]ದಲ್ಲಿ ಬೆರಸೆಂದು ಕೃಪೆಮಾಡಿರಯ್ಯ. ೯೭೭-೧೫೫೫-21-31. ಮತ್ತಂ :

ಆನು ಮಾಡಿದ ತಪ್ಪನೆಣಿಸಿಹೆನೆಂದಡೆ ಗಣನೆಯಿಲ್ಲ: ನಡೆದು ತಪ್ಪುವೆ, ನುಡಿದು ತಪ್ಪುವೆ, ಮಾಡಿ ತಪ್ಪುವೆ, ನೀಡಿ ತಪ್ಪುವೆ, ಕೂಡಿ ತಪ್ಪುವೆ, ಅಱಿದು ತಪ್ಪುವೆ. ಎನ್ನ ತಪ್ಪನೊಪ್ಪಮಾಡಿಕೊಂಬುದಲ್ಲದೆ ಚಿತ್ತಕ್ಕೆ ತರಲಾಗದು. ಕೂಡಲಸಂಗಮದೇವಯ್ಯನೆಂಬ ಗಂಡನೆನ್ನ ಬೆರಸಬೇಕೆಂದು ಕರೆಯಲಟ್ಟಿದನು. ಶಿವಶಿರಣರೆಲ್ಲರಿಗೆ ಶರಣೆಂದು ಬೀಳುಕೊಂಬ ತವಕದಲಿದ್ದೆನು. ೯೭೭-೧೫೫೬-21-32.

ಆ ಪ್ರಸ್ತಾವದೊಳು ಶಿವಗಣಂಗಳಿಗೆ ಬಿನ್ನಪಂಗೆಯ್ದು ಬೀಳುಕೊಂಬ ಪದಂಗಳು :

**ರಾಗ : [5]ಆಹಿರ್[5]**

ಶರಣು ಶರಣು ಕೂಡೆ ಶರಣೆನುತ್ತಿದ್ದೆನಯ್ಯ.
ಅಚಲವಪ್ಪ ಲಿಂಗವನೊಲಿಸಿದ ಶರಣರಿಗೆ ಶರಣು. ‖ ಪಲ್ಲವ ‖

ಹಸ್ತ ತಾಯಿ, ದೃಷ್ಟಿ ತಂದೆ
ಹುಟ್ಟಿದೆ ನಾನು ಅಯೋನಿಯಲ್ಲಿ
[6]ಕಟ್ಟಿದ[6] ಕಂಕ[7]ಣ[7] ಗುರು ಸಾಕ್ಷಿ
ಯಾಗಿ ಶಿವನೆ ಗಂಡನೆಂದು ‖ ೧ ‖

ತಂದೆ ತಾಯಿ ಬಂಧು ಬಳಗ
ಶಿವಭಕ್ತ[8]ರೆನ್ನ[8] ತವರುಮನೆ
ಕೂಡೆ ಕಳುಹಿ ನೀವು
ಕೊಟ್ಟ ಗಂಡನ ಮನೆಗೆ ‖ ೨ ‖

---

[1] (ಹಶಿ) × (ಗೂ). [2] (ಹ) ಡು (ಗೂಶಿ). [3] (ಶಿ) ಕವಳಿಗೆಗೆ (ಗೂಹ). [4] ನಿಮ್ಮ ನಿಜಪದ (ಹಗೂ) ನಿಜನಿಜಪದ (ಶಿ). NOTE : "ಶಿ"ಯ ಈ ಪಾಠದಲ್ಲಿ ಯಥಾಪ್ರಕಾರ ಪುನರುಕ್ತಿಯಿಲ್ಲದ ದೋಷವಿದೆ. ಹ ಮತ್ತು ಗೂಗಳ ಪಾಠದಲ್ಲಿ ಪ್ರಕ್ಷೇಪಾಂಶಗಳಿವೆ. [5] (ಶಿ) ಅಹರಿ (ಗೂಹ). [6] (ಹಶಿ) ಕಟ್ಟಿದೆ (ಗೂ). [7] (ಶಿಹ) ಣವ (ಗೂ). [8] (ಶಿಹ) ರೆನ್ನುವರು (ಗೂ).

ಮದುವೆಯೆಂದು ಎಮ್ಮವರು ಹುಟ್ಟಿಗೆ
ಉಡಿಸಲು, ಹುಟ್ಟಿಗೆ ಹಱಿದು
ಅಱುವೆಯಾ[1]ಗಿ[1] ಸ್ವತಂತ್ರಶೀಲರು
[2]ಅಱುವೆ ಕೊಟ್ಟರು[2] ಮರಳದಿರೆಂದು. ॥ ೩ ॥

ಹಿಂದಣ ಭವಮಾಲೆ ಹಿಂಗಿತು ಎನಗೆ
ನಿಮ್ಮ ಕಾರುಣ್ಯ ಪ್ರಸಾದದಿಂದ
ಮರಳಿ ಭವವಿಲ್ಲ ನೀವೆ ಬಲ್ಲಿರಿ
ನಿಮ್ಮ ಕಂದ ನಾನು. ॥ ೪ ॥

ಮುಚ್ಚಿದ ಬಾಯಿ ಮುಗಿದ ಕರವು
ನುಡಿಯಲಮ್ಮೆನು ಪ್ರತಿಶಬ್ದವನು
ನೊಸಲು ಶರಣರ ಪಾದದ
ಮೇಲಿಂದಗಲದಿಪ್ಪುದಾಗಿ ॥ ೫ ॥

ಹಲವು ಪರಿಯಿಂದ ಗಂಡನನೊಲಿಸಿ
ಕೂಡಿದ ಸ್ನೇಹಕೂಟವನ್ನು
ಹೇಳಲಿಲ್ಲ ಕೇಳಲಿಲ್ಲ
ಶಬುದಕಿಂಬಿಲ್ಲಾಗಿ ॥ ೬ ॥

ಶಬುದ ನಿಶ್ಶಬುದವಾಯಿತ್ತಿನ್ನು
ಕೂಡಲ ಸಂಗಯ್ಯನಲ್ಲಿ ಬೆರಸಿ
ಮನವು ಅಲ್ಲಮ ಪ್ರಭುವಿನ ಪಾದದಲ್ಲಿ
ಸಯವಾಗಿಪ್ಪುದಾಗಿ. ॥ ೭ ॥

ಅಂತು ಪದಸಹವಚನ. ೯೮೪-೧೫೬೩-21-39.

ಇಂತು ಬಸವರಾಜದೇವರು ಮಹಾಗಣಂಗಳ ಕೈಯಲು ಬೀಳ್ಕೊಂಡು, ತಮ್ಮ ಗೃಹೋಪಕರಣಂಗಳಂ ಲಿಂಗ-ಜಂಗಮಕ್ಕೆ ಸೂಱೆಗೊಟ್ಟು, ಏಳುನೂಱೆಪ್ಪತ್ತು ಮಹಾಗಣಂಗಳಿಗೆ ನಿಜಪದಪ್ರಾಪ್ತಿಯಂ ನಿರೂಪಿಸಿ ಕಳುಹಿ, ತಮ್ಮ ಸಮಯಾಚಾರದ ಮೂವತ್ತಾಱು ಸಾವಿರ ಜಂಗಮಮಂ ಚಿಕ್ಕದಣ್ಣಾಯಕರ ವಶಕ್ಕೆ ಕೊಟ್ಟು, ಕಪ್ಪಡಿಯ ಸಂಗಮನಾಥನ ಶ್ರೀಪಾದಸಮೀಪಕ್ಕೆ ಬಂದು ಬಿನ್ನಪಂಗೆಯ್ದ ಪ್ರಸ್ತಾವದ **ವಚನ :**

---

[1] (ಶಿ) ಗಿಪ್ಪ (ಗೂಹ). [2] (ಶಿ) ಕೊಟ್ಟು ಅಱುವೆಯು (ಗೂ) ಕೊಟ್ಟ ಅರುವೆ ಮರಳಾ [=ಳ?] (ಹ).

ನಾನಾ ಭವದುಃಖದಲ್ಲಿ ಹುಟ್ಟಿದ ಪ್ರಾಣಿಯಲ್ಲ ತಂದೆ! ಇನ್ನು ಹುಟ್ಟಲಾಱೆನು, ಹೊಂದಲಾಱೆನು. ಜನನ ಮರಣವೆಂಬೆರಡಕ್ಕೆ ಹೊಱಗಾದವ ನಾನಯ್ಯ. ನೀವು ಹೇಳಿದ ಮಣಿಹವ ಮಾಡಿದೆ. ಇನ್ನು ಕೂಡಿಕೊಳ್ಳಾ ಕೂಡಲಸಂಗಮದೇವ. ೯೮೫-೧೫೬೪-21-45.

ಅಯ್ಯ, ಹಿಂದೆಯಾನು ಮಾಡಿದ ಮಱಹಿಂದ ಬಂದೆನೀ ಭವದಲ್ಲಿ. ನಿಮ್ಮ ಲೀಲೆಯ ವಿನೋದಸೂತ್ರದಿಂದ ಲಕ್ಷದ ಮೇಲೆ ತೊಂಬತ್ತಾಱು ಸಾವಿರ ಗೀತಂಗಳ ಹಾಡಿಯಾಡಿ ದಾಸೋಹವೆಂಬ ಮಹಾಘನಸಂಕುಳದೊಳಗೆನ್ನ ನಿರಿಸಿ ನಿಮ್ಮ ಭಕ್ತಿಯ ಘನವ ನೀವೆ ಮೆಱೆಯಲೆಂದು ಪರವಾದಿ ಬಿಜ್ಜಳನ ತಂದು ಒಡ್ಡಿ, ಅವನನು ಎನ್ನೊಳಗೆ ಹೋರಿಸಿ, ಮುನ್ನೂಱಱುವತ್ತು ಸತ್ತ ಪ್ರಾಣವನೆತ್ತಿಸಿ, ಮೂವತ್ತಾಱು ಕೊಂಡೆಯವ ಗೆಲಿಸಿ, ಎಂಬತ್ತೆಂಟು ಪವಾಡಂಗಳಂ ಕೊಂಡಾಡಿ, ಮರ್ತ್ಯಲೋಕದ ಮಹಾಗಣಂಗಳ ಒಕ್ಕುದನಿಕ್ಕಿ ಎನ್ನ ಸಲಹಿದಿರಿ. ನಿಮ್ಮ ಮಹಾಗಣಂಗಳು ಮೆಚ್ಚಿ ಎನ್ನ ಸೂತಕವ ತೊಡೆದ[1]ರು[1]. ಪ್ರಭುದೇವರ ಕರುಣದಿಂದ ಪ್ರಾಣಲಿಂಗ ಸಂಬಂಧ ಸಯುವಾಯಿತು. ನೀವು ಕಳುಹಿದ ಬೆಸನು ಸಂದಿತ್ತು, [2]ಇನ್ನು[2] ಕೂಡಿಕೊಳ್ಳಾ A ಕೂಡಲಸಂಗಮದೇವ. ೯೮೫A-೧೫೬೫- ×.

ಉರಿಯೊಳಗಣ ಕರ್ಪುರಕ್ಕೆ ಕರಿಯುಂಟೆ ಅಯ್ಯ? ಬಯಲ ಮರೀಚಿಯ ಜಲಕ್ಕೆ ಕೆಸಱುಂಟೆ? ವಾಯುವನಪ್ಪಿದ ಪರಿಮಳಕ್ಕೆ ನಿರ್ಮಾಲ್ಯ ಉಂಟೆ ಅಯ್ಯ? ನೀವು ನೆಱೆ ಒಲಿದ ಬಳಿಕ ಎನಗೆ ಭವ ಉಂಟೆ? ಕೂಡಲಸಂಗಮದೇವ, ನಿಮ್ಮ ಚರಣ-ಕಮಳದೊಳA ಗಿಂಬುಗೊಳ್ಳಯ್ಯA. ೯೮೬-೧೫೬೬-21-46.

ಮತ್ತಂ ಐಕ್ಯ:

ಶರಣ ಸನ್ನಿಹಿತನು ಐಕ್ಯವಹಲ್ಲಿ, ಹರಿಬ್ರಹ್ಮಾದಿಗಳು ಮೊದಲಾದ ತೆತ್ತೀಸ ಕೋಟಿ ದೇವರ್ಕಳು ಉಘೇ ಚಾಂಗು ಭಲಾ ಎನುತ್ತಿರಲು, ಐಕ್ಯ ಬಸವಂಗೆ ಠಾವಾವುದೆಂದರೆ: ಅಂಗದ ಕಳೆಯಲ್ಲಿ ಬಲನೆ ಬ್ರಹ್ಮಸ್ಥಾನ. ಎಡದಲ್ಲಿ ನಾರಾಯಣಸ್ಥಾನ. [3]ಒಲ್ಲೆನಯ್ಯ ಆ ಸ್ಥಾನಂಗಳನು[3]! ಕೊರಳು ಗರಳಸ್ಥಾನ, ಬಾಯಿ ಅಪ್ಪುವಿನ ಸ್ಥಾನ, ನಾಸಿಕ ವಾಯುವಿನ ಸ್ಥಾನ, ಕಂಗಳು ಅಗ್ನಿಯ ಸ್ಥಾನ, ಜಡೆ ಗಂಗೆಯ ಸ್ಥಾನ, ನೊಸಲು ಚಂದ್ರನ ಸ್ಥಾನ, ಹಿಂದು ಸೂರ್ಯನ ಸ್ಥಾನ, ಚರಣಂಗಳು ಅಷ್ಟದಿಕ್ಪಾಲಕರ ಸ್ಥಾನಂಗಳು; ಗುಹ್ಯ ಕಾಮನ ಸ್ಥಾನ, ಹಸ್ತಂಗಳು ತ್ರಿಶೂಲ-ಕಪಾಲ-ಖಟ್ವಾಂಗ-ಡಮರುಗ ಸ್ಥಾನ. [4]ಇಂತೀ[4] ಎಲ್ಲಾ ಸ್ಥಾನಂಗಳನೊಲ್ಲೆನಯ್ಯ. ಹೃದಯಕಮಲದ ಅಂತರಾಳದ ಏಕಪೀಠದ ಸಿಂಹಾಸನದ ತೆಱಹ ಕೊಡು ಕೂಡಲಸಂಗಮದೇವ. ೯೮೭-೧೫೬೭-21-47.

---

[1] × (ಶಿ). [2] ಉಘೇ ಇನ್ನು (ಹ). A (ಶಿ) ಗಿಂಬಿಟ್ಟುಕೊಳ್ಳಯ್ಯ (ಹಗೂ). [3] (ಹ) ಸ್ಥಾನ, ಒಲ್ಲೆನಯ್ಯ ಆ ಸ್ಥಾನಂಗಳು (ಗೂಶಿ). [4] (ಗೂಶಿ) ಇಂತಿವು ಮೊದಲಾದ (ಹ).

ಐಕ್ಯದ ಪದಂಗಳು :

ರಾಗ : [1]ಗುಜ್ಜರಿ[1]

ಏಕಂ ನೀನಾಗಿ ಅನೇಕಂ ನೀನಾಗಿ
ಏಕಯ್ಯ ನೀವೆನ್ನ ಕಾಡಿಹಿರಿ ‖ ಪಲ್ಲವ ‖

ಪರಮಾತ್ಮ ನೀವೆನ್ನ ಹಿರಿದು ಕೋಪಿಸಿ
ಧರೆಗೇನು ಕಾರಣ ಕಳುಹಿದಿರಿ ? ‖ ೧ ‖

ಸಿತಾಳದಾಪ್ಯಾಯನವೆಂದ ಅನಿಮಿಷಂಗೆ
ಸಾತ್ವಿಕನೆಂದು ತೋಱಿದೆ ಲಿಂಗವ ‖ ೨ ‖

ಉಪಕಾರ ಮಾಡುವನ್ನ ಕಪಕೀರ್ತಿ ಆಯಿತಯ್ಯ
ಶಾಂತಿಯ ಮಾಡಲಿಕೆ ಬೇತಾಳನಾಯಿತು ‖ ೩ ‖

ಹಸು ಮಾಣಿಕವ ನುಂಗಿ ಉಗುಳದಂತೆ ಆಯಿತಯ್ಯ
ಪಶು ನಾನು ಪತಿ ನೀನು ಕಾಡಲಮ್ಮೆನು ‖ ೪ ‖

ಮರ್ತ್ಯಲೋಕದೊಳಗೆ ಬಂದು ಭಕ್ತನಾಗಿ ಮಾಡುವಲ್ಲಿ
ಕರ್ತೃ ಪ್ರಭುವಾಗಿ ಬಂದು ತೋಱಿದಿರಿ. ‖ ೫ ‖

ಮರ್ತ್ಯಲೋಕದೊಳಗೆ ನಾನು ಮತ್ತೆ ಬಂದೆನಾದರೆ
ಕರ್ತೃ ನಿಮ್ಮ ರಾಣಿವಾಸದಾಣೆಯಯ್ಯ. ‖ ೬ ‖

ಯದ್ಯಪಶ್ಯತ್ತ್ರಿಕಾಲಜ್ಞ ಸ್ತ್ರೈಲೋಕ್ಯಾಕರ್ಷಣಂ ಭವೇತ್
ತಥಾಪಿ ಲೌಕಿಕಾಚಾರಂ ಮನಸಾಪಿ ನ ಲಂಘಯೇತ್
ಇಂತೆಂಬ ಶ್ರುತಿವಾಕ್ಯವನು ನಾನು ಮೀಱಿದೆನಯ್ಯ
ಕೂಡಿಕೋ ಕೂಡಲ ಸಂಗಯ್ಯ. ‖ ೭ ‖

ಅಂತು ಪದಸಹವಚನ. ೯೯೪-೧೫೭೪-×.

ಮತ್ತಂ ಐಕ್ಯ :

ಧರೆಯಾಕಾಶದ ನಡುವೆ ಒಂದು ಮಾಮರ ಹುಟ್ಟಿತ್ತು. ಆ ಮರಕ್ಕೆ ಕೊಂಬೆರಡು, ಎಲೆ ಆಱು, ಮೂವತ್ತಾಱು ಪುಷ್ಪ, ಕಾಯೊಂದು. ಹಣ್ಣು ರಸ ತುಂಬಿದಲ್ಲಿ ಏನನೂ ಕಾಣೆ. ಎಲೆ ಉದುರಿದಡೆ ಹಣ್ಣು ತೊಟ್ಟು ಬಿಟ್ಟು ಬಿದ್ದಿತ್ತು. ಆ ಹಣ್ಣ ಪ್ರಭುದೇವರು ಆರೋಗಣೆಯ ಮಾಡಿ ನಿಜದಲ್ಲಿ ನಿರ್ವಯಲಾದರು. ಆ ಪ್ರಭುವಿನ ಕಾರುಣ್ಯ ಪ್ರಸಾದವ ನಾನು ಕೊಂಡೆನಾಗಿ ಕೂಡಲಸಂಗಮದೇವರು ಇತ್ತ ಬಾರೆಂದು ತಮ್ಮ ಹೃದಯಕಮಲದಲ್ಲಿ ಇಂಬಿಟ್ಟು ಕೊಂಡರು. ೯೯೫-೧೫೭೫-21-48.

[1] (ಶಿ) ಗುಜರಿ (ಹ).

ಇಂತು ಬಸವರಾಜದೇವರು ಕಪ್ಪಡಿಯ ಸಂಗಯ್ಯದೇವರ ಹೃದಯಕಮಲದಲ್ಲಿ ಬಗಿದು ಹೊಕ್ಕು ಲಿಂಗೈಕ್ಯವಾದಲ್ಲಿ ಅಕ್ಕನಾಗಾಯಿಗಳು ಪ್ರಳಾಪಿಸಿದ ವಚನ:

ಅಯ್ಯ, ನಾನಧವೆಯಯ್ಯ! ಕೈಯ ಕೋಲ ಕೊಂಬರೇ ಅಯ್ಯ?! ಎಳಗಱುವಿನ ಎಳಗಂದಿಯನೆಳೆದೊಯ್ಪರೇ? ಭಕ್ತರು ಅಯ್ಯೋ ಅಯ್ಯೋ ಎನಲೊಯ್ವರೇ, ಬಸವಣ್ಣಪ್ರಿಯ ಚೆನ್ನಸಂಗಯ್ಯ?! ೯೯೬-೧೫೮೩-21-60. ಮತ್ತಂ:

ಭಕ್ತಿಯ ತವನಿಧಿಯೆ, ಮುಕ್ತಿಯ ಮೂರುತಿಯೆ, ಲಿಂಗಜಂಗಮದ ಚೈತನ್ಯವೆ, ನಿಮ್ಮನಗಲಿ ಎಂತು ಸೈರಿಸುವೆನು. ಎಲೆ ಅಯ್ಯ, ಎಲೆ ಪರಮ ಗುರುವೇ, ಅಹಾ! ಎನ್ನಂತರಂಗದ ಜ್ಯೋತಿಯೆ, ನಿಮ್ಮ ಒಕ್ಕ ಶೇಷಪ್ರಸಾದವನಿಕ್ಕಿ, ಎನ್ನ ಪಾವನವ ಮಾಡಿ ಎನ್ನನುಳುಹಿದೆಯಲ್ಲಾ! ಲಿಂಗವೇ, ಎನಗಿನ್ನಾರು ಗತಿ ಹೇಳಯ್ಯ ನೀವಲ್ಲದೆ? ಬಸವಣ್ಣಪ್ರಿಯ ಚೆನ್ನಸಂಗಯ್ಯ, ನೀವಗಲಿದರೆ ಎನ್ನ ಪ್ರಾಣ ನಿಮ್ಮೊಳಗೆ ಅಗಲ ಬಲ್ಲುದೆ?! ೯೯೭-೧೫೮೪-21-61. ಮತ್ತಂ:

ಬಸವಣ್ಣ, ನೀವು ಮರ್ತ್ಯಕ್ಕೆ ಬಂದು ನಿಂದರೆ ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲಾ ಪಸರಿಸಿತಯ್ಯ! ಸ್ವರ್ಗ-ಮರ್ತ್ಯ ಪಾತಾಳದೊಳಗೆಲ್ಲಾ ನಿಮ್ಮ ಭಕ್ತಿಯ ಬೆಳವಿಗೆಯ ಘನವನಾರು ಬಲ್ಲರೊ ಅಣ್ಣ? ಶಶಿಧರನಟ್ಟಿದ ಮಣಿಹ ಪೂರೈಸಿತ್ತೆಂದು ನೀವು ಲಿಂಗೈಕ್ಯವಾದರೆ ನಿಮ್ಮೊಡನೆ ಭಕ್ತಿ ಹೋಯಿತ್ತಯ್ಯ, ನಿಮ್ಮೊಡನೆ ಸದಾಚಾರ ಹೋಯಿತ್ತಯ್ಯ, ನಿಮ್ಮೊಡನೆ ಅಸಂಖ್ಯಾತರು ಹೋದರಣ್ಣ! ಮರ್ತ್ಯಲೋಕದ ಮಹಾಮನೆ ಶೂನ್ಯವಾಯಿತ್ತು ಬಸವಣ್ಣ! ಎನ್ನನೊಯ್ಯದೆ ಹೋದೆಯಲ್ಲಾ ಪಂಚ ಪರುಷ ಮೂರುತಿ ಬಸವಣ್ಣ! ಬಸವಣ್ಣಪ್ರಿಯ ಚೆನ್ನಸಂಗಯ್ಯಂಗೆ ಪ್ರಾಣಲಿಂಗವಾದೆಯಲ್ಲಾ ಸಂಗನ ಬಸವಣ್ಣ! ೯೯೮-೧೫೮೫-21-62.

ಹೀಂಗೆಂದು ಬಿನ್ನಪಂಗೆಯ್ಯುತ್ತವೆ ಆ ಬಸವರಾಜದೇವರ ಬೆಂಬಳಿಯಲೆ ನಾಗಾಯಕ್ಕಗಳು ಲಿಂಗೈಕ್ಯವಾದ ಪ್ರಸ್ತಾವದ ವಚನ:

ಆಚಾರವೆಂಬುದು ಅಗೋಚರ ನೋಡಯ್ಯ! ಆರಿಗೂ ಅಸಾಧ್ಯವಲ್ಲಿ ಮರ್ತ್ಯಲೋಕದಲ್ಲಿ ಆ ಸದಾಚಾರದ ಬೆಳವಿಗೆಯ ಮಾಡಲೆಂದು ಬಸವಣ್ಣ ಬಂದು ಭಕ್ತಿಸ್ಥಲವ ಹರಹಿದ. ಗುರುಲಿಂಗ ಜಂಗಮದ ದಾಸೋಹಪ್ರಸಾದಪಾದೋದಕದ ಹಾದಿಯ ನೆಲ್ಲರಿಗೆ ತೋಱಿದ. ಶಿವಾಚಾರದ ಬೆಳವಿಗೆಯ ಅಹುದಲ್ಲವೆಂದು ಬಿಜ್ಜಣರಾಯ ತರ್ಕಿಸಲು ಅನಂತ ಮುಖದಿಂದ ಒಡಂಬಡಿಸಿ ಅಹುದೆನಿಸಿದ. ಬಂದ ಮಣಿಹ ಪೂರೈಸಿತ್ತೆಂದು ಲಿಂಗದೊಳಗೆ ಬಗಿದು ಹೊಕ್ಕಡೆ, ಹಿಂದೆ ಲೋಕವಱಿದು ಬದುಕಬೇಕೆಂದು ಸೆಱಗ ಕೊಟ್ಟನು. ನಾನು ಹಿಂದುಳಿದಹಳೆಂದು ಮುಂದಣ ಗತಿಯ ತೋಱಿದನು. ಬಸವಣ್ಣಪ್ರಿಯ ಚೆನ್ನಸಂಗಯ್ಯನಲ್ಲಿ ತನ್ನ ಪ್ರಸಾದದೊಳಗೆ ಇಂಬಿಟ್ಟುಕೊಂಡನು, ಎನ್ನ ಹೆತ್ತ ತಂದೆ ಸಂಗನ ಬಸವಣ್ಣನು. ೯೯೯-೧೫೮೬-21-63.

ಆ ಪ್ರಸ್ತಾವದೊಳು ಚೆನ್ನಬಸವರಾಜದೇವರು ಬಿನ್ನಪಂಗೆಯ್ದ ವಚನ:

ಲಿಂಗ ಜಂಗಮ, ಜಂಗಮ ಲಿಂಗವೆಂಬುದ ತೋಱಿ ನಿಜೈಕ್ಯನಾದೆಯಲ್ಲಾ, ನಿಜ

ಗುರು ಬಸವಣ್ಣ! ಪ್ರಸಾದ ಕಾಯ, ಕಾಯ ಪ್ರಸಾದವೆಂಬುದನೆನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ ಎನ್ನನಾಗು ಮಾಡಿ ಮುಂದುವರಿದೆಯಲ್ಲಾ ಸಂಗನ ಬಸವಣ್ಣ! ಲಿಂಗಪ್ರಾಣ, ಪ್ರಾಣಲಿಂಗದೆಂಬುದನೆನ್ನ ಅಂತರಂಗದಲ್ಲಿ ಸ್ಥಾಪ್ಯವ ಮಾಡಿ ಎನ್ನ ನಿನ್ನಂತೆ ಮಾಡಿ ನಿಜಲಿಂಗದೊಳು ನಿರವಯವಾದೆಯಲ್ಲಾ ಪರಮಗುರು ಬಸವಣ್ಣ! ಎನ್ನ ಮನವ ಮಹಾತತ್ವದಲ್ಲಿ ಲಯವ ಮಾಡಿ ನಿರವಯನಾಗಿ ಹೋದೆಯಲ್ಲಾ, ನಿಜಲಿಂಗೈಕ್ಯ ಬಸವಣ್ಣ! ನಿನ್ನ ಒಕ್ಕು ಮಿಕ್ಕ ಶೇಷವನಿಕ್ಕಿ ಆಗುಮಾಡಿ ನಿನ್ನಂತರಂಗದಲ್ಲಿ ಅಪ್ಪೆ ನಾಗಾಯಿಯನಿಂಬುಗೊಂಡಡೆ, ಎನ್ನ ಮನ ನಿಮ್ಮ ಪಾದದಲ್ಲಿ ಕರಗಿ ಕೊರಗಿತಯ್ಯ ಸಂಗನ ಬಸವಣ್ಣ! ಕೂಡಲ ಚೆನ್ನಸಂಗಯ್ಯಂಗೆ ಸುಜ್ಞಾನವಾಹನವಾಗಬೇಕೆಂದು ನಿರವಯನಾದೆಯಲ್ಲಾ ಸಂಗನ ಬಸವಣ್ಣ! ೧೦೦೦-೧೫೮೭-21-64.

ಆ ಪ್ರಸ್ತಾವದೊಳು ಬಿನ್ನಪಂಗೆಯ್ದ ಪದಂಗಳು:

### ರಾಗ: ಶೋಕ [1]ಬಹುಳಿ[1]

ಶರಣು ಶರಣು ಎನ್ನ ಗುರುವೇ ಶರಣಯ್ಯ
ಶರಣು ಉಪಮಾತೀತ ಗುರುವೆ
ಲಿಂಗ ಜಂಗಮವೆ ಘನವೆಂದು ಪ್ರಸಾದ
ಹಿಂಗದ ನಿಜಪದವ ತೋರಿದ ಗುರುವೆ ॥ ಪಲ್ಲವ ॥

ಸಾಕಾರ ರೂಪವನೆ ತಾಳಿ ಬಿಜ್ಜಳಂಗೆ
ಬೇಕಾದ ದೃಷ್ಟವ ತೋರಿದ ಗುರುವೆ
ವಿಸ್ತರಿಸಿ ಜಗಕೆ ನೀನಾಗಿ ಎನ್ನ
ತಪ್ಪಿಸಿ ಹೋದೆ ಎಲೆ ಗುರುವೆ. ॥ ೧ ॥

ಭಕ್ತ ಮಾಹೇಶ ಪ್ರಸಾದಿ ಪ್ರಾಣಲಿಂಗಿ
ಶರಣೈಕ್ಯ ಗುರುವೆ
ಸೋಹಿ ದಾಸೋಹಿ ನೀನಾಗಿ ಭಕ್ತರಿಗೆ
ಇಹಪರದ ಸುಖವನ್ನು ತೋರಿದ ಗುರುವೆ ॥ ೨ ॥

ನಾದಬಿಂದು ಕಳಾತೀತ ಮಹಾಘನದ
ಆದಿಲಿಂಗ ಅನಾದಿಶರಣ ಗುರುವೆ
ಮಿಂಚು ಮಿಂಚಿನೊಳು ಕೂಡಿದಂತೆ ಅದರ
ಸಂಚವನು ಏನೆನಲು ಬಹುದು ಗುರುವೆ ॥ ೩ ॥

---

[1] (ಶಿ) ವರಾಳಿ (ಹಗೂ).

ಅಱುವ ಕುಱುಹನೆ ಅಱಿಸಿ ಬರಲು ಆ
ಕುಱುಹು ಅಱಿವನೊಳಕೊಂಡುದ Aಮಱೆದ A ಗುರುವೇ
ಜ್ಞಾತೃ ಜ್ಞಾನ ಜ್ಞೇಯವೆಂಬಾ ತ್ರಿವಿಧದ
ಮಾತುವನು ಹಿಂಗಿದ ಗುರುವೆ ॥ ೪ ॥

ಭಾವ ಭಾವವನೆ ಭಾವಿಸಿ ಅನುಭಾವ
ನಿರ್ಭಾವ ಏಕಾರ್ಥವಾದ ಗುರುವೇ
ಕೂಡಲ ಚೆನ್ನ ಸಂಗಯ್ಯನಲ್ಲಿ
ಬಸವಲಿಂಗಾ ಲಿಂಗ ಎನುತ್ತಿದ್ದೆನಯ್ಯ. ॥ ೫ ॥

ಅಂತು ಪದಂಗಳು ಸಹವಚನ ೧೦೦೫-೧೫೯೨-21-69.

ಮತ್ತಂ, ಚೆನ್ನಬಸವಣ್ಣನ ವಚನ:

ಕಂಡಂತೆ ಕಂಡಂತೆ ಆಯಿತ್ತು ಭಕ್ತಿ. ಕಂಡಂತೆ ಕಂಡಂತೆ ಆಯಿತ್ತಯ್ಯ! ಉಪಚಾರಕ್ಕೆ ನಿಂದುದುಪಚಾರಕ್ಕೆ ನಿಂದಿತ್ತಲ್ಲಾ! ಭೃತ್ಯಾಚಾರ ಸಮಯಭಕ್ತಿ ಸಂಗನಬಸವಣ್ಣನೊಡನೆ ಹೋಯಿತ್ತು ಕೂಡಲ ಚೆನ್ನಸಂಗಯ್ಯ ಬಸವಣ್ಣನನೊಯ್ಯಲಾಗಿ. ೧೦೦೬-೧೫೯೩-21-70.

ಸ್ಥಲ ಹೋಯಿತ್ತೆನಗೆ, ನಿಃಸ್ಥಲ ಹೋಯಿತ್ತೆನಗೆ. ಗೋರಿಕಲ್ಲ ಮಾಡ ಹೋಯಿತ್ತೆನಗೆ. ಹೂವಿನ ವಿಮಾನ ಹೋಯಿತ್ತೆನಗೆ. ಬಸವ ಹೋದನೆನಗೆ. ಬಸವನ ಜಂಗಮ ಹೋದನೆನಗೆ. ಇನ್ನು ಬಸವಣ್ಣಾ ಎಂದೆನಾದಡೆ ಕೂಡಲ ಚೆನ್ನ ಸಂಗಯ್ಯ ನಿಮ್ಮಾಣೆ. ೧೦೦೭-೧೫೯೪-21-71.

ಮಡಿವಾಳಯ್ಯಗಳ ವಚನ:

ಉಟ್ಟ ಸೀರೆಯು ಕಳೆದು ಹಱಿದು ಹೋದಾತ ನೀನಲ್ಲಾ ಬಸವಣ್ಣಾ! ಮೆಟ್ಟಿದ ಕೆರ ಹಱಿದು ಹೋದೆಯಲ್ಲಾ ಬಸವಣ್ಣಾ! ಕಟ್ಟಿದ ಮುಡಿಯು ಬಿಟ್ಟು ಹೋದೆಯಲ್ಲಾ ಬಸವಣ್ಣಾ! ಸೀಮೆಯ ಸಂಬಂಧ ತಪ್ಪಿ ಹೋದೆಯಲ್ಲಾ ಬಸವಣ್ಣಾ! ಲಿಂಗಕ್ಕೆ ಮಾಡಿ ಆ ಮಾಟವ ನೋಂಕದೇ ಹೋದೆಯಲ್ಲಾ ಬಸವಣ್ಣಾ! ಜಂಗಮಕ್ಕೆ ಮಾಡಿ ಆ ಮಾಟವ ಕೈಯಲ್ಲಿ ಹಿಡಿದುಕೊಂಡು ಹೋದೆಯಲ್ಲಾ ಬಸವಣ್ಣಾ! ಬೆಳಗನುಟ್ಟು ಬಯಲಾಗಿ ಹೋದೆಯಲ್ಲಾ ಬಸವಣ್ಣಾ! ಆ ಬಸವಣ್ಣನ ಹಿಂದುಗೊಂಡು ಹೋಹ ಪಥವ ತೋಱಾ ಕಲಿದೇವ. ೧೦೦೮-೧೫೯೫-21-72. ಮತ್ತಂ:

ಆಕಾರ ನಿರಾಕಾರವಾಯಿತ್ತಲ್ಲ ಬಸವಣ್ಣಾ! ಪ್ರಾಣ ನಿಃಪ್ರಾಣವಾಯಿತ್ತಲ್ಲ ಬಸವಣ್ಣಾ! ಲಿಂಗ-ಜಂಗಮದ ಕೂಟ ಸಮಾಪ್ತಿಯಾಯಿತ್ತಲ್ಲ ಬಸವಣ್ಣಾ. ನಿಶ್ಶಬ್ದ ವೇದ್ಯನಾದೆಯಲ್ಲ ಬಸವಣ್ಣಾ. ಕಲಿದೇವರ ದೇವನ ಹೃದಯಕಮಳವ ಹೊಕ್ಕು

---

A (೨) ಅಱಿದ (ಹಗೂ).

ದೇವರಿಗೆ ದೇವನಾಗಿ ಹೋದೆಯಲ್ಲ ಸಂಗನ ಬಸವಣ್ಣಾ. ೧೧೦೯-೧೫೫೬-21-74.

ಮತ್ತಂ :

ಬಿಂದುವ ಹಱಿದೆಯಲ್ಲ ಬಸವಣ್ಣಾ ! ನಾದಸಿಂಹಾಸನವ ಮಾಡಿಕೊಂಡಿದ್ದೆಯಣ್ಣಾ ! ಅಷ್ಟ ಗುಣವ ನಷ್ಟವ ಮಾಡಿದೆಯಲ್ಲ ನಿಜಲಿಂಗ ಬಸವಣ್ಣಾ ! ಶುಕ್ಲಶೋಣಿತ ಮೇಧಸ್ಸು ಇವಱಿಂದಾದ ಕಾಯವೆತ್ತ ಹೋಯಿತ್ತಯ್ಯ ಘನಲಿಂಗ ಬಸವಣ್ಣಾ ! ಮೂರ್ತನಲ್ಲದ ಅಮೂರ್ತನಲ್ಲದ ಲಿಂಗವ ತೋಱಿದೆಯಲ್ಲ ಬಸವಣ್ಣಾ ! ನಿರವಯವಾಗಿ ಹೋದನು ನಮ್ಮ ಬಸವದೇವನು. ನಿರಾಕಾರವಾಗಿ ಹೋದನು ನಮ್ಮ ಬಸವರಾಜನು. ಬೆಳಗನುಟ್ಟು ಬಯಲಾಗಿ ಹೋದನು ನಮ್ಮ ಬಸವಲಿಂಗನು. ಬಸವಣ್ಣಾ, ಬಸವಣ್ಣಾ, ಬಸವಣ್ಣಾ ಎನಲಮ್ಮೆನು. ಎನ್ನ ವಾಙ್ಮನಕ್ಕಗೋಚರವಾಗಿ ಬಸವಣ್ಣಂಗೆ ಶರಣೆಂಬ ಪದವ ತೋಱಿಯ್ಯ ಕಲಿದೇವಯ್ಯ. ೧೧೧೦-೧೫೫೭-21-76.

ಮಡಿವಾಳಯ್ಯನ ಐಕ್ಯ :

ನಿರ್ವಾಹವಾಯಿತ್ತಯ್ಯ ಬಸವಣ್ಣಂಗೆ ಕಪ್ಪಡಿಯ ಸಂಗನಲ್ಲಿ. ಅಕ್ಕನಾಗಾಯಿ, ಮಿಂಡ ಮಲ್ಲಿನಾಥ, ಹಡಪದಪ್ಪಣ್ಣ, ಮೊಗವಾಡದ ಕೇಶಿರಾಜ, ಕೋಲ ಶಾಂತಯ್ಯ ಮೊದಲಾದ ಶಿವಗಣಂಗಳೆಲ್ಲರೂ ಬಸವಣ್ಣನ ಬಯಲ ಬೆರಸಿದರು. ಆ ಬಯಲ ಪ್ರಸಾದದಿಂ ನಿರುಪಮ ಪ್ರಭುದೇವರು ಕದಳಿಯಲ್ಲಿ ಬಯಲಾದರು. ಆ ಬಯಲ ಪ್ರಸಾದದಿಂ ಮೋಳಿಗೆ ಮಾರಯ್ಯ, **ಕಕ್ಕಯ್ಯ**, ಪಡಿಹಾರಿ ಉತ್ತಣ್ಣ, ಕನ್ನದ ಮಾರಣ್ಣ, ಕಲಕೇತ ಬೊಮ್ಮಣ್ಣ, ನುಲಿಯಚಂದಯ್ಯ, ಹೆಂಡದ ಮಾರಯ್ಯ, **ಶಂಕರ ದಾಸಿಮಯ್ಯ,** ಏಕಾಂತ ರಾಮಯ್ಯ, ಮೇದರ ಕೇತಯ್ಯ ಮೊದಲಾದ ಏಳುನೂಱೆಪ್ಪತ್ತು ಅಮರಗಣಂಗಳ ದಂಡು ಕೈಲಾಸಕ್ಕೆ ನಡೆಯಿತ್ತು. ಬಂದ ಮಣಿಹ ಸಂದಿತ್ತು. ಸಂದ ಪುರಾತನರೆಲ್ಲರೂ ಎನ್ನ ಮನದ ಮೈಲಿಗೆಯ ಕಳೆದ ಕಾರಣ, ಕಲಿದೇವಯ್ಯ, ಇವರೆಲ್ಲರ ಒಕ್ಕ ಮಿಕ್ಕ ಪ್ರಸಾದದ ಬಯಲು ಎನಗಾಯಿತ್ತು. ೧೧೧೧-೧೫೫೮-21-78.

ಇಂತು ಮಡಿವಾಳ ಮಾಚಿತಂದೆಗಳು ನಿರ್ವಯಲಾದ ತದನಂತರ ಚೆನ್ನಬಸವರಾಜ ದೇವರ ಐಕ್ಯ :

ಹನ್ನೆರಡು ಗಾವುದ ವಿಸ್ತೀರ್ಣ ಮಹಾಪಟ್ಟಣಕ್ಕೆ ಕಲ್ಯಾಣವೆಂಬ ಪ್ರಣತೆ. ಆ ಪ್ರಣತೆಯಲ್ಲಿ ಮಹತ್ತೆಂಬ ಎಣ್ಣೆಯನೆಱೆದು, ಜ್ಞಾನವೆಂಬ ಜ್ಯೋತಿಯ ಹೊತ್ತಿಸಿ ಒಪ್ಪುತಿದ್ದಿತ್ತಯ್ಯ. ಅಲ್ಲಿ ಕಾಳಯ್ಯ-ಚೌಡಯ್ಯ-ಕೋಲಶಾಂತಯ್ಯ-ಮುಖವಾಡದ ಕೇಶಿರಾಜ-ಖಂಡಣೆಯ ಬೊಮ್ಮಣ್ಣ-ಮಿಂಡ ಮಲ್ಲಿನಾಥ-ಹಡಪದಪ್ಪಣ್ಣ-ಮಡಿವಾಳ ಮಾಚಯ್ಯ—ಅಮ್ಮೆ ನಾಗಾಯಿಗಳು ಸಹಿತ ಇವರೆಲ್ಲರೂ ಸಂಗನ ಬಸವಣ್ಣನ ಬಯಲ ಕೂಡಿ ಹೋದರು. ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಇವರೆಲ್ಲರ ಪ್ರಸಾದದ ಬಯಲು ಎನಗಾಯಿತ್ತು. ೧೧೧೨-೧೫೫೯-21-79.

## ಪ್ರಭುದೇವರ ಶೂನ್ಯಸಂಪಾದನೆ ಸಂಪೂರ್ಣಂ

ಇದು ಪರಮಗುರು ಪರಮವೀರಶೈವಸಿದ್ಧಾಂತ ತತ್ತ್ವಜ್ಞಾನ, ಇದು ವೀರಶೈವಾಚಾರ ಪ್ರತಿಷ್ಠಾಪನಾಚಾರ್ಯ ಇದು ದಿವ್ಯವೇದಾಂತ ಶಿರೋಮಣಿ, ಇದು ಸಮಸ್ತ ಶಾಸ್ತ್ರ, ಮುಖ್ಯ ಮುಖದರ್ಪಣ, ಇದು ಮಹಾಜ್ಞಾನವರ್ಧನ ಪರಮಾನುಭಾವಸಂಬೋಧೆ, ಇದು ಸರ್ವಾಚಾರಸಂಪನ್ನ ಸಮಾರೂಢ ಸಂಗ್ರಹ, ಇದು ಪರಮ ರಾಜಯೋಗ ಸಾಧ್ಯ ಸನ್ನಿಧಾನ, ಇದು ಸತ್ತು-ಚಿತ್ತು-ಆನಂದನಿತ್ಯಪರಿಪೂರ್ಣರಸಾಮೃತಪ್ರಸನ್ನ ಪ್ರಸಾದ, ಇದು ಅಜ್ಞಾನ ತಿಮಿರಾಂಜನ ತಂತ್ರಮಪ್ಪ **ಪ್ರಭುದೇವರ ಶೂನ್ಯಸಂಪಾದನೆಯ** ಮಹಾಪ್ರಸಂಗಮಂ ಬಸವರಾಜದೇವರು ಚೆನ್ನಬಸವರಾಜದೇವರು ಪ್ರಭುದೇವರುಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ವಚನಂಗಳಿಂ ಕಥಾಸಾಂಗತ್ಯವ ಮಾಡಿ— **ಶಿವಗಣ ಪ್ರಸಾದಿ ಮಹಾದೇವಗಳು** ತತ್‌ಶಿವಗಣಂಗಳ ಶಿವಾನುಭಾವ ಸ್ತೋತ್ರ ದ್ವಾರಮುಖಕ್ಕೆ ನಿರ್ಮಳದರ್ಪಣವೆನೆ ಸಮರ್ಪಿಸಿದನು. ಆ ಮಹಾಪ್ರಸಂಗದ ಸದುಹೃದಯವನರಿದಡೆ ನಿತ್ಯನಿರವಯಪ್ಪನು. ಭವಭಾರಕ್ಕಂಜಿ ಕೇಳಲು ಸದ್ಯೋಮುಕ್ತನಪ್ಪನು. ಸತ್‌ಸಂಗದಿಂ ಕೇಳಿ ಮನದಲು ಧರಿಸಲು ನಿರ್ಮಳಾತ್ಮಕನಪ್ಪನು. ಅದರಣೆಯಿಂ ಸ್ತೋತ್ರ ಸುಖಕ್ಕೆ ಕೇಳಿದಾತನು ರುದ್ರಲೋಕಾಧಿಪತಿಯಪ್ಪನು. ಮನೋರತಿಯಿಂ ಬರೆದಡೆ, ಪಠಿಸಿದಡೆ, ಹೇಳಿದಡೆ, ಕೇಳಿದಡೆ—ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯವೆಂಬ ಚತುರ್ವಿಧ ಪದಮಂ ಪಡೆವರು. ಇದನು ಶಿವಶರಣರು ಕೇಳುವುದು, ಲಾಲಿಸುವುದು, ಪಾಲಿಸುವುದು, ಬರೆದೋದುವುದು. ಇಲ್ಲಿ ವಚನಕ್ರಮ **ಸೇರುವೆ ತಪ್ಪುಳ್ಳಡೆ ನಿಮ್ಮ ಪರಮಜ್ಞಾನದಿಂ ತಿದ್ದಿ ಈ ವಚನಾನುಭಾವ ಪ್ರಸಂಗಮಂ ಮಾಡಿ ಸುಖಿಸುವುದು.**

**ಮಂಗಳಮಹಾ ಶ್ರೀ ಶ್ರೀ ಶ್ರೀ**

## ಅನುಬಂಧ ೧

# ನುಲಿಚಂದಯ್ಯಗಳ ಸಂಪಾದನೆ

—ಹಲಗೆಯಾರ್ಯ

[1]ಆತನ ಪೂರ್ವಸಾಂಗತ್ಯ ಅದೆಂತೆಂದಡೆ[1]: ಮೊದಲು ಶಿವನಿರೂಪದಿಂದ ಈ ಗಣಂಗಳೆಲ್ಲರೂ ಜಗಹಿತಕ್ಕೋಸುಗರಂ ವೀರಶೈವ ನಿಜವರ್ತನಾಸಂಬಂಧಮಂ ಮರ್ತ್ಯದಲ್ಲಿ ಪಸರಿಸಲೆಂದು ಭೂಮಿಗೆ ಬಿಜಯಂಗೆಯ್ವಾಗ, ತಾನೊಬ್ಬ ಶರಣನಾಗಿ ಜನಿಸಿ, ಚಂದಯ್ಯನೆಂಬ ನಾಮದಿಂ, ಜಂಗಮದಾಸೋಹಕ್ಕೆ ಸತ್ಯಶುದ್ಧ ನಿಜಕಾಯಕದಿಂ ನುಲಿಯ ಮಾಡಿ, ಹಾಗಕ್ಕೆ ಮಾರಿ, ತಂದ ದ್ರವ್ಯದಿಂ ಪದಾರ್ಥಮಂ ತಂದು, ಜಂಗಮಕ್ಕೆ ನೀಡಿ, ತತ್ಪ್ರಸಾದಮಂ ಲಿಂಗಭೋಗೋಪಭೋಗಿಯಾಗಿರುತ್ತಂ—ಬಸವಣ್ಣನ ಭಕ್ತಿ, ಮಡಿವಾಳನ ನಿಷ್ಠೆ, ಚೆನ್ನಬಸವಣ್ಣನ ಸಾವಧಾನಜ್ಞಾನ, ಸತ್ಯಣ್ಣನ ಸ್ವಾನುಭಾವಪ್ರಭೆ, ಪ್ರಭುದೇವರ ಸದಾನಂದದ ಪರಮಕಾಷ್ಠೆ, ಅಜಗಣ್ಣನ ಸಮರಸದೈಕ್ಯತ್ವಂ—[2]ಇಂತಿವು[2] ಮೊದಲಾದ [3]ಗುಣಂಗಳ[3] ನಿಜವೆ ರೂಪಾದಂತೆ: ಜಂಗಮವೆ ಅಧಿಕ, ಜಂಗಮಪೂಜೆಯೆ ಲಿಂಗಪೂಜೆ, ಜಂಗಮಭಕ್ತಿಯೆ ಲಿಂಗಭಕ್ತಿ, ಜಂಗಮತೃಪ್ತಿಯೆ ಲಿಂಗತೃಪ್ತಿ, ಜಂಗಮದಾಸೋಹವೆ ಪರಮಪದವೆಂದರಿದು, ಎಲ್ಲಾ ಕ್ರಿಯೆಗಳನೂ ಜಂಗಮದಾಸೋಹದಲ್ಲಿಯೇ ತಿಳಿದು, [4]ಅಲ್ಲಿಯೆ ನಿ[+ ೧?]ಸಿ[4], ಅಲ್ಲಿಯೆ ಮನಮಗ್ನವಾಗಿ, ಅದೇ ತನ್ನ ನಿಜಪದವಾಗಿರುತ್ತಲೊಂದು ದಿನಂ—ತನ್ನ ನಿಜಕಾಯಕಕ್ಕೆಂಮ ಹೋಗಿ, ಹುಲ್ಲಂ [5]ಕೊಯ್ದು[5] ಹೊರೆಯಂ ಕಟ್ಟುವ ಕಾಲದಲ್ಲಿ, ತನ್ನ ಇಷ್ಟಲಿಂಗವು—ಈತನು ಜಂಗಮ ದಾಸೋಹವೆ ಪರವೆಂಬುದು ನಿಜವೋ ಇಲ್ಲವೋ ಎಂದು ನೋಡುವುದು ನಿಮಿತ್ತಂ, ಮತ್ತೆ ಈತನಂ ಅಸಂಖ್ಯಾತರ ಮುಂದೆ ಪ್ರಜ್ವಲಿಸಿ ಅರಿಕೆಮಾಡುವುದು ನಿಮಿತ್ತಂ, ಈತನಲ್ಲಿ ತಾನೇ ಸೇವೆಯಂ ಮಾಡಬೇಕೆಂಬುದು ನಿಮಿತ್ತಂ—ಈ ಮೂರು ಭಾವದಿಂ [6]ಸರಿದು[6] ಜಲದಲ್ಲಿ ಬೀಳಲು, [7]ನೋಡಿದನಾ ಭಕ್ತಂ ಅನಾದಿಯುಕ್ತಂ ಜಂಗಮ ದಾಸೋಹ ಯುಕ್ತಂ ಪರಿಪೂರ್ಣ ಚಿದಾನಂದ ನಿಷ್ಠಾಶಕ್ತಂ ಚರಲಿಂಗ ಪ್ರಸಾದಭಕ್ತಂ[7]

---

1 ಕಂದ: "ನುಲಿಯ ಚಂದಯ್ಯನೆಂದೆಂ। ಬಲಘುತರದ ಶರಣ ತನ್ನ ಲಿಂಗದ ಕೈಯಲಿ। ಸಲೆ ಕಾಯಕ ಮಾಡಿಸಿದ। ಗ್ಗಳ ಚರಿತವ ಪೇಳ್ವೆನಿಳೆಯೊಳಾನಂದದೊಳಂ" ॥ ಅದೆಂತೆಂದೊಡಾ ನೋಳಿಗೆಯ ಮಾರಿತಂದೆಗಳು ಘನಲಿಂಗದಲ್ಲಿ ಸಮರಸ ಭಾವವನೆಯ್ದಿ ನಿಶ್ಚಯಿಸಲಿತ್ತ ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರು ಸಿದ್ಧರಾಮಯ್ಯದೇವರು ಅಪ್ಪಣ್ಣಗಳು ಸೊಡ್ಡಳಬಾಚರಸರು ಮೊದಲಾದ ಅಸಂಖ್ಯಾತ ಪ್ರಮಥ ಗಣಂಗಳೆಲ್ಲರು ಮಹಾನುಭಾವದ ನಿಜಾನಂದ ಶರಧಿಯೊಳೋಲಾಡುತ್ತಮಿರಲು ಮತ್ತೊರ್ವ ಶರಣ ನುಲಿಯ ಚಂದಯ್ಯನ ಮಹಾತ್ಮೆ ಎಂತೆಂದೊಡೆ (ಗೂ). 2 ಇಂತಿವರು (ಗೂ). 3 ಗಣಂಗಳ (ಗೂ). 4 × (ಗೂ). 5 ಕೊಯ್ದು (ಗೂ). 6 ಸಂದು (ಹ). 7 ನುಲಿಯ ಚಂದಯ್ಯಗಳು (ಗ).

ಆ ಲಿಂಗದ ಮನೋಭಾವವನ್ನರಿತು [1]ಸೇವೆ[1] ಬೇಕಾದರೆ ಲಿಂಗ ತಾನೇ ಬಂದೀತೆಂದರಿದು; ಜಂಗಮ ಸೇವೆಯುಳಿದೀತೆಂಬುದು ನಿಮಿತ್ತಂ, ಜಂಗಮದಾಸೋಹದಲ್ಲಿಯೆ ಲಿಂಗ ಉಂಟೆಂಬ ಭಾವದಿಂ, ಪರಿಪೂರ್ಣವಾಗಿರ್ದ ವಸ್ತು ಎಲ್ಲಿದ್ದರೇನೆಂಬ ಭಾವದಿಂ ಆ ಚಂದಯ್ಯ [ಇಷ್ಟಲಿಂಗನುಂ] ಬಿಟ್ಟು ಹೋಗುತ್ತಿರೆ,ಆ ಲಿಂಗವು ಆತನ ಮನದ ಜಂಗಮ ಸೇವಾ ನಿಷ್ಠೆಯಂ ಕಂಡು,ಎಲೆ ಚಂದಯ್ಯನಾನು ಬಂದೇನೆಂದು ಮೇಲಕ್ಕೆ ಬಂದು ಧ್ವನಿಯ ಮಾಡಲಾತಂ, ನೀ ನಿನ್ನ ಭಾವ ಹೇಗೆ ಇದ್ದಿತ್ತು ಹಾಂಗೆ ಇರು, ನನಗೆ ನಮ್ಮ ಒಡೆಯರ ಸೇವೆ ಉಳಿದೀತೆಂದು ಹೋಗುತ್ತಿರೆ, ಆ ಲಿಂಗವು [2]ತಾನೆ[2] ಪುರುಷಾಕೃತಿಯಂ ತಾಳ್ದು, ನಾನು ಬಂದೆನು ಬಿಟ್ಟು ಹೋಗದಿರಯ್ಯ ಎನಲು, ಆ ಚಂದಯ್ಯಗಳು ಕೇಳ್ದು ಮೊದಲು ಹೋಗಿ ಈಗ ಬಂದೇನೆಂದರೆ ನಾನೊಲ್ಲೆನೆನಲು, ಆ ಲಿಂಗವು ನೀನೊಲ್ಲೆನೆಂದೊಡೆ ನಾನು ಬಿಡೆನೆಂದು ಸೆರಗಂ ಸುತ್ತಿಕೊಂಡು ಬಿಡದಿರಲು, ಆ ಚಂದಯ್ಯನು ಬಂದೆನೆಂದರೆ ನಾನೊಪ್ಪೆನು, ಮುಂದೆ ನಾವು ಹೋಹ ದಾರಿಯಲ್ಲಿ ಮಡಿವಾಳಯ್ಯಗಳು ಸೀರೆಯ ಪ್ರಕ್ಷಾಲಿಸುತ್ತಿದ್ದಾರು. ಅಲ್ಲಿಗೆ ಹೋಗಿ ಹಿಂಗೆ ಒಡೆಯರ ಸೇವೆಯ ಮಾಡಿಕೊಂಡಿದ್ದೆನೆಂದು ಆತನ ಹೊಣೆಯ ಕೊಟ್ಟು ಬಾ, ಅಲ್ಲದಿದ್ದಡೆ ನಿನ್ನನೊಲ್ಲೆನೆಂದಡಾ ಲಿಂಗವು ತಾನು ಮಡಿವಾಳಯ್ಯನ ಮುಂದಕ್ಕೆ ಬಂದು ನಮಸ್ಕರಿಸಿ ನಿಂದಿರೆ, [3][ಆ ಮಡಿವಾಳಯ್ಯಗಳು ನಮಸ್ಕರಿಸಿ ಏನು ಬಂದಿರಿ ಎಂದು ಕೇಳಲಾಗಿ][3] ಆ ಲಿಂಗವು ಮಡಿವಾಳಯ್ಯಂಗೆ ತಮ್ಮ ಸ್ಥಿತಿಯನು ಹೇಳಲಾಗಿ, ಆ ಮಡಿವಾಳಯ್ಯಗಳು ಚಂದಯ್ಯಂಗೆ ನಿರೂಪಿಸುವ ಪ್ರಸ್ತಾವದ ವಚನ:

ಬಂದೇನೆಂಬ ಸುಖವ ಹೆರಹಿಂಗಿದವರುಂಟೆ! ಕಂಡ ನಿಧಾನವ ನಡೆಯೆಂದವರುಂಟೆ? ಸುಖಕ್ಕೆ ಸುಖ ಒದಗಿದಡೆ ಒಲ್ಲೆನೆಂದವರುಂಟೆ? ಕಲಿದೇವಯ್ಯ, ಬಂದೇನೆಂದಡೆ ಬೇಡವೆನಲೇಕೆ ಚಂದಯ್ಯ? ೧೦೬೨-14-1. ೧೦೧೩

ಇದಕ್ಕೆ ಚಂದಯ್ಯಗಳ ಪ್ರತ್ಯುತ್ತರ ವಚನ:

ಅಂದು ಹೋಗಿ, ಇಂದು ಬಂದೇನೆಂಬಾಗ, ಈ ದಂದುಗದೊಡಲು ತನಗುಂಟೆ? ಘನ ಲಿಂಗವೆಲ್ಲಿರ್ದಡಲ್ಲಿಯೆ ಪರಿಪೂರ್ಣ! ಲಿಂಗ ಹೋಯಿತ್ತೆಂಬ ಸಂದೇಹವೆನಗುಂಟಾದರೆ ಅಂಗ ಉಳಿಯಬಲ್ಲುದೆ? ಆತ್ಮ ಹೋದಲ್ಲಿ ಘಟವೆಷ್ಟು ದಿನ [4]ಉಳಿಯಬಲ್ಲದು[4] ಜಂಗಮ ಉಳ್ಳನ್ನಕ್ಕರ ಚಂದೇಶ್ವರ ಲಿಂಗಕ್ಕೆ ಸಂದಿಲ್ಲ ಕಾಣಾ ಮಡಿವಾಳಯ್ಯ. ೧೦೬೩-14-2. ೧೦೧೪

ಇದಕ್ಕೆ ಮಡಿವಾಳಯ್ಯಗಳ ನಿರೂಪ:

ದಾಸೋಹವೆಂಬನ್ನಕ್ಕರ ಈಶ್ವರಪೂಜೆಯ ಆಚಾರದಲ್ಲಿಯೆ ಇರಬೇಕು. ಮಾಡೆನೆಂಬ ನೇಮ ಬೇಡ, ಮಾಡಿಹೆನೆಂಬ ಕೃತ್ಯ ಬೇಡ. ಈ ಉಭಯ ಸಮ್ಮತವಳವಟ್ಟಲ್ಲಿ

---

[1] ಚರಸೇವೆ (ಗೂ). [2] ತಾನೆ ವೃತ್ತಗೋಳಕ ಗೋ ಮುಖಾಂತರಮಂ ಉಳಿದು (ಗೂ). [3] (ಗೂ) × (ಹ). [4] ಉಳಿವುದು (ಗೂ).

ಕಲಿದೇವಯ್ಯಂಗೆ ಭಾವಶುದ್ಧವಾಯಿತ್ತು ಕಾಣಾ ಚಂದಯ್ಯ. ೧೦೬೪-14-3. ೧೦೧೫

ಇದಕ್ಕೆ ಚಂದಯ್ಯಗಳ ಬಿನ್ನಹ:

ಆವ ಕಾಯಕದಲ್ಲಿ ಬಂದರೂ ಭಾವಶುದ್ಧವಾಗಿ ಗುರುಲಿಂಗ ಜಂಗಮಕ್ಕೆ ಮಾಡುವುದೆ ಶಿವಪೂಜೆ. ಅದು ಚಂದೇಶ್ವರ ಲಿಂಗಕ್ಕೆ ಒಪ್ಪವಲ್ಲವೆ ಮಡಿವಾಳಯ್ಯ? ೧೦೬೫ 14-4. ಮತ್ತಂ: ೧೦೧೬

ಲಿಂಗವೆಂಬುದು ಗುರುವಿನ ಹಂಗು, ಗುರುವೆಂಬುದು ಲಿಂಗದ ಹಂಗು. ಈ ಉಭಯಕ್ಕತೀತ ಜಂಗಮಲಿಂಗದಾಸೋಹ. [1]ಅದು[1] ಚಂದೇಶ್ವರಲಿಂಗಕ್ಕೆ ಕಟ್ಟುಗೊತ್ತು ಕಾಣಾ ಮಡಿವಾಳಯ್ಯ. ೧೦೬೬-14-5. ೧೦೧೭

ಇದಕ್ಕೆ ಮಡಿವಾಳಯ್ಯಗಳ ವಚನ:

ಗುರುವಾದರು ಲಿಂಗವ ಪೂಜಿಸಬೇಕು. ಲಿಂಗವಾದರು ದೇವತ್ವ ಇರಬೇಕು. ಜಂಗಮವಾದರು ಲಿಂಗವ ಪೂಜಿಸಬೇಕು. ಜಂಗಮಕ್ಕೆ ಲಿಂಗವಿಲ್ಲದೆ ಪ್ರಮಾಣವಿಲ್ಲ. ಆದಿಯಾಧಾರವಿಲ್ಲದಿರೆ ಜಗವೇನೂ ಇಲ್ಲ. ಅರಿದಹೆನೆಂದರೆ ಅಂಗದಲ್ಲಿ ಲಿಂಗವಿರಬೇಕು ಕಲಿದೇವಯ್ಯನನರಿವುದಕ್ಕೆ ಇದೇ ಮಾರ್ಗ ಚಂದಯ್ಯ. ೧೦೬೭-14-6. ೧೦೧೮

ಇದಕ್ಕೆ ಚಂದಯ್ಯಗಳ ಬಿನ್ನಹ:

ಭಾವಶುದ್ಧವಾಗಿಪ್ಪದೇ ಗುರುಪೂಜೆ. ಜ್ಞಾನಶುದ್ಧವಾಗಿಪ್ಪದೇ ಲಿಂಗಪೂಜೆ. ತ್ರಿಕರಣಶುದ್ಧವಾಗಿ ತ್ರಿವಿಧ ಮಲ[2]ನಿಶ್ಚಯವಾಗಿ[2] ನಿಂದುದೆ ಜಂಗಮಪೂಜೆ. ಆ ತ್ರಿವಿಧದ ಭೇದದಲ್ಲಿ ತ್ರಿವಿಧಾರ್ಪಣವನರ್ಪಿಸಿ ನಿಂದುದೆ ಚಂದೇಶ್ವರ ಲಿಂಗಕ್ಕರ್ಪಿತ[3]ವಯ್ಯ.[3] ೧೦೬೮-14-7. ೧೦೧೯

ಇದಕ್ಕೆ ಮಡಿವಾಳಯ್ಯಗಳು ನಿರೂಪಿಸಿದ ವಚನ:

ಅರಿವನರಿದೆನೆಂದು ಕ್ರಿಯೆಯ ಬಿಡಬಹುದೆ? ಮಧುರಕ್ಕೆ ಮಧುರ ಒದಗಲಾಗಿ ಆ ಸವಿಗೆ ಸವಿ ಕೊರತೆಯುಂಟೆ. ದ್ರವ್ಯಕ್ಕೆ ದ್ರವ್ಯ ಒದಗಲಾಗಿ ಬಡತನಕಡಹುಂಟೆ? ಮಾಡುವ ಮಾಟ ಶಿವಪೂಜೆಯ ನೋಟ ಭಾವವಿರಬೇಕು—ಅದು ಕಲಿದೇವಯ್ಯನ ಕೂಟನಲ್ಲವೆ ಚಂದಯ್ಯ? ೧೦೬೯-14-8. ೧೦೨೦

ಇದಕ್ಕೆ ಚಂದಯ್ಯಗಳ ಬಿನ್ನಹ[4]ದ ವಚನ:[4]

ಕಪಿತ್ಥದ ಕಾಯ ಹಿಡಿದು ಜಲವನೀಸಬಹುದೇ? ಲಿಂಗಪೂಜೆಗೆ ಷೋಡಶೋಪಚಾರ ಬೇಕು. ಅದ ಮಾಡುವನ್ನಕ್ಕರ ಕಾಯಕ ನಿಂದಿತ್ತು. ಕಾಯಕದೊದಗೇ ಮೂರರ ಕೂಟ ಚಂದೇಶ್ವರ ಲಿಂಗಕ್ಕೆ, ಮಡಿವಾಳಯ್ಯ. ೧೦೭೦-14-9. ೧೦೨೧

ಇದಕ್ಕೆ ಮಡಿವಾಳಯ್ಯಗಳ ನಿರೂಪ[4]ದ ವಚನ:[4]

ಕಿಂಚಿತ್ತಾದರು ನೇಮವ ಮಾಡುವಲ್ಲಿ ಶೂನ್ಯವಿಲ್ಲದಿರಬೇಕು. ಸತ್ವಕ್ಕೆ ತಕ್ಕ ಸಮರ್ಥತ್ವ ಒಚ್ಚಿ ಹೊತ್ತಾದರೂ ಶಿವಪೂಜೆಯ ನಿಶ್ಚಯವಾಗಿ ಮಾಡಬೇಕು. ಅದು

---

[1] ಅದೆ (ಗೂ). [2] ಶುದ್ಧವಾಗಿ (ಗೂ). [3] ವಯ್ಯ ಮಡಿವಾಳಯ್ಯ (ಗೂ). [4] × (ಗೂ).

ತನಗೆ ಸುಚಿತ್ತದ ಹಾದಿ ಕಲಿದೇವರದೇವನ ಒದಗು ಕಾಣಾ ಚಂದಯ್ಯ. ೧೦೭೧–14-10. ೧೦೨೨

ಇದಕ್ಕೆ ಚಂದಯ್ಯಗಳ ಬಿನ್ನಹದ ವಚನ:

ಗೋಡೆಯ ತೊಳೆದು ಕೆಸರ ಕೆಡಿಸಿಹೆನೆಂದರೆ ಅದಾರ ವಶ? ನಿಯಮಕ್ಕೆ ಕಡೆನಡು ಮೊದಲಿಲ್ಲ. ಒಂದ ಬಿಟ್ಟು ಒಂದ ಹಿಡಿವಹೆನೆಂದರೆ ಸಂದಿಲ್ಲದ ಸಂಶಯ. ಅದು ಚಂದೇಶ್ವರ ಲಿಂಗಕ್ಕೆ [1]ದೂರ[1] ಕಾಣಾ ಮಡಿವಾಳಯ್ಯ. ೧೦೭೨-14-11. ೧೦೨೩

ಇದಕ್ಕೆ ಮಡಿವಾಳಯ್ಯಗಳ [2]ನಿರೂಪದ[2] ವಚನ:

ಜಂಗಮದ ಸೇವೆಗೆ ಲಿಂಗವಿರಹಿತವಾಗಿರಬೇಕೇ? ಲಿಂಗವೆಂಬುದು ಜಂಗಮದಂಗ. ಆ ಅಂಗವಿಲ್ಲದೆ ಪ್ರಾಣವುಂಟೆ? ಹಣ್ಣಿಲ್ಲದ ರುಚಿಯ ಬಯಸುವಂತೆ— ನಿನ್ನ ಕಾಯಕದ ಕ್ರಿಯೆಯೆಲ್ಲವು ಲಿಂಗವಾದ ಬಳಿಕ ಮತ್ತೇನು? ಭಾವಭೇದವೆ? ನೀನೆಂದಂತೆ ಇರಲಿ. [3]ಆರೇ[3]ನೆಂದಡೆ ನಿನ್ನ ಮನವ ತಿಳುಹಿ[4]ಕೊಳಲಿ[4] ಇದಕ್ಕೆ ಕಲಿದೇವನ [5]ಹೊಣೆಯ ಕೊಳ್ಳ ಎನ್ನೊಡೆಯ[5] ಚಂದಯ್ಯ. ೧೦೭೩–14-12. ೧೦೨೪

ಹೀಗೆಂದು ಮಡಿವಾಳತಂದೆಗಳು ನಿರೂಪಿಸಲು, ಇದಕ್ಕೆ, ತಮ್ಮ ಲಿಂಗವ ಕಣ್ಣಿಯ ಮಾಡಿಕೊಂಡಿರಬಲ್ಲಡೆ ಬಾರೆಂದು ಚಂಡಯ್ಯಗಳು ಕರೆವ ಪ್ರಸ್ತಾವದ ವಚನ:

ಇಷ್ಟವೆಂಬುದು ಗುರುವಿನ ಹಂಗು. ಆ ಗುರುವಿಗೆಯೂ ಇಷ್ಟಲಿಂಗಕ್ಕೆಯೂ ಜಂಗಮವೆ ಪ್ರಾಣಪದವೆಂದರಿದ ಬಳಿಕ, ಆ ಗುರುವೂ ಇಷ್ಟವೂ ಜಂಗಮದಲ್ಲಿಯೇ ಅಡಕ ನೋಡಾ. ಆ ಗುರುವು ಆ ಲಿಂಗವು ಜಂಗಮದ ಹಂಗಿಗಳು. ಇದು ಕಾರಣ ಚಂದೇಶ್ವರ ಲಿಂಗಕ್ಕೆ ಕಣ್ಣಿಯ ಮಾಡಬಲ್ಲರೆ ಬಾರಾ ಎನ್ನ ತಂದೆ. ೧೦೭೪–14-13. ೧೦೨೫

ಹೀಗೆಂದು ಮಡಿವಾಳಯ್ಯಂಗೆ ನಮಸ್ಕರಿಸಿ ಹೊಣೆಯ ಕೊಂಡು, ತನ್ನ ಲಿಂಗಸಹಿತ ಬೀಳ್ಕೊಂಡು ನಿಜಗೃಹಕ್ಕೆ ಬಂದು, ಆ ಲಿಂಗದ ಕೈಯಲ್ಲಿ ಕಾಯಕವಂ ಮಾಡಿಸಿ, [6]ಇದಂ[6] ಮಾರಿ ಹಾಗವ ಕೊಂಡು ಬಾರೆಂದು ಕಳುಹಲು, ಆ ಲಿಂಗವು ಸಂಗನ ಬಸವಣ್ಣನ ಮನೆಗೆ ಕಣ್ಣಿಯ ತರಲು, ಇತ್ತ ಬಸವರಾಜದೇವರು, ಶಿವಪೂಜೆಯಂ ಮಾಡುತ್ತಲಿ ವೃತ್ತಾಂತವೆಲ್ಲವಂ ತನ್ನ ಲಿಂಗದಲ್ಲಿ ಕಂಡು, ಇದಿರೆದ್ದು, ಕಣ್ಣಿಯ ತಂದಯ್ಯಂಗೆ ಶರಣೆಂದು ಸಾವಿರ ಹೊನ್ನಂ ಕೊಟ್ಟು, ಆ ನುಲಿಯಂ ತೆಗೆದುಕೊಂಡು ಬೀಳ್ಕೊಡಲಾ ಲಿಂಗವು ಮರಳಿ ಬಂದಾ ಚಂದಯ್ಯಂಗೆ ಆ ಹೊನ್ನಂ ಕೊಡೆ— ಕಂಡಾತ ಇದೆಲ್ಲಿಂದ ತಂದೆಯಯ್ಯ? ಕಳವಿಂದ ತಂದೆಯೋ ಎಂದು ಕೋಪದಿಂ ನುಡಿವ ಪ್ರಸ್ತಾವದ ವಚನ:

ಸತ್ಯ ಶುದ್ಧ ಕಾಯಕದಿಂದ ಬಂದ ದ್ರವ್ಯದಲ್ಲಿ ಚಿತ್ತ ವಿಚ್ಛಂದವಾಗದಿರಬೇಕು. ಎಂದಿನ ನಿತ್ಯನೇಮದಲ್ಲಿ ಸಂದಿಲ್ಲದಿರಬೇಕು. ನೇಮದ ಕೂಲಿಯ ಬಿಟ್ಟು, ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ, ತಾ ಮಾಡುವ ಸೇವೆ ನಷ್ಟವಯ್ಯ. ನಿನ್ನಾಸೆಯ ವೇಷದ

1 ಮಾಟ (ಗೂ). 2 × (ಗೂ). 3 ಆಜಿ[3] (ಗೂ). 4 ಕೊಳು (ಗೂ). 5 ಹೊಣೆ ಕರಕೊಳ್ಳು ಎನ್ನೊಡೆಯನ (ಗೂ). 6 ಆ ಕಣ್ಣಿಯಂ (ಗೂ).

ಪಾಶಕ್ಕೆ ನೀನೇ ಹೋಗು. ನಮ್ಮ ಜಂಗಮ ಪ್ರಸಾದದಾಗೆ ಚಂದೇಶ್ವರ ಲಿಂಗಕ್ಕೆ ಪ್ರಾಣವಯ್ಯ. ೧೦೨೫-14-14. ಮತ್ತಂ: ೧೦೩೬

ಕಂದಿಸಿ ಕುಂದಿಸಿ ಬಂಧಿಸಿ ನೋಯಿಸಿ ಕಂಡ ಕಂಡವರ ಬೇಡಿ ತಂದು ಜಂಗಮ ಲಿಂಗಕ್ಕೆ ಮಾಡಿಹೆನೆಂಬ ದಂದುಗನ ಮಾಟ ಲಿಂಗಕ್ಕೆ ನೈವೇದ್ಯ ಸಲ್ಲದು. ತನು ಕರಗಿ ಮನ ಬಳಲಿ ಬಂದ ತೆರದನುವನರಿದು ಸಂದಿಲ್ಲದೆ ಸಂಶಯವಿಲ್ಲದೆ ಜಂಗಮಲಿಂಗಕ್ಕೆ ದಾಸೋಹವ ಮಾಡುವುದೆ ಮಾಟ. ಕಾರೆಯ ಸೊಪ್ಪಾದರು ಕಾಯಕದಿಂದ ಬಂದುದು ಲಿಂಗಾರ್ಪಿತವಲ್ಲದೆ ದುರಾಸೆಯಿಂದ ಬಂದುದು ಅನರ್ಪಿತ. ಇದು ಕಾರಣ ಸತ್ಯಶುದ್ಧ ಕಾಯಕದ ನಿತ್ಯದ್ರವ್ಯವಾದರೆ ಚಂದೇಶ್ವರಲಿಂಗಕ್ಕೆ ನೈವೇದ್ಯ ಸಂದಿತ್ತು ಕೇಳಯ್ಯ. ೧೦೨೬-14-15. ೧೦೩೭

ಹೀಗೆಂದು ಚಂದಯ್ಯಗಳು ತಮ್ಮ ಲಿಂಗದೇವರಂ ನೋಡಿ, ನೀ ತಂದ ಅನ್ಯದ್ರವ್ಯ ಸಹಿತ ನೀನೆಲ್ಲಿಯಾದರೂ ಹೋಗು—ಮೊದಲು ಗುರುವಾಜ್ಞೆಗೆಟ್ಟುದೊಂದು, ಮತ್ತೆ ಹೋದಪರಾಧಕ್ಕೆ ಒಡೆಯರ ಸೇವೆಯ ಮಾಡಿಹೆನೆಂದು ಅವಗಡೆಯ ಶರಣ ಮಡಿವಾಳನ ಹೊಣೆಯ ಕೊಟ್ಟುದೊಂದು, ಈ ಎರಡಕ್ಕೂ ನೀನೆ ಗುರಿಯಾಗು ಹೋಗೆಂದು ಝಂಕಿಸಿ ನುಡಿದು ಹೊರಡಿಸಲಾ ಲಿಂಗವು—ಚಂದಯ್ಯ ಸಹಿತವಾಗಿ ಮಡಿವಾಳಯ್ಯನ ಮಠಕ್ಕೆ ಬಿಜಯಂಮಾಡಿ, ಈ ವೃತ್ತಾಂತವೆಲ್ಲವನೂ ಹೇಳಲು, ಆ ಮಾಚಯ್ಯನು ಚಂದಯ್ಯಂಗೆ ನಿರೂಪಿಸಿದ ಪ್ರಸ್ತಾವದ ವಚನ:

ಕಾಯಕದಲ್ಲಿ ನಿಂದ ಶರಣಂಗೆ ಸೇವೆಯವರ ತಪ್ಪ ಹಿಡಿದಹೆನೆಂದರೆ ಕಾಯಕವೆಂತು ನಡೆವುದಯ್ಯ? ಅವಗುಣಕ್ಕೆ ಮುನಿಯ ಬೇಕಲ್ಲದೆ ಲಾಂಛನಕ್ಕೆ ಮುನಿಯ ಬಹುದೇ? ಮುಗ್ಗಿದ ತುರಗದ ಕಾಲ ಕತ್ತರಿಸಿದವರುಂಟೆ? ಕಚ್ಚುವ ತಿಗುಣೆಗಾಗಿ ಮನೆಯ ಸುಟ್ಟವರುಂಟೆ? ಕಲಿದೇವರ ದೇವನಲ್ಲಿ ತಪ್ಪ ಹಿಡಿಯಲಿಲ್ಲ ಕೇಳಾ ಚಂದಯ್ಯ. ೧೦೨೭-14-16. ೧೦೩೮

ಇಂತು ಶಿವಲಿಂಗದಲ್ಲಿ ತಪ್ಪ ಹಿಡಿಯಬಹುದೇ ಎಂದು ಮಡಿವಾಳಯ್ಯ ನುಡಿಯೆ, ಚಂದಯ್ಯನ ಪ್ರತ್ಯುತ್ತರ:

ನುಡಿದ ಮಾತಿಂಗೆ ತಡಬಡ ಬಂದಲ್ಲಿ, ನುಡಿದ ಭಾಷೆಗೆ ಭಂಗ ನೋಡಾ. ಹಿಡಿದ ಕುಲಕ್ಕೆ ಹಾನಿ ಬಂದಲ್ಲಿ, ಒಡಲನಿರಿಸುವುದೆ ಭಂಗ ನೋಡಯ್ಯ. ಇದು ಕಾರಣ, ನಡೆ ನುಡಿ ಶುದ್ಧವಿಲ್ಲದಿದ್ದರೆ ಚಂದೇಶ್ವರಲಿಂಗವಾದರು [1]ತಪ್ಪನೊಪ್ಪಗೊಳೆ[1] ಮಡಿವಾಳಯ್ಯ. ೧೦೨೮-14-17. ೧೦೩೯

ಹೀಗೆಂದು ಚಂದಯ್ಯಗಳು ಬಿನ್ನೈಸಲು, ಆತನ ತಿಳುಹುವುದಕ್ಕೆ ಅನುಭವ ಮಂಟಪ*ದಲ್ಲಿ ಬಸವ-ಚೆನ್ನಬಸವ-ಪ್ರಭುದೇವರು ಮುಖ್ಯವಾದ ಗಣಂಗಳ ಕಯ್ಯ

[1] ತಪ್ಪ ಸೊಳಕೊಳ್ಳೆ (ಗೂ). * ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆಯಲ್ಲಿ ಈ ಪದವೆಲ್ಲೂ ಬಂದಿಲ್ಲ. ಆದುದರಿಂದ "ಅನುಭವಮಂಟಪ" ಎಂಬ ಅಭಿಧಾನದ ಕಲ್ಪನೆ ಅಲ್ಲಿಂದೀಚಿನದು.

ಲಲ್ಲದೆ ಆಗದೆಂದು, ಶರಣಸಂಗವೇ ಮುಖ್ಯವೆಂದು ಅಲ್ಲಿಗೆ ಕರೆವ ಪ್ರಸ್ತಾವದ ವಚನ :

ಗುರುಪೂಜೆಯನರಿದೆನೆಂದು ಲಿಂಗಪೂಜೆಯ ಬಿಡಲಾಗದು. ಲಿಂಗಪೂಜೆಯನರಿದೆನೆಂದು ಜಂಗಮಪೂಜೆಯ ಮರೆಯಲಾಗದು. ಆ ಜಂಗಮಪೂಜೆಯನರಿದೆನೆಂದು ಶರಣಸಂಗವ ಮರೆಯಲಾಗದು. ಇದು ಕಾರಣ ಶರಣರ ಸಂಗದ ಸಮ್ಯಜ್ಞಾನದಲಲ್ಲದೆ ಕಲಿದೇವಯ್ಯನ ಕೂಡುವ ಕೂಟ ಕಾಣಬಾರದು, ಹೋಹ ಬಾರಾ ಚಂದಯ್ಯ. ೧೦೭೯–14-18. ೧೦೩೦

ಹೀಗೆಂದು ಮಡಿವಾಳತಂದೆಗಳು—ಆ ಚಂದಯ್ಯಗಳನು, ಆತನಂಗದ ಮೇಲಣ ಲಿಂಗವೆ ಚರಸೇವೆಯ ಮಾಡಬೇಕೆಂಬ ಮೋಹದಿಂದ [1]ಭಕ್ತನಾದ[1] ಲಿಂಗಮೂರ್ತಿಯನು, ಅನುಭಾವಮಂಟಪಕ್ಕೆ ಗಣಂಗಳ ಬಳಿಗೆ ಬಿಜಯಂಗೈಸಿಕೊಂಡು ಬರಲು ; ಆ ಲಿಂಗ-ಭಕ್ತಮೂರ್ತಿಯು—ಮೊದಲು ಕಣ್ಣಿಯ ಬಸವಣ್ಣಂಗೆ ಕೊಡಲು,ಅದಕ್ಕೆ ಕೂಲಿಯಾಗಿ [ಸಂದ] ಸಾವಿರ ಹೊನ್ನಂ ಮರಳಿ ಬಸವಣ್ಣಂಗೆ ಇತ್ತು, ಈ ವೃತ್ತಾಂತಮಂ ಹೇಳಲು, ಆ ಪ್ರಸ್ತಾವದೊಳು ಗಣಂಗಳಿಗೆ ಚಂದಯ್ಯನು ನಮಸ್ಕರಿ—ತನ್ನ ಕಾಯಕದ ಕ್ರಮವನು, ದಾಸೋಹದ ನೆಲೆಯನು, ನಿಷ್ಠೆಯ ಬಗೆಯನು ಎಲ್ಲಾ ಪ್ರಮಥರೂ ಕೇಳುವ ಹಾಂಗೆ ಬಿನ್ನೈಸುವ ವಚನಂಗಳು :

ಕೈದ ಹಿಡಿದಾಡುವರೆಲ್ಲರೂ ಇರಿಯಬಲ್ಲರೇ ? ಸಾಧನೆಯ ಮಾಡುವರೆಲ್ಲರೂ ಕಾದಬಲ್ಲರೆ ? [2][ಅರ್ತಿಗೆ][2] ಮಾಡುವ ಕೃತ್ಯವಂತರೆಲ್ಲರೂ ಭಕ್ತರಪ್ಪರೆ? ಅದು ಚಂದೇಶ್ವರ ಲಿಂಗವ ಮುಟ್ಟದ ಮಾಟ. ೧೦೮೦–14-19. ೧೦೩೧

ರಣವ ನಿಶ್ಚೈಸಿದ ಭಟಂಗೆ ಮನೆಯ ಮೇಲಣ ಮೋಹವುಂಟೆ ? ಅರ್ಥಪ್ರಾಣಾಭಿಮಾನವೀ ಮೂರನೂ ಕರ್ತಂಗಿತ್ತ ಮತ್ತೆ, ಹೊತ್ತು ಹೋರುವಂಗೆ ಸದ್ಭಕ್ತಿಯುಂಟೆ ? ಅದು ಚಂದೇಶ್ವರಲಿಂಗವ ಮುಟ್ಟದ ಮಾಟ. ೧೦೮೧–1420. ೧೦೩೨

ಗುರುವಿಂಗೆ ತನುವೆಂದಲ್ಲಿ, ಲಿಂಗಕ್ಕೆ ಮನವೆಂದಲ್ಲಿ, ಜಂಗಮಕ್ಕೆ ಧನವೆಂದಲ್ಲಿ ಮತ್ತೊಂದರಾಸೆಗೆ ಕೊಂಡಾಡಲೇಕೆ? [3]ಆ ಗುಣ[3] ಚಂದಶ್ವರಲಿಂಗಕ್ಕೆ ದೂರ. ೧೦೮೨–14-21. ಮತ್ತಂ : ೧೦೩೩

ಇದಿರ ಭೂತಹಿತಕ್ಕೆ ಗುರುಪೂಜೆಯ ಮಾಡಲಿಲ್ಲ. ಅರ್ತಿಗಾರಿಕೆಯಲ್ಲಿ ಲಿಂಗವ ಬಿಟ್ಟು ಪೂಜಿಸಲಿಲ್ಲ. ರಾಜ-ಚೋರಭಯಕಂಜಿ ಜಂಗಮದಾಸೋಹವ ಮಾಡಲಿಲ್ಲ. ಆವ ಕೃಷಿಯಾದರೂ ಮನ ಶುದ್ಧವಾಗಿರಬೇಕು, ಚಂದೇಶ್ವರಲಿಂಗವನರಿಯಬಲ್ಲರೆ. ೧೦೮೩–14-22. ಮತ್ತಂ : ೧೦೩೪

ಗುರು ಇಷ್ಟವ ಕೊಟ್ಟು, ಕೂಲಿಗೆ ಮುಟ್ಟಿ ಪೂಜಿಸಲು, ಅದಕ್ಕೆ ದೃಷ್ಟವ ತೋರಿ ತನ್ನ ಬೆಳ್ಳಿಯ ಬೆಟ್ಟದ ಮೇಲೆ ಇರಿಸಿದ. ಇಂತು ಗುರುವಿಂದ ಲಿಂಗಕ್ಕೆ ಮಾಡಿ, ಹಿಂದಣ ಮುಂದಣ ಸಂದೇಹಕ್ಕೀಡಾಗದೆ, ಪ್ರಸಿದ್ಧವಪ್ಪ ಜಂಗಮಲಿಂಗಕ್ಕೆ ಮನ ಸಂದು, ತನುವ ಸವೆದು,ಧನವ ಕೊಟ್ಟು, ಸರ್ವ ಪದಾರ್ಥವ ಅರ್ಪಿತವ ಮಾಡಲಾಗಿ ಚಂದೇಶ್ವರ ಲಿಂಗಕ್ಕೆ

[1] × (ಗೂ). [2] ಅರ್ಥಿಗೆ (ಹ) (ಗೂ). [3] ಅದು (ಗೂ).

ಹಿಂದು ಮುಂದೆಂಬುದಿಲ್ಲ. ೧೦೮೪-14-23 ಮತ್ತಂ : ೧೦೩೫

ಸಂಸಾರವೆಂಬ ಸಾಗರದ ಮಧ್ಯದೊಳಗೆ ಬೆಳೆದ [1]ಹೊಡಕೆ[1] ಹುಲ್ಲ ಕುಯಿತೆಂದು, ಮತ್ತಾ ಮಾಯೆಯ ಕಣ್ಣ ತೆಗೆದು ಕಣ್ಣಿಯ ಮಾಡಿ, ಇಹಪರವೆಂಬ ಉಭಯದ ಗಂಟನಿಕ್ಕಿ, ತುದಿಯಲ್ಲಿ ಮಾಟಕೂಟವೆಂಬ ಮನದ ಕುಣಿಕೆಯೊಳಗೆ ಕಾಯಕ ವಾಯಿತು. ಇದು ಕಾರಣ ಚಂದೇಶ್ವರಲಿಂಗವೆಂಬ ಭಾವವೆನಗಿಲ್ಲ. ೧೦೮೫-14-24.
೧೦೩೬

ಹೀಗೆಂದು ಚಂದಯ್ಯಗಳು ತಮ್ಮ ಕಾಯಕದ ವಿವರವನು ದಾಸೋಹದ ನಿಷ್ಠೆಯನು ಗಣಂಗಳ ಮುಂದೆ ಬಿನ್ನೈಸಲು, ಆ ಪ್ರಸ್ತಾವದೊಳು ಪ್ರಭುದೇವರು ಲಿಂಗವ ಬಿಡಲಾಗ ದೆಂದು ನಿರೂಪಿಸಿದ ಪ್ರಸ್ತಾವದ ವಚನ :

ಪರುಷವಾದರೂ ಒಂದರಲ್ಲಿ ಇರಿಸಿರಬೇಕು. ರತ್ನವಿಶೇಷವೆಂದರೂ ಕುಂದಣದಲ್ಲಿ ಬಂಧಿಸಿ ಸಂದಿರಬೇಕು. ಲಿಂಗವ ಹಿಡಿದಲ್ಲಿ ಪೂಜಿಸುವ ಅಂಗವಿರಬೇಕು. ಇದು ಕಾರಣ ಗೊಗೇಶ್ವರಲಿಂಗವನರಿದು ಮರೆಯಲಿಲ್ಲ ಕಾಣಾ ಚಂದಯ್ಯ. ೧೦೮೬-14-25. ೧೦೩೭

ಹೀಗೆಂದು ಪ್ರಭುದೇವರು ಜಂಗಮದಾಸೋಹವಾದರೂ ಲಿಂಗವ ಬಿಡಲಾಗದೆಂದು ನಿರೂಪಿಸಲು, ಇದಕ್ಕೆ ಚಂದಯ್ಯಗಳು ಬಿನ್ನೈಸುವ ಪ್ರಸ್ತಾವದ ವಚನ :

ಗುರುಸೇವೆಯ ಮಾಡಿದರೆ ಇಹದಲ್ಲಿಯ ಸುಖ. ಲಿಂಗಸೇವೆಯ ಮಾಡಿದರೆ ಪರ ದಲ್ಲಿಯ ಸುಖ. ಜಂಗಮಸೇವೆಯ ಮಾಡಿದರೆ ಇಹಪರವೆಂಬುಭಯ ನಾಸ್ತಿ. ಇದು ಚಂದೇಶ್ವರಲಿಂಗವ ಹಿಂಗದ ಭಾವ ಕಾಣಾ ಪ್ರಭುವೆ. ೧೦೮೭-14-26. ೧೦೩೮

ಇದಕ್ಕೆ ಪ್ರಭುದೇವರ ನಿರೂಪ:

ಅಂಗವುಳ್ಳನ್ನಬರ ಲಿಂಗಪೂಜೆಯ ಮಾಡಬೇಕು. ಲಿಂಗವೆಂಬ ಮೂರ್ತಿಯುಳ್ಳನ್ನ ಬರ ಸಂದಿಲ್ಲದೆ ಅರ್ಪಿಸಬೇಕು. ಅಂಗವಳಿದ ಮತ್ತೆ ಲಿಂಗವೆಂಬ ಭಾವ ಹಿಂಗದಿರಬೇಕು. ಅದು ಗೊಗೇಶ್ವರಲಿಂಗದಿರವು ಚಂದಯ್ಯ. ೧೦೮೮-14-27. ೧೦೩೯

ಇದಕ್ಕೆ ಚಂದಯ್ಯನ ಬಿನ್ನಹ :

ಗುರುಪೂಜಕರು ಲಿಂಗವನೆತ್ತ ಬಲ್ಲರು. ಲಿಂಗಪೂಜಕರು ಜಂಗಮವನೆತ್ತ ಬಲ್ಲರು. ಜಂಗಮದಾಸೋಹವೆಂಬುದು ಉಭಯ ಸಂಗನಾಸ್ತಿ. ಅದು ಚಂದೇಶ್ವರ ಲಿಂಗದ ಅರಿವು ಕಾಣಾ ಪ್ರಭುವೆ. ೧೦೮೯-14-28. ೧೦೪೦

ಇದಕ್ಕೆ ಪ್ರಭುದೇವರ ನಿರೂಪ:

ಐದಿಂದ್ರಿಯುವನರಿದಲ್ಲದೆ ಒಂದಿಂದ್ರಿಯಕ್ಕೆ ಸಂದ ಗುಣವನರಿಯ ಬಾರದು. ಆ ಗುಣ ಏಕಮೂರ್ತಿ ತ್ರಿವಿಧರೂಪಾದ ಕಾರಣ, ಪೂಜೆಯೆಂಬುದು ಪುಣ್ಯವೆಂಬ ಭಾವ ವಿಲ್ಲದೆ ಮಾಡಿದಡೆ, ನಮ್ಮ ಗೊಗೇಶ್ವರಲಿಂಗಕ್ಕೆ ಅನ್ಯವಿಲ್ಲ ಕಾಣಾ ಚಂದಯ್ಯ. ೧೦೯೦-14-29. ೧೦೪೧

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚಂದಯ್ಯಗಳು— ಗುರುವಾದರೂ

---

[1] ಹೊಡಕೆಯ (ಹ).

ಲಿಂಗವಾದರೂ ಜಂಗಮವಾದರೂ ಜಂಗಮದಾಸೋಹವೆ ಬೇಕು, ನೀನೆನಗೆ ಹೇಳುವಾಗ ನಿನಗೆ ಬೇಡವೆ—ಎಂದು ಬಿನ್ನೈಸುವ ಪ್ರಸ್ತಾವದ ವಚನ:

ಗುರುವಾದರು ಕಾಯಕದಿಂದಲೆ ಜೀವನ್ಮುಕ್ತಿ. ಲಿಂಗವಾದರು ಕಾಯಕದಿಂದಲೆ [1]ಲಿಂಗದ[1] ಶಿಲೆಯು [2]ಕುಲ[2] ಹರಿವುದು. ಜಂಗಮವಾದರು ಕಾಯಕದಿಂದಲೆ ತನ್ನ ವೇಷದ ಪಾಶ ಹರಿವುದು. ಗುರುವಾದರೂ ಚರಸೇವೆಯ ಮಾಡಬೇಕು. ಲಿಂಗವಾದರೂ ಚರಸೇವೆಯ ಮಾಡಬೇಕು. ಜಂಗಮವಾದರೂ ಚರಸೇವೆಯ ಮಾಡಬೇಕು. ಇದು ಚಂದೇಶ್ವರಲಿಂಗದ ಅರಿವು ಕೇಳಾ ಪ್ರಭುವೆ. ೧೮೯೧-14-30 ಮತ್ತಂ: ೧೦೪೨

ಗುರುವ ತಾನರಿದು, ವರಗುರು ತಾನಾಗಬೇಕು. ಲಿಂಗವಾದರೆ ನಿಷ್ಠೆಯಾಗಿ ಪೂಜೆಗೊಳ್ಳಬೇಕು. ಜಂಗಮವಾದರೆ ತ್ರಿವಿಧವ ಮರೆದು ಜಂಘೆ ನಾಸ್ತಿಯಾಗಿ ಜಂಗಮವಾಗಬೇಕು. ಜಂಗಮವಾದರೂ ಜಂಗಮಕ್ಕೆ ಮಾಡಿ ಸಂದಳಿದು ಚಂದೇಶ್ವರಲಿಂಗವನರಿಯಬೇಕು. ಕೇಳಾ ಪ್ರಭುವೆ. ೧೮೯೨-14-31. ೧೦೪೩

ಇದಕ್ಕೆ ಪ್ರಭುದೇವರ ನಿರೂಪ:

ಆರಾರ ಭಾವ ತೋರಿದಂತೆ ಕುಲಕ್ಕೆ ಸುಖವಾಗಿಪ್ಪನು. ಹಿಡಿದ ವ್ರತನಿಯಮಂಗಳಲ್ಲಿ ಬಿಡುಗಡೆ ಇಲ್ಲದಿರಬೇಕು. ತಾ ಮಾಡುವ [3]ಎಂದಿನ[3] ನಿತ್ಯನೇಮಂಗಳಲ್ಲಿ ಭಾವಶುದ್ಧವಾಗಿಪ್ಪಡೆ ಗೊಗೇಶ್ವರಲಿಂಗಕ್ಕೆ ಅನ್ಯ ಭಿನ್ನವಿಲ್ಲ ಮಡಿವಾಳಮಾಚಯ್ಯ. ೧೮೯೩-14-32. ೧೦೪೪

ಇದಕ್ಕೆ ಮಡಿವಾಳಯ್ಯನ ವಚನ:

ಅಂಗಕ್ರಿಯೆಯೇ ಲಿಂಗದ ನಿಜ, ಲಿಂಗದ ನಿಜವೇ ಜಂಗಮ. ಆ ಜಂಗಮದ ಕ್ರಿಯೆಯೆಲ್ಲಾ ಲಿಂಗಮಯ. ಜಂಗಮದ ಸೇವೆಯೇ ಲಿಂಗದ ಕಳೆ, ಲಿಂಗದ ಕಳೆಯೇ ಜಂಗಮ. ಜಂಗಮದಿಂದೊದಗಿದುದೆ ಪ್ರಸಾದ. ಪ್ರಸಾದದೊದಗೆ ಲಿಂಗೈಕ್ಯವು. [4]ಈ ಗುಣವನರಿದು ಅಂಗವೇ ಲಿಂಗ, ಜಂಗಮವೇ ಪ್ರಾಣವಾದ ನಮ್ಮ ಸಂಗನ ಬಸವಣ್ಣನು. ಆತನ ಬಳಿವಿಡಿದು ಪ್ರಭುದೇವರು[4]—ನಾನು ನಿಜವ ಸಾಧಿಸಿದೆವು ನಮ್ಮ ಕಲಿದೇವರ ದೇವನ ಬಸವಣ್ಣನಿಂದ ಕೇಳ ಚಂದಯ್ಯ. ೧೮೯೪-14-33. ೧೦೪೫

ಇದಕ್ಕೆ ಚಂದಯ್ಯನ ವಚನ:

ಒಂದು ಬಿಟ್ಟು ಒಂದ ಹಿಡಿವಲ್ಲಿ ಆ ಮೂರಂಗ ಒಂದೂ ಇಲ್ಲ. ಹಿಡಿದ ಭಾವ ಒಂದುಂಟಾಯಿತ್ತಾದರೆ ಉಭಯದಂಗ ಸಲೆ ಸಂದಿತ್ತು. ಅದು ಸಂಗನ ಬಸವಣ್ಣಪ್ರಿಯ ಚಂದೇಶ್ವರಲಿಂಗಕ್ಕೆ ಸಂದಿತ್ತು ಮಡಿವಾಳಯ್ಯ. ೧೮೯೫-14-34. ೧೦೪೬

ಶಿಷ್ಯಂಗೆ ಗುರು ಬೋಧಿಸುವಲ್ಲಿ ತನ್ನನಳಿದು ಲಿಂಗವ ತೋರಿಸಬೇಕು. ಲಿಂಗದ ಸಂಗ ನೆನಹಾದಲ್ಲಿ, ಆ ಲಿಂಗಕ್ಕೆ ಉಂಬ ಬಾಯಿ ಜಂಗಮವಾದ ಕಾರಣ, ಆ ಜಂಗಮಲಿಂಗದ ದಾಸೋಹದಿಂದ ಬೇರೊಂದಂಗವಿಲ್ಲ. ಸಂಗನ ಬಸವಣ್ಣಪ್ರಿಯ ಚಂದೇಶ್ವರಲಿಂಗವ ಹಿಂಗದ ಭಾವ ಕಾಣಾ ಮಡಿವಾಳಯ್ಯ. ೧೮೯೬-14-35. ೧೦೪೭

[1] × (ಗೂ). [2] ಕುಜುಹ (ಗೂ). [3] (ಗೂ) × (ಹ) [4] ಈ ಗುರು ನಾನು ನಿಜವ ಸಾಧಿಸಿದೆನು (ಉ) (ಗೂ).

ತನುಭಾವವನರಿದಿಪ್ಪುದು ಗುರುಭಕ್ತಿ, ಮನಭಾವವನರಿದಿಪ್ಪುದು ಲಿಂಗಭಕ್ತಿ. ಈ ಎರಡು ಭಾವವನೂ ಮರೆದು ತ್ರಿವಿಧ ಮಲತ್ರಯಂಗಳ ಮರೆದಿಪ್ಪುದು ಜಂಗಮಭಕ್ತಿ, ಈ ಗುಣ ನಿಶ್ಚಯವಾಗಿ ನಿಂದುದು. ಸಂಗನ ಬಸವಣ್ಣಪ್ರಿಯ ಚಂದೇಶ್ವರಲಿಂಗವನರಿದುದು. ೧೯೭-14-36. ೧೦೪೮

ಹೀಗೆಂದು ಚಂದಯ್ಯಗಳು ತಮ್ಮ ಭಕ್ತಿಕ್ರಿಯಾಜ್ಞಾನಾಚಾರದ ದಾಸೋಹವೆಲ್ಲವು ಸಂಗನ ಬಸವಣ್ಣಂಗೆ ಪ್ರಿಯವೆಂದು ಬಿನ್ನವಿಸಲು, ಆ ಪ್ರಸ್ತಾಪದೊಳು ಪ್ರಭುದೇವರು ಮತ್ತು ಬಸವಣ್ಣನ ಸ್ವರೂಪವಂ ಹೇಳಿ, ಆತನ ಕೇಳಿ ಬದುಕೆಂದು ನಿರೂಪಿಸುವ ಪ್ರತ್ಯುತ್ತರದ ವಚನ:

ಅಂಗದಲ್ಲಿ ಅಳವಟ್ಟಿಪ್ಪ ಆಚಾರವೆ ಲಿಂಗವೆಂದಱಿದನು. ಮನದಲ್ಲಿ ಬೆಳಗುತ್ತಿಪ್ಪ ಅರಿವೆ ಜಂಗಮವೆಂದಱಿದನು. ಈ ಎರಡರ ಸಂಗವೆ ತಾನೆಂದರಿದನು. ಮಾಡುವ ದಾಸೋಹವೆ ಲಿಂಗಜಂಗಮ ಸ್ವರೂಪೆಂದನು. ನಮ್ಮ ಗೊಗೇಶ್ವರಲಿಂಗದಲ್ಲಿ ಸಂಗನ ಬಸವಣ್ಣನ ನಿಲವನಱಿಯಬೇಕು ಕೇಳಾ ಚಂದಯ್ಯ. ೧೯೮. 14-37. ೧೦೪೯

ಹೀಗೆಂದು ಪ್ರಭುದೇವರು ಬಸವರಾಜದೇವರ ನೋಡಿ ತಿಳಿದು ಬದುಕೆಂದು ನಿರೂಪಿಸಲು, ಅದಕ್ಕೆ ಬಸವರಾಜದೇವರು—ಆ ಚಂದಯ್ಯಗಳ ಜಂಗಮದಾಸೋಹನಿಷ್ಠೆಗೆ ಶರಣೆಂಬ-ಪ್ರಸ್ತಾವದ ವಚನ:

ಜಂಗಮಸೇವೆ ಗುರುಪೂಜೆಯೆಂದಱಿದು, ಜಂಗಮಸೇವೆಯೇ ಲಿಂಗಪೂಜೆಯೆಂದರಿದು, ಜಂಗಮಸೇವೆಯೆ ತನ್ನ ನಿಜವೆಂದಱಿದು; ಜಂಗಮಸೇವೆಯೆ ಸ್ವಯಲಿಂಗವೆಂದಱಿದ, ಜಂಗಮಸೇವೆಯೆ ನಿತ್ಯಪದವೆಂದರಿದ. ಇದು ಕಾರಣ ನಮ್ಮ ಕೂಡಲಸಂಗಮದೇವರಲ್ಲಿ ಜಂಗಮಪ್ರಾಣಿಯಾದ ಚಂದಯ್ಯನ ಹಳೆಯ ಮಗ ನಾನಾಗಿ ಆತನ ಶ್ರೀಚರಣಕ್ಕೆ ಶರಣೆಂದು ಶುದ್ಧನು ಆ ಮಹಾಮಹಿಮನ ಘನವ ನಾನೆತ್ತ ಬಲ್ಲೆನಯ್ಯ ಪ್ರಭುವೆ. ೧೯೯-14-38. ೧೦೫೦

ಇದಕ್ಕೆ ಪ್ರಭುದೇವರು—ಬಸವಣ್ಣ, ನೀನು ಅರಿಯೆನೆನಬಹುದೇ? ಕುರಿತು ಬಂದ ಠಾವಿನಲ್ಲಿ ಮರೆಮಾಡಿ ನುಡಿವುದುಚಿತವೆ? ಚಂದಯ್ಯಂಗೆ ನೀನೇನ ಮಾಡಿಯು ನಿಜವ ಹೇಳೆಂದು ನಿರೂಪಿಸಿದ ಪ್ರಸ್ತಾವದ ವಚನ:

ಆದಿಯಲ್ಲಿ ನೀನೆ ಗುರುವಾದ ಕಾರಣ ನಿನ್ನಿಂದ ಹುಟ್ಟಿತ್ತು ಲಿಂಗ. ಆದಿಯಲ್ಲಿ ನೀನೇ ಲಿಂಗವಾದ ಕಾರಣ ನಿನ್ನಿಂದ ಹುಟ್ಟಿತ್ತು ಜಂಗಮ. ಆದಿಯಲ್ಲಿ ನೀನೇ ಜಂಗಮವಾದ ಕಾರಣ ನಿನ್ನಿಂದ ಹುಟ್ಟಿತ್ತು ಪ್ರಸಾದ. ಆದಿಯಲ್ಲಿ ನೀನೆ ಪ್ರಸಾದವಾದ ಕಾರಣ ನಿನ್ನಿಂದ ಹುಟ್ಟಿತ್ತು ಪಾದೋದಕ. ಇಂತೀ ಗುರು-ಲಿಂಗ-ಜಂಗಮ-ಪ್ರಸಾದ-ಪಾದೋದಕ ಸ್ವರೂಪನೆ ನೀನಾದ ಕಾರಣ, ಜಂಗಮಪ್ರಾಣಿಯಾಗಿ ಸದಾಚಾರಿಯಾದೆ. ಅದು ಕಾರಣ ನೀನೇ ಸರ್ವಾಚಾರ ಸಂಪನ್ನನಾಗಿ, ಪೂರ್ವಾಚಾರಿ ನೀನಾದ ಕಾರಣ, ಗೊಗೇಶ್ವರಲಿಂಗದಲ್ಲಿ ಚಂದಯ್ಯಂಗೆ ಲಿಂಗದ ನಿಜವ ತಿಳುಹಾ ಸಂಗನ ಬಸವಣ್ಣ. ೧೧೦೦-14-39. ೧೦೫೧

ಹೀಗೆಂದು ಪ್ರಭುದೇವರು ಆ ಬಸವರಾಜದೇವರ ಅನಾದಿಯನೆತ್ತಿ, ಗುರು-ಲಿಂಗ-ಜಂಗಮ-ಪ್ರಸಾದ-ಪಾದೋದಕ ಸ್ವರೂಪವಾದ ಬ್ರಹ್ಮವೇ ನೀನೆಂದು, ಪೂರ್ವಾ[1]ಚಾರ್ಯ[1] ನೀನೆಂದು ಕೊಂಡಾಡಿ ಚಂದಯ್ಯನ ತಿಳುಹೆನಲಾ ಬಸವರಾಜದೇವರು—ನಾನೇನ ಬಲ್ಲೆನು ನನಗೆ ನಿಜವ ತಿಳುಹಿದಾತ ಚೆನ್ನಬಸವಣ್ಣ. ಆತನ ನೀ ಕೇಳುವುದೆಂದು ಬಿನ್ನೈಸಿದ ಪ್ರಸ್ತಾವದ ವಚನ:

ಮೆಲ್ಲಮೆಲ್ಲನೆ ಭಕ್ತಾದಿ ಐಕ್ಯಾಂತವಾದಹೆನೆಂದು ತಾವುಸಜ್ಞಾನದಲ್ಲಿ ಇರಲು, ಅದಕ್ಕೆ ನೀನು ನಿತ್ಯವ ಹಡೆದು ಬಂದೆಯೋ ಎಂದು, ನಿಂದ ಸ್ಥಳದಲ್ಲಿಯೇ ನಿಜಷಡುಸ್ಥಲವಡಗದಿರ್ದಡೆ ಜಂಗಮದಾಸೋಹವೇಕೆಂದು ಹೇಳಿ, ನಿಜವ ಕರುಣಿಸಿದನಾಗಿ—ಲಿಂಗಜಂಗಮದ ಭೇದವ ಚೆನ್ನಬಸವಣ್ಣ ಬಲ್ಲ, ನಾನು ಆತನಿರಿಸಿದಂತೆ ಇಪ್ಪೆನಯ್ಯ, ಇದು ಕಾರಣ ಕೂಡಲಸಂಗಮದೇವರಲ್ಲಿ ಚಂದಯ್ಯಂಗೆ ಶರಣೆಂದು ಶುದ್ಧನಯ್ಯ ಪ್ರಭುವೇ ೧೧೦೧-14-40. ೧೦೫೨

ಹಿಂಗೆಂದು ಬಸವರಾಜದೇವರು ನಾನರಿಯೆ ಚೆನ್ನಬಸವಣ್ಣನನೆ ಕೇಳಿ ಎಂದು ಬಿನ್ನೈಸಲು, ಅದಕ್ಕೆ ಚಂದಯ್ಯಗಳು ತಮ್ಮ ಸುಜ್ಞಾನಾಚಾರಜಂಗಮದಾಸೋಹದ ನಿರ್ಣಯವೆಲ್ಲವು ಚೆನ್ನಬಸವಣ್ಣಂಗೆ ಪ್ರಿಯವೆಂದು ಬಿನ್ನೈಸುವ ಪ್ರಸ್ತಾವದ ವಚನ:

ಜಂಗಮಸೇವೆಯ ಚಿತ್ತಶುದ್ಧನಾಗಿ ಮಾಡುವಲ್ಲಿ ಗುರುಪೂಜೆ ಸಂದಿತ್ತು. ಜಂಗಮಸೇವೆಯ ಚಿತ್ತ ಶುದ್ಧವಾಗಿ ಮಾಡುವಲ್ಲಿ ಲಿಂಗ ಪೂಜೆ ಸಂದಿತ್ತು. ಜಂಗಮಲಿಂಗದಾಸೋಹದಿಂದ ಸರ್ವಸಂಪದವಾಯಿತು. ಆ ಗುಣವನರಿದು ಮಾಡಲಾಗಿ ಬಟ್ಟಬಯಲು ಕಾಣ ಬಂದಿತ್ತು. ಹುಟ್ಟುವ ಹೊಂದುವ ನೆಲೆ ಇತ್ತಲೆ ಉಳಿಯಿತ್ತು. ಚೆನ್ನಬಸವಣ್ಣಪ್ರಿಯ ಚಂದೇಶ್ವರಲಿಂಗವನರಿಯಲಾಗಿ. ೧೧೦೨-14-41. ಮತ್ತಂ: ೧೦೫೩

ಜಂಗಮನಮಸ್ಕಾರವೆ ಗುರುಪೂಜೆ. ಜಂಗಮಪೂಜೆಯೆ ಲಿಂಗಪೂಜೆ. ಜಂಗಮತೃಪ್ತಿಯೆ ತನಗೆ ಪ್ರಸನ್ನ. ತನಗೆ ಪ್ರಸನ್ನವಾದುದೆ ನಿತ್ಯಪ್ರಸಾದದೊದಗು. ಚೆನ್ನಬಸವಣ್ಣಪ್ರಿಯ ಚಂದೇಶ್ವರಲಿಂಗಕ್ಕೆ ಕಟ್ಟುಗೊತ್ತು ಕಾಣಾ ಸಂಗನ ಬಸವಣ್ಣಪ್ರಭುವೆ. ೧೧೦೩-14-42. ೧೦೫೪

ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಕಣ್ಣು ಕಂಡಲ್ಲದೆ ಮನ ನೆನೆಯದು, ಆ ಮನ ನೆನೆದಲ್ಲದೆ ಕಾಲು ನಡೆಯದು. ಕಾಲು ನಡೆದಲ್ಲದೆ ಕಾಯಕವಾಗದು. ಕಾಲೆಂದಡೆ ನೀ ಚರಿಸುವ ವರ್ತನೆ. ಆ ವರ್ತನಾಚಾರವೆಲ್ಲವೂ ಲಿಂಗವು. ಇದು ಕಾರಣ ಲಿಂಗವ ಹಿಂಗ[=ಗಿ ?]ದ ಮಾಟ ಮೀಸಲಿಲ್ಲದ ಮನೆದೇವರ ಹಬ್ಬದಂತೆ, ನಮ್ಮ ಗೊಗೇಶ್ವರಲಿಂಗಕ್ಕೆ ಬೇಹ ಶೌಚ ಕೇಳಾ ಚಂದಯ್ಯ. ೧೧೦೪-14-43. ೧೦೫೫

ಹೀಗೆಂದು ಪ್ರಭುದೇವರು ನಿರೂಪಿಸಲು ಆ ಚಂದಯ್ಯಗಳು ಲಿಂಗಜಂಗಮದ ನಿಜವನು ಚೆನ್ನಬಸವಣ್ಣನಿಂದ ತಿಳುಹಿಸಿಕೊಡೆಂದು ಪ್ರಭುದೇವರ ಬೆಸಗೊಂಬ ಪ್ರಸ್ತಾವದ ವಚನ:

[1] ಚಾರಿಯು (ಗೂ).

ಎನ್ನ ಸತ್ಕ್ರಿಯೆ ಸಂಗನ ಬಸವಣ್ಣನು. ಎನ್ನ ಸುಜ್ಞಾನವೆ ಚೆನ್ನಬಸವಣ್ಣನು. ಈ ಎರಡರ ಏಕಭಾವದ ಪ್ರಭೆಯೆ ನೀವು. ನಿಮ್ಮೆಲ್ಲರ ನಿಷ್ಠೆಯ ನಿಜವೆ ಮಡಿವಾಳಯ್ಯನು. ಇಂತೀ ಚತುರ್ವಿಧವೆನಗೆ ಬೇಕಾದ ಕಾರಣ, ಸಂಗನ ಬಸವಣ್ಣಪ್ರಿಯ ಚಂದೇಶ್ವರ ಲಿಂಗದಲ್ಲಿ ಇಷ್ಟಲಿಂಗದ ನಿಜವೆ ದಾಸೋಹವೆಂಬುದ ಚೆನ್ನಬಸವಣ್ಣನಿಂದ ತಿಳುಹಿಸಿ ಕೊಡಾ ಪ್ರಭುವೆ. ೧೧೦೫-14-44. ೧೦೫೬

ಹೀಗೆಂದು ಚಂದಯ್ಯಗಳು ನಿಶ್ಚೈಸಲು, ಆ ಪ್ರಭುದೇವರು— ಚೆನ್ನಬಸವಣ್ಣ ನೀನೆ ಹೇಳೆಂದು ನಿರೂಪಿಸಿದ ಪ್ರಸ್ತಾವದ ವಚನ :

ಅಂಗದ ಲಿಂಗವೆ ಮನದ ಲಿಂಗ. ಮನದ ಲಿಂಗವೆ ಭಾವಲಿಂಗ. ಭಾವಲಿಂಗವೆ ಜಂಗಮ ದಾಸೋಹ. ದಾಸೋಹವೆಂಬುದು ಸಂದಿಲ್ಲದ ನಿಜ ನೋಡಾ. ಅದರಂದವನೆ ತಿಳಿದು ನಿಂದ ನಿಲುಕಡೆಯ ಭೇದವ ಕೇಳಬೇಕೆಂದು ಬಂದಲ್ಲಿ ತಿಳುಹಬೇಕಯ್ಯ. ಇಂತೀ ಪ್ರಕಾರ ದಲ್ಲಿ ಸಂದ ಸೌಖ್ಯದ ಭೇದವನು, ಸಂದಿಲ್ಲದ ಲಿಂಗದ ನಿಜವನು, ಇಂದು ನಮ್ಮ ಗೊಗೇಶ್ವರಲಿಂಗದಲ್ಲಿ ಚಂದಯ್ಯಂಗೆ ತಿಳುಹಿ ಕೊಡಾ ಚೆನ್ನಬಸವಣ್ಣ. ೧೧೦೬-14-45. ೧೦೫೭

ಹೀಗೆಂದು ಪ್ರಭುದೇವರು ನಿರೂಪಿಸಲು,ಇದಕ್ಕೆ ಚೆನ್ನ ಚಸವರಾಜದೇವರು ನಿರ್ವಾಹ ವಾಗಿ ನಿರೂಪಿಸಿದ ವಚನ:

ಶ್ರೀ ಗುರುಕರುಣವೇ ಲಿಂಗ, ಲಿಂಗದ ನಿಜವೇ ಜಂಗಮ. ಇಂತು ಇದು ಬಹಿರಂಗ ವರ್ತನೆ. ಇನ್ನು ಅಂತರಂದ ಸುಜ್ಞಾನವೇ ಜಂಗಮ, ಜಂಗಮ ನಡೆವ ಸತ್ಕ್ರಿಯೆಯೇ ಲಿಂಗ. ಆ ಉಭಯದ ತತ್ವಸಿದ್ಧಿಯೇ ಗುರು. ಇದು ಕಾರಣ—ಅಂಗತ್ರಯದಲ್ಲಿ ಲಿಂಗತ್ರಯ ಸಂಬಂಧವಾದಲ್ಲಿ, ಜಂಗಮದಾಸೋಹವಿಲ್ಲದಡೆ ಲಿಂಗತೃಪ್ತಿಯಿಲ್ಲ. ಅಂಗದ ಮೇಲೆ ಲಿಂಗವಿಲ್ಲದಿದ್ದಡೆ ಆ ಜಂಗಮ ಸೇವೆಯ ಕೈಕೊಳ್ಳ. ಅದು ಕಾರಣ, ಒಂದ ಬಿಟ್ಟು ಒಂದರಲ್ಲಿ ನಿಂದರೆ, ಅಂಗವಿಲ್ಲದ ಆತ್ಮನಂತೆ, ಶಕ್ತಿಯಿಲ್ಲದ ಶಿವನಂತೆ, ದೀಪವಿಲ್ಲದ ಪ್ರಕಾಶದಂತೆ.ಒಂದಂಗ ಶೂನ್ಯವಾಗಿ ಭಕ್ತಿಯುಂಟೇ? ಅವಯವಹೀನನು ರಾಯಪಟ್ಟಕ್ಕೆ ಸಲುವನೆ? ಲಿಂಗಹೀನನು ಭಕ್ತ್ಯಾಚಾರಕ್ಕೆ ಸಲುವನೆ? ಅದು ದೇವತ್ವಕ್ಕೆ ಸಲ್ಲದು. ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ ತ್ರಿವಿಧ ಸಮ್ಮತವೆ ಚರಸೇವೆಯಯ್ಯ ಚಂದಯ್ಯ ಪ್ರಭುವೆ. ೧೧೦೭-14-46. ಮತ್ತಂ: ೧೦೫೮

ಜಂಗಮವೆ ಪರವೆಂದರಿದಡೇನು? ಆ ಜಂಗಮದಂಗ ಲಿಂಗವಲ್ಲವೆ? ಆ ಲಿಂಗದ ಚೈತನ್ಯದರಿವೆಲ್ಲವೂ ಜಂಗಮವಲ್ಲವೆ? ಅಂಗವಿಲ್ಲದ ಜೀವ, ಆತ್ಮನಿಲ್ಲದ ಅಂಗಕ್ಕೆ ಸರ್ವ ಭೋಗದ ಸುಖವುಂಟೆ? ಮಣ್ಣಿಲ್ಲದೆ ಮರನುಂಟೆ? ಮರನಿಲ್ಲದೆ ಹಣ್ಣುಂಟೆ? ಹಣ್ಣಿಲ್ಲದೆ ಸ್ವಾದುವುಂಟೆ? ಹಿಂಗರಿವುದಕ್ಕೆ ಕ್ರಮ: ಅಂಗವೆ ಮಣ್ಣು, ಲಿಂಗವೆ ಮರನು, ಫಲವೆ ಜಂಗಮ, ರುಚಿಯೆ ಪ್ರಸಾದ. ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ ಸಾಕಾರ ಲಿಂಗವೆ ಜಂಗಮದಂಗವಯ್ಯ ಚಂದಯ್ಯ ಪ್ರಭುವೆ. ೧೧೦೮-14-47. ೧೦೫೯

ಹೀಗೆಂದು ಚೆನ್ನಬಸವೇಶ್ವರ ದೇವರು ನಿರೂಪಿಸಲು ಇದಕ್ಕೆ ಪ್ರಭುದೇವರು ಸಮ್ಯಕ್ಕಾಗಿಯೇ ನುಡಿದು, ಚೆನ್ನಬಸವಣ್ಣನ ಪ್ರಸಾದವಾಕ್ಯವ ಕೇಳೆಂದು ಚಂದಯ್ಯಂಗೆ ನಿರೂಪಿಸಿದ ಪ್ರಸ್ತಾವದ ವಚನ:

ಆಚಾರವೆ ಲಿಂಗ, ಆ ಆಚಾರದ ಅರಿವೆ ಜಂಗಮ. ಅಂಗವೆ ಲಿಂಗ, ಚೈತನ್ಯವೆ ಜಂಗಮ. ಸೇವೆಯೆ ಲಿಂಗ, ಕೈಕೊಂಬುದೆ ಜಂಗಮ. ನಮ್ಮ ಗೊಗೇಶ್ವರನ ಶರಣರು ಮೆಚ್ಚುವಂತೆ, ಮಡಿವಾಳನ ಕಾಯಕದಂತೆ ನಿರೂಪಿಸಿದ ಚೆನ್ನಬಸವಣ್ಣನ ಕರುಣದಲ್ಲಿ ಬದುಕಾ ಚಂದಯ್ಯ. ೧೧೧೯-14-48. ೧೦೬೦

ಹೀಗೆಂದು ಪ್ರಭುದೇವರು-ಚೆನ್ನಬಸವಣ್ಣನ ನಿರೂಪವ ಕೇಳಿ ಬದುಕೆಂದು ಹೇಳಲಾ ಚಂದಯ್ಯಗಳು ಆ ನಿರೂಪಕ್ಕೆ ಒಪ್ಪಿ ಒಡಂಬಟ್ಟು ಚಿತ್ತನಿಸ್ತರಂಗವನೆಯ್ದಿ ಬಸವಣ್ಣ ಮೊದಲಾದ ಶರಣರ ಸಮ್ಯಜ್ಞಾನವೆನಗಾಯಿತೆಂದು ಬಿನ್ನೈಸಿದ ಪ್ರಸ್ತಾವದ ವಚನ:

ಎನ್ನ ಅಂಗದ ಸತ್ಕ್ರಿಯೆಯೆ ಸಂಗನ ಬಸವಣ್ಣನು. ಎನ್ನ ಲಿಂಗದ ಸತ್ಕ್ರಿಯೆಯೆ ಚೆನ್ನಬಸವಣ್ಣನು. ಎನ್ನ ಅರಿವಿನ ಸತ್ಕ್ರಿಯೆ ಪ್ರಭುವೆ ನೀವು. ಎನ್ನ ದಾಸೋಹದ ನಿಷ್ಠೆಯೇ ಮಡಿವಾಳಯ್ಯನು, ಇದು ಕಾರಣ, ಎನ್ನ ಅಂಗ-ಲಿಂಗ-ಜ್ಞಾನ-ದಾಸೋಹ ಇವು ಮುಂತಾದ ಸಮಸ್ತವು ನಿಮ್ಮ ಪುರಾತನರಾದ ಕಾರಣ ಚೆನ್ನಬಸವಣ್ಣನ ಕರುಣ ಇಂತು ಮಾಡಲಾಗಿ ನಾನು ನಿನ್ನ ಪಾದವ ಬೆರೆದು ಬೇರಿಲ್ಲದೆ ನಿಜವನೈದಿದೆ ಚೆನ್ನ ಬಸವಣ್ಣ—ಚಂದೇಶ್ವರ ಲಿಂಗದಲ್ಲಿ ಶರಣ ಸಮ್ಯಜ್ಞಾನವೆನಗಾಯಿತಯ್ಯ ಪ್ರಭುವೆ. ೧೧೧೦-14-49. ೧೦೬೧

ಇಂತು ಸುಲಿಯ ಚಂದಯ್ಯಗಳು ಚೆನ್ನಬಸವಣ್ಣ ಮೊದಲಾದ ಅಸಂಖ್ಯಗಣಂಗಳ ನಿರೂಪಮಂ ಕೇಳಿ ತನ್ನ ಪ್ರಾಣಲಿಂಗಮಂ ಧರಿಸಿಕೊಂಡು ನಿಜಕಾಯಕದಿಂ ನಿತ್ಯ ಮುಕ್ತನಾಗಿರಲ್—ಇತ್ತ....

# ಅನುಬಂಧ ೨

## ಆಯ್ದಕ್ಕಿ ಮಾರಯ್ಯಗಳ ಸಂಪಾದನೆ

—ಗುಮ್ಮಳಾಪುರದ ಸಿದ್ಧಲಿಂಗ

ಇಂತು ಬಸವಣ್ಣ-ಚೆನ್ನಬಸವಣ್ಣ-ಮಡಿವಾಳ ಮಾಚಿ ತಂದೆಗಳು-ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳು ಸುಖಾನುಭಾವ ಗೋಷ್ಠಿಯೊಳಿರುತಿರಲು ಆ ಪ್ರಸ್ತಾವದೊಳು ಆಯ್ದಕ್ಕಿಯ ಮಾರಿತಂದೆಗಳು ಪ್ರಭುದೇವರೊಡನೆ ತಮ್ಮ ಕಾಯಕದ ನಿರ್ವಂಚಕತ್ವವ ಗುರು ಲಿಂಗ ಜಂಗಮ [1]ಕಾಯಕವೆ[1] ಕೈಲಾಸವೆಂದು ಬಿನ್ನಹಂ ಮಾಡುವ ಪ್ರಸ್ತಾವನ ವಚನ:

ಕಾಯಕದಲ್ಲಿ ನಿರತನಾದರೆ ಗುರುದರುಶನವಾದರೂ ಮಱೆಯಬೇಕು. ಲಿಂಗಪೂಜೆಯಾದರೂ ಮಱೆಯಬೇಕು. ಜಂಗಮ ಮುಂದಿರ್ದ್ದಡೂ ಹಂಗು ಹಱಿಯಬೇಕು. [1]ಕಾಯಕವೆ[1] ಕೈಲಾಸವಾದ ಕಾರಣ ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು. ೭೫೦-12-1 ವೃತ್ತಂ: ೧೦೬೨

ಹಾಗದ ಕಾಯಕವ ಮಾಡಿಕೊಂಡು ಹಣವಡ್ಡವ [2]ತಾರೆಂಬಲ್ಲಿ[2] ಸತ್ಯ ಕಾಯಕ ಉಂಟೆ ಭಕ್ತರಲ್ಲಿ ಕಾಯಕಕ್ಕೆ ಕಡಮೆಯಾಗಿ [3]ತಾರೆಂಬುದು[3] ಅಮಲೇಶ್ವರಲಿಂಗಕ್ಕೆ ಚಿತ್ತಶುದ್ಧ ಕಾಯಕ. ೭೫೧-12-2 ವೃತ್ತಂ: ೧೦೬೩

ನೇಮವ ಮಾಡಿಕೊಂಡು ಭಕ್ತರ ಭವನಂಗಳಂ ಹೊಕ್ಕು ಕಾಯಕ ಸತ್ತು ಹಣ ಹೊನ್ನ ಬೇಡಿಹೆನೆಂಬುದು ಕಷ್ಟವಲ್ಲದೆ ಸದ್ಭಕ್ತಂಗೆ ಅವಗುಣ, ಅಮಲೇಶ್ವರ ಲಿಂಗಕ್ಕೆ ದೂರ. ೭೫೨-12-3. ವೃತ್ತಂ: ೧೦೬೪

ಗುರು-ಲಿಂಗ-ಜಂಗಮದಲ್ಲಿ ಬೆರಸಿ ದಾಸೋಹವ ಮಾಡುವಲ್ಲಿ ಹೊನ್ನು-ಹೆಣ್ಣು-ಮಣ್ಣು ಇವೇ ಮೂಲ ಮೊದಲು. ಮಾಟ ಸ್ವಸ್ಥವಾಗಿಪ್ಪಲ್ಲಿ ಮಾಜಿ ಮಱೆಯಬೇಕು ಅಮಲೇಶ್ವರಲಿಂಗವನಱಿವುದಕ್ಕೆ. ೭೫೩-12-4. ೧೦೬೫

ಈ ಹಿಂಗೆಂದು ಆಯದಕ್ಕಿ ಮಾರಿತಂದೆಗಳು ತಮ್ಮ ಕಾಯಕದ ನಿರುತಮಂ ಪ್ರಭುದೇವರೊಡನೆ ಬಿನ್ನೈಸಲು ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರದ ವಚನ:

ಕಂಗಳ ಮುಂದಣ ಗೊತ್ತ ಹಱಿದು, ಕಾಮ್ಯದ ಮುಂದಣ ಚಿತ್ತವ ಹಱಿದು ಮಾಡಿಹೆನೆಂಬ ಮಾಟ-ಕೂಟದ ಚಿತ್ತ ನಿಂದಲ್ಲದೆ ಸ್ವಸ್ಥವಿಲ್ಲ. ಹಾಂಗಲ್ಲದೆ ಗೋಹೇಶ್ವರ ಲಿಂಗವ ಕಾಣಬಾರದು ಆಯ್ದಕ್ಕಿ ಮಾರಯ್ಯ. ೭೫೪-12-5. ೧೦೬೬

ಇದಕ್ಕೆ ಆಯ್ದಕ್ಕಿಯ ಮಾರಿತಂದೆಗಳು ಬಿನ್ನೈಸುವ ಪ್ರಸ್ತಾವದ ವಚನ:

---

[1] (ಗುಗೂ) ಕಾಯವೆ (ಗೂ R ಇಈಉ). [2] ತಾ ಎಂಬಲ್ಲಿ (ಗೂ). [3] ತಾ ಎಂಬುದು (ಗೂ).

ಒಂದ ಬಿಟ್ಟು ಒಂದ ಕಂಡಹೆನೆಂದಡೆ, ಅದು ಕಾಣಬಾರದ ಬಯಲು. ಒಂದಱಲ್ಲಿ ಸಲೆ ಸಂದು ಹಿಂಗದ ಭಾವ ನೆಲೆಗೊಂಡಲ್ಲಿ ಅಮಲೇಶ್ವರಲಿಂಗವು ತಾನೆ. ೭೫೫-12-6. ೧೦೬೭

ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಮಾಡಿಹೆ ಮಾಡಿಹೆನೆಂಬನ್ನಬರ ತನ್ನ ಅವಧಿಗೆ ಬಂದುದನಱಿವ ಪರಿಯಿನ್ನೆಂತೊ ? ಅಸಗ ನೀರಡಸಿ ನಿಂದಂತೆ ಆಗಬೇಡ ಗೊಹೇಶ್ವರ ಲಿಂಗವನಱಿವುದಕ್ಕೆ. ೭೫೬-12-7. ೧೦೬೮

ಇದಕ್ಕೆ ಆಯ್ದಕ್ಕಿ ಮಾರಿತಂದೆಗಳು ಬಿನ್ನೈಸುವ ಪ್ರಸ್ತಾವದ ವಚನ:

ತೊಟ್ಟು ಬಿಡದನ್ನಕ್ಕ ಮತ್ತಾ ಬುಡದಾಸೆ ಬೇಕು. ಮರ್ತ್ಯದ ಹಂಗುಳ್ಳನ್ನಕ್ಕ ಸತ್ಯ ಶರಣರ ಸಂಗ, ನಿತ್ಯ ಜಂಗಮಸೇವೆ, ಕೃತ್ಯವಿರಬೇಕು ಅಮಲೇಶ್ವರಲಿಂಗವನಱಿವುದಕ್ಕೆ ೭೫೭-12-8. ೧೦೬೯

ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ:

ಮಾಡುವ ಮಾಟದಿಂದವೆ ಬೇಱೊಂದನಱಿಯಬೇಕು. ಅಱಿವಿಂಗೆ ನೆಮ್ಮುಗೆ ಒಡಗೂಡಿದ ಬಳಿಕ ಬಯಲ ಭ್ರಮೆಯ ಕಳೆದು ನಮ್ಮ ಗೊಹೇಶ್ವರಲಿಂಗದಲ್ಲಿ ನಿಜಪದವನೈದುವುದು ಮಾರಯ್ಯ ೭೫೮-12-9. ೧೦೭೦

ಈ ಹಿಂಗೆಂದು ಪ್ರಭುದೇವರು ಮಹಾಘನಲಿಂಗದ ನಿಜಪದದಲ್ಲಿ ಬೆರಸಿ ಎರಡಳಿದಿರಬೇಕು ಮಾರಯ್ಯ ಎಂದು ನಿರೂಪಿಸಲು, ಇದಕ್ಕೆ ಆಯ್ದಕ್ಕಿಯ ಮಾರಿತಂದೆಗಳು ಕೃತನಿಶ್ಚಯವನೈದಿ ತಮ್ಮ ಕಾಯಕವ ತಾವೆ ಜಱೆದು ಘನಲಿಂಗದ ನಿಜಸಮಾಧಿಯೊಳಗೆ ಬೆರಸಿನಿಂದು ಪ್ರಭುದೇವರ ಶ್ರೀಪಾದಕ್ಕೆ ನಮಸ್ಕರಿಸುವ ಪ್ರಸ್ತಾವದ ವಚನ:

ಅಹುದಹುದು ಗೆದಲು ಮನೆಯ ಮಾಡಿ ಸರ್ಪಂಗೆ ಇಂಬಾದಂತೆ—ನಾನತ್ತಣ ದ್ರವ್ಯವ ತಂದು ಇತ್ತ ಮಾಡಿದಡೆ ನನಗಿನ್ನೆತ್ತಣ ಮುಕ್ತಿ ? ಘನ ಮಹಿಮ ಶರಣರ ಸಂಗದಿಂದ ಘನಕ್ಕೆ ಘನವೇದ್ಯವಾದ ಬಳಿಕ, ಅಱಿವೞಿತು ಮಱಹು ನಷ್ಟವಾಗಿ ಅಮಲೇಶ್ವರಲಿಂಗದಲ್ಲಿ ನಿಜಪದವ ಬೆರಸಿ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎನ್ನುತ್ತಿರ್ದೆನು. ೭೫೯-12-10. ೧೦೭೧

ಈ ಹಿಂಗೆಂದು ಆಯ್ದಕ್ಕಿಯ ಮಾರಿತಂದೆಗಳು ನಿಮ್ಮ ಸಂಗದಿಂದ ಘನಲಿಂಗದಲ್ಲಿ ಮನಮಗ್ನಂಯೋಗವಾಯಿತ್ತೆಂದು ಪ್ರಭುದೇವರೊಡನೆ ಬಿನ್ನೈಸುತ್ತಿರಲು, ಆ ಪ್ರಸ್ತಾವದೊಳು ಆಯ್ದಕ್ಕಿಯ ಮಾರಯ್ಯಗಳ ಪುಣ್ಯಾಂಗನೆಯಪ್ಪ ಲಕ್ಕಮ್ಮಗಳು ಬಂದು ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳಿಗೆ ನಮಸ್ಕರಿಸಿ ತಮ್ಮ ಪತಿಗೆ [1]ಕಾಯಕನಿಂದಿತ್ತು ಹೋಗಯ್ಯ ಎನ್ನಾಳ್ದನೇ ಎಂದು ಬಿನ್ನೈಸಿಕಳುಹುವ ಪ್ರಸ್ತಾವದ ವಚನ[1]:

ಕಾಯಕ ನಿಂದಿತ್ತು ಹೋಗಯ್ಯ ಎನ್ನಾಳ್ದನೆ. ಭಾವ ಶುದ್ಧವಾಗಿ [A]ತಿಪ್ಪೆಯ[A]

1. (ಗು) ಕಾಯಕ ನಿಂದಿತ್ತು ಹೋಗಯ್ಯಾ ಎನ್ನಾಳ್ದನೆ ಎಂದು ಬಿನ್ನೈಸಿ ಕಳುಹುವ ಪ್ರಸ್ತಾವದ ವಚನ: (ಗೂ). A. ಮಹಾಶರಣರ ತಿಪ್ಪೆಯ (ಗೂ).

ತಪ್ಪಲು ಅಕ್ಕಿಯ ತಂದು ನಿಶ್ಚೈಸಿ ಮಾಡಬೇಕು ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗಕ್ಕೆ. ಬೇಗ ಹೋಗು ಮಾರಯ್ಯ. ೭೬೦-12-11. ಮತ್ತಂ : ೧೦೭೨

ಅಂಗವಜಿತ ಅಱುವೆಯ ಅಂಗದಲ್ಲಿ, ಬಯಕೆಯಱತಕ್ಕೈಯಲ್ಲಿ, ತಂಡುಲವನಾಯಿದು ಕೊಂಡು, ಸಂದ ಪ್ರಮಥರ ಅಂಗಳಕ್ಕೆ ಬೇಗ ಹೋಗಿ ಕೊಂಡು ಬಾರಯ್ಯ, ಮಾರಯ್ಯ— ಪ್ರಿಯ ಅಮಲೇಶ್ವರಲಿಂಗಕ್ಕೆ, ಮಾರಯ್ಯ. ೭೬೧-12-12. ೧೦೭೩

ಈ ಹಿಂಗೆಂದು ಲಕ್ಕಮ್ಮಗಳು ಆಯ್ದಕ್ಕಿಯ ಮಾರಯ್ಯಗಳ ಕಾಯಕಕ್ಕೆ [1]ಕರೆಯಲು[1] ಆ [2]ಮಾರಿ ತಂದೆಗಳು[2] ಸಂತೋಷಚಿತ್ತರಾಗಿ ದಳದಳನೆ ಬಸವೇಶ್ವರನ ಅಂಗಳಕ್ಕೆ ಬಂದು, ಅಲ್ಲಿ ಚಲ್ಲಿರ್ದ ತಂಡುಲವಂ ಪಿರಿದಾಗಿ ಆಯ್ದು ತರಲು, ಅದು ಆಸೆಯೆಂದು ಲಕ್ಕಮ್ಮಗಳು ವಿಡಂಬಿಸುವ ಪ್ರಸ್ತಾವದ ವಚನ :

ಸಂದಣಿಗೊಂಡು ಮನ ಹರುಷದಿಂದ ಬಸವಣ್ಣನ ಅಂಗಳಕ್ಕೆ ಹೋಗಿ ತಿಪ್ಪೆಯ ತಪ್ಪಲಲ್ಲಿ ಬಿದ್ದಿದ್ದ ತಂಡುಲವ ಕಟ್ಟಿಕೊಂಡು ಎಯ್ದಾಗಿ [3]ತಂದ[3] ಆಸೆ ಎಯ್ದಾಗಿ ಬಂದಿತಲ್ಲಾ ! ಎಂದಿನಂದವೆ ಸಾಕು. ಮತ್ತೆ ಕೊಂಡು ಹೋಗಿ ಅಲ್ಲಿಯೆ ಸುರಿ. ಮಾರಯ್ಯ ಪ್ರಿಯ ಅಮಲೇಶ್ವರಲಿಂಗ ಕೊಟ್ಟ ಕಾಯಕವೆ ಸಾಕು ಮಾರಯ್ಯ. ೭೬೨-12-13. ಮತ್ತಂ : ೧೦೭೪

ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ ? ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ ಅಯ್ಯಾ ? ಈಸಕ್ಕಿಯಾಸೆ ನಿಮಗೇಕಯ್ಯ ? ಈಶ್ವರನೊಪ್ಪ ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗಕ್ಕೆ ದೂರ ಮಾರಯ್ಯ. ೭೬೩-12-14. ಮತ್ತಂ : ೧೦೭೫

ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೆ ? ಬೆಟ್ಟ ಬಲ್ಲಿತ್ತೆಂದಡೆ, ಉಳಿಯ ಮೊನೆಯಲ್ಲಿ ಬಡತನವಿರ್ದಡೆ ಒಡೆಯದೆ ? ಘನಶಿವಭಕ್ತರಿಗೆ ಬಡತನವಿಲ್ಲ. ಸತ್ಯರಿಗೆ ದುಷ್ಕರ್ಮವಿಲ್ಲ. ಎನಗೆ ಮಾರಯ್ಯ ಪ್ರಿಯ ಅಮಲೇಶ್ವರಲಿಂಗವುಳ್ಳನ್ನಕ್ಕ ನನಗಾರ ಹಂಗಿಲ್ಲ, ಮಾರಯ್ಯ. ೭೬೪-12-15. ಮತ್ತಂ : ೧೦೭೬

ಭಕ್ತರು ಕಾಯಕವೆಂದು ದಾಯಗಾಱಕೆಯಲ್ಲಿ ತಂದು ದಾಸೋಹವ ಮಾಡ ಬಹುದೆ ? ಒಮ್ಮನವ ತಂದು ಒಮ್ಮನದಲ್ಲಿಯೆ ಮಾಡಿ, ಇಮ್ಮನವಾಗದ ಮುನ್ನವೆ ಮಾರಯ್ಯ ಪ್ರಿಯ ಅಮಲೇಶ್ವರಲಿಂಗಕ್ಕೆ ಸಲಬೇಕು, ಮಾರಯ್ಯ. ೭೬೫-12-16. ಮತ್ತಂ : ೧೦೭೭

ಭಕ್ತಂಗೆ ಬಡತನವುಂಟೆ ? ನಿತ್ಯಂಗೆ ಮರಣವುಂಟೆ ? ಭಕ್ತರು ಬಡವರೆಂದು ಮತ್ತೊಂದ ಕೊಟ್ಟಹೆನೆಂದಡೆ ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗವು ಸತ್ತಂದಿಗಲ್ಲದೆ ಬಡತನವಿಲ್ಲ. ೭೬೬-12-17. ಮತ್ತಂ : ೧೦೭೮

ಅಯಿದು ಇಲ್ಲವಾದಂದಿಂಗಲ್ಲದೆ ಜಗದೊಳಗಾರಿಗೂ ಬಡತನವಲ್ಲದಿಲ್ಲ. ಅಯಿದು

---

1 ಕಳುಹಲು (ಗೂ). 2 ಆಯ್ದಕ್ಕಿಯ ಮಾರಿತಂದೆಗಳು 3 ತರಲು (ಗೂ).

ಉಳ್ಳನ್ನಕ್ಕ ಸಕಲ ಜೀವನಕ್ಕೆ ಚೇತನ. ಮಾರಯ್ಯ ಪ್ರಿಯ ಅಮಲೇಶ್ವರಲಿಂಗವುಳ್ಳನ್ನಕ್ಕ ಧನ-ಮನ-ಸಂಪನ್ನರು. ೭೬೭-12-18. ಮತ್ತಂ : ೧೦೭೯

ಬಾಹಾಗ ಕೊಂಡು ಬಂದ ಪ್ರಾಪ್ತಿಯಲ್ಲದೆ ಬೇಱೊಂದ ಗಳಿಸಲಿಲ್ಲ, ಬೇಱೊಂದ ಕೆಡಿಸಲಿಲ್ಲ. ಬಂದುದು ನಿಂದುದು ; ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗ ಕೊಟ್ಟಲ್ಲ ದಿಲ್ಲಾ. ೭೬೮-12-19. ಮತ್ತಂ: ೧೦೮೦

ಕಾಯವಳಿದ ಠಾವಿನಲ್ಲಿ ಜೀವದ ಎಡೆಯಾಟವುಂಟೆ ? ಭಾವಶುದ್ಧವಿಲ್ಲದ ಭಕ್ತಿ ಹೋಯಿತ್ತು. ಮಾರಯ್ಯ ಪ್ರಿಯ ಅಮಲೇಶ್ವರಲಿಂಗವ ಮುಟ್ಟದೇ. ೭೬೯-12-20. ಮತ್ತಂ: ೧೦೮೧

ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು. ನಡೆಯಿಲ್ಲದ ನುಡಿ ಅಱಿವಿಂಗೆ ಹಾನಿ. ಕೊಡದೆ ತ್ಯಾಗಿಯೆನಿಸಿಕೊಂಬುದು ಮುಡಿಯಿಲ್ಲದ ಶೃಂಗಾರ. ದೃಢವಿಲ್ಲದ ಭಕ್ತಿ ಅಡಿಯೊಡೆಥ ಕುಂಭದಲ್ಲಿ ಸುಜಲವ ತುಂಬಿದಂತೆ—ಮಾರಯ್ಯ ಪ್ರಿಯ ಅಮರೇಶ್ವರ ಲಿಂಗವ ಮುಟ್ಟದ ಭಕ್ತಿ ೭೭೦-12-21. ಮತ್ತಂ : ೧೦೮೨

ಒಮ್ಮನವ ಮೀಱಿ ಇಮ್ಮನದಲ್ಲಿ ತಂದಿರಿ. ಇದು ನಿಮ್ಮ ಮನವೊ ? ಬಸವಣ್ಣನ ಅನುಮಾನದ ಚಿತ್ತವೊ ? ಈ ಮಾತು ಮಾರಯ್ಯ ಪ್ರಿಯ ಅಮಲೇಶ್ವರಲಿಂಗಕ್ಕೆ ಸಲ್ಲದ ಬೋನ, ಅಲ್ಲಿಯೆ ಸುರಿದು ಬನ್ನಿ ಮಾರಯ್ಯ. ೭೭೧-12-22. ೧೦೮೩

ಈ ಹಿಂಗೆಂದು ಆಯ್ದಕ್ಕಿಯ ಮಾರಯ್ಯಗಳ ಪುಣ್ಯಾಂಗನೆ ಆಸೆಯ ವಿಡಂಬಿಸಿ, ಲಿಂಗೈಕ್ಯದ ಭೇದವ ಎಚ್ಚಱಿಸಿ ಬಿನ್ನೈಸುತ್ತಿರಲು, ಆ ಪ್ರಸ್ತಾವದೊಳು ಮಾರಿ ತಂದೆ ಗಳು—ಜಜ್ಜರಂ ಬೋಗಿ ಮಹಾಘನಲಿಂಗದೊಳಗೆ ವಾರಿ-ವಾರಿ ಬೆರೆದಹಾಗೆ ಶಿಖಿ-ಕರ್ಪೂರ ಯೋಗದಂತೆ ಎಂದಪ್ಪುದೆಂದು ಬೆಸಗೊಂಬ ಪ್ರಸ್ತಾವದ ವಚನ :

ಗಂಗೆ ವಾಳುಕಸಮಾರುದ್ರರೆಲ್ಲರು ತಾವು-ತಾವು ಬಂದಲ್ಲಿಯೇ ಬಟ್ಟೆಯ [1]ಮೆಟ್ಟ ದಂತಾದರು[1]. ಪ್ರಮಥಗಣಂಗಳೆಲ್ಲರು [2]ಪ್ರಮಾಣಿಸಿದಲ್ಲಿಗೆ[2] ಹರಿದರು. ಎನಗೆ ಅಱಿವು ಕಱಿಗೊಂಬ ಅಱಿವೆಲ್ಲಿ ಅಮರೇಶ್ವರಲಿಂಗದಲ್ಲಿ ಹೇಳಾ. ೭೭೨-12-23. ೧೦೮೪

ಈ ಹಿಂಗೆಂದು ಮಾರಯ್ಯಗಳು ತಮ್ಮ ಪುಣ್ಯಾಂಗನೆಯ ಬೆಸಗೊಳಲು, ಆ ಪ್ರಸ್ತಾವ ದೊಳು ಶಿವಲೋಕಭ್ರಮೆಯ ವಿಡಂಬಿಸುವ ಪ್ರಸ್ತಾವದ ವಚನ :

ಮಾಡುವ ಮಾಟವುಳ್ಳನ್ನಕ್ಕರ ಬೇಱೊಂದು ಪದವನಱಸಲೇತಕ್ಕೆ ? ದಾಸೋಹ ವೆಂಬ ಸೇವೆಯ ಬಿಟ್ಟು ನೀಸಲಾಱದೆ ಕೈಲಾಸವೆಂಬ ಆಸೆ ಬೇಡ. ಮಾರಯ್ಯ ಪ್ರಿಯ ಅಮಲೇಶ್ವರಲಿಂಗವಿದ್ದ ಠಾವೆ ಕೈಲಾಸ. ೭೭೩-12-24. ಮತ್ತಂ : ೧೦೮೫

ಮಾಡಿ ನೀಡಿ ಹೋದಹೆನೆಂಬಾಗ ಕೈಲಾಸವೇನು ಕೈಕೂಲಿಯೆ ? ಮುಂದೊಂದ ಕಲ್ಪಿಸದೆ, ಹಿಂದೊಂದ ಭಾವಿಸದೆ ಸಲೆ ಸಂದಿದ್ದಾಗವೆ, ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗವಿದ್ದ ಠಾವೆ ಕೈಲಾಸ. ೭೭೪-12-25. ಮತ್ತಂ : ೧೦೮೬

[1] (ಗೂ R. ಅ. ಅ) ಮೆಟ್ಟದಂತಾದರು. (ಗೂ). [2] (ಗೂ. R. ಉ) ಪ್ರಮಾಣಿದ್ದಲ್ಲಿಗೆ (ಗೂ) ಪ್ರಮಾಣಿನಲ್ಲಿ (ಗು).

ಇದ್ದಹೆನೆಂಬ ಕಾಯಕದ ಅಱಿಕೆ ಹಿಂಗಿತ್ತೆ ? ನಾ ಮಾಡಿಹೆನೆಂಬ ತವಕ ಹಿಂಗಿತ್ತೆ? ಉಭಯದ ಕೈಕೂಲಿ ಹಿಂಗಿ ಮಾರಯ್ಯ ಪ್ರಿಯ ಅಮುಲೇಶ್ವರ ಲಿಂಗಕ್ಕೆ ಅಲಸಿಕೆಯಾಯಿತ್ತು. ೭೭೫-12-26. ೧೦೮೭

ಈ ಹಿಂಗೆಂದು ಆಯ್ದಕ್ಕಿ ಮಾರಯ್ಯಗಳ ಪುಣ್ಯಾಂಗನೆ ತಮ್ಮ ಪತಿಗೆ ಬಿನ್ನೈಸಲು, ಇದಕ್ಕೆ ಮಾರಯ್ಯಗಳು ತಮ್ಮ ಸತಿಯ ಲಿಂಗಾಂಗಯೋಗವುಂ ಬೆಸಗೊಂಬ ಪ್ರಸ್ತಾವದ ವಚನ :

ಅಂಧಕಂಗೆ [1]ಜೀವ[1]ವಿದ್ದಡೆ ಕಣ್ಣಿಂದಲೆ ಕಂಡು ನಡೆಯಬಲ್ಲನೆ? ನೀ ಸತಿಯಾಗಿ, ನಾ ಪತಿಯಾಗಿ, ಉಭಯ ಪ್ರಾಣ ಏಕರೂಪಾಗಿ ಯೋಗದ ಅಂಗನೆ ಅಮುಲೇಶ್ವರ ಲಿಂಗವ ತೋರಾ. ೭೭೯-12-27. ೧೦೮೮

ಈ ಹಿಂಗೆಂದು ಆಯ್ದಕ್ಕಿಯ ಮಾರಯ್ಯಗಳು ಲಿಂಗದೊಳು ಒಡವೆರದು ಬೆರಸುವ ಭೇದ ಹೇಗೆಂದು ತಮ್ಮ ಸತಿಯ ಬೆಸಗೊಳಲು, ಇದಕ್ಕೆ ಅಹಂಕಾರ ಗುಣವಳಿದು ತ್ರಿವಿಧ ದಾಸೋಹವೆ ಮಹಾಘನ ಲಿಂಗೈಕ್ಯವೆಂದು ಬಿನ್ನೈಸುವ ಪ್ರಸ್ತಾವದ ವಚನ:

ಕೈದುವ ಕೊಡುವರಲ್ಲದೆ ಕಲಿತನವ ಕೊಡುವರುಂಟೆ ಮಾರಯ್ಯ ? ಹೆಣ್ಣ ಕೊಡುವರಲ್ಲದೆ ಕೂಟಕ್ಕೊಳಗಾದವರುಂಟೆ ಮಾರಯ್ಯ ? ಕಳುವ ಚೋರಂಗೆ ಬಡವರೆಂಬ ದಯವುಂಟೆ ಮಾರಯ್ಯ ? [2]ಮನವನೊರೆದು[2] ಭಕ್ತಿಯ ನೋಡಿಹೆನೆಂಬವಂಗೆ ಎಮ್ಮಲ್ಲಿ ಗುಣವ ಸಂಪಾದಿಸಲಿಲ್ಲಮಾರಯ್ಯ. ಶೂಲವ ಹಾಯಬಂದಲ್ಲಿ ಮತ್ತಿನ್ನು ಸಾವಿಂಗೆ ಹಂಗು ಪಡಲೇತಕ್ಕೆ? ಮಾರಯ್ಯ ಪ್ರಿಯ ಅಮುಲೇಶ್ವರಲಿಂಗ ನೀನೆ ಬಲ್ಲೆ. ೭೭೭-12-28. ಮತ್ತಂ : ೧೦೮೯

ಸಸಿಗೆ ನೀರನೆಱೆದರೆ [3]ಎಳಕುವುದಲ್ಲದೆ[3], ನಷ್ಟಮೂಲಕ್ಕೆ ಹೊತ್ತು ನೀರ ಹೊಯಿದಡೆ [4]ಮತ್ತೆ[4] ಎಳಕುವುದೆ ಮಾರಯ್ಯ? ನಿನ್ನ ವಿರಕ್ತಿ ನಷ್ಟವಾಗದ ಮುನ್ನವೆ ಮಾರಯ್ಯ ಪ್ರಿಯ ಅಮರೇಶ್ವರ ಲಿಂಗವನಱಿಯಿರಯ್ಯ. ೭೭೮-12-29. ೧೦೯೦

ಪೂಜೆಯುಳ್ಳನ್ನಕ್ಕ ಪುಣ್ಯದ ಗೊತ್ತು ಕಾಣಬಂದಿತ್ತು. ಮಾಟವುಳ್ಳನ್ನಕ್ಕ ಮಹಾಪ್ರಮಥರ ಭಾಷೆ ಭಾಗ್ಯ ದೊರಕೊಂಡಿತ್ತು. ಮಾಟವಿಲ್ಲದವನ ಭಕ್ತಿ ಹಾಳೂರ ವಂಶಕ್ಕೆ ಕೋಲ ಹಿಡಿದಂತಾಯಿತ್ತು. ಮಾಡುವಲ್ಲಿ ಉಭಯವಳಿದು ಮಾಡಬಲ್ಲಡೆ ಮಾರಯ್ಯ ಪ್ರಿಯ ಅಮರೇಶ್ವರಲಿಂಗವ ಕೂಡುವ ಕೂಟ. ೭೭೯-12-30. ಮತ್ತಂ : ೧೦೯೧

ಪ್ರತಿಷ್ಠೆಗೆ ಮಾಟವಲ್ಲದೆ ಸ್ವಯಂಭುವಿಂಗುಂಟೆ [5]ಉಳಿ? ಎನಗೂ[5] ನಿನಗೂ ಮಾರಯ್ಯಪ್ರಿಯ ಅಮರೇಶ್ವರಲಿಂಗವನಱಿವುದಕ್ಕೆ ಬೇಱೊಂದು ಠಾವುಂಟೆ ಮಾರಯ್ಯ? ೭೮೦-12-31 ಮತ್ತಂ : ೧೦೯೨

---

[1] (ಗೂ ಉ) ಜೀಜ (ಗು). [2] (ಗು) ಮನವ ನೋಡಿ (ಗೂ), [3] (ಗೂಉ) ಅಳುಕುವುದಲ್ಲದೆ (ಗು). [4] × (ಗೂ). [5] (ಗೂ) ಉಳಿವವಗೂ (ಗು).

ಆವ ಬೀಜವು ಬೀಳುವಲ್ಲಿ ಮೊಳೆಯ ಮುಖ ಹಿಂಚು-ಮುಂಚುಂಟೆ? ನೀನು ಮಱೆ ದಲ್ಲಿ ಬೇಱೆಗೊಂಡೊಡಲುಂಟೆ? ಮೂಲನಷ್ಟವಾದಲ್ಲಿ ಅಂಕುರ ನಿಂದಿತ್ತು. ಕೂಟಕ್ಕೆ ಸತಿ-ಪತಿಯೆಂಬ ನಾಮವಲ್ಲದೆ ಅಱಿವಿಂಗೆ ಬೇಱೆಗೊಂಡೊಡಲುಂಟೆ? ಬೇಱೆಗೊಂಡಡಿ ಯಿಡದಿರು ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗವನಱಿಯಬಲ್ಲಡೆ. ೭೮೧-12-32. ೧೦೯೩

ಇಂತು ತ್ರಿವಿಧ ದಾಸೋಹವೆ ಲಿಂಗೈಕ್ಯವೆಂದು ಆಯ್ದಕ್ಕಿಯ ಮಾರಯ್ಯಗಳ ಸತಿ ತನ್ನ ಪತಿಗಱುಹಲು, ಇದಕ್ಕೆ ಆ ಮಾರಯ್ಯಗಳು ಆ[1]ತ್ರಿವಿಧ ದಾಸೋಹವೆ[1]ಸಚ್ಚಿದಾ ನಂದ ಬ್ರಹ್ಮವೆಂದು ನಿಶ್ಚಯಿಸಿದ ಪ್ರಸ್ತಾವದ ವಚನ.

ಗುರುಪೂಜೆಯ ಮಾಡುವಲ್ಲಿ ಗುರುಪೂಜೆಯಲ್ಲಿಯೇ [2]ಯುಕ್ತರು.[2] ಲಿಂಗಪೂಜೆಯ ಮಾಡುವಲ್ಲಿ ಲಿಂಗಪೂಜೆಯಲ್ಲಿಯೇ [2]ಯುಕ್ತರು.[2] ಜಂಗಮಪೂಜೆಯ ಮಾಡುವಲ್ಲಿ ಜಂಗಮಪೂಜೆಯಲ್ಲಿಯೆ [2]ಯುಕ್ತರು.[2] ಈ ಮೂಱಿಗೊಂದಾಗಲಾಗಿ ಬೇಱಿಗೊಂದಂಗ ವಿಲ್ಲ. ಆಗು ಚೇಗೆ ಮೂಱಱಲ್ಲಿಯೇ ಅಡಗಿದ ಮತ್ತೆಅಮರೇಶ್ವರಲಿಂಗವ ಪೂಜಿಸಲಿಲ್ಲ! ೭೮೨-12-33. ೧೦೯೪

ಇದಕ್ಕೆ ಆಯ್ದಕ್ಕಿಯ ಮಾರಯ್ಯಗಳೂ ಆ ಮಾರಯ್ಯಗಳ ಸತಿಯೂ ಮಹಾನು ಭಾವ ಗೋಷ್ಠಿಯೊಳೋಲಾಡುತ್ತಿಪ್ಪ ಪ್ರಸ್ತಾವದೊಳು ಮತ್ತಂ ಆ ಮಾರಯ್ಯಗಳ ಸತಿ ತನ್ನ ಪತಿಯೊಡನೆ ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳಿಗೆ ಲಕ್ಷದ ಮೇಲೆ ತೊಂಬತ್ತಾಱು ಸಾವಿರ ಜಂಗಮ ದೇವರುಗಳಿಗೆ ಅಮರೇಶ್ವರಲಿಂಗದ ಮನೆಯಲ್ಲಿ ಪದಾರ್ಥವಾಯಿತ್ತೆಂದು ವಿಭೂತಿಯ ಕಳುಹುವ ಪ್ರಸ್ತಾವದ ವಚನ:

ಬಸವಣ್ಣ ಚೆನ್ನಬಸವೇಶ್ವರ ಪ್ರಭುದೇವರು ಮೊದಲಾದ ನೇಮ ನಿತ್ಯ ಕೃತ್ಯ ಸಕಲ ಸಮೂಹ ನಿತ್ಯ ನೇಮದ ಜಂಗಮ ಭಕ್ತರು ಗಣಂಗಳು ಮುಂತಾದ ಸಮೂಹ ಸಂಪ ದಕ್ಕೆ ನೈವೇದ್ಯಕ್ಕೆ ವೇಳೆ ಎಂದು ಹೇಳಿ ಬಾ ಮಾರಯ್ಯ ಅಮಲೇಶ್ವರಲಿಂಗದ ಮಹಮನೆ ಯಲಿ ಪದಾರ್ಥವಾಯಿತ್ತೆಂದು. ೭೮೩-12-34. ೧೦೯೫

ಈ ಹಿಂಗೆಂದು ಆಯ್ದಕ್ಕಿಯ ಮಾರಯ್ಯಗಳ ಸತಿ ತನ್ನ ಪತಿಗೆ ಅಸಂಖ್ಯಾತ ಮಹಾ ಗಣಂಗಳಿಗೆ ವಿಭೂತಿಯ ಸಂಬಂಧಿಸಿ, ಬನ್ನಿಯೆಂದು ಬಿನ್ನೈಸಲು, ಇದಕ್ಕೆ ಮಾರಯ್ಯ ಗಳು ಶಿವಶಿವಾ ನಾನೆತ್ತ ನಿತ್ಯ ನೇಮ ವ್ರತ ಶೀಲ ಸಂಪನ್ನರುಗಳಿಗೆ ಅವರವರ ನೇಮಂ ಗಳ ಸಲಿಸುವರೆಮಗಳಪೆ? ನಾವು ನಿರ್ಧನಿಕರು. ಬಸವಣ್ಣ-ಚೆನ್ನಬಸವಣ್ಣ-ಪ್ರಭು ದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳಿಗೆ ತೃಪ್ತಿಬಡಿಸುವುದಕ್ಕೆ ನಾವು ಅಶಕ್ತರೆಂದು ನಿರೂಪಿಸುವ ಪ್ರಸ್ತಾವದ ವಚನ :

---
[1] (ಗೂ) ತ್ರಿವಿಧವೆ (ಗು). [2] ಮುಕ್ತರು (ಗೂ).

ಗಣ ಸಮೂಹವೆಂದು ಕೂಡಿ ಮಾಡುವಲ್ಲಿ, ಸಮಯದ [1]ನೋವು ಭೂರಿಗೇಡಾಗಿ[1] ಮಾಟದ ಸಂದೇಹವ ಹೊತ್ತು ಮಾತಿಗೊಳಗಾದಲ್ಲಿ, ಭಕ್ತಿಯ ನೀತಿ ಸಿಕ್ಕಿತ್ತು, ಅಮ ಲೇಶ್ವರ ಲಿಂಗಕ್ಕೆ ದೂರವಾಯಿತ್ತು. ೭೮೪೫12-35. ೧೯೬೬

ಈ ಹಿಂಗೆಂದು ಮಾರಯ್ಯಗಳು ತನ್ನ ಸತಿಯೊಡನೆ ಭಕ್ತಿ ನಿಜವಾಗದೆಂದು, ಎಡೆ ಯಲ್ಲಿ ಕೆಡುವುವೆಂದು ನಿರೂಪಿಸಲು, ಇದಕ್ಕೆ ಮಾರಯ್ಯಗಳ ಸತಿ ಶಿವನ ಕರುಣವ ಪಡೆದ ಶಿವಭಕ್ತರುಗಳು ಅಹುದಾಗದೆಂಬ ಸಂದೇಹವ ಮಾಡಲಾಗದೆಂದು ಬಿನ್ನೈಸುವ ಪ್ರಸ್ತಾವದ ವಚನ:

ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ, ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು, ಮಾರಯ್ಯಪ್ರಿಯ ಅಮಲೇಶ್ವರ ಲಿಂಗದ ಸೇವೆಯುಳ್ಳನ್ನಕ್ಕ. ೭೮೫-12-36. ಮತ್ತಂ: ೧೯೬೭

[2]ಅವಾರಿ[2]ಯೆಂದು ಮಾಡುವಲ್ಲಿ ಅವರಿವರೆಂಬ ಪ್ರಮಾಣಿಸಲುಂಟೆ? ಸಮಯಕ್ಕೆ ಹೋಗಿ ಸಮಯ.ವನರಿಯಿರೆಂದು ಭವಗೆಡಲುಂಟೆ ಭಾವನಾದಡೆ ಭಾವವನರಿದಲ್ಲಿ ಶುಚಿಯಾಗಿರಬಲ್ಲಡೆ ಮಾರಯ್ಯ ಪ್ರಿಯ ಅಮರೇಶ್ವರಲಿಂಗವ ಹೊಂದುವ ಭಾವ. ೭೮೬ -12-37. ೧೯೬೮

ಈ ಹಿಂಗೆಂದು ಮಾರಯ್ಯಗಳ ಸತಿ ತಮ್ಮ ಪತಿಗೆ ಬಿನ್ನೈಸಲು [3]ಅದಕ್ಕೆ[3] ಮಾರಯ್ಯ ಗಳು ಹರುಷಂದಳೆದು ದರಹಸಿತವದನದಿಂದ ಸಕಲ ಪ್ರಮಥರ್ಗೆ ವಿಭೂತಿಯಂ ಸಂಬಂಧಿಸುವೆವು ನೀವು ತಳುವದೆ ಎಲ್ಲಾ ಪ್ರಮಥರ್ಗೆ [4]ಸಲುವ[4] ನೇಮಂಗಳಲ್ಲಿ ಪದಾರ್ಥವ ನನುಗೆಯ್ಯೆನಲು ಅನಿತರೊಳಗೆ ಮಾರಯ್ಯಗಳ ಸತಿ ಬಸವಾದಿ ಅಸಂಖ್ಯಾ ತರ ಹೃತ್ಕಮಲಮಧ್ಯದಲ್ಲಿ ಮಹಾಜ್ಞಾನದಿಂ ನಿರೀಕ್ಷಿಸಿ, ಅವರವರ ಆಯತದ ಪದಾರ್ಥವ ನಿಮಿಷದೊಳನುಗೆಯ್ದು ವಿಭೂತಿಯ ಸಂಬಂಧಿಸಿ ಕರೆತಹುದೆಂದು ಬಿನ್ನೈಸಲು [3]ಅದಕ್ಕೆ[3] ಮಾರಯ್ಯಗಳು [5]ಸತ್ಯವೆಂದು ತಟ್ಟೆಯಲ್ಲಿ ಮಹಾಜ್ಞಾನವೆಂಬ ವಿಭೂತಿಯ ನಿಟ್ಟು ಗಳ ಗಳಗಳನೆ ಪರಿತಂದು ಬಸವಾದಿ ಅಸಂಖ್ಯಾತರ ಪ್ರಭುದೇವರ ಮುಂದೆ ವಿಭೂತಿಯನಿಟ್ಟು ಅಸಂಖ್ಯಾತಗಣಮುಖ್ಯವಾದ ಬಸವರಾಜದೇವರ[5] "ಅಮರೇಶ್ವರ ಲಿಂಗದ ಮನೆ ಯಲ್ಲಿ ಪ್ರಸಾದವ ಸಲಿಸುವೆ ಬಾರಾ ಸಂಗನ ಬಸವಣ್ಣಾ" ಎಂದು [6]ಕರೆವ[6] ಪ್ರಸ್ತಾವದ ವಚನ:

ಸತ್ಯವೆಂಬ ತಟ್ಟೆಯಲ್ಲಿ ಚಿತ್ತಶುದ್ಧವೆಂಬ ವಿಭೂತಿಯ ಬೈಚಿಟ್ಟು ಸಕಲಸಂಪದ ಪ್ರಮಥರು ಮುಂತಾಗಿ ಅಮಲೇಶ್ವರಲಿಂಗದ ಆಶ್ರಯದಲ್ಲಿ ಪ್ರಸಾದವ ಕೊಂಬು ವುದಕ್ಕೆ ಬಾರ ಸಂಗನಬಸವಣ್ಣಾ ೭೮೭-12-38. ೧೯೬೯

---

[1] ನೋವಿಂಗೀಡಾಗಿ (ಗೂ) ನೋವು ಭೂರಿಗೀಡಾಗಿ (ಗೂ R ಅ. ಆ. ಉ). [2] (ಗೂ) ಆ ವಾರಿ (ಗು) ಅವಾರಿ (ಗೂ R ಅ) ಅವರಿ (ಗೂ R ಉ). [3] ಅ (ಗೂ). [4] ಸಲುಸಲುವ (ಗೂ). [5] ಅಸಂಖ್ಯಾತ ಪ್ರಮಥರೆಲ್ಲರು ಸಹವಾಗಿ (ಗೂ). [6] ವಿಭೂತಿಯ ಸಂಬಂಧಿಸುವ (ಗೂ).

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ:

ಅಲ್ಲಾ ಎನ್ನಬಾರದು, ಅಹುದೆನ್ನಬಾರದು. ಕೂಡಲಸಂಗನ ಶರಣರ ಸಂಗ ಕರಗಸದ ಬಾಯಿಧಾರೆಯಂತೆ ಅತಿ ಬಿರಿದಯ್ಯಾ. ೭೮೮-12-39. ೧೦೦೦

ಇದಕ್ಕೆ ಮಾರಯ್ಯಗಳ ಪ್ರತ್ಯುತ್ತರ:

ಸಮಯಕ್ಕೆ ಬಂದೆನೆಂದು ಕೆಂದದೆ, ಬಾರೆನೆಂದು ಕುಂದದೆ, ಉಭಯದ ಸಂದನಳಿದು ನಿಂದಲ್ಲಿ ಅಮಲೇಶ್ವರಲಿಂಗವು ತಾನೆ. ೭೮೯-12-40. ೧೧೦೧

ಈ ಹಿಂಗೆಂದು ಮಾರಯ್ಯಗಳು ಬಿನ್ನೈಸಲು ಅದಕ್ಕೆ ಬಸವರಾಜದೇವರು [1]ನಿಮಗಿಂದ ನಾವು ಘನವಲ್ಲವೆಂದು[1] ಅಸಂಖ್ಯಾತರು ಸಹಿತೆ ಮಾರಯ್ಯಗಳ ಮಠಕ್ಕೆ ಪೋಪೆವೆಂದು ಹಾರೈಸಿ ಎದ್ದ ಪ್ರಸ್ತಾವದ ವಚನ:

ಆಕಾಶವ ಮೀಱುವ ತರುಗಿರಿಗಳುಂಟೆ? ಪ್ರತಿದೃಷ್ಟಿಯಾಗಿ ಮಾಡಬಲ್ಲಡೆ ಅದೇ ನಾಟ ಕೂಡಲಸಂಗಮದೇವರ ಕೂಡುವ ಕೂಟ. ೭೯೦-12-41. ೧೧೦೨

ಈ ಹಿಂಗೆಂದು ಅಸಂಖ್ಯಾತರು ಮುಖ್ಯವಾಗಿ ಬಸವರಾಜದೇವರು [1]ಬಿನ್ನಹವ ಕೈಕೊಂಡು[1] ಏಳಲು ಮಾರಯ್ಯಗಳು ಬಿಜಯಂಗೈಸಿ ತಮ್ಮ [2]ಮನೆವೊಗಿಸಿದ[2] ಪ್ರಸ್ತಾವದ ವಚನ:

ವಿಶ್ವಮಯರೂಪಾಗಿ ಬಂದೆಯಯ್ಯ ಭಕ್ತಿಗೆ ಎನ್ನ ಮನಕ್ಕೆ ಭಿನ್ನವಿಲ್ಲದೆ ಸಲೆಸಂದ ನಿಲವು ಅಮಲೇಶ್ವರ ಲಿಂಗಕ್ಕೆ ಕೂಟವಾಯಿತ್ತು. ೭೯೧-12-42. ೧೧೦೩

ಇಂತು ಅಸಂಖ್ಯಾತ ಮಹಾಗಣಂಗಳು ಸಹಿತೆ ಬಸವರಾಜದೇವರು ಪ್ರಭುದೇವರು ಸಹಿತೆ ಬಿಜಯಂಗೈಸಿ ತಂದು, ಪಾದರ್ಚನೆಯಂ ಮಾಡಿ, ಸಿಂಹಾಸನವನಿಕ್ಕಿ [1]ಷಡುಸಮ್ಮಾರ್ಜನೆಯ ಮಾಡಿ, ರಂಗವಾಲಿಯನಿಕ್ಕಿ, ಅಷ್ಟ ವಿಧಾರ್ಚನೆ ಷೋಷಶೋಪಚಾರವಂ ಮಾಡಿ[1], ಶರಣರ ಮನದ ನೇಮಂಗಳನೆಡೆ ಮಾಡಿ ಓರ್ವರೋರ್ವರ ಮನದ ಆಯತದ ಪದಾರ್ಥಂಗಳಂ [1]ಹರುಷಂಗಳೊಳೆಡೆಮಾಡಿ[1] ಮತ್ತಂ ಮಾಹೇಶ್ವರರ ಇಚ್ಛಾಪದಾರ್ಥಮಂ ಸಲಿಸಲು ಎಲ್ಲಾ ಗಣಂಗಳು ಷಡುರುಚಿಯ ಲಿಂಗಕ್ಕೆ ಅರ್ಪಿಸಿ ತೃಪ್ತಿವಡಲು, ಅದ ಕಂಡು ಪ್ರಭುದೇವರು ಆಶ್ಚರ್ಯಂಬಟ್ಟು ಬಸವರಾಜದೇವರೊಡನೆ ನಿರೂಪಿದ ಪ್ರಸ್ತಾವದ ವಚನ:

ಆರಾರ ನೇಮಕ್ಕೆ ಸಂದಿತ್ತು. ಇಚ್ಛಾ ಭೋಜನಕ್ಕೆ ಕೃತ್ಯವಾಯಿತ್ತು. ಮನಘನದೊದಗ ಕಂಡೆಯಾ ಸಂಗನ ಬಸವಣ್ಣಾ ಗೊಹೇಶ್ವರ ಲಿಂಗಕ್ಕೆ ಆಶ್ಚರ್ಯವಾಯಿತ್ತು. ೭೯೨-12-43. ೧೧೦೪

ಈ ಹಿಂಗೆಂದು ಪ್ರಭುದೇವರು ನಿರೂಪಿಸಲು ಅದಕ್ಕೆ ಬಸವರಾಜದೇವರು ನಮ್ಮ ಶರಣರು ಬಡವರಲ್ಲ ಘನಮಹಿಮರೆಂದು ಬಿನ್ನೈಸುವ ಪ್ರಸ್ತಾವದ ವಚನ:

ಮನೆ ನೋಡಾ ಬಡವರು, ಮನ ನೋಡಾ ಸಂಪನ್ನರು ಧನನೋಡಾ ಬಡವರು,

---

[1] × (ಗೂ). [2] (ಗೂ R. ಅ. ಆ. ಇ. ಈ) (ಗೂ) ಮನೆಯೊಳಿರಿಸಿದ (ಗೂ).

ಘನಮನ ಸಂಪನ್ನರು. ಕೂಡಲಸಂಗನ ಶರಣರು ಕರುಳಿಲ್ಲದ ಕಲಿಗಳು ಆರಿಗೆ ಉಪಮಿಸ ಬಹುದು?! ೭೯೩-12-44. ೧೧೦೫

ಈ ಹಿಂಗೆಂದು ಬಸವರಾಜದೇವರು ಬಿನ್ನೈಸಲು ಅದಕ್ಕೆ ಪ್ರಭುದೇವರು ತೃಪ್ತಿವಡೆದೆವೆಂದು ನಿರೂಪಿಸಿದ ಪ್ರಸ್ತಾವದ ವಚನ :

ಉಭಯದೃಷ್ಟಿ [1]ಇನ[1] ದೃಷ್ಟಿಯಲ್ಲಿ ಕಾಂಬಂತೆ ದಂಪತಿ ಏಕಭಾವವಾಗಿ ನಿಂದಲ್ಲಿ ಗೊಹೇಶ್ವರ ಲಿಂಗಕ್ಕೆ ಅರ್ಪಿತವಾಯಿತ್ತು ಸಂಗನಬಸವಣ್ಣಾ ! ೭೯೪-12-45* ೧೧೦೬

---

[1] (ಗೂ) ಯಿಂನು (ಗು).

* ಗೂಳೂರು ಶೂನ್ಯಸಂಪಾದನೆಯಲ್ಲಿ ಈ ಮುಂದಿನ ಅಧಿಕಭಾಗವಿದೆ:

ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಆ ಮಾರಯ್ಯಗಳು ನಿರಹಂಭಾವದಲ್ಲಿ ನುಡಿವ ಪ್ರಸ್ತಾವದ ವಚನ:

ತನುವೀವಡೆ ತನುವೆನಗಿಲ್ಲ. ಮನವೀವಡೆ ಮನವೆನಗಿಲ್ಲ ಧನವೀವಡೆ ಧನವೆನಗಿಲ್ಲ. ಇಂತೀ ತನು-ಮನ-ಧನ ಸಕಲಸಂಪತ್ತುಳ್ಳ ನಿಮ್ಮ ಶರಣರ ತಪ್ಪಲಕ್ಕಿಯನಾಯ್ದು ತಂದು ಎನ್ನೊಡಲ ಹೊರೆವೆನಲ್ಲದೆ, ಅಮರೇಶ್ವರಲಿಂಗಕ್ಕೆ ನೀಡುವ ಬಯಕೆ ಎನಗಿಲ್ಲ ಸಂಗನಬಸವಣ್ಣಾ 12.46 ಮತ್ತಂ:

ಎನಗೆ ಮನೆ ಇಲ್ಲ. ಎನಗೆ ಧನವಿಲ್ಲ. ಮಾಡುವುದೇನು? ನೀಡುವುದೇನು? ಮನೆ ಧನ ಸಕಲ ಸಂಪದ ಸೌಖ್ಯವುಳ್ಳ ನಿಮ್ಮ ಶರಣರ ತಪ್ಪಲಕ್ಕಿಯನಾಯ್ದು ತಂದು ಎನ್ನೊಡಲ ಹೊರೆವೆನಾಗಿ, ಅಮರೇಶ್ವರಲಿಂಗಕ್ಕೆ ನೀಡುವ ಬಯಕೆ ಎನಗಿಲ್ಲ ಸಂಗನಬಸವಣ್ಣಾ. 12.47.

ಈ ಹೀಗೆಂದು ಆಯ್ದಕ್ಕಿಯ ಮಾರಯ್ಯಗಳ ನಿರಹಂಭಾವದಿಂದ ನುಡಿಯುತ್ತಿರೆ, ಬಸವರಾಜ ದೇವರು ಆ ಮಾರಯ್ಯಗಳು ವಿಭೂತಿಯಂ ಸಂಬಂಧಿಸುವಲ್ಲಿ ಸಂಕಲ್ಪಿಸಿದೆನಲಾ ಎಂದು ಅನುತಾಪಂ ಬಟ್ಟ ಪ್ರಸ್ತಾವದ ವಚನ:

ನಾ ನಡೆವುದೆಲ್ಲಾ ಅನಾಚಾರ. ನಾ ನುಡಿವುದೆಲ್ಲಾ ಅವಿಚಾರ. ನಡೆ-ನುಡಿ ಶುದ್ಧವಿಲ್ಲದ ಅಪವಿತ್ರನ ತಂದು ನಿಮ್ಮೊಕ್ಕುದನಿಕ್ಕಿ ಸಲಹಿದಿರಾಗಿ ಎನಗಿನ್ನಾವ ಭಯವೂ ಇಲ್ಲ. ಕೂಡಲ ಸಂಗಮದೇವರು ಸಾಕ್ಷಿಯಾಗಿ, ಆಯ್ದಕ್ಕಿಯ ಮಾರಯ್ಯನ ಮನೆಯ ಮಗ ನಾನು 12.48.

ಈ ಹೀಗೆಂದು ಬಸವರಾಜದೇವರು ನುಡಿಯಲು, ಆ ಮಾರಯ್ಯಗಳು ಬಸವರಾಜದೇವರ ಸ್ತುತಿಸಿದ ಪ್ರಸ್ತಾವದ ವಚನ:

ಹಮ್ಮು-ಬಿಮ್ಮುಳಿದ ಅನಘಂತ ಶಿವ ನೀನು ! ಎನ್ನ ಕರಸ್ಥಲದ ಕಳೆ ನೀನು! ಎನ್ನ ಮನೋಮಧ್ಯದ ಸ್ವಯಂಜ್ಯೋತಿ ನೀನು ! ಅಮರೇಶ್ವರ ಲಿಂಗದ ಅನುವಿನ ಕಳೆ ನೀನು ಸಂಗನ ಬಸವಣ್ಣಾ !! 12.49 ಮತ್ತಂ:

ಆ ಮಾರಯ್ಯಗಳು ತಮ್ಮ ಕಟ್ಟಿನ ನೇಮದ ನಿಷ್ಠೆ, ಬಸವಣ್ಣಾ ನೀನೇ ಎಂಬುದ ಮಡಿವಾಳ ಮಾಚಿತಂದೆಗಳೆ ಬಲ್ಲರೆಂದು ಬಿನ್ನೈಸುವ ಪ್ರಸ್ತಾವದ ವಚನ:

ಭಕ್ತರ ಭಾವದಲ್ಲಿ ಸುಳಿವ ಸುಳಿಹು, ವಿರಕ್ತರ ಜ್ಞಾನದಲ್ಲಿ ಹೊಳೆವ ಕಳೆಯು ನೀನೆಯಯ್ಯಾ ! ಸೂರ್ಯನ ಬೆಳಗಿನೊಳಗೆ ಸಚರಾಚರ ಪ್ರಾಣಿಗಳು ಸುಳಿವಂತೆ, ನಮ್ಮ ಕಟ್ಟಿನ ನೇಮದ ನಿಷ್ಠೆ,

[1]ಈ ಹಿಂಗೆಂದು ಪ್ರಭುದೇವರು ಮಾರಯ್ಯಗಳ ಭಕ್ತಿ ಪರಿಣಾಮವಾಯಿತೆಂದು ಬಸವಣ್ಣನೊಡನೆ ನಿರೂಪಿಸಲು ಆ ಸಮಯದಲ್ಲಿ ಮಾರಯ್ಯಗಳು[1] ತಮ್ಮ ಭಕ್ತಿ ಪ್ರಕಟವಾಯಿತೆಂದು ತಮ್ಮ ಲಿಂಗದಲ್ಲಿ ಐಕ್ಯವಾದ ಪ್ರಸ್ತಾವದ ವಚನ :

ಚಂದ್ರಕಾಂತ ಶಿಲೆಯಲ್ಲಿ ಬಿಂದು ಅಡಗಿದಂತೆ, ಗೋವುಗಳಲ್ಲಿ ಗೋರಂಜನ ರಂಜಿಸುವಂತೆ, ಶಿಲೆ-ಕಾಷ್ಠಂಗಳಲ್ಲಿ ಅನಲನಡಗಿದಂತೆ, ಸತ್ಯರ ಹೃದಯದಲ್ಲಿ ಮೌಕ್ತಿಕದ ಉದಕದಂತೆ ಭಾವವಿಲ್ಲದೆ ಅಡಗಿದೆ ಅಮಲೇಶ್ವರ ಲಿಂಗದಲ್ಲಿ. ೭೯೫–12–53. ೧೧೦೭

ಆಯ್ದಕ್ಕಿಯ ಮಾರಯ್ಯಗಳು ತಮ್ಮ ಲಿಂಗದಲ್ಲಿ [2]ವಾರಿ-ವಾರಿ ಬೆರದಂತೆ, ಕಪ್ಪುರ ಉರಿಯಲ್ಲಿ ಬೆರದಂತೆ[2] ನಿರವಯವನೈದಲು ಆ ಮಾರಯ್ಯಗಳ ಸತಿ ತಮ್ಮ ಪತಿಯೊಡನೆ ಲಿಂಗೈಕ್ಯವಾದ ಪ್ರಸ್ತಾವದ ವಚನ :

ಪ್ರಭುದೇವರು ಬಸವಣ್ಣ ಮೊದಲಾದ ಸಕಲ ಪ್ರಮಥಗಣಂಗಳು ನೇಮನಿತ್ಯದ [3]ಜಂಗಮಲಿಂಗ[3] ಮುಂತಾದ ಸರ್ವ ಸಮೂಹಕ್ಕೆ ತ್ರಿಕರಣ ಶುದ್ಧವಾಗಿ ಭಾವದ ಭ್ರಮೆಯಡಗಿ ಜೀವ ವಿಕಾರ ನಿಂದು ಮಾಡುವ ಮಾಟದ ಸಮಯದಿಂದವೆ ಮಾರಯ್ಯಪ್ರಿಯ ಅಮಲೇಶ್ವರಲಿಂಗದಲ್ಲಿಯೇ ಐಕ್ಯ. ೭೯೬–12–54. ೧೧೦೮

---

ನೀನೆಯಯ್ಯಾ. ಅಮರೇಶ್ವರಲಿಂಗದ ಒಡಲು ಸಂಗನ ಬಸವಣ್ಣನೆಂಬುದನು ಮಡಿವಾಳ ಮಾಚಿತಂದೆಗಳೆ ಬಲ್ಲರು ಕಾಣಾ ಸಂಗನ ಬಸವಣ್ಣಾ. 12.50

ಮತ್ತಂ ಆ ಮಾರಯ್ಯಗಳು ಬಸವರಾಜದೇವರ ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ :

ಮನದಲ್ಲಿ ಹುಟ್ಟಿದ ಅಱಿವು ಮಾಡುವ ಮಾಟದಲ್ಲಿ ಕಾಣಬಹುದು. ಶರಣರ ಸಂಗಕ್ಕೆಳಸಿದ ಚಿತ್ತವ ಅನುಭಾವದಲ್ಲಿ ಕಾಣಬಹುದು. ಒಳ-ಹೊಱಗೆ ತೆಱಹಿಲ್ಲದ ಕೂಟ ನಿನ್ನದು. ಅಮರೇಶ್ವರ ಲಿಂಗದಲ್ಲಿ ಸಂಗನಬಸವಣ್ಣಾ ನಿನ್ನ ಪಾದಕ್ಕೆ ನಮೋ ನಮೋ ಎಂಬೆನು. 12.51. ಮತ್ತಂ:

ಅಮೃತದ ಸವಿ ಸ್ವಾದಿಸುವರಿಗಲ್ಲದೆ, ಅಮೃತ ತನ್ನ ತಾ ಸ್ವಾದಿಸದ ಪರಿಯಂತೆ ನಿತ್ಯತೃಪ್ತಂಗೆ ಆಪ್ಯಾಯನ ಉಂಟೆ? ಏಳುನೂಱೆಪ್ಪತ್ತಮರ ಗಣಂಗಳ ಕಟ್ಟಳೆಯ ನೇಮದ ಕಟ್ಟು ನಿನ್ನದು. ನಿನಗೆ ಭಾವನಿರ್ಭಾವವೆಂಬುದುಂಟೆ? ಅಮರೇಶ್ವರ ಲಿಂಗದಲ್ಲಿ ಸಂಗನಬಸವಣ್ಣಾ, ನಿನ್ನ ಪಾದಕ್ಕೆ ನಮೋ ನಮೋ ಎಂಬೆನು 12.52.

[1] (ಗೂ) ಯಿಂನು (ಗು). [1] ಈ ಹೀಗೆಂದು ಸ್ತೋತ್ರಮಂ ಮಾಡಿದ ತದನಂತರ ಆ ಮಾರಯ್ಯಗಳು. [2] (ಗು) × (ಗೂ). [3] (ಗು) ಜಂಗಮ ಲಿಂಗ ಲಿಂಗ (ಗೂ).

## ಅನುಬಂಧ ೩

# ಗೋರಕ್ಷ ಸಂಪಾದನೆ

—ಗುಮ್ಮಳಾಪುರದ ಸಿದ್ಧಲಿಂಗ

ಇಂತು ಬಸವರಾಜದೇವರು ಚೆನ್ನಬಸವರಾಜದೇವರು ಪ್ರಭುದೇವರು ಮೊದಲಾದ ಅಸಂಖ್ಯಾತಗಣಂಗಳೆಲ್ಲರೂ ತಮ್ಮ ತಮ್ಮ ನಿಜಪದದ ನಿಜೈಕ್ಯಮಂ ಪೇಳಲು, ಪ್ರಭುದೇವರು ಕೇಳ್ದು, ತಮ್ಮ ನಿಜಪದಮಂ ಪೇಳ್ದು, ಮತ್ತೆಲ್ಲಾ ಅಸಂಖ್ಯಾತರಿಗೆ ನಿರ್ವಾಹ ಸ್ಥಿತಿಗತಿಯಂ ನಿರೂಪಿಸುತ್ತಿರ್ದರದೆಂತೆಂದಡೆ:

ಅವಧಿ ಅಳಿಯಿತ್ತು. ವ್ಯವಧಾನ ಉಳಿಯಿತ್ತು. ನಿಜವೆ ನಿಜವನೊಡಗೂಡಿತ್ತು. ಕೇಳಾ ಬಸವಣ್ಣ: ಕಲಿಯುಗದಲ್ಲಿ ಮುಂದೆ ಇರಬಾರದು ನಿಜಶರಣರಿಗೆ. ನಡೆ ನೀನು ಕಪ್ಪಡಿಯ ಸಂಗಯ್ಯನಲ್ಲಿ ಒಡಗೂಡು. ಉಳುವೆಯಲ್ಲಿ ನಿಜವನೆಯ್ದು ನಡೆ ಚೆನ್ನಬಸವಣ್ಣ. ಮಹವನೊಡಗೂಡು ಮಡಿವಾಳಮಾಚಯ್ಯ, ಸೊಡ್ಡಳ ಬಾಚರಸರು ಮೊದಲಾದ ಪ್ರಮಥರೆಲ್ಲರೂ [1]ನಿಮ್ಮ ನಿಮ್ಮ[1] ನಿಜವದೆಯ್ದುವುದು ನಿರ್ವಯಲ ಸಮಾಧಿಯಲ್ಲಿ. ಬಲಿದು ಹೊಗಿ ಲಿಂಗದೊಳಗೆ ಹೊಗುವರೆಲ್ಲಾ. [2]ನಡೆಯಿ[2] ಕಾಯವೆರಸಿ ಕೈಲಾಸಕ್ಕೆ. ಕಾಯಸಹಿತೆಯ್ದುವುದು ನಿಮಗೆಲ್ಲರಿಗೆಯೂ ಉಪದೇಶಮಂತ್ರ ತಪ್ಪದು. ನಮಗೆ [3]ಕದಳಿಯ[3] ಹೊಕ್ಕು ನಿಜದಲ್ಲಿ ಒಡಗೂಡುವ ಪರಿಣಾಮ. ಇದು ನಮ್ಮ ಗೊಗೇಶ್ವರ ಲಿಂಗದಾಣತಿ ನಿಮಗೆಲ್ಲರಿಗೆಯೂ. ೯೬೬-೧೫೪೫-೧೨೪೦-21-1. ೧೧೧೯

ಇಂತು [4]ಬಸವರಾಜದೇವರು[4] ಮೊದಲಾದ ಅಸಂಖ್ಯಾತ[5]ರೆಲ್ಲಕ್ಕೆ[5] ನಿಜಸಮಾಧಿಯ ಹರಿವಂ ನಿರೂಪಿಸಿ ಬಿಳ್ಕೊಂಡು, ಕಲ್ಯಾಣಮಂ ಪೊಱಮಟ್ಟು, ಶ್ರೀ ಪರ್ವತಕ್ಕೆ ಬಿಜಯಂಗೆಯ್ವುತ್ತಿರಲಿಲ್ಲ ಗೋರಕ್ಷನೆಂಬ ಸಿದ್ಧನಂ ಕಂಡು ಸಂಭಾಷಣೆಯಂ ಮಾಡಿ ಅವನ ವಜ್ರದೇಹಮಂ ಅಸಿತಾಳಪತ್ರದಿಂ [6]ಹೊಯ್ದು[6] ನೋಡಿ ಪರೀಕ್ಷೆಯಂ ಕೊಂಡು [6]ನುಡಿವ ಪ್ರಸ್ತಾವದ ವಚನ[6]*

---

[1] (ಹ) × (ಗು ಗೂ). [2] ನಡೆಯಿ ಓಹವರು (ಶಿ) ನಡೆಯಿ (ಹ ಗು). [3] (ಶಿ) ಕದಳಿಯಲ್ಲಿ (ಹ ಗು ಗೂ). [4] (ಶಿ ಹ ಗು) ಪ್ರಭುದೇವರು ಬಸವರಾಜದೇವರು (ಗೂ). [5] (ಶಿ ಹ ಗು)ರೆಲ್ಲರಿಗೆ (ಗೂ). [6] (ಹ ಗು ಗೂ) ಕಡಿದು (ಶಿ). [6] Note: "ಆತಂಗುಪ್ರದೇಶಮಂ ಮಾಡಿ ಕದಳಿಯಂ ಹೊಗುವಾಳು ಆ ಕದಳಿಯ ಬಾಗಿಲೊಳು ನಿಂದು ಹೇಳಿದ ಪ್ರಸ್ತಾವದ ವಚನ" ಎಂದು ಗೋರಕ್ಷ ಪ್ರಸಂಗವನ್ನು ಸೂಚ್ಯವಾಗಿ ಪ್ರಸ್ತಾಪಿಸಿ ಅದನ್ನು ಅಲ್ಲಿಗೇ ಪರಿಚ್ಛೇದಿಸುವನು ಶಿವಗಣಪ್ರಸಾದಿ. ಹಲಗೆಯಾರ್ಯನಾದರೋ ಮತ್ತೆರಡು ಮಾತುಗಳಷ್ಟು ಲಂಬಿಸಿ ಈ ಮುಂದಿನಂತೆ ಮುಗಿಸುವನು: "ಆತಂಗೆ ಉಪದೇಶವಂ ಮಾಡಿದ ಬಳಿಕ ಆ ಗೋರಕ್ಷನು ನುಡಿದ ಪ್ರಸ್ತಾವದ ವಚನಗಳು: (ಆದರೆ ಹಲಗೆಯ ಪ್ರತಿಯಲ್ಲಿ ಈ ಸಂಬಂಧವಾದ ಯಾವ ವಚನಗಳೂ ಉಲ್ಲಿಖಿತವಾಗಿಲ್ಲ.

ನಾರು-ಬೇರಿನ ಕುಟಿಲ-ಕುಹಕದ ಯೋಗವಲ್ಲದು ನಿಲ್ಲಿರೋ! ಕಾಯಸಮಾಧಿ-ಜೀವಸಮಾಧಿಯೋಗವಲ್ಲದು ನಿಲ್ಲಿರೋ—ನಿಜಸಹಸಮಾಧಿ ಗೊಹೇಶ್ವರ. × - × - ೧೨೪೧-21-5. ೧೧೧೦

ಈ ಹಿಂಗೆಂದು ಪ್ರಭುದೇವರು ಅತನ ಕಾಯಸಿದ್ಧಿಯ ಜಱಿಯಲದಂ ಬಿಟ್ಟು, ಉಪದೇಶಮಂ ಪಡೆದು ಬಿನ್ನೈಸುವ ಪ್ರಸ್ತಾವದ ವಚನ:**

ಅರಗಿನ ತೇಜಿಯ ಮೇಲೆ ಉರಿಯ ಹಿರಿಯರಸು ಮೂರ್ತಿಗೊಂಡು, ಮಂಜಿನ ಪರಿವಾರ ಸಂದಣಿಸಿ, ಸಂತೈಸಿ ಅವರಂಗಕ್ಕೆ ಬಿಸಿಲಂಗದ ಜೋಡ ತೋಡಿಸಿ [1]ತಾ ತುರಂಗದ[1] ಮೇಲೆ ಪಶುತಮವೆಂಬ ಖಂಡೆಯವ ಪಿಡಿದು, ಚಂದ್ರಿಕಾಕಿರಣದ ಮೇಲೆ ಅಂಗೈಸಿ ಏಱಲಾಗಿ [2]ಪವುಜು[2] ಬೆರೆಯುತ್ತು. [3]ಉರಿಯರಸು[3] ಎತ್ತಿದ ಖಂಡೆಯವರುಣಕಿರಣದೊಳಡಗಿತ್ತು. ಮಂಜಿನ ಪರಿವಾರ ಆ [4]ರಂಜನಿ[4] [=ರಜನಿ?]ಯೊಳಗೆ ಬಯಲಾಯಿತ್ತು. ಉರಿಯರಸು ವಾಯುವಿನ ಸಿರಿಯೊಳಗಾದ. ಅರಗಿನ ಅಶ್ವ ಅರಸಿನ ತೊಡೆಯೊಳಗೆ ಹರಿಯಿತ್ತು. ಇಂತೀ ಧೊರೆಗೆ ಅರಿದಿಲ್ಲಾ ಎಂದು, ಗೋರಕ್ಷಪಾಲಕ ಮಹಾಪ್ರಭುಸಿದ್ಧ ಸೋಮನಾಥ ಲಿಂಗಕ್ಕೆ ಇದಿರಿಲ್ಲಾ ಎನುತಿರ್ದನು.† × - × - ೧೨೪೨-21-10. ಮತ್ತಂ: ೧೧೧೧

---

ಅಲ್ಲಿ ಅದು ಈ ಮುಂದಿನಂತೆ ಮುಂದುವರಿದಿದೆ:) ಆ ಗೋರಕ್ಷಂಗೆ ಗುರುಮಾರ್ಗಾಚರಣೆಯ ಉಪದೇಶಕ್ರಮ ತಪ್ಪದೆ ಘನಲಿಂಗದೊಳಗೆ ಅವಿರಳಸುಖವನೈದುವ ಮಹಾಘನಲಿಂಗೈಕ್ಯಮಂ ತೋರಿದ ಮತ್ತಾ ಕದಳಿಯ ಹೊಗುವಾಗಲು ಆ ಕದಳಿಯ ಬಾಗಿಲೊಳು ನಿಂದು ಹೇಳಿದ ಪ್ರಸ್ತಾವದ ವಚನ:"

* ಗೂಳೂರು ಶೂನ್ಯಸಂಪಾದನೆಯಲ್ಲಿ ಇಲ್ಲಿಂದ ಮುಂದಕ್ಕೆ ಈ ಅಧಿಕಭಾಗವಿದೆ:

ಹಿಂದನಱಿಯದುದು ಮುಂದೇನು ಬಲ್ಲುದೋ? ಉದಯ ಮುಖದಲ್ಲಿ ಹುಟ್ಟಿದ ಪ್ರಾಣಿಗಳು ಅಸ್ತಮಾನಕ್ಕೆ ಅಳಿದರಲ್ಲಾ! ಅಂದಂದಿನ ಘಟಜೀವಿಗಳು ಬಂದ ಬಟ್ಟೆಗೆ ಹೋದರು. ಗೊಗೇಶ್ವರ ಲಿಂಗವು ಆರಿಗೂ ಇಲ್ಲವಯ್ಯ. 21-2. ಮತ್ತಂ:

ಅಮೃತಸೇವನೆಯ ಮಾಡಿ ಅಪ್ಯಾಯನ ಘನವಾಯಿತ್ತ ಕಂಡೆ! ಪರುಷವೇಧಿಯ ಸಾಧಿಸಹೋದರೆ ದಾರಿದ್ರ್ಯ ಘನವಾಯಿತ್ತ ಕಂಡೆ! ಮಱುಜವಣೆಯ ಹಣ್ಣ ಮೆದ್ದು ಮರಣವಾಯಿತ್ತ ಕಂಡೆ! ಇವನೆಲ್ಲವನು ಸಾಧಿಸಹೋದರೆ ಏನೂ ಇಲ್ಲದಂತಾಯಿತ್ತು. ನಾನು ನಿಜವ ಸಾಧಿಸಿ ಬದುಕಿದೆನು ಗೊಹೇಶ್ವರ. 21-3. ಮತ್ತಂ:

ಧರೆಯ ಮೇಲುಳ್ಳ ಅರುಹಿರಿಯರೆಲ್ಲಾ ಮರುಳುಗೊಂಡಾಡುತ್ತಿದಾರೆ ನೋಡಾ! ಮಂಜಿನ ಮಡಕೆಯೊಳಗೆ ರಂಜನೆಯ ಬಡವ ತುಂಬಿ ಅಂಜದೆ ಪಾಕವ ಮಾಡಿಕೊಂಡುಂಡು ಭಂಡವ ಮಾಱುತ್ತಿರ್ಪರು ನೋಡಾ! ಸಂಜೀವಿನಿಯ ಬೇರ ಕಾಣದೆ ಮರಣಕ್ಕೊಳಗಾದರು ಗೊಗೇಶ್ವರನನಱಿಯದ ಭವಭಾರಕರೆಲ್ಲರು. 21-4 ಮತ್ತಂ:

** ಗದ್ಯ ಗೂಳೂರು ಶೂನ್ಯಸಂಪಾದನೆಯಲ್ಲಿ ಯಥಾವತ್ತಾಗಿ ಉಳಿದಿದೆ. [1] (ಗು) ಚಾತುರಂಗದ (ಗೂ). [2] (ಗು) ಪೌಜು (ಗೂ) ಪೌಜ (ಗೂ R. ಇ. ಈ). [3] (ಗು) ಊರರಸು (ಗೂ). [4] (ಗು) ರಂಜನೆ (ಗೂ). † ಈ ವಚನ ಅಸಲೀ ಗೋರಕ್ಷನದಲ್ಲವೆನಿಸುವುದು. ಪ್ರಭುದೇವರ

ಕುಂಡಲಿಯೆಂಬ ಆಧಾರದಲ್ಲಿ ಜಲ-ತೇಜ-ವಾಯುವೆಂಬ ತ್ರಿವಿಧವ ಕೂಡಿ ಕಮಂಡಲ ಹುಟ್ಟಿತ್ತು. ಅದಕ್ಕೆ ಬಾಯಿ ಮೂಱು, ಹಿಡಿಯಾಱು, [1]ಜೂಳಿ[1]ಯೊಂದರಲ್ಲಿ ಉದಕವ ಕೊಳುತ್ತಿರಲಾಗಿ, ಆ ಅಸುವಿನ ತೃಷೆಯಡಗಿ ಬಯಕೆ ಸಲೆ ಬತ್ತಿದಲ್ಲಿ ಮಹಾಗಣ ನಾಥನ ಐವತ್ತೆರಡು [2]ಸರ[2] ಹೆಱಿದವು: ಮೂವತ್ತಾಱು ಮಣಿ ಕೆಟ್ಟವು, ಇಪ್ಪತ್ತೈದು ಮಣಿ ಪುಂಜವಾಯಿತ್ತು. ಆಱು ನಾಯಕರತ್ನವೆಲ್ಲಿ ಅಡಗಿತ್ತೆಂದಱಿಯೆ. ಮೂಱು ರತ್ನವ ಕಂಡೆ: ಒಂದು ಉರಿವುದು, ಒಂದು ಉಲಿವುದು, ಒಂದು ಬೆಳಗು-ನಂದಿಹುದು. ಇಂತೀ ತ್ರಿವಿಧದಂಗವ ಕಂಡು, ಈ ಅಂಗದ ಮಣಿಯ ಒಂದೊಂದ ಪವಣಿಸಲಾಱದೆ, ಈ ದಿನಮಣಿಯ ವಿರಳವ ತೋಱಿಸಾ ಗೋರಕ್ಷಪಾಲಕ ಮಹಾಪ್ರಭುಸಿದ್ಧ ಸೋಮನಾಥಲಿಂಗವೆ. X- x -೧೭೪೩-21-7. ೧೧೧೨

ಈ ಹಿಂಗೆಂದು ಗೋರಕ್ಷನು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರ್ವಯಲ ಸಮಾಧಿಯ ಭೇದವ ನಿರೂಪಿಸುವ ವಚನ:*

ಅಱಿವಱಿತು ಬೆಱಗು ಹತ್ತಿತ್ತೆಂಬ ಜಾನವಿದೇನೋ? ನಾಹಮೆಂಬಲ್ಲಿ ತಾನಾರು? ಕೋಹಮೆಂಬಲ್ಲಿ ಮುನ್ನಾರು? ಪರಬ್ರಹ್ಮ ಸೋಹಮೆಂಬಲ್ಲಿ ಮುನ್ನ ತಾನೇನಾಗಿರ್ದ? ಚಿದೋಹಮೆಂಬ ಹಮ್ಮಿನ ಭವಮಾಲೆ ಇದೇನೋ? ನಿಶ್ಶಬ್ದಂ ಬ್ರಹ್ಮ ಉಚ್ಯತೇ ಎಂಬ ಶಬ್ದವಿಡಿದು ಬಳಲುವ ಕಾರಣವಿದೇನೋ ಗೋಹೇಶ್ವರ? X- x -೧೨೪೪-21-8. ೧೧೧೩

ಈ ಹಿಂಗೆಂದು ಪ್ರಭುದೇವರು ನಿರೂಪಿರಲು ಇದಕ್ಕೆ ಗೋರಕ್ಷನು ಲಿಂಗಾಂಗದ ಸಂಬಂಧದ ಕೃತ ನಿಶ್ಚಯವನೆಯ್ದಿದ ಪ್ರಸ್ತಾವದ ವಚನ:*

ನಾ ನಿನ್ನ ಕೇಳಿಹೆನೆಂದರೆ— ನಾನಂಗಿ, ನೀ ನಿರಂಗಿ; ನಾ ನಿನಗೆ ಹೇಳಿಹೆನೆಂದಡೆ— ನಾ ಸಂಗಿ, ನೀ ನಿಸ್ಸಂಗಿ. ನಿನ್ನಂಗ ಎನ್ನಂಗದಲ್ಲಿ ಪ್ರತಿಷ್ಠಿಸಿ, ನಿನ್ನಱಿವು ಎನ್ನಾತ್ಮದಲ್ಲಿ

---

ಉಪದೇಶ ಪಡೆದ ಗೋಕ್ಷನು ಕನ್ನಡದಲ್ಲಿ ವಚನಗಳನ್ನು ಬರೆದಿರಲಿಲ್ಲವೆನಿಸುವುದು, ಮೇಲಣ ಪ್ರಸ್ತುತ ವಚನದಲ್ಲಿ ಬರುವ "ಪವುಜು" ಎಂಬ ಪದವನ್ನು ಗಮನಿಸಿದರೆ ಅದು (ಮತ್ತು ಅದೇ ಅಂಕಿತವಿರುವ ಇನ್ನಿತರ ವಚನಗಳು) ಇತ್ತೀಚಿನ ಇನ್ನೊಬ್ಬ ಗೋರಕ್ಷನೆಂಬ ನಾಮಧಾರಕನಿಂದ ರಚಿತವಾಗಿರಬೇಕೆಂದೆನಿಸುವುದು. ಗೂಳೂರು ಶೂನ್ಯಸಂಪಾದನೆಯಲ್ಲಿ ಈ ಎಡೆ ಈ ವಚನಕ್ಕೆ ಬದಲಾಗಿ ಮುಂದಿನ ವಚನವಿದೆ:

ರಸವಾದಂಗಳ ಕಲಿತಲ್ಲಿ ಲೋಹಸಿದ್ಧಿಯಲ್ಲದೆ ರಸಸಿದ್ಧಿಯಾದುದಿಲ್ಲ. ನಾನಾಕಲ್ಪಯೋಗ ಅದೃಶ್ಯಕರಣಂಗಳ ಕಲಿತಲ್ಲಿ ಕಾಯಸಿದ್ಧಿಯಲ್ಲದೆ ಆತ್ಮಸಿದ್ಧಿಯಾದುದುಂಟೆ? ನಾನಾ ವಾಗ್ವಾದಂಗಳಿಂದ ಹೋರಿ ಮಾತಿನ ಮಾಲೆಯಾಯಿತ್ತಲ್ಲದೆ ಆತ್ಮಸಿಹಿತವಾದುದಿಲ್ಲ. ನೀ-ನಾನೆಂದಲ್ಲಿ ನೀನು ನಾನಾದೆಯಲ್ಲದೆ ನಾನು ನೀನಾದುದಿಲ್ಲ, ಗೋರಕ್ಷಪಾಲಕ ಮಹಾಪ್ರಭುಸಿದ್ಧ ಸೋಮನಾಥ ಲಿಂಗವಾದೆಯಲ್ಲದೆ ಲೀಯವಾಗಿ ಆ ಲಿಂಗವೆ ಆದುದಿಲ್ಲ. 21_6.

[1] (ಗೂ)ಜೋಳಿ (ಗು). [2] (ಗೂ) ಸ್ವರ (ಗು). * ಈ ಗದ್ಯ ಭಾಗಗಳನ್ನೂ ಗೂಳೂರು. ಸಿದ್ಧವೀರನು ತನ್ನ ಶೂನ್ಯಸಂಪಾದನೆಯ ಪರಿಷ್ಕರಣದಲ್ಲಿ ಹಾಗೇ ಉಳಿಸಿಕೊಂಡಿರುವನು.

ನಿಂದು ಅಱಿವನ್ನಕ್ಕ ನನಗೂ ನಿನಗೂ ತತ್ತುಗೊತ್ತು ಗೋರಕ್ಷಪಾಲಕ ಮಹಾ ಪ್ರಭು ಸಿದ್ಧ ಸೋಮನಾಥ ಲಿಂಗವು ಸರಿಹೆದುಗು. ×-×-೧೨೪೫-21-9.* ೧೧೧೪

* ಇಲ್ಲಿಂದ ಮುಂದಕ್ಕೆ ಗುಮ್ಮಳಾಪುರದ ಮತ್ತು ಗೂಳೂರಿನ ಪರಿಷ್ಕರಣಗಳೆರಡರಲ್ಲೂ "ಇಂತು ಪ್ರಭುದೇವರು ಗೋರಕ್ಷಂಗೆ ಲಿಂಗಾಂಗಸಂಬಂಧವ ಬೋಧಿಸಿ ನಿಲಿಸಿ, ಕದಳಿಯ ಮುಂಬಾಗಿಲೊಳು" ಎಂದು ಮುಂತಾಗಿ ಮುಂದುವರಿಯುವುದು.

## ಅನುಬಂಧ ೪

# ಮೋಳಿಗೆ ಮಾರಯ್ಯಗಳ ಸಂಪಾದನೆ

—ಗೂಳೂರು ಸಿದ್ಧವೀರ

ಕಂದ :

ಹೊನ್ನ ಜಾಳಿಗೆಯೆರಡ ಬಸ
ವಣ್ಣಂ ನಿರ್ಧನಿಕರೆಂದು ಇರಿಸಲ್ ಮಾರ
ಯ್ಯಂ ನಗುತ ಜಱೆದು ಚರಕಂ
ಸ್ವರ್ಣದ ದಂಡಗಳನಿತ್ತುದೆಂತೆನೆ ಪೇಳ್ವೆಂ ೧

ಅದೆಂತೆಂದೊಡಾ ಆಯ್ದಕ್ಕಿಯ ಮಾರಯ್ಯಗಳೂ ಅವರ ಸತಿಯೂ ಲಿಂಗೈಕ್ಯವಾಗಲು, ಅವರ ಲಿಂಗೈಕ್ಯದ ಪರಮಸೌಖ್ಯವನು ಕಂಡು ಎಲ್ಲಾ ಗಣಂಗಳು ಸಂತೋಷಂಬಟ್ಟು ಬಸವರಾಜದೇವರ ಮಹಾಮನೆಗೆಯ್ದಿ, ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರು ಸಿದ್ಧರಾಮಯ್ಯದೇವರು ಅಪ್ಪಣ್ಣಗಳು ಸೊಡ್ಡಳಬಾಚರಸರು ಮೊದಲಾದ ಅಸಂಖ್ಯಾತ ಪ್ರಮಥಗಣಂಗಳೆಲ್ಲರು ಷಡುಸ್ಥಲ ಸ್ವರೂಪನಿರ್ಣಯಪ್ರಸಂಗಪರಿಣಾಮದ ಪರಮಾನಂದ ಪರಮಾಮೃತ ಶರಧಿಯೊಳಗೋಲಾಡುತ್ತಂ ಇರಲು, ಇತ್ತ ಮತ್ತೊರ್ವ ಮೋಳಿಗೆ ಮಾರಯ್ಯನೆಂಬ ಶರಣನು ಕಾಶ್ಮೀರದೇಶಾಧಿಪತಿತ್ವದಿಂದಿರ್ದು, ಅದಂ ತ್ಯಜಿಸಿ ಸತಿಪತಿಗಳಿರ್ವರು ಕಲ್ಯಾಣಕ್ಕೆ ಬಂದು, ಮೋಳಿಗೆ ಕಾಯಕವ ಮಾಡಿಕೊಂಡು ಜಂಗಮಾರ್ಚನೆಯಂ ಮಾಡುತ್ತಿರೆ, ಬಸವರಾಜದೇವರ ಗೃಹದಲ್ಲಿ ಇಚ್ಛಾಪದಾರ್ಥಮಂ ಷಡುರುಚಿಯಂ ಸ್ವೀಕರಿಸಿದ ಜಂಗಮಮೂರ್ತಿಗಳು ಆ ಮೋಳಿಗಯ್ಯನ ಗೃಹಕ್ಕೆ ಬಂದು ಅಂಬಕಳಮಂ ಸ್ವೀಕರಿಸಿ, ಆ ಬಸವರಾಜದೇವರ ಗೃಹಕ್ಕೆ ಹೋಗಿ ಅತಿಶಯದಿಂ ಕೊಂಡಾಡಿ ಹೇಳುತ್ತಿರೆ, ಬಸವರಾಜದೇವರು ಮೋಳಿಗಯ್ಯಗಳ ಸ್ತುತಿಸಿದ ಪ್ರಸ್ತಾವದ ವಚನ :

ನಿಷ್ಠೆಯಿಂದ ಲಿಂಗವ ಪೂಜಿಸಿ ಮತ್ತೊಂದು ಪಥವನಱಿಯದ ಶರಣರು, ಸರ್ಪನ ಹೆಡೆಯ ಮಾಣಿಕ್ಯದಂತಿಪ್ಪರು ಭೂಷಣರಾಗಿ. ದರ್ಪಣದೊಳಗಣ ಪ್ರತಿಬಿಂಬದಂತೆ ಹಿಂಗದಿಪ್ಪರು ಕೂಡಲಸಂಗಮದೇವಾ, ನಿಮ್ಮ ಶರಣರು! 13-1 ಮತ್ತಂ : ೧೧೧೪

ಬಸವರಾಜದೇವರು ಆ ಮೋಳಿಗಯ್ಯಗಳ ಗೃಹಕ್ಕಂ ಹೋಗಬೇಕೆಂದು, ಎರಡು ಜಾಳಿಗೆ ಹೊನ್ನಂ ಕೊಂಡು ಬಂದು ಅವರಂಗಳದಲ್ಲಿ ನಿಂದು, ಇಂಥ ಭಕ್ತರುಗಳ ಗೃಹದಲ್ಲಿ ಅನ್ನೋದಕಾದಿಗಳಂ ಬೇಡಿ ತೆಗೆದುಕೊಂಡು ಸ್ವೀಕರಿಸಿದರೆ ಸಮಸ್ತ ಪಾಪಕ್ಷಯವೆಂದು ಕೊಂಡಾಡಿದ ಪ್ರಸ್ತಾವದ ವಚನ :

ಪಾತಕ-ಮಹಾಪಾತಕವ ಮಾಡಿದವನು ಸದ್‌ಭಕ್ತರ ಮನೆಗೆ ಹೋಗಿ, ಅವರೊಕ್ಕ

ಪ್ರಸಾದವನಾಯ್ದುಕೊಂಡುಂಡಡೆ ಸಕಲ ಬ್ರಹ್ಮಹತ್ಯಾದಿಪಾತಕ ಪರಿಹಾರ. ಒಮ್ಮೆ ಬೇಡಿ ಕೊಂಡುಂಡಡೆ,

ಪಾತಕೇಷು ಮನಃ ಪ್ರಾಪ್ತೌ ಶಿವಭಕ್ತಗೃಹಂ ವ್ರಜೇತ್
ಯಾಚಯೇದನ್ನಮಮೃತಂ ತದಲಾಭೇ ಜಲಂ ಪಿಬೇತ್

ಇದು ಕಾರಣ ಕೂಡಲಸಂಗಮದೇವ, ನಿಮ್ಮ ಸದ್ಭಕ್ತರಿಗೆ ನಮೋ ನಮೋ ಎಂಬೆನು. 13-2. ೧೧೧೬

ಇಹಿಂಗೆಂದು ಬಸವರಾಜದೇವರು ಅವರ ಗೃಹಕ್ಕಂ ಪೋಗಲು, ಆ ಮೋಳಿಗಯ್ಯಗಳ ಸತಿಯು ಪಾದಾರ್ಚನೆಗೆ ಅಗ್ಗವಣಿಯಂ ಕೊಟ್ಟು, ಲಿಂಗಾರ್ಚನೆಯಂ ಮಾಡಿಸಿ, ತಮ್ಮ ಗೃಹದಲ್ಲಿರ್ದ ಪದಾರ್ಥವಂ ನೀಡಲು, ಲಿಂಗಾರ್ಪಿತವಂ ಮಾಡಿ ಬರುತ್ತಿರುವಲ್ಲಿ ಎರಡು ಜಾಳಿಗೆ ಹೊನ್ನನು ಮಜ್ಜನಸಾಲೆಯ ಮಱೆಯಲ್ಲಿರಿಸಿ ಬರಲು— ಇತ್ತ ಮೋಳಿಗೆಯ ಮಾರಿತಂದೆಗಳು ಕಟ್ಟಿಗೆಗಳಂ ಕೊಂಡು ಬಂದು, ಪಾದಾರ್ಚನೆಯ ಮಾಡಿಕೊಂಡು ಶಿವಾರ್ಚನೆಯಂ ಮಾಡುವಲ್ಲಿ ಆ ಜಾಳಿಗೆಯ ಹೊನ್ನಂ ಕಂಡು, ಇಲ್ಲಿ ಬಂದಿದ್ದವರಾರೆಂದು ತಮ್ಮ ಸತಿಯ ಕೇಳಲು, ಒಬ್ಬ ಭಕ್ತರು ಬಂದು ಲಿಂಗಾರ್ಚನೆಯಂ ಮಾಡಿ ಹೋದರೆಂದು ಹೇಳಲು, ನಾವು ಬಡವರೆಂದು ಬಸವಣ್ಣನು ಗರ್ವದಿಂದ ಜಾಳಿಗೆ ಹೊನ್ನ ಮಡಗಿ ಹೋದನೆಂದು ಕನಲಿ ಜಱೆದ ಪ್ರಸ್ತಾವದ ವಚನ:

ಗುರು–ಲಿಂಗ–ಜಂಗಮಕ್ಕೆ ತನು-ಮನ-ಧನವ ಸವೆದು, ದೃಢಚಿತ್ತವಿಲ್ಲದೆ, ಪೊಡವಿಯ ಜನಂಗಳು ಮೆಚ್ಚಬೇಕೆಂದು, ಮೃಡನ ಭಕ್ತಿಗೆ ನೆಱೆ ನಿಚ್ಚಟವುಂಟೆನಿಸಿಕೊಂಬೆನೆಂಬ ಧಾರಿಣಿಯ ಚೋರರಿಗೆ ಎಲ್ಲಿಯದೋ ನಿಜಭಕ್ತಿ ನಿಃಕಳಂಕ ಮಲ್ಲಿಕಾರ್ಜುನ ? 13-3. ಮತ್ತಂ: ೧೧೧೭

ಆತ್ಮತೇಜವ ಬಿಟ್ಟಾಗಲೆ ಗುರುವನಱಿದವ. ಮನವಿಕಾರವ ಬಿಟ್ಟಾಗಲೆ ಲಿಂಗವನಱಿದವ. ಧನ-ವಿಕಾರವ ಬಿಟ್ಟಾಗಲೆ ಜಂಗಮವನಱಿದವ. ಇಂತೀ ತ್ರಿವಿಧ ನಾಸ್ತಿಯಾದಾತನಲ್ಲದೆ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸಹಜಭಕ್ತನಲ್ಲ. 13-4. ಮತ್ತಂ: ೧೧೧೮

ಅರ್ಚನೆ ಆವರ್ಚಿಸಿದಲ್ಲಿ ಪುಣ್ಯದ ಫಲ. ಭಕ್ತಿಯಿಂ ದ್ರವ್ಯವ ಕೊಡುವುದು ಮುಕ್ತಿಯ ಲೋಕದೊಳಗು. ಈ ಉಭಯದ [1]ಭಿತ್ತಿ[1]ಯನಱಿದು ನಿಶ್ಯವ ತಿಳಿದವಂಗೆ ಏನೂ ಎನಲಿಲ್ಲ ನಿಃಕಳಂಕ ಮಲ್ಲಿಕಾರ್ಜುನ. 13-5. ೧೧೧೯

ಇಂತು, ತಾನೆ ಧನಿಕನೆಂದು ಆತ್ಮತೇಜದಿಂ ಭಕ್ತಿಯ ಮಾಡಿದಡೆ ಫಲಪದಕ್ಕೆ ಕಾರಣವಲ್ಲದೆ ಸಹಜವಲ್ಲೆಂದು ಜಱೆದು, ಆ ಎರಡು ಜಾಳಿಗೆ ಹೊನ್ನನೂ ಈರ್ವರು ಚರಮೂರ್ತಿಗಳಿಗೆ ಸಮರ್ಪಿಸಿ, ಬಸವಣ್ಣನ ಗೃಹಕ್ಕಂ ಪೋಗಿ, ಲಕ್ಷದ ಮೇಲೆ ತೊಂಭತ್ತಾಱು ಸಾವಿರ ಜಂಗಮದೇವರುಗಳಂ ಬಿಜಯಂಗೆಯ್ಸಿ ತಂದು, ಅವರಿಗೆ ಇಚ್ಛಾ

[1] (ಗೂ) ಭೀತಿ (ಉ).

ಪದಾರ್ಥಮಂ ನೀಡಿ ತೃಪ್ತಿಬಡಿಸಿ, ತಾವು ತಂದ ಕಟ್ಟಿಗೆಯ [1]ಸರಬುಗಳ[1] ಮೇಲೆ ಪಾದಾರ್ಚನೆಯುದಕಮಂ ತಳಿದು, ಸುವರ್ಣದಂಡಂಗಳಂ ಮಾಡಿ, ಎಲ್ಲಾ ಜಂಗಮ ದೇವರುಗಳಿಗೆ ಒಂದೊಂದು ಕೊಡಲು, ಅವರು ಬಸವರಾಜದೇವರ ಗೃಹಕ್ಕಂ ಬರಲು, ಆ ಬಸವರಾಜದೇವರು ಈ ಸುವರ್ಣದಂಡಂಗಳೆಲ್ಲಿಯವೆಂದು ಕೇಳಲು, ಮೋಳಿಗೆ ಮಾರಯ್ಯಗಳು ಕೊಟ್ಟರೆಂದು ಹೇಳೆ, ಆ ಬಸವರಾಜದೇವರು ಇಂತಹ ನಿರಾಶಾ ಮಹಾತ್ಮರೆಂದಱಿಯದೆ ಇದ್ದೆನಲ್ಲಾ ಎಂದು ಭೀತಿಯಿಂ ನುಡಿದ ಪ್ರಸ್ತಾವದ ವಚನ:

ಧನದಲ್ಲಿ ಶುಚಿ, ಪ್ರಾಣದಲ್ಲಿ ನಿರ್ಭಯ, ಇದಾರಿಂಗಳವಡುವುದಯ್ಯ? ನಿಧಾನ ತಪ್ಪಿ ಬಂದರೆ ಒಲ್ಲೆನೆಂಬವರಿಲ್ಲ. [2]ಪ್ರಮೋದ ವಶ[2]ಬಂದರೆ ಹುಸಿಯೆನೆಂಬವರಿಲ್ಲ. ನಿರಾಶೆ-ನಿರ್ಭಯ ಕೂಡಲಸಂಗಮದೇವನೊಲಿದ ಶರಣಂಗಲ್ಲದಿಲ್ಲ. 13-6. ೧೧೨೦

ಇಹಿಂಗೆಂದು ಬಸವರಾಜದೇವರು ಅನುತಾಪಂಬಟ್ಟು, ಚೆನ್ನಬಸವರಾಜದೇವರು ಹಡಪದಪ್ಪಣ್ಣಗಳು ಸಿದ್ಧರಾಮತಂದೆ ಮುಖ್ಯವಾದ ಶರಣರುಗಳು ಸಹವಾಗಿ ಬಂದು ಸಾಷ್ಟಾಂಗದಂಡಪ್ರಣತರಾಗಿ ದೈನ್ಯದಿಂ ಬಿನ್ನೈಸುವ ಪ್ರಸ್ತಾವದ ವಚನ:

ಭಕ್ತಿ ವಿಶೇಷವ ಮಾಡುವರೆ ಹತ್ತು ಬೆರಳುಂಟು. ಹಾಸಿ ದುಡಿವರೆ ತನಗುಂಟು, ತನ್ನ ಪ್ರಮಥರಿಗುಂಟು. ಮೋಳಿಗೆ ಮಾರಿತಂದೆಗಳಂತೆ ನನಗೇಕಹುದಯ್ಯಾ? ರತ್ನದ ಸಂಕಲೆಯನಿಕ್ಕಿ ಕಾಡಿಹನಯ್ಯ ಕೂಡಲಸಂಗಮದೇವ ಶಿವಧೋ! ಶಿವಧೋ!! 13-7. ಮತ್ತಂ: ೧೧೨೧

ಮನೆಯ ನೋಡಾ ಬಡವರು, ಮನವ ನೋಡಾ ಧೀರರು! ಸೋಂಕಿನಲ್ಲಿ ಶುಚಿಗಳು, ಸರ್ವಾಂಗ ಧೀರರು! [3]ಪಸರವ[3] ನೋಡಿದಡೇನೂ ಇಲ್ಲ. ಸಮಯೋಚಿತಕ್ಕೆ ಸಕಲ ಪದಾರ್ಥ ಬಂದಿಹುದು. ಕೂಡಲಸಂಗಮದೇವ, ನಿಮ್ಮ ಶರಣ ಸರ್ವಾಂಗಧೀರ ಮೋಳಿಗೆಯ ಮಾರಿತಂದೆ. 13-8. ೧೧೨೨

ಇಹಿಂಗೆಂದು ಬಸವರಾಜದೇವರು ದೈನ್ಯದಿಂ ಬಿನ್ನೈಸುತ್ತಿರಲು, ಆ ಮೋಳಿಗೆ ಮಾರ ತಂದೆಗಳು—ಭಕ್ತಿಯಿಂದ, ಫಲಪದವ ಪಡೆದವರಿಗೆ ಭವ ಉಂಟು, ಫಲಪದವಿರಹಿತ ಚೆನ್ನಬಸವಣ್ಣನೆಂದು ನುಡಿದ ಪ್ರಸ್ತಾವದ ವಚನ:

ಬಸವಣ್ಣ ಮೊದಲಾದ ಮಹಾಭಕ್ತರೆಲ್ಲರೂ ಕಂಡಿರಯ್ಯ. ಮಹಾ ಕೈಲಾಸವೆಂಬ ಬೆಳ್ಳಿಯ ಬೆಟ್ಟವನೇಱಿ, ಒಳ್ಳಿಹ ಪದದಲ್ಲಿ ತಲ್ಲೀಯರಾದಹೆವೆಂದು ಬಲ್ಲತನವ ಮುಚ್ಚಿ ಇರಲಾಗಿ, ಆ ಬೆಳ್ಳಿಯ ಬೆಟ್ಟ ಕಲ್ಲೋಲವಾಗಲಾಗಿ ಅಲ್ಲಿದ್ದವರನೆಲ್ಲಿಯೂ ಕಾಣೆ. ಇವರಿಗಿನ್ನೆಲ್ಲಿಯ ಮುಕ್ತಿ? [4]ಜಲ್ಲೆಯನಡರ್ದು ಎಲ್ಲೆಯ[4] ಪಾಯಿಸುವನಂತೆ ಇವರೆಲ್ಲರು ಬಲ್ಲಹರೆ, ಬಲ್ಲಹ ಚೆನ್ನಬಸವಣ್ಣನಲ್ಲದೆ? ಇವರೆಲ್ಲರನೊಲ್ಲೆನೆಂದೆ, [5]ಬಲ್ಲರ[5] ಬಲ್ಲಹನೆ ನಿಃಕಳಂಕ ಮಲ್ಲಿಕಾರ್ಜುನಾ. 13-9. ೧೧೨೩

ಇಹಿಂಗೆಂದು ಮೋಳಿಗೆ ಮಾರಿತಂದೆಗಳು ನಿರೂಪಿಸಲು, ಚೆನ್ನಬಸವರಾಜದೇವರು,

[1] (ಗೂ) ಸಬಂಗಳ (ಉ). [2] (ಉ) ಪ್ರಮಾದವಶದಿಂ (ಗೂ). [3] (ಗೂ) ಪರಸವ (ಉ). [4] (ಗೂ) ಜಲ್ಲಿಯ ನಡೆದು ಎಲೆಯ (ಉ). [5] (ಗೂ) × (ಉ).

ಸಮಸ್ತದೇಹಿಗಳಿಗೆ ಭೋಗಲಕ್ಷ್ಮಿಯಾಗಿರ್ದ ದ್ರವ್ಯವ ಶಿವಶರಣರ ಗೃಹದಲ್ಲಿ ಇರಿಸ ಬಹುದೆ ? ಎಂದು ಬಸವರಾಜದೇವರ ನುಡಿದು, ಆ ಮೋಳಿಗೆಮಾರ ತಂದೆಗಳಿಗೆ ನಮಸ್ಕರಿಸಿದ ಪ್ರಸ್ತಾವದ ವಚನ:

ಹಸಿವು-ತೃಷೆ-ವಿಷಯವೆಂಬ ಕರ್ಮಂಗಳನೆ ಕಂಡು, ಪರಿಣಾಮವೆಂಬ ಕೊಡಲಿಯಲ್ಲಿ ತತ್ತ್ರಜದಱಿದು, ಕಾಮ-ಕ್ರೋಧ-ಲೋಭ-ಮೋಹ-ಮದ-ಮತ್ಸರಂಗಳ ತಱಿದೊಟ್ಟಿದ ನೊಂದೆಡೆಯಲ್ಲಿ. ಪಂಚೇಂದ್ರಿಯ-ಷಡುವರ್ಗ-ಸಪ್ತಧಾತು-ಅಷ್ಟಮದವೆಂಬ ಬಳ್ಳಿಯ ಸೀಳಿ ಏಳುಕಟ್ಟಿನ ಮೋಳಿಗೆಯನೆ ಹೊತ್ತು ನಡೆದನಯ್ಯ. ಆಶೆಯಾಮಿಷತಾಮಸವೆಂಬ [1]ತರುವನೇಱಿ[1] ಆತುರದ [2][+ ತುಱುವನೇ ?][2] ಕಳೆದನಯ್ಯಾ. ಈ ಮಹಾ ಮಹಿಮಂಗೆ ಜಗದ [3]ಜತ್ತಿಗೆಯ[3] ಹಾದರಗಿತ್ತಿಯ, ಹದಿನೆಂಟು ಜಾತಿಯ ಮನೆಯಲ್ಲಿ ತೊತ್ತಾಗಿಹ ಶಿವದ್ರೋಹಿಯ ಲಿಂಗವಂತರ ಮನೆಯಲ್ಲಿ ಹೋಗಿಸುವರೆ, ಎಲೆ ಲಿಂಗ ತಂದೆ ? ಜಡವಿಡಿದು ಕೆಟ್ಟೆನಯ್ಯ ಭಕ್ತಿಯ ಕುಳವನಱಿಯದೆ! ಎಲೆ ಲಿಂಗದಾಜ್ಞಾಧಾರಕ, ಎಲೆ ಲಿಂಗಸನುಮತ, ಎಲೆ ಲಿಂಗಏಕೋಪ್ರತಿಗ್ರಾಹಕ, ಕೂಡಲಸಂಗನಲ್ಲಿ ಮೋಳಿಗೆಯ ಮಾರಿತಂದೆಗಳ ಶ್ರೀಪಾದಕ್ಕೆ ನಮೋ ನಮೋ ಜಯ ಜಯ ಜಯತು ! 13-10. ೧೧೨೪

ಇಹಿಂಗೆಂದು ಚೆನ್ನಬಸವರಾಜದೇವರು ಬಸವರಾಜದೇವರ ನುಡಿದು, ಆ ಮೋಳಿಗೆಯ ಮಾರಿತಂದೆಗಳ ಸ್ತುತಿಸಲು, ಆ ಮೊಳಿಗೆ ಮಾರಿತಂದೆಗಳು—ಅಱಿವು-ಮಱವೆಯಿಂದ ಮಾಡುವ ಭಕ್ತಿ ಸ್ಥಿರವಲ್ಲವೆಂದು ಚೆನ್ನಬಸವರಾಜದೇವರಿಗೆ ನಮಸ್ಕಾರವ ಮಾಡುವ ಪ್ರಸ್ತಾವದ ವಚನ:

ಅಱಿದು ಮಾಡುವ ಮಾಟ ಮಱವಿಂಗೆ ಬೀಜವೆಂಬೆ. ಅದಕ್ಕೆ ಮಱೆದಱಿವುದೆ ತಪ್ಪದು. ಆ ಅಱಿವಿನ ಭೇದ ಎತ್ತಿದ [=ಹೊತ್ತಿದ?] ದೀಪದ ಬೆಳಗಿನಂತೆ. ಅಱಿದು ಮಱೆಯದೆ ಇಂತೀ ಅಱಿಕೆಯಲ್ಲಿ ಮಾಡುವವನ ಅಱಿವು ಹೊತ್ತದ ದೀಪದ ನಿಶ್ಚಯದಂತೆ. ನಿಃಕಳಂಕಮಲ್ಲಿಕಾರ್ಜುನನಲ್ಲಿ ಚೆನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು. 13-11. ೧೧೨೫

ಇಂತು ಮೋಳಿಗೆ ಮಾರಿತಂದೆಗಳು ಚೆನ್ನಬಸವರಾಜಂಗೆ ನಮಸ್ಕರಿಸಿ, ಇನ್ನು ಕಂಡು ಕೇಳಿ ಅಱಿದು ಭಕ್ತಿಯ ಮಾಡಿಹೆವೆಂಬಾಗ ಮುಂದಕ್ಕೆ ನಿಶ್ಚಯವಲ್ಲವೆಂದು ನಿರೂಪಿಸಿದ ಪ್ರಸ್ತಾವದ ವಚನ:

ಇನ್ನು ಕೇಳಿ ಅಱಿದಹೆನೆಂಬಾಗ ಮುಂದಕ್ಕೆ ಮಱವೆಯೆ ? ಮುಂದನಱಿದು ಹಿಂದ ಮಱೆವಾಗ ಭೂತಕಾಯವೆ ? ಹಿಂದಕ್ಕೂ ಮುಂದಕ್ಕೂ ಈ ದ್ವಂದ್ವದ ಭೇದವ, ಇದಱಿಂದವ ಹೇಳಾ ನಿಃಕಳಂಕ ಮಲ್ಲಿಕಾರ್ಜುನ. 13-11. ಮತ್ತಂ: ೧೧೨೬

---

[1] (ಉ) ತುರವನೇಱಿ (ಗೂ R. ಅ) ತುರುವನೇಱಿ (ಗೂ R. ಅ [=ಅ ?] ಇ ಈ).
[2] ತುರವನೆ (ಗೂ) (ಉ). [3] (ಗೂ) ಜಾತಿಯ (ಉ).

ಅಱಿದಿಹೆ ಅಱಿದಿಹೆನೆಂದು ಹೋಱಿಹೊಮ್ಮುವಾಗ ಕಾಯ ಮಱುಜವಣೆಯೆ? ಮಹಾಪ್ರಳಯಕ್ಕೆ ಹೋಱಿಗಾದ ಶ್ರವಣವೆ? ಅವತಾರಕ್ಕೆ ಹೋಱಿಗಾವ ನಿರಂಗನೆ? ಆಸಗ ಸೀರಡಿಸಿ ಸತ್ತಂತಾಯಿತ್ತು ಇವರಿರವು ನಿಃಕಳಂಕಮಲ್ಲಿಕಾರ್ಜುನ. 13-13.

ಮತ್ತಂ: ೧೧೨೭

ಬಯಲು ಬತ್ತಲೆಯಾದಡೆ ಹೊದಿಸುವರಿನ್ನಾರು? [1]ಏರಿ[1] ನೀರು ಕುಡಿವರೆ ಬಿಡಿಸುವರಿನ್ನಾರು? ಮಹಾಮೇರು ನಡೆವಡೆ ಪಥಕಿಂಬುಗೊಡುವರಾರು? ಅಱಿದವ ಮಱೆದವನಾದಡೆ ಅಱಿಕೆಯ ಹೇಳುವರಾರು? ನಿಮ್ಮ ನಿಜವ ನೀವೆ ಬಲ್ಲಿರಿ. ನಾನಂಜುವೆ ನಿಃಕಳಂಕಮಲ್ಲಿಕಾರ್ಜುನ. 13-14. ೧೧೨೮

ಈ ಹಿಂಗೆಂದು ಮೋಳಿಗೆ ಮಾರಿತಂದೆಗಳು ನುಡಿಯಲು, ಬಸವರಾಜದೇವರು— ಸಮಸ್ತ ಪದಾರ್ಥವನೊಪ್ಪಿಸಿದಲ್ಲಿ ಭಕ್ತನಲ್ಲ. ನಿಮ್ಮ ಮನವ ನಿಮಗೊಪ್ಪಿಸಿ ಶುದ್ಧನೆಂದು ನಿರಹಂಭಾವದಿಂದ ನುಡಿದ ಪ್ರಸ್ತಾವದ ವಚನ:

ಅರ್ಥಪ್ರಾಣಾಭಿಮಾನವನೊಪ್ಪಿಸಿದಲ್ಲಿ ಭಕ್ತನಪ್ಪೆನೆ? ಅಲ್ಲ! ಆದಿರುದ್ರನ ಮಗಳು ಆದಿಶಕ್ತಿ. ಆದಿಶಕ್ತಿಯ ಮಗ ವಿಷ್ಣು. ವಿಷ್ಣುವಿನ ಅರ್ಧಾಂಗಿ ಲಕ್ಷ್ಮಿ. ಈ ತೊತ್ತಿನ ತೊತ್ತಿನ ಪಡಿದೊತ್ತನೊಪ್ಪಿಸಿದಲ್ಲಿ ಭಕ್ತನಪ್ಪೆನೆ? ಅಲ್ಲ! ಎನ್ನ ಮನದೊಡೆಯ ಮಹಾದೇವ, ನಿಮ್ಮ ಮನವ ನಿಮಗೊಪ್ಪಿಸಿ ನಾನು ಶುದ್ಧ ಕಾಣಾ ಕೂಡಲಸಂಗಮದೇವ. 13-15. ೧೧೨೯

ಈ ಹಿಂಗೆಂದು ಬಸವರಾಜದೇವರು ಬಿನ್ನೈಸಲು, ಆ ಮೋಳಿಗೆಯಮಾರಿತಂದೆಗಳು ಪ್ರಸನ್ನಮುಖರಾಗಿ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ:

ಎನ್ನ ಚಿತ್ತಕ್ಕೆ ನಕಾರವಾಗಿ ಬಂದನಯ್ಯ ಬಸವಣ್ಣನು, ಎನ್ನ ಬುದ್ಧಿಗೆ ಮಕಾರವಾಗಿ ಬಂದನಯ್ಯ ಬಸವಣ್ಣನು, ಎನ್ನ ಅಹಂಕಾರಕ್ಕೆ ಶಿಕಾರವಾಗಿ ಬಂದನಯ್ಯ ಬಸವಣ್ಣನು, ಎನ್ನ ಮನಕ್ಕೆ ವಕಾರವಾಗಿ ಬಂದನಯ್ಯ ಬಸವಣ್ಣನು, ಎನ್ನ ಜ್ಞಾನಕ್ಕೆ ಯಕಾರವಾಗಿ ಬಂದನಯ್ಯ ಬಸವಣ್ಣನು, ಎನ್ನ ಮತಿಗೆ ಓಂಕಾರವಾಗಿ ಬಂದನಯ್ಯ ಬಸವಣ್ಣ! ಎನ್ನ ನಾದಕ್ಕೆ ಅಕಾರವಾಗಿ ಬಂದನಯ್ಯ ಬಸವಣ್ಣ, ಎನ್ನ ಬಿಂದುವಿಂಗೆ ಉಕಾರವಾಗಿ ಬಂದನಯ್ಯ ಬಸವಣ್ಣ, ಎನ್ನ ಕಳೆಗೆ ಮಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಭವವ ಕೊಂದಹೆನೆಂದು ಬಕಾರವಾಗಿ ಬಂದನಯ್ಯ ಬಸವಣ್ಣ, ಎನ್ನ ಶಕ್ತಿಗೆ ಸಕಾರವಾಗಿ ಬಂದನಯ್ಯ ಬಸವಣ್ಣ, ಎನ್ನ ವಚಸ್ಸಿಂಗೆ ವಕಾರವಾಗಿ ಬಂದನಯ್ಯ ಬಸವಣ್ಣ! ಇಂತಪ್ಪ ಮಹಾಪ್ರಣವಂಗಳೆ ಬಸವಣ್ಣನಾಗಿ, ಆ ಬಸವಣ್ಣನೆ ಮಹಾಪ್ರಣವಂಗಳಾಗಿ ತನ್ನ ಮಠಕ್ಕೆ ತಾನೆ ಬಂದು ಭಕ್ತಿವಸ್ತುವನಿತ್ತಡೆ, ಇವ ನಾನು ನಿಃಕಳಂಕಮಲ್ಲಿಕಾರ್ಜುನನ ಭಕ್ತರಿಗಿತ್ತು ಬದುಕಿದೆನಯ್ಯ! 13-16. ೧೧೩೦

ಇಂತು ಮೋಳಿಗೆಯ ಮಾರಿತಂದೆಗಳು ಬಸವರಾಜದೇವರ ಸ್ತೋತ್ರಮಂ ಮಾಡುತ್ತಿ

---

1 ಏಱು (ಉ).

ರಲು, ಆ ಪ್ರಸ್ತಾವದೊಳು ಸಿದ್ಧರಾಮಯ್ಯ ದೇವರು ಆ ಮೋಳಿಗೆ ಮಾರಿತಂದೆಗಳ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ:

ಮೂಱು ಕಟ್ಟಿಗೆಯೆನ್ನು ಮುಯ್ಯುರಲಿರಿಸಿದನು. ನೀಱ ನಿಃಪತಿಯಾದ ಲಿಂಗದಲ್ಲಿ. ಆಱೂಥ ಅಂಗುಲದೊಳಗೆ ಅಱುವೆರಳ ನಿರಿಸಿದನು. ಧೀರ ಮೋಳಿಗೆಮಾರ ಶರಣು ಶರಣು. ಆಱೂಥ ದಶ[=ಳ?]ಗಳ ಭೇದವನಱಿದಂತೆ ತೋಱಿದ. ಶರಣೆಂದೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನ. 13-17. ೧೧೩೧

ಇಂತು ಬಸವರಾಜದೇವರು—ಚೆನ್ನಬಸವರಾಜದೇವರು ಸಿದ್ಧರಾಮಯ್ಯದೇವರು ಮೋಳಿಗೆಮಾರಿತಂದೆಗಳೊಡನೆ ಮಹಾನುಭಾವ ಸದ್‌ಗೋಷ್ಠಿಯಂ ಮಾಡಿ ತಮ್ಮ ಗೃಹಕ್ಕೆ ಬಿಜಯಂ[1]ಗೆಯ್ದನು.[1] ಇತ್ತ ಆ ಮೋಳಿಗೆಯ ಮಾರಿ ತಂದೆಗಳು ಲಿಂಗೈಕ್ಯ ವಾದಹೆನೆಂಬ ಆತುರದಿಂ ನುಡಿದ ಪ್ರಸ್ತಾವದ ವಚನ:

ಓ ಎಂದಲ್ಲಿ ನಿರಾಕಾರವಸ್ತುವಾದೆಯಲ್ಲಾ. ಓಂ ಎಂದಲ್ಲಿ ಸಾಕಾರವಸ್ತುವಾದೆ ಯಲ್ಲಾ. ತತ್ವಮಸಿ ಎಂದಲ್ಲಿ ತತ್ತ್ವರೂಪಾಗಿ ಜಗವ ರಕ್ಷಿಸಿಹೆನೆಂದು ಕರ್ತೃರೂಪಾ ದೆಯಲ್ಲಾ. ನಿಮಗೆ ಮರ್ತ್ಯದ ಮಣಿಹ ಎಲ್ಲಿ ಪರಿಯಂತರ? ಎನಗೆ ಕಟ್ಟುಗುತ್ತಿಗೆಯೆ? ನಾ ಕಟ್ಟಿಗೆಯ ಹೊತ್ತು ಶಿವಭಕ್ತರ ಮನೆಗೆ ನೀವು ಕೊಟ್ಟ ಕಾಯಕದ ಕೃತ್ಯ ಇನ್ನೆಷ್ಟು ದಿನ ಹೇಳಾ ನಿಃಕಳಂಕಮಲ್ಲಿಕಾರ್ಜುನ? 13-18. ಮತ್ತಂ: ೧೧೩೨

ಊರು ಕೆಟ್ಟು ಸೂಱೆ[3]ಯಾಡುವಾಗ ಆರಿಗಾರೂ ಇಲ್ಲ. ಬಸವಣ್ಣ ಸಂಗನುಕ್ಕೆ, ಚೆನ್ನಬಸವಣ್ಣ ಉಳುವೆಗೆ, ಪ್ರಭು ಕದಳಿಗೆ, ಮಿಕ್ಕಾದ ಪ್ರಮಥರೆಲ್ಲರೂ ತಮ್ಮ ತಮ್ಮ ಲಕ್ಷ್ಯ ಭಾವಕ್ಕೆ ಮುಕ್ತಿಯನೆಯ್ದಿಹರು. ನನಗೊಂದು ಬಟ್ಟೆಯ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ. 13-19 ಮತ್ತಂ: ೧೧೩೩

ಕಾಯಸಮಾಧಿಯನೊಲ್ಲೆ. ನೆನಹು ಸಮಾಧಿಗೆ ನಿಲ್ಲೆ. ಕೈಲಾಸವೆಂಬ ಭವಸಾಗರ ವನೊಲ್ಲೆ. ಎನ್ನ ಅಲ್ಲಿಗೆ-ಇಲ್ಲಿಗೆ ಎಂದೆಳೆಯದೆ ನಿನ್ನಲ್ಲಿಗೆ ಕೂಟಸ್ಥವ ಮಾಡು ನಿಃಕಳಂಕ ಮಲ್ಲಿಕಾರ್ಜುನ. 13-20. ಮತ್ತಂ: ೧೧೩೪

ಎನಗೆ ನೀ ಸಿಂಬುಗೊಡುವಲ್ಲಿ ಸಕಲವ ಪ್ರಮಾಣಿಸುವುದ ಬಿಟ್ಟು ನಿಃಕಲವಸ್ತುವಾಗು. ಶಕ್ತಿಸಮೇತವ ಬಿಟ್ಟು ನಿಶ್ಶಕ್ತಿ ನಿರ್ಲೇಪನಾಗು. ಚಿತ್ತವ ನೋಡಿಹೆನೆಂಬ ಹೆಚ್ಚು ಕುಂದ ಬಿಟ್ಟು ನಿಶ್ಚಿಂತನಾಗು. ಅಂದು ಮಿಕ್ಕಾದ ಭಕ್ತರ ಗುಣವ ನೋಡಿಹೆನೆಂದು ತೊಟ್ಟ ಠಕ್ಕು ಠವಾಳವ ಬಿಡು. ಸರ್ವರಾಗ ವಿರಾಗನಾಗಿ, ಸರ್ವಗುಣ ಸಂಪನ್ನನಾಗಿ, ಜ್ಞಾನಸಿಂಧು ಸಂಪೂರ್ಣನಾಗಿ, ನಿನ್ನಱಿವಿನ ಗುಡಿಯ ಬಾಗಿಲ ತೆಱೆ[3]ದೊಮ್ಮೆ ತೋಱಾ. ಎನ್ನಡಿಗೆ ನಿನ್ನ ಗುಡಿಯ ಸಂಬಂಧವ ನೋಡಿಹೆ. ಇದಕ್ಕೆ ಗನ್ನ ಬೇಡ ಚೆನ್ನ ನಿಃಕಳಂಕ ಮಲ್ಲಿಕಾರ್ಜುನ. 13-21. ಮತ್ತಂ: ೧೧೩೫

ನಿನ್ನನಱಿವುದಕ್ಕೆ ಹೆಣ್ಣು-ಹೊನ್ನು-ಮಣ್ಣೆಂಬ ಸನ್ನೆಯ ತೊಱೆ[3]ಯ[2]ಹಾಯ[2]ಬೇಕು. ಆ [3]ಮೂಱ[3]ನಱಿವಲ್ಲಿ, ಮಱೆದು ಹಿಡಿವಲ್ಲಿ, ಅಱಿದು ಬಿಡುವಲ್ಲಿ, ಆ ಉಭಯದ

---

[1] (ಉ) ಗೆಯ್ಯಲು (ಗೂ). [2] (ಉ) ಹಾಕ (ಗೂ). [3] (ಉ) ಮೂವರ (ಗೂ).

ಒಡಲು ಹಱಿದು ತೋಱಿಕೆ ನಷ್ಟವಾಗಿ ನಿಂದವಂಗಲ್ಲದೆ ನಿನ್ನ ಚರಣದ ಬಾಗಿಲ ಬಾದಳವನೇಱಬಾರದು. ಅದಕ್ಕೆ ಸನ್ನೆಗಟ್ಟಗೆಯೆ ಚೆನ್ನ ನಿಃಕಳಂಕಮಲ್ಲಿಕಾರ್ಜುನ. 13-22. ೧೧೩೭

ಈ ಹೀಂಗೆಂದು ಮೋಳಿಗೆಮಾರಿ ತಂದೆಗಳು ಲಿಂಗೈಕ್ಯವಾದಹೆವೆಂದು ಅವಸ್ಥೆ[1]ಯಿಂ[1] ನುಡಿಯಲು, ಆ ಪ್ರಸ್ತಾವದೊಳು ಅವರ ಪುಣ್ಯಾಂಗನೆ ಮಹಾದೇವಿಯಮ್ಮನು, ಇನ್ನು ಭಿನ್ನವಾಗಿ ಲಿಂಗೈಕ್ಯವಾದಹೆನೆಂಬಾಗ ಮುನ್ನ ಲಿಂಗದಲ್ಲಿ ಏಕಾರ್ಥವಿಲ್ಲವೆ ಎಂದು ನುಡಿದ ಪ್ರಸ್ತಾವದ ವಚನ:

ಅದೇತಕಯ್ಯ, ಶಿವನೊಳಗೆ ಕೂಟಸ್ಥನಾದಹೆನೆಂಬ ಹಲುಬಾಟ? ಇದು ಭಕ್ತಿ ಸತ್ಯದ ಆಟವಲ್ಲ. ಇನ್ನಾರ ಕೇಳಿ, ಮತ್ತಿನ್ನಾರಿಗೆ ಹೇಳಿ, ನೀ ಮಾಡುವ ಮಾಟ? ಮುನ್ನ ನೀನಾರೆಂದಿದ್ದೆ ಹೇಳಾ! ಆ ಭಾವವನಱಿ, ನಿನ್ನ ನೀ ತಿಳಿ, ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ. 13-23. ಮತ್ತಂ: ೧೧೩೭

ಕಾಷ್ಠವ ಸುವರ್ಣವ ಮಾಡಿದೆನೆಂಬ ಘಾತಕತನವೆ ನಿಮ್ಮ ಭಕ್ತಿ? ಸಕಲ ದೇಶ ಕೋಶವಾಸ ಭಂಡಾರ ಸವಾಲಕ್ಷ ಮುಂತಾದ ಸಂಬಂಧ ಸ್ತ್ರೀಯರ ಬಿಟ್ಟು ಬಂದೆನೆಂಬ ಕೈಕೂಲಿಯೆ ನಿಮ್ಮ ಭಕ್ತಿ? ಬಸವಣ್ಣ-ಚೆನ್ನಬಸವಣ್ಣ-ಪ್ರಭುದೇವರು ಮುಂತಾದ ಏಳುನೂಱ[3]ಪ್ಪತ್ತು ಅಮರಗಣಂಗಳ ಭಾವವಿದ್ದಂತೆ ನಿಮ್ಮ [2]ಆಗಡ[2]ವೇಕಯ್ಯ? ನಿಮ್ಮ ಅಱಿವಿಂಗೆ ಇದಿರಿನಲ್ಲಿ ಕೂಡಿಹೆನೆಂಬ ಭಿನ್ನಭಾವ ಉಂಟೇ ಅಯ್ಯ? ಕರ್ಪುರದ ಅರಣ್ಯವ ಕಿಚ್ಚು ಹತ್ತಿ ಬೆಂದಲ್ಲಿ ಭಸ್ಮ-ಇದ್ದಿಲೆಂದು ಲಕ್ಷಿಸಲುಂಟೆ? ನಿಮ್ಮ ಭಾವವ ನಿಮ್ಮಲ್ಲಿಗೆ ತಿಳಿದುಕೊಳ್ಳಿ. ನಿಮ್ಮ ಕೂಟಕ್ಕೆ ನಾಚಿಕೆಯ ಬಿಡಿಸಿದ ತೆಱನ ತಿಳಿದುಕೊಳ್ಳಿ. ಶಕ್ತಿಯ ಮಾತೆಂದು ಧಿಕ್ಕರಿಸಬೇಡ. ಹೊಱಗೆ ಕೂಡಿಹೆನೆಂಬುದು ನಿಮ್ಮ ಅಱಿವಿಂಗೆ ಹಾನಿ. ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ, ನಿಮ್ಮ ಶರಣರ ನೆಲೆಯ ನೀವೆ ನೋಡಿಕೊಳ್ಳಿ. 13-24. ಮತ್ತಂ: ೧೧೩೮

ಸ್ವಯವಿದ್ದಂತೆ ಲಯವ ಕೂಡುವರೆ ಅಯ್ಯ? ಪರುಷವಿದ್ದಂತೆ ಹೇಮವನಱಸುವರೆ ಅಯ್ಯ? ಸ್ವಯಂಜ್ಯೋತಿ ಇದ್ದಂತೆ ದೀಪವನಱಸುವರೆ ಅಯ್ಯ? ನೀನಲ್ಲಿ ಇಲ್ಲಿ ಕೂಡಿಹೆನೆಂಬ ಕೂಟದ ಭಿನ್ನವ ಹೇಳಯ್ಯ? ಕಣ್ಣಿನಲ್ಲಿ ನೋಡಿ ಕಣ್ಣ ಮಱೆ[3]ದೆನೆಂದು, ಆ ಭಿನ್ನಭಾವನಂತೆ ಆದಿರಲ್ಲಾ! ಅದು ನಿಮ್ಮ ಗುಣವಲ್ಲ, ಎನ್ನ ಗುಣ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ. 13-25. ಮತ್ತಂ: ೧೧೪೯

ಕೈಯಲ್ಲಿ ಜ್ಯೋತಿಯ ಹಿಡಿದು ಕತ್ತಲೆ ಎನಲೇತಕ್ಕೆ? ಪರುಷರಸ ಕೈಯಲಿದ್ದು ಕೂಲಿಯ ಮಾಡಲೇತಕ್ಕೆ? ಕ್ಷುತ್ತು ನಿವೃತ್ತಿಯಾದವಂಗೆ ಕಟ್ಟೋಗರದ ಹೊಱೆ[3]ಯ ಹೊಱಲೇತಕ್ಕೆ? ನಿತ್ಯ-ಅನಿತ್ಯವ ನೀ ತಿಳಿದು, ಮರ್ತ್ಯ-ಕೈಲಾಸವೆಂಬುದು ಭಕ್ತರಿಗೆ ಯುಕ್ತಿಯಲ್ಲ. ನಿಶ್ಚಯವ ತಾನಱಿತು, ಅತ್ತಣ-ಇತ್ತಣ ಗೊತ್ತು ನಿಶ್ಚಯವಾಗಿ ನಿಂದಲ್ಲಿ, ಆ ಬಚ್ಚಬಯಲ ಬೆಳಗು! ನಿನ್ನ ನೀನೆ ನೋಡಿಕೋ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ. 13-26. ಮತ್ತಂ: ೧೧೪೦

ಕಾಣಿಗೆ ಹೋರಿ ಕಡನರವ [1]ನೀಗಾಡ[1]ಲೇತಕ್ಕೆ? ಅಳಿಗಾಡಿ ತುಂಬಿದ ಕೊಡನ ಹೊಡಗೆಡಹಲೇತಕ್ಕೆ? ನಿನ್ನಂಗದಲ್ಲಿ ಗುರು ಕೊಟ್ಟ ಲಿಂಗವೆಂಬುದೊಂದು ಕುಱುಹು ಇರುತ್ತಿರಲಿಕ್ಕೆ, ಆ ನಿಜಲಿಂಗದ ಸಂಗವನಱಿಯದೆ ಸಂದಿಗೊಂದಿಯಲ್ಲಿ ಹೊಕ್ಕಹೆ ನೆಂಬ ಗೊಂದಣವೇತಕ್ಕೆ? ತಾ ನಿಂದಲ್ಲಿ ಕೆಡಹಿದ ಒಡವೆಯ ಆಚೆಯಲ್ಲಿ ನೆನೆದು ಅಱಿಸಿದಡಿಲ್ಲ. ಅದು ಮತ್ತೆ ತನಗೆ ಸಂದಿಸುವುದೆ? ಘನಲಿಂಗ ನಿನ್ನಂಗದಲ್ಲಿ ಇದ್ದಂತೆ, ಕಂಡೆ-ಕಾಣೆನೆಂಬ ನಿನ್ನ ನಿಜ ನಿಂದಲ್ಲಿಯೆ ಸಂದೇಹ[2]ವಳಿದುಕೋ[2]ಎನ್ನಯ್ಯ ಪ್ರಿಯ ಇಮ್ಮಡಿನಿಃಕಳಂಕಮಲ್ಲಿಕಾರ್ಜುನನಲ್ಲಿ. 13-27. ೧೧೪೧

ತನ್ನ ಕಣ್ಣಿಂದ ಕನ್ನಡಿಯ ನೋಡಿ, ಆ ದೃಷ್ಟಿ ಕಾಣಲಿಕ್ಕೆ ಕಣ್ಣೋ? ಕನ್ನಡಿಯೋ? ಆ ಉಭಯದೃಷ್ಟಿಯಿಂದ ಇಷ್ಟದ ದೃಷ್ಟವ ಕಂಡು ಉಭಯ ನಿಶ್ಚಯವಾದಲ್ಲಿ ಕೈವಲ್ಯವೆಂಬ ಕರ್ಕಶ ಬೇಡ. ಕೈಯ ಮುದ್ದೆಯ ಕೆಡಹಿದಲ್ಲಿ ಬಾಯಿಗೆ ಬಯಲು. ಅದ ನಿಮ್ಮ ನೀವೆ ತಿಳಿದುಕೊಳ್ಳಿ, ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ. 13-28. ಮತ್ತಂ: ೧೧೪೨

ಸಕಲದಲ್ಲಿ ಅಳಿದು ನಿಷ್ಕಲದಲ್ಲಿ ಉಳಿದ ಮತ್ತೆ, ಸಕಲವ ಕೂಡಿಹೆನೆಂಬ ನಿಷ್ಕಲ ಉಂಟೆ ಅಯ್ಯ? ನಿಷ್ಕಲದೊಳಗೆ ಸಕಲವಡಗಿ, ಆ ಗುಣ ಉಪದೃಷ್ಟಕ್ಕೆ ಈಡಿಲ್ಲದಲ್ಲಿ ಅಖಿಳಜಗವೆಂಬುದು ಹೊಱಗು. ಆ ಗುಣ ನಿನ್ನ ಸದ್‌ಭಾವ ನಿಜವಾದಲ್ಲಿ, ನಿನ್ನ ಅಂಗವೆ ಕೈಲಾಸ. ಆ ಲಿಂಗದ ಕೂಟವೆ ನಿರ್ವಾಣ. ಇದು ನಿಸ್ಸಂಗದ ಸಂಗ. ನಿಮ್ಮ ನೀವೆ ತಿಳಿದುಕೊಳ್ಳಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಮಲ್ಲಿಕಾರ್ಜುನ. 13-29. ಮತ್ತಂ: ೧೧೪೩

ಅಂಗಕ್ರೀಯನಱಿವಲ್ಲಿ ಸ್ಥಾಣುವಿನ ಛಾಯ ತಿಲದಂತೆ, ಆತ್ಮನ ಕಳೆಯ ತಿಳಿವಲ್ಲಿ ಶಿಲೆಯಲ್ಲಿದ್ದ ಬಿಂದು ಒಲವರದಿಂದ ಜಾಱುವಂತೆ, ಆ ಅಱಿವು ಮಹದಲ್ಲಿ ಬೆರಸುವಾಗ ವಾರಿಶಿಲೆ ನೋಡ ನೋಡಲಿಕ್ಕೆ ನೀರಾದಂತೆ ಇರಬೇಕು. ಕಾಯವಶದಿಂದ ಕರ್ಮವ ಮೀಱಿ, ಕರ್ಮವಶದಿಂದ ವರ್ಮ ವಶಗತವಾದಲ್ಲಿ, ಅದೆ ಕಾಯಬೆರಸಿ ಎಯ್ದಿದ ಕೈಲಾಸ. ಆ ಭಾವವ ನಿಮ್ಮ ನೀವೆ ತಿಳಿದುಕೊಳ್ಳಿ, ಎನ್ಯಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ. 13-30. ಮತ್ತಂ: ೧೧೪೪

ಮನೆಯಲ್ಲಿ ವೀರ-ಧೀರ. ರಣದಲ್ಲಿ ಓಸರಿಸಿದ ಮತ್ತೆ ಭಾಷೆಗೆ ಬಂಟನಲ್ಲ. ನೀ ಬಂದ ದ್ವೇಷ, ನೀ ಮಾಡುವ ಮಾಟ, ನೀ ಪ್ರಮಥರೆಲ್ಲರ ಹಂಗಿಸುವ [3]ನಿರಂಗವಾಚ[3] ನಾ ಕೂಡಿಹೆನೆಂಬ ಸಂದಿಯಲ್ಲಿಯೆ ನಿಂದಿತ್ತು ನಿಜಲಿಂಗದ ಕೂಟ. ಆ ಸುಸಂಗವ ನಿನ್ನ ನೀನೆ ಕೇಡಿಕೊ, ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ. 13-31. ೧೧೪೫

ಈ ಹೀಗೆಂದು ಮಹಾದೇವಿಯಮ್ಮ ನುಡಿಯಲು, ಆ ಮೋಳಿಗೆ ಮಾರಿತಂದೆಗಳು

---

[1] (ಉ) ನೀಗ (ಗೂ). [2] (ಉ) ವ ತಿಳಿದುಕೊಳ್ಳಿ (ಗೂ). [3] (ಉ) ನಿರಂಗದ ವಚ (ಉ). ನಿರಂಗದ ವಾಚ (ಗೂ R. ಅ ಅ)

ಲಿಂಗೈಕ್ಯದ ನಿಶ್ಚಯಭಾವವ ಕೇಳಿದ ಪ್ರಸ್ತಾವದ ವಚನ :

ಭಕ್ತಿಯುಳ್ಳನ್ನಕ್ಕ ಇಷ್ಟಲಿಂಗದ ಹಂಗು ಬೇಕು. ಆತ್ಮನುಳ್ಳನ್ನಕ್ಕ ಅಱಿವೆಂಬುದ ವಿಚಾರಿಸಬೇಕು. ಮರ್ತ್ಯವೆಂಬುದು ನಾ ಬಲ್ಲನ್ನಕ್ಕ ಕರ್ಕಶದ ಜಗ. ಇದು ಕಾರಣದಲ್ಲಿ ಕೈಲಾಸವೆಂಬ ಬಟ್ಟೆಯನಱಿಸಬೇಕು. ಎನ್ನ ಸತ್ಯಕ್ಕೆ, ಎನ್ನ ಭಕ್ತಿಗೆ, ಎನ್ನ ಮನಕ್ಕೆ, ಎನ್ನ ಮುಕ್ತ್ಯಂಗನೆ ಎನ್ನ ನಿಶ್ಚಯಕ್ಕೆ ಒಂದು ಗೊತ್ತ ತೋಱಾ ! ನಿಃಕಳಂಕ ಮಲ್ಲಿಕಾರ್ಜುನನು ಎಲ್ಲಿದ್ದಹನು ಹೇಳಾ ! 13-32. ೧೧೪೬

ಈ ಹೀಗೆಂದು ಮೋಳಿಗೆಮಾರಿತಂದೆಗಳು ಕೇಳಲು, ಅವರ ಸತಿಯು ಮಹಾಘನ ಲಿಂಗ ಸ್ವರೂಪರು ನೀವಾದ ಕಾರಣ ಎನಗೆ ಸ್ವತಂತ್ರವಿಲ್ಲೆಂದು ಬಿನ್ನೈಸಿದ ಪ್ರಸ್ತಾವದ ವಚನ :

ಕಾಯವಿದ್ದಂತೆ ತಲೆ ನಡೆದುದುಂಟೆ ಅಯ್ಯ ? ಕಣ್ಣಿದ್ದಂತೆ ಕರ್ಣ ನೋಡಿದು ದುಂಟೆ ಅಯ್ಯ ? ಬಾಯಿ ಇದ್ದಂತೆ ನಾಸಿಕ ಉಂಡುದುಂಟೆ ಅಯ್ಯ ? ತಾಯಿಲ್ಲದೆ ಮಕ್ಕಳು ಬಂದ ತೆಱನ ಹೇಳಯ್ಯ. ನಿಮ್ಮ ಸೇವೆಯ ತೊತ್ತಿನ ಭಾವವ ಕೇಳಲೇತಕ್ಕೆ ? ಪಟದೊಳಗಣ ಬಾಲಸರಕ್ಕೆ ಪ್ರತಿ ಸೂತ್ರ ನೇಣುಂಟೆ ? ನಿಮ್ಮಲ್ಲಿ ಎನ್ನ ಭಾವಲೇಪ, ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿಯೆ. 13-33. ಮತ್ತಂ :
೧೧೪೭

ಚಿತ್ರದ ಬೊಂಬೆಯ ಹಾಹೆ ಎಲ್ಲಕ್ಕೂ ಆತ್ಮನಿಂದ ಚೇತನಿಸಿ ನಡೆವುತ್ತಿಹವೆ ? ಅವು ಸೂತ್ರಾಧಿಕನ ಭೇದ. ಎನ್ನ ಶಕ್ತಿಜಾತಿಯ ಲಕ್ಷಣ—ನಿಮ್ಮ ಭಕ್ತಿಸೂತ್ರದಿಂದ. ಎನ್ನ ಸ್ತ್ರೀಜಾತಿ ನಿಮ್ಮ ಶ್ರೀಪಾದದಲ್ಲಿ ಅಡಗಿತ್ತು. ಎನಗೆ ಭಿನ್ನದ ಮಾತಿಲ್ಲ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬವರು ನೀವೆ! 13-34. ೧೧೪೮

ಈ ಹೀಗೆಂದು ಮಹಾದೇವಿಯಮ್ಮ ನುಡಿಯಲು, ಆ ಮೋಳಿಗೆ ಮಾರಿತಂದೆಗಳು ಎನ್ನ ಸದಾಚಾರ ಸದ್‌ಭಕ್ತಿಗೆ ನೀನೊಳಗಾದ ಕಾರಣ ಎನಗೆ ನಿನಗೆ ಭಿನ್ನಭಾವ [1]ವಿಲ್ಲಾ ಎಂದು[1] ಕೇಳಿದ ಪ್ರಸ್ತಾವದ ವಚನ :

ತಲೆ ಇಲ್ಲದೆ ಕಾಲು ನಡೆಯಬಲ್ಲುದೆ ? ಕುಕ್ಷಿ ಇಲ್ಲದೆ ಬಾಯಿ ಉಣಬಲ್ಲುದೆ ? ಆತ್ಮ ನಿಲ್ಲದಿರೆ [2]ಕರಣಾದಿಗಳಿಗೆ[2] ಏತಱ ಹೊಲಬು ? ನಿನ್ನ ಭಕ್ತಿಯ ಬೆಳೆಯೆ ಎನಗೆ ಸತ್ಯದ ಹಾದಿ. ಇದು ನಿಶ್ಚಯ ನಿಃಕಳಂಕ ಮಲ್ಲಿಕಾರ್ಜುನ. 13-35. ೧೧೪೯

ಸತ್ತ್ವಗೆಟ್ಟಲ್ಲಿ ಕಾಷ್ಠವನೂಱಿ ನಡೆಯಬೇಕು. ಮತ್ತತ್ವವಿದ್ದಲ್ಲಿ ನಿಶ್ಚಯವ ಹೇಳಲಾಗಿ ಮಹಾಪ್ರಸಾದವೆಂದು ಕೈಕೊಳಬೇಕು. ಎನ್ನ ಭಕ್ತಿಗೆ ನೀ ಶಕ್ತಿಯಾದ ಕಾರಣ, ಎನ್ನ ಸತ್ಯಕ್ಕೆ ನೀ ಸತಿಯಾದ ಕಾರಣ, ಎನ್ನ ಸುಖ-ದುಃಖ ನಿನ್ನ ಸುಖ-ದುಃಖ, ಅನ್ಯವಿಲ್ಲ. ಇದಕ್ಕೆ ಭಿನ್ನಭೇದವೇನು ಹೇಳಾ ನಿಃಕಳಂಕ ಮಲ್ಲಿಕಾಜುನ ? 13-36. ೧೧೫೦

[1] (ಉ) ವಿಲ್ಲೆಂದು (ಗೂ). [2] (ಉ) ಕರಚರಣಾದಿಗಳಿಗೆ (ಗೂ).

ಈ ಹೀಂಗೆಂದು ಮೋಳಿಗೆ ಮಾರಿತಂದೆಗಳು ಕೇಳಲು, ಅವರ ಸತಿಯು ಮಹಾಘನ ಲಿಂಗಕ್ಕೂ ನಿಮಗೂ ಅನ್ಯಭಿನ್ನವಿಲ್ಲೆಂದು ನಿಶ್ಚಯವ ತೋಱಿ ನುಡಿದ ಪ್ರಸ್ತಾವದ ವಚನ :

ಕೂಟಕ್ಕೆ ಕುಱುಹಾದುದನಱಿಯದೆ, ಆತ್ಮಕ್ಕೆ ಅಱಿವಾದುದನಱಿಯದೆ, ಕೈಲಾಸವೆಂಬ ಸೂತ್ರದ ಒಳಗಿಗೆ ಮನಸೋತಿರಲ್ಲಾ ! ಅಂಧಕನ ಕೈಯ ರತ್ನದಂತೆ ಆದಿರಲ್ಲಾ ! ಪಂಗುಳನ [1]ಕರದ[1] ಶಸ್ತ್ರದಂತೆ ಆದಿರಲ್ಲಾ ! ಈ ನಿರಂಗವ ತಿಳಿದು ನಿಂದಲ್ಲಿ, ಬೇಱೆ ಅಂಗವಡುಗುವುದಕ್ಕೆ ಉಭಯವುಂಟೆಂಬ ದಂದುಗ ಬೇಡ. ತಾ ನಿಂದಲ್ಲಿಯೆ ನಿಜಕೂಟ, ತಿಳಿದಲ್ಲಿಯೆ ನಿರಂಗವೆಂಬುದು. ಉಭಯವಿಲ್ಲ ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ. 13–37. ಮತ್ತಂ : ೧೧೫೧

ಇಷ್ಟದಲ್ಲಿ ನೋಟ. ಜ್ಞಾನದಲ್ಲಿ ಕೂಟ. ಕೂಟ ಏಕಾರ್ಥವಾದಲ್ಲಿ ಕಾಯವೆಂಬ ಕದಳಿಯ [2]ಬಿಟ್ಟು ದುರ್ಭಾವ[2]ವೆಂಬ ಕುಱುಹೆ ಮಱೆದುದು. ಇಂತೀ ಉಭಯ ನಿರ್ಭಾವವಾದಲ್ಲಿ ಇಹ-ಪರವೆಂಬ ಹೊಲಬುಗೆಟ್ಟಿತ್ತು, ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ಒಂದೆಂದಲ್ಲಿ. 13–38. ಮತ್ತಂ : ೧೧೫೨

ಹೇಮದ ಬೆಂಬಳಿಯ ಸ್ವರೂಪದಂತೆ, ಗ್ರಾಮದ ಬೆಂಬಳಿಯ ಬಟ್ಟೆಯಂತೆ; ಹೇಮ ರೂಪಳಿದು ಸ್ವರೂಪವಡಗಿದಲ್ಲಿ ಕುಶಲ ವಿಚಿತ್ರ ಎಲ್ಲಿದ್ದಿತ್ತು ? ಬಟ್ಟೆಯ ಮೆಟ್ಟಿ ಹೋಗಿ ಪುನರಪಿಯಾಗಿ ತಿರುಗಿದಲ್ಲಿ, ಊರ ಬಾಗಿಲ ಬಟ್ಟೆಯ ಒಂದಱಲ್ಲಿ ಹೋಗಬೇಕು. ಇದು ದೃಷ್ಟಕ್ಕೆ ಕೊಟ್ಟ ಇಷ್ಟ. ಆ ಇಷ್ಟ ಚಿತ್ರದಲ್ಲಿ ಅಚ್ಚೊತ್ತಿದ ಮತ್ತೆ, ಆ ನಿಶ್ಚಯ ಉಭಯವ ತಿಳಿದಲ್ಲಿ ಕಾಯಕ್ಕೆ ಕೈಲಾಸವೆಂಬುದಿಲ್ಲ; ಭಾವಕ್ಕೆ ಬಯಲೆಂಬುದಿಲ್ಲ. ಅನಲನಲ್ಲಿ ಅಱತ ದ್ರವ್ಯದಂತೆ ಅದು ಅಮೂರ್ತಿಭಾವ. ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸದ್‌ಭಾವವಂತನ ಲಕ್ಷಣ. 13–39. ಮತ್ತಂ : ೧೧೫೩

ಗುರುವನಱಿದು ಲಿಂಗವನಱಿವವರುಂಟು. ಲಿಂಗವನಱಿದು ಪಂಚಾಚಾರವನಱಿವವರುಂಟು. ಪಂಚಾಚಾರವನಱಿದು ಜಂಗಮವನಱಿವವರುಂಟು. ಆ ಜಂಗಮವನಱಿದಲ್ಲಿ ಷಟ್‌ಸ್ಥಲ ಸಂಬಂಧವಾಯಿತ್ತು. ಆ ಸಂಬಂಧ ಸಮಯ ನಿಂದು, ಉಭಯವಳಿದು ಏಕವಾದಲ್ಲಿ, ಹಲವು ನೆಲೆ ತನ್ನ ವಿಶ್ವಾಸದ ಹೊಲಬಿನಲ್ಲಿ ಅಡಗಿತ್ತು. ಆ ಹೊಲದ ಹೊಲಬಿನಲ್ಲಿ ನಿಂದವಂಗೆ ಇಹಪರವೆಂಬ ಕಲೆ ಇಲ್ಲ, ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಒಂದೆ ಎಂದಲ್ಲಿ 13–40 ಮತ್ತಂ : ೧೧೫೪

ಪೂಜೆಯಲ್ಲಿ ಲಕ್ಷಿತವಪ್ಪವರು ಪುಣ್ಯದ ಆಗಿಂಗೆ ಒಡಲು. ದಾಸೋಹವೆಂಬ ಸೋಹವನಱಿದಲ್ಲಿ ಚತುರ್ವಿಧ ಫಲಪದದಾಸೆಗೆ ಒಡಲು. ಇಂತೀ ಉಭಯದ ಪ್ರೀತಿಯ ನಱಿದು ತೋಱಿದ ತೋಱಿಕೆ ಬಂದಂತೆ ಅವನಾರೈದು ಗುರುವಿಂಗೆ ತನು ಹೋಯಿತ್ತು, ಲಿಂಗಕ್ಕೆ ಮನ ಹೋಯಿತ್ತು, ಜಂಗಮಕ್ಕೆ ಧನ ಹೋಯಿತ್ತು. ಇಂತೀ ಎಲ್ಲಾ ಲಕ್ಷದಲ್ಲಿ ಲಕ್ಷಿಸಿ, ನೀವು ಕೈಲಾಸಕ್ಕೆ ಹೋದಹೆನೆಂಬ ಕಲ್ಲೆದೆಗೆ ನಾನಂಜುವೆ,

[1] (ಉ) ಕೈಯ (ಗೂ). [2] (ಉ) ಬಿಟ್ಟುದು ಭಾವ (ಗೂ).

ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ! 13-41. ಮತ್ತಂ: ೧೧೫೫

ಕಾಯವುಳ್ಳನ್ನಕ್ಕ ಲಿಂಗಪೂಜೆ. ಆತ್ಮವುಳ್ಳನ್ನಕ್ಕ ಅಱಿವಿನ ಭೇದ. ಪುರುಷ ನೀ, ಸತಿ ನಾನೆಂಬಲ್ಲಿ ಉಭಯದ ಬೀಜ. ನಾ-ನೀನೆಂಬನ್ನಕ್ಕ ಅಂಗದ ಲಿಂಗದಲ್ಲಿಯೆ [1]ನಿರಂಗ[1]ವಾಗಬೇಕು, ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ. 13-42 ಮತ್ತಂ: ೧೧೫೬

ಕಾಯವೆರಸಿ ಕೈಲಾಸಕ್ಕೆ ಎಯ್ದಿಹೆನೆಂಬುದು ಮತವಲ್ಲ. ಘನಲಿಂಗ ಕರಸ್ಥಲದಲ್ಲಿ ಇಪ್ಪ ಅನುವನಱಿಯದೆ, ಇಲ್ಲಿಗೆ ಕರ್ಮ, ಅಲ್ಲಿಗೆ ನಿಷ್ಕರ್ಮವೆ? ಹೇಮದ ಮಾಟದ ಒಳ-ಹೊಱಗಿನಂತೆ ಮರ್ತ್ಯ-ಕೈಲಾಸವೆಂಬ ಕಟ್ಟಳೆ ಇಲ್ಲ. ಆತ್ಮ ನಿಶ್ಚಯವಾದಲ್ಲಿಯೆ ಕೈವಲ್ಯ. ಮತ್ತತ್ವವಾದಲ್ಲಿಯೆ ಮರ್ತ್ಯದೊಳಗು. ಈ ಗುಣ ಸದಮಲಭಕ್ತನ ಯುಕ್ತಿ. ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ಇಕ್ಕಿದ ಗೊತ್ತು. 13-43. ಮತ್ತಂ: ೧೧೫೭

ಮಾಡಿದ ಭಕ್ತಿಗೆ ಕೈಲಾಸಕ್ಕೆ ಹೋದಹೆನೆಂಬುದು ಕೈ-ಕೂಲಿ. ಭಾಷೆಗೆ ತಪ್ಪಿ ಓಸರಿಸಿದ ಮತ್ತೆ, ಆನೀ ಹಿತವ ಹೇಳಿದಲ್ಲಿ, ಮತ್ತೆ ಘಾತಕತನದಿಂದ ಎಯ್ದಿಹೆನೆಂಬುದು ಭಕ್ತರಿಗೆ ನಿಹಿತವಲ್ಲ. ದೃಷ್ಟದಲ್ಲಿ ಕೊಟ್ಟುದ ಲಕ್ಷಿಸಲಱಿಯದೆ, ಅಲಕ್ಷ್ಯವ ಲಕ್ಷಿಸಿ ಕಾಬುದಕ್ಕೆ ಲಕ್ಷವೇನು? ಅದು ನಿರೀಕ್ಷಣೆಯ ಲಕ್ಷದಿಂದಲ್ಲದೆ ಆತ್ಮಂಗೆ ಲಕ್ಷವಿಲ್ಲ. ಇಂತೀ ಉಭಯದಲ್ಲಿ ಲಕ್ಷಿತವಾದವಂಗೆ ಮರ್ತ್ಯ-ಕೈಲಾಸವೆಂಬುದು. ತನ್ನಱಿವು ನಿಶ್ಚಯವಾದಲ್ಲಿ ಅದೆ ಲಕ್ಷ. ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಅಲ್ಲಿ-ಇಲ್ಲಿ-ಎಲ್ಲಿಯೂ ತಾನೆ. 13-44 ಮತ್ತಂ: ೧೧೫೮

ಕಾಯಭ್ರಮೆಯಿಂದ ಕೈಲಾಸ, ಜೀವಭ್ರಮೆಯಿಂದ ಮಹದ ಕೂಟವೆಂಬುದು. ಕಾಯದ-ಜೀವದ ಭೇದವನಱಿತಲ್ಲಿ ಅತ್ತಲಿತ್ತಲೆಂದು ಮತ್ತೆ ಹಲುಬಲಿಲ್ಲ. ಇದು ನಿಶ್ಚಯದ ಕೂಟ, ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ. 13-45. ೧೧೫೯

ಸುಮ್ಮಾನ ಸುಬುದ್ಧಿ ಭಕ್ತಿಸ್ಥಲ. ಮಲ-ಅಮಲ-ಮಾಹೇಶ್ವರಸ್ಥಲ. ಅಜ್ಞಾನ-ಸುಜ್ಞಾನ-ಪ್ರಸಾದಿಸ್ಥಲ. ಉಭಯಕೂಟಸ್ಥವೆಂಬುದು ಪರಿಹರಿಸಿದಲ್ಲಿ ಪ್ರಾಣಲಿಂಗಿಸ್ಥಲ. ಸ್ತುತಿನಿಂದ್ಯಾದಿಗಳಲ್ಲಿ ಒಡಲಳಿದು ನಿಂದುದು ಶರಣಸ್ಥಲ. ಇಂತೀ ಪಂಚ ಭೇದಂಗಳ ಸಂಚವನಱಿತು ವಿಸಂಚವಿಲ್ಲದೆ, ಪರುಷ ಪಾಷಾಣದಂತೆ ಭಿನ್ನಭಾವವಿಲ್ಲದೆ, ಅಱಿದಱುಹಿಸಿಕೊಂಬ ಕುಱುಹು ಏಕವಾದಲ್ಲಿ ಐಕ್ಯಸ್ಥಲ. ಎನ್ನಯ್ಯ ಎನ್ನ-ನಿನ್ನ ಷಟ್‌ಸ್ಥಲ. ಇದಕ್ಕೆ ಭಿನ್ನಭಾವವಿಲ್ಲ. ಅದು ಎನ್ನ-ನಿನ್ನ ಕೂಟದ ಸುಖದಂತೆ. ಇದ ಚೆನ್ನಾಗಿ ತಿಳಿದು ನೋಡಿಕೊಳ್ಳಿ. ಅಲ್ಲಿ-ಇಲ್ಲಿ ಎಂಬ ಗೆಲ್ಲಗೂಳಿತನ ಬೇಡ. ಹಾಗೆಂಬಲ್ಲಿಯೆ ಬಯಲಾಗಬೇಕು. ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ. 13-46 ಮತ್ತಂ: ೨೧೬೦

[1] Note: ನಿರಂಗ=ನಿರವಯ + ಬಯಲು = ನಿರವಯಲು, ನಿರ್ಬಯಲು.

ಬಿಡುವುದಕ್ಕೆ ಮುನ್ನವೆ, ಮೊನೆ ಮುಂಚಿದಂತಿರಬೇಕು. ಅಡಿ ಏಱುವುದಕ್ಕೆ ಮುನ್ನವೆ, ಆ ಮೊನೆಯ ಜಾಱಿದ ಮತ್ತೆ ತಾನಡಿಯೇಱಿ ಮೀಱಿ ಮುಂಚಿದಂತಿರಬೇಕು. ನೀನೆಂಬನ್ನಕ್ಕ ಲಕ್ಷದಲ್ಲಿ ಅಲಕ್ಷವಾಗಬೇಕು. ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬುದಕ್ಕೆ ಮುನ್ನವೆ. 13-47. ೧೧೬೧

ಇಂತು ಮಹಾದೇವಿಯಮ್ಮನು ಲಿಂಗೈಕ್ಯದ ನಿರ್ಣಯವ ಬಿನ್ನೈಸಲು ಆ ಮೋಳಿಗೆ ಮಾರಿತಂದೆಗಳು ಘನಲಿಂಗದಲ್ಲಿ ತನಗೆ ಸಮರಸಭಾವವ ತಿಳಿದು ನಿಶ್ಚಯಿಸಿದ ಪ್ರಸ್ತಾವದ ವಚನ:

ಹಲವು ಬಹುರೂಪ ಬರೆವ ಕರದ ಕಡ್ಡಿಯ ಭೇದದಂತೆ, ಮನವಱಿದು, ಕಣ್ಣು ನೋಡಿ ಕೈಕಡ್ಡಿಯ ಹಿಡಿದು ಲಕ್ಷಿಸುವಂತೆ; ಸ್ಥಲದಲ್ಲಿ ನಿಂದು, ಅಱುವಿನಲ್ಲಿ ಆಶ್ರಯಿಸಿ, ಇಷ್ಟವಿಶ್ವಾಸ ಭಕ್ತಿಯೊಳಡಗಿ, ಭಕ್ತಿ ವಸ್ತುವಿನಲ್ಲಿ ಲೇಪವಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ನಿರ್ಲೇಪವಾಯಿತ್ತು. 13-48. ಮತ್ತಂ: ೧೧೬೨

ವಿಶ್ವಾಸದ ಹರವರಿಯಲ್ಲಿ ವಿಶ್ವಮಯ ಸ್ಥಲ-ಕುಳಂಗಳಾದುವು. ಅದು ನಾನಾ ತಟಾಕಂಗಳಲ್ಲಿ ತೋಱುವ ದಿನಕರನಂತೆ. ಹಲವುಮಯ ತೋಱುವುದಲ್ಲಿಗಲ್ಲಿಗೆ. ಒಲವರವಿಲ್ಲದೆ. ಆ ವರುಣನ ನೆಲೆ ಒಂದೆ. ಹಲವು ಜಗಕ್ಕೆ ಹೊಲಬಾದಂತೆ, ಸ್ಥಲಜ್ಞನಾದೆಯಲ್ಲ! ಸ್ಥಲ ನೆಲೆ ಒಂದೆಂದಱಿತಲ್ಲಿ ಏಕಸ್ಥಳ ಮೂರ್ತಿ ನೀನೆ ಏಕ ಸಾಕೆಂದಲ್ಲಿ ನಿರಾಕಾರವಾದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನ! 13-49. ೧೧೬೩

ಇತಿ ಶ್ರೀಮತ್ಸಕಲಗಣ ಪುರಾತನರೊಳ್
ಪ್ರಭುದೇವರು ಮಹಾನುಭಾವ ಸದ್ಗೋಷ್ಠಿಯಂ ಮಾಡಿದ
ಶೂನ್ಯಸಂಪಾದನೆಯೊಳ್
ಮೋಳಿಗೆಯ ಮಾರಯ್ಯಗಳ ಸಂಪಾದನೆಗಂ
ತ್ರಯೋದಶೋಪದೇಶಃ
ಅಂತು ವಚನ ೧೧೬೩ ಕ್ಕಂ ಶ್ರೀ

## ಅನುಬಂಧ ೫

# ಘಟ್ಟಿವಾಳ ಮುದ್ದಣ್ಣಗಳ ಸಂಪಾದನೆ

—ಗೊಳೂರು ಸಿದ್ಧವೀರ

ಘಟ್ಟಿವಾಳಯ್ಯನೆಂಬ ಘ
ರಟ್ಟಂ ತನ್ನಿಷ್ಟಲಿಂಗದೊಳ್ ಮಿಗೆ ಗುಂಡಂ
ನಿಷ್ಠೆಯಿನಡಗಿಸಿದುದ ನಾಂ
ಸೃಷ್ಟಿಯೊಳಱಿವಂತೆ ಶರಣ ಜನರಿಂಗುಸುರ್ವೆಂ ||೧||

ಅದೆಂತೆಂದೊಡಾ ಪ್ರಭುದೇವರು ಬಸವರಾಜದೇವರು ಚೆನ್ನಬಸವರಾಜದೇವರು ಮಡಿವಾಳ ಮಾಚಿತಂದೆಗಳು ಆ ನುಲಿಯ ಚಂದಯ್ಯಗಳೊಡನೆ ಮಹಾನುಭಾವ ಸದ್‌ಗೋಷ್ಠಿಯಂ ಮಾಡಿ ಓಲಾಡುತ್ತಿರಲು, ಆ ನುಲಿಯ ಚಂದಯ್ಯಗಳು ತಮ್ಮ ನಿಜಕಾಯಕಕ್ಕೆಯ್ದಲು ; ಇತ್ತ ಮತ್ತೊರ್ವ ಗಣಾಧೀಶ್ವರನು ಕೈಲಾಸದಿಂದ ಸ್ವೇಚ್ಛಾ ಲೀಲಾವಿಲಾಸದಿಂದ ಮರ್ತ್ಯಕವತರಿಸಿ—ಘಟ್ಟಿವಾಳ ಮುದ್ದಣ್ಣಗಳೆಂಬ ನಿಜನಾಮ ದಿಂದ ಪರಮವೈರಾಗ್ಯದ ಹೆಚ್ಚುಗೆಯಿಂ ದೇಹೇಂದ್ರಿಯಾದಿ ವಿಷಯಂಗಳಂ ತೃಣ ಸಮಾನಂಗೈದು ನಿರಾಶಾಭರಿತರಾಗಿ ಚರಿಸಾಡುತ್ತಲೊಂದುದಿನಂ ಬಸವರಾಜದೇವರ ಗೃಹಸಮೀಪಸ್ಥರಾಗಿ ನಿಂದಿರಲು, ಆ ಬಸವರಾಜದೇವರ ಬಾಗಿಲಲ್ಲಿ ಹೊಗುವ ಹೊಱ ಡುವ ಜಂಗಮಸಮೂಹವಂ ಕಂಡು—ಇವರು ಉಪಾಧಿಯಿಂ ಶರೀರಪೋಷಣರಲ್ಲದೆ ಜ್ಞಾನಜಂಗಮಸ್ಥಲಕ್ಕೆ ಸಲ್ಲರೆಂದು ವಿಡಂಬಿಸುವ ಪ್ರಸ್ತಾವದ ವಚನ :

ಕಾಳುದೇಹದೊಳಗೊಂದು ಕೀಳುಜೀವ ಹುಟ್ಟಿತ್ತಾಗಿ, ಆಪ್ಯಾಯನವಡಗದು, ಸಂದೇಹ ಹಿಂಗದು, ಇದೇನೋ, ಇದೇನೋ ? ಹಂದೆಗಳ ಮುಂದೆ ಬಂದು ಕಾಡುತ್ತಲಿ ದ್ದುದೆ ? ಇದೇನೊ, ಇದೋನೋ ? ಕಾಲಾಳು ಮೇಲಾಳುಗಳು ಬೇಳುವೆಗೊಳಗಾದರು. ಚಿಕ್ಕಯ್ಯಪ್ರಿಯ ಸಿದ್ಧಲಿಂಗ, ಇಲ್ಲ ಇಲ್ಲ ಎಂಬರು. 15-1 ಮತ್ತಂ : ೧೧೬೪

ಜಂಗಮವಾಗಿ ಹುಟ್ಟಿದ ಮತ್ತೆ ಹಿಂದಣ ಹಜ್ಜೆಯ ಮೆಟ್ಟಲುಂಟೆ? ಜಂಗಮವೆಂಬ ಮಾತಿಂಗೊಳಗಾದಲ್ಲಿ ಮೂಱುಮಲತ್ರಯವ ಹಿಂಗಿರಬೇಕು. ಅನಂಗನ ಬಲೆಗೆ ಎಂದಿಗೂ ಸಿಲುಕದಿರಬೇಕು. ಅದು ನಿಜದ ಸಂಗ, ಚಿಕ್ಕಯ್ಯಪ್ರಿಯ ಸಿದ್ಧಲಿಂಗ, ಈ ಗುಣ ಆರಿಗೂ ಇಲ್ಲ, ಇಲ್ಲ ಎಂದೆ. 15-2 ಮತ್ತಂ : ೧೧೬೫

ಹೊನ್ನು-ಹೆಣ್ಣು-ಮಣ್ಣು ಕುಱಿತು ಚರಿಸುವನ್ನಬರ ಉಭಯದ ಕೇಡು. ಮರ್ಮ ವನಱಿಯದೆ ಮಾಡುವನ್ನಬರ ದ್ರವ್ಯದ ಕೇಡು. ಇಂತೀ ಉಭಯದ ಭೇದವನಱಿತು ಚರಿಸಿಮಾಡಿ ಅಱಿಯಬೇಕು, ಚಿಕ್ಕಯ್ಯಪ್ರಿಯ ಸಿದ್ಧಲಿಂಗವನಱಿಯಬಲ್ಲಡೆ. 15-3. ೧೧೬೬

ಹೊಱಗಣ ಮಲತ್ರಯಕ್ಕೆ ಒಳಗಣ ಅಱಿವ ನೀಗಾಡಲೇಕೆ? ಅಲ್ಪಸುಖಕ್ಕೆ

ಮೆಚ್ಚಿ, ಕುಕ್ಕುರನಂತೆ ಸಿಕ್ಕಿ ಸಾಯಲೇಕೆ, ನಿಶ್ಚಯವಾಗಿ ಚಿಕ್ಕಯ್ಯಪ್ರಿಯ ಸಿದ್ಧ ಲಿಂಗವನಱಿಯಬಲ್ಲಡೆ? 15-4 ಮತ್ತಂ: ೧೧೬೭

ಹೊನ್ನು ಹೆಣ್ಣು ಮಣ್ಣಿಂಗೆ ಹೊಡೆದಾಡುವನ್ನಬರ ಅವರು ಹಿರಿಯರೆಂತಪ್ಪರೋ? ತ್ರಿವಿಧ ಮಲಕ್ಕೆ ತ್ರಿವಿಧ [1]ಆಮಲದಿಂದ[1] ಮಲ ಹಱಿದಲ್ಲದೆ ಚಿಕ್ಕಯ್ಯಪ್ರಿಯ ಸಿದ್ಧ ಲಿಂಗ ಇಲ್ಲ ಇಲ್ಲ ಎಂದೆ. 15-5 ಮತ್ತಂ: ೧೧೬೮

ಜಂಗಮಕ್ಕೆ ಅಱಿವ ಅಱಿದಾಗಲೇ ಅಪಮಾನ ಹೋಯಿತ್ತು. ಭಕ್ತಂಗೆ ಸತ್ಯ ಸದಾಚಾರವ ಬಿಟ್ಟಾಗಲೇ ಅಪಮಾನ ಹೋಯಿತ್ತು. ಈ ಅಪಮಾನವಲ್ಲದೆ ದ್ವಾದಶ ಮಲಭಾಂಡಕ್ಕೆ ಹೋರಿಯಾಡುವರಿಗೇಕೆ ಚಿತ್ತಶುದ್ಧಿ? ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ, ಇಲ್ಲಾ ಎಂದೆ. 15-6 ಮತ್ತಂ: ೧೧೬೯

ತನುವ ಮಱೆಯಬೇಕೆಂದು ಗುರುವತೋಱಿ, ಧನವ ಮಱೆಯಬೇಕೆಂದು ಲಿಂಗವ ತೋಱಿ, ಧನವ ಮಱೆಯಬೇಕೆಂದು ಜಂಗಮವ ತೋಱಿ; ಲೇಸ ಮಱೆದು, ಕಷ್ಟಕ್ಕೆ ಕಡಿದಾಡುವ ಭಾಷೆಹೀನರ ಕಂಡು ನಾಚಿಕೆಯಾಯಿತ್ತು — ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-7 ಮತ್ತಂ: ೧೧೭೦

ತಮ್ಮ ಮಲವ ತಾವು ಮುಟ್ಟವು ಆವ ಜಾತಿಯೂ! ತ್ರಿವಿಧ ಮಲಕ್ಕೆ ಹೊಱಗಾಗಿ, ಮತ್ತೆ ಮಲತ್ರಯಕ್ಕೆ ಬೀಳುವ ಮಲಭಾಂಡದೇಹಿಗೆ ಚಿಕ್ಕಯ್ಯಪ್ರಿಯ ಸಿದ್ಧಲಿಂಗ [+ದ] ಒಲವರವಿಲ್ಲ ಇಲ್ಲಾ ಎಂದೆ. 15-8 ಮತ್ತಂ: ೧೧೭೧

ಕಾಯ ಜೀವವನಱಿದಹೆನೆಂಬವರೆಲ್ಲರೂ ಹೋದರಲ್ಲಾ ಹೊಲಬುದಪ್ಪಿ. ಹೊನ್ನು ಹೆಣ್ಣು-ಮಣ್ಣಿಗೆ ಹೋರಿಯಾಡುವರೆಲ್ಲರೂ! ಬಸವಣ್ಣನ ಬಾಗಿಲಲ್ಲಿ ಬಂಧಿತರಾಗಿ ನೊಂದವರಿಗೇಕೆ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ. 15-9 ಮತ್ತಂ: ೧೧೭೨

ಬಸವ ಮಾಡಿಹನೆಂದು ಬಾಯಲ್ಲಿ ಬಸಿವ ಲೋಳೆಯನಱಿಯದೆ, ಎಸಕದಿಂದ ಮಾಡುವ ಹುಸಿಭಕ್ತಿಯನಱಿಯದ ಈ [2]ಕಿಸು[2]ವಾಯರಿಗೇಕೆ—ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ. 15-10. ೧೧೭೩

ಈ ಹಿಂಗೆಂದು ಘಟವಾಳಯ್ಯಗಳು ಆ ಜಂಗಮ ಸಮೂಹಮಂ ವಿಡಂಬಿಸುತ್ತಿರಲು, ಆ ಜಂಗಮದೇವರುಗಳು ಘಟ್ಟವಾಳಯ್ಯಗಳಂ ನೋಯಿಸಿ ಲಿಂಗಮಂ ತೆಗೆದು ಕೊಳ್ಳಲು—ಆ ಪ್ರಸ್ತಾವದಲ್ಲಿ ನುಡಿದ ವಚನ:

ಗೋಕುಲರೆಲ್ಲರೂ ಕೂಡಿ, ಗೋಪತಿಯಣ್ಣನ ಮನೆಗೆ ಉಣಬಂದರೆಲ್ಲರೂ. [3]ನಾವೀ-ಸಕ್ಕಿಯ[3] ಕೂಳ ಕೇಳಿದರೆ, ವೇಷಧಾರಿಗಳು ಘಾಸಿಮಾಡಿದರೆನ್ನುವ. ಜಗಧೀಶ ನೀನೆ ಬಲ್ಲೆ, ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-11. ೧೧೭೪

ಹಸಿದು [4]ತಾರಕೂಟವ[4] ಕೇಳ ಹೋದರೆ, ಕೂಟವೆದ್ದು ಬಡಿದರು. ಸಾಕಾರ

---

[1] (ಗೂ R. ಉ) (ಉ) ಅಮಲ (ಗೂ). [2] (ಗೂ R. ಉ) ಕಿಸಿ (ಗೂ) (ಉ). [3] (ಗೂ R. ಉ) ನಾವೀಸಕೆ (ಗೂ) ನಾವೀಸಕ್ಕೆ (ಗೂ R. ಇ. ಈ). [4] (ಗೂ R. ಇ. ಉ) ತಾರಕ್ಕೂಟವ (ಗೂ).

ಮೊದಲು ಘಾತುಗೆಟ್ಟೆಯಲ್ಲಾ! ಪರಶಿವಾತ್ಮನಾಗಿ ಇದೇತಕ್ಕೆ ಬಂದೆ ತನುವಿನಾಸೆಗಾಗಿ? ಇದಱಾಸೆಯ ಹೊಗದಿರು—ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆನು. 15-12 ಮತ್ತಂ: ೧೧೭೫

ಹಾದಿಯ ಬೆಳ್ಳನ ಕಳ್ಳರು ತಾಗಿದರೆ ಇನ್ನಾರಿಗೆ ಮೊಱೆ ಇಡುವ? ತಾ ಸತ್ತ ಮತ್ತೆ ತನ್ನನಱಿದವಂಗೆ ಇನ್ನಾರಿಗೂ ಮಿಥ್ಯವೇಕೆ? ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆನು. 15-13 ಮತ್ತಂ: ೧೧೭೬

ಬಾಯಕ್ಕಿಯ ಬೇಡುವವರೆಲ್ಲರೂ ಬಡಪಾಯವಂತರ ನೋವ ಬಲ್ಲರೇ? ಹಸಿವ ವಿಹಂಗ ಪಶುವಿನ ನೋವ ಬಲ್ಲುದೇ? ಇಂತೀ ದೆಸೆಯ ಕಂಡು ನಾನಂಜಿದೆ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-14 ಮತ್ತಂ: ೧೧೭೭

ಹುಟ್ಟಿದ ಮರ, ನಟ್ಟ ಕಲ್ಲು, ಮತ್ತೇತಱ ಇಷ್ಟದಲಿ ಒತ್ತಿದ ಲಿಂಗಮುದ್ರೆ ಇರಲಿಕೆ ಕಿತ್ತುಕೊಂಡವ ದ್ರೋಹಿ ಎಂಬರು, ದೃಷ್ಟದಲ್ಲಿ ಜಂಗಮಭಕ್ತರ ಕೊಲುತ್ತ. ಇಂತೀ ಉರುಳುಗಳ್ಳರ ಭಕ್ತರು-ಜಂಗಮವೆಂದರೆ ಒಪ್ಪನಯ್ಯ—ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-15 ಮತ್ತಂ: ೧೧೭೮

ಜಂಗಮವಾಗಿ ಜಂಗಮವ ಕೊಂದಾಗಲೆ, ತನ್ನ ದೈವ ತನಗಿಲ್ಲ. ಭಕ್ತನಾಗಿ ಭಕ್ತರ ಸ್ತುತಿನಿಂದ್ಯವ ಮಾಡಲಾಗಿಯೆ ಸತ್ಯಸದಾಚಾರ ತನಗಿಲ್ಲ. ದೀಹದ ವಿಹಂಗ ಮೃಗ ಗಳಂತೆ, [1]ಕುಲಿನದ[1] ಕಾವು [2]ಕುಲಕ್ಕೆ[2] ಮಿತ್ತಾದಂತೆ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-16 ಮತ್ತಂ: ೧೧೭೯

ಇಱಾವುದು, ಕಡಿವುದು, ಕೊಲುವುದು ಮಲ-ದೇಹಿಗಳಿಗಲ್ಲದೆ ನಿರ್ಮಲದೇಹಿಗಳಿ ಗುಂಟೆ? ಸಮಯಸಮುದ್ರದಂತಿರಬೇಕು. ತಪ್ಪನಱಸದೆ ಶಿಕ್ಷಿಸುವನ್ನಬರ [3]ನರಧೂತ [=ರ್ತ?][3]ಕುಲಕ್ಕೆ ಪರಶಿವರೂಪುಂಟೆ? ಆ ಹರವರಿಯ ನುಡಿದಡೆನಗೇನು? ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-17. ೧೧೮೦

ಇಂತು ಘಟ್ಟಿವಾಳಯ್ಯಗಳು ತಮ್ಮ ನೋಯಿಸಿ ಲಿಂಗವ ತೆಗೆದುಕೊಂಡ ಜಂಗಮ ದೇವರುಗಳ ವಿಡಂಬಿಸುತ್ತಿರಲು, ಆ ಪ್ರಸ್ತಾವದೊಳು—ಪ್ರಭುದೇವರು—ಮಹಾಜ್ಞಾನಿ ಗಳಿಗೆ ಸಮಯವನ್ಯವಲ್ಲ—ಬಿಱುನುಡಿ ಸಲ್ಲದೆಂದು ನಿರೂಪಿಸಿದ ಪ್ರಸ್ತಾವದ ವಚನ:

ಅಱಿವ ಬಲ್ಲೆವೆಂದು ಬಿಱುನುಡಿಯ ನುಡಿವರೇ?! ಸತ್ಯವನಱಿದವಂಗೆ ಮಿಥ್ಯ ಭಾವ ಉಂಟೆ? ತಥ್ಯ-ಮಿಥ್ಯ ಉಭಯಭಾವವಳಿದಿರಬೇಕು—ಸಮಯವೆಂಬುದು ಸಂಪದಂ. ಅದು ನಿನಗನ್ಯವೆ? ಸರ್ವಮಯಸಂಪದನಾದಲ್ಲಿ ಗೊಹೇಶ್ವರಲಿಂಗಕ್ಕೆ ತಥ್ಯಮಿಥ್ಯವಿಲ್ಲ ಘಟ್ಟಿವಾಳಯ್ಯ. 15-18. ೧೧೮೧

ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಘಟ್ಟಿವಾಳಯ್ಯಗಳ ಪ್ರತ್ಯುತ್ತರ:

[1] (ಗೂ ಉ) ಕುಲ್ಲಿನ (ಗೂ R. ಅ) [=ಕುಲಿನ?] [2] (ಗೂ) ಕುಲ್ಲಿನಕ್ಕೆ (ಗೂ R. ಅ).
[3] (ಗೂಉ) ನರದೂತ (ಗೂ R. ಇಈ).

ಸರ್ಪಂಗೆ, ಪಿಕಂಗೆ ಒಪ್ಪದ ಮನೆಯುಂಟೆ? ಎನಗಾ ಹೆಚ್ಚುಕುಂದೆಂಬ ಮಿಥ್ಯದ ಭಾವವಿಲ್ಲ. ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-19. ೧೧೮೨

ಚಿನ್ನವ ಕೊಂಬಲ್ಲಿ ಅದಱ ಬಣ್ಣವ ಕಂಡು, ಬಣ್ಣದ ವಾಸಿಯ ಕುಱುಹಿಟ್ಟು-ಅದು ತನಗೆ ಚೆನ್ನಾದಡೆ ಕೊಂಬ, ಅಲ್ಲದೊಡೊಲ್ಲ. ಇದಕ್ಕೆ ಗೆಲ್ಲ-ಸೋಲವೇಕೆ? ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎನುತಿರ್ದೆನು. 15-20. ೧೧೮೩

ಇದಕ್ಕೆ ಪ್ರಭುದೇವರ ನಿರೂಪ:

ಸಮಯವ ಬಿಡಬಹುದೇ ಅಯ್ಯ? ಅಟ್ಟ ಅಶನವಾದಡೂ—ಕಲಸುವ ಕೈ, ಉಂಬುದಕ್ಕೆ ಬಾಯಿಬೇಕು. ಉಂಬುದಿಲ್ಲಾ ಎಂದು ಸಂದೇಹವ ಹಱಿದಲ್ಲಿ ಸಮಯ ಒಂದೂ ಇಲ್ಲ ಎನಬೇಕು. ಗೊಹೇಶ್ವರನೆಂಬನ್ನಕ್ಕರ ಬಂಧ ಮೋಕ್ಷವನಱಿಯಬೇಕು ಘಟ್ಟಿವಾಳಯ್ಯ. 15-21. ೧೧೮೪

ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಘಟ್ಟಿವಾಳಯ್ಯಗಳ ಪ್ರತ್ಯುತ್ತರ:

ದಗ್ಧವಾದ ಮರ ಇದ್ದಿಲಲ್ಲದೆ ಕಾಷ್ಠಕ್ಕೆ ಹೊದ್ದಿಗೆ ಉಂಟೆ? ಕಿಗ್ಗಯ್ಯ ನೀರು ತಟಾಕಕ್ಕೆ ಹೊದ್ದಿದುದುಂಟೆ? ಅಱಿದು ಮಱೆದವಂಗೆ ಸಮಯದ ಹೊದ್ದಿಗೆಯೇನು? ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-22 ಮತ್ತಂ: ೧೧೮೫

ಸತ್ತ ಶವ ಕಿಚ್ಚ ಬಲ್ಲುದೆ? ನಿಷ್ಠೆ ನಿಬ್ಬೆಱಗಾದ ಕರ್ತೃ ಮರ್ತ್ಯರ ಹಂಗು ಬಲ್ಲನೆ? ತೊಟ್ಟುಬಿಟ್ಟ ಹಣ್ಣು ಮತ್ತೆ ಹತ್ತುವುದೆ? ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲವೆಂದೆನು. 15-23. ೧೧೮೬

ಒಡೆದ ಮಡಕೆಗೆ ಸಱಿಯಿಂದ ಸಂದು ಕೂಡುವುದೆ? ದಗ್ಧವಾದ ಪಟ ಅಗಸರ ಕಲ್ಲಿಗೆ ಹೊದ್ದುವುದೆ? ಬದ್ಧಭವಿಗಳೆಂದು ಬಿಟ್ಟು ಮತ್ತೆ ಸಮಯದ ಹೊದ್ದಿಗೆ ಏಕೆ? ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-24 ಮತ್ತಂ: ೧೧೮೭

ಕೂಟವ ಕೂಡಿಹೆನೆಂದಡೆ ಸಮಯದವನಲ್ಲ, ಮಾಟವ ಮಾಡಿಹೆನೆಂದಡೆ ಹಿಂದು ಮುಂದಣ ದಂದುಗದವನಲ್ಲ. ಸಮಯಕ್ಕೆ ಮುನ್ನವೆ ಅಲ್ಲ, ಆರಾದಡೂ ಎನಲಿ. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-25. ೧೧೮೮

ಈ ಹೀಗೆಂದು ಘಟ್ಟಿವಾಳಯ್ಯಗಳು ನುಡಿಯಲು ಪ್ರಭುದೇವರ ನಿರೂಪ:

ಕುಱುಹುಳ್ಳನ್ನಕ್ಕ ಸಮಯದ ಹಂಗು. ಅಱಿದಿಹೆನೆಂಬನ್ನಕ್ಕ ಆತ್ಮನ ಹಂಗು. ಅಲ್ಲ-ಅಹುದೆಂಬನ್ನಕ್ಕ ಎಲ್ಲರ ಹಂಗು. ಗೊಹೇಶ್ವರನೆಂಬನ್ನಕ್ಕ ಲಿಂಗದ ಹಂಗು ಬೇಕು ಘಟ್ಟಿವಾಳಣ್ಣ. 15-26. ೧೧೮೯

ಇದಕ್ಕೆ ಘಟ್ಟಿವಾಳಯ್ಯಗಳ ಪ್ರತ್ಯುತ್ತರ:

ಇಷ್ಟ-ಬಾಹ್ಯವಾಯಿತ್ತೆಂದು ಸಮಯ ಒಪ್ಪದಿಪೆ ನೋಡಾ. ಅಱಿವು ಬಾಹ್ಯವಾಗಿ ತ್ರಿವಿಧಕ್ಕೆ ಕಚ್ಚಾಡಲೇತಕ್ಕೆ? ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-27 ಮತ್ತಂ: ೧೧೯೦

ಸ್ಥಾವರವಾಗಿ ಭೂಮಿಯಲ್ಲಿ ಪೂಜಿಸಿಕೊಂಬುದು ಶೈವಲಿಂಗ. ಚರವಾಗಿ ಭೂಮಿ

ಯಲ್ಲಿ ಪೂಜಿಸಿಕೊಂಬುದು ಇಷ್ಟಲಿಂಗ. ಅಱಿವಿನ ಮನದ ಕೊನೆಯಲ್ಲಿ ನಿತ್ಯನಿವಾಸವಾಗಿ ಪೂಜಿಸಿಕೊಂಬುದು ವೀರಶೈವಲಿಂಗ. ಇಂತೀ ಲಿಂಗತ್ರಯದ ಆದಿಯಾಧಾರವನಱಿಯದೆ ಹೋದರಲ್ಲಾ ಹೊಲಬುದಪ್ಪಿ! ಇನ್ನಾರಿಗೆ ಹೇಳುವೆ? ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-28. ೧೧೯೧

ಮತ್ತಂ, ಘಟ್ಟಿವಾಳಯ್ಯಗಳು ಪ್ರಭುದೇವರೊಡನೆ ನಿಜಜಂಗಮಸ್ಥಲವಪೂರ್ವವೆಂದು ನುಡಿದ ಪ್ರಸ್ತಾವದ ವಚನ:

ವೇಷವೆಂಬ ರುದ್ರನ ಪಾಶವ ಹೊತ್ತು ಈಷಣತ್ರಯಕ್ಕೆ ತಿರುಗಾಡುವ ವೇಷಧಾರಿಗಳಿಗುಂಟೆ ಮಹಾಸಂಪತ್ತಿನ ಸಂಬಂಧ? ಸ್ವಾದು ಉದಕದಲ್ಲಿ ಉಂಟೆ ಕ್ಷಾರದ ವಾರಿ? ಸಮಯದಲುಂಟೆ ನಿಜಶರಣರ ನೆಲೆ? ಎನಗಾ ಭ್ರಮೆಯಿಲ್ಲ. ಚಿಕ್ಕಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-29 ಮತ್ತಂ: ೧೧೯೨

ಆಶೆಗಾಗಿ ವೇಷವ ಹೊತ್ತು ತಿರಗುವ ವೇಷದ ಗಂಡ. ಈಷಣತ್ರಯಕ್ಕಾಗಿ ಈಶನ ಪೂಜಿಸುವ ದಾಸರ ಗಂಡ. ಇಷ್ಟನಱಿತು ತನುವಿಗೆ ಆಶೆಯ ಮಾಡುವ ಭಾಷೆವಂತರ ಗಂಡ! ನಾನಂಜುವೆ ತ್ರಿವಿಧ ಹಂಗುಳಿದವರಿಗೆ. ನಾನವರ[1]ಗಿಳ[1]ಬಂಟ. ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲವೆಂದೆನು. 15-30. ೧೧೯೩

ಸಬಳದ ತುದಿಯಲ್ಲಿ ಬಿರಿದ ಕಟ್ಟಿದ ಮತ್ತೆ, ಅದಱ ತಲೆವಿಡಿಯತೊಡಗಿದರೆ—ನಾನಲ್ಲ, ಸಬಳಕ್ಕೆ ಬಿರಿದೆಂಬವನಂತೆ! ಹಾಂಗೆಂದ ಮತ್ತೆ ತೊಡಗುವನೆಗ್ಗ. ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲವೆಂದೆನು. 15-31 ಮತ್ತಂ: ೧೧೯೪

ಮೂಱು ಬಿಟ್ಟವಂಗಲ್ಲದೆ ಸತ್ಯ ಸಾಗಿಸಬಾರದು. ಆಱು ಬಿಟ್ಟವಂಗಲ್ಲದೆ ಆಧರಿಸಬಾರದು. ಎಂಟ ಬಿಟ್ಟವಂಗಲ್ಲದೆ ಸಾಕಾರದ ಕಂಟಕವನಱಿಯಬಾರದು. ರಣದಲ್ಲಿ ಓಡಿ ಮನೆಯಲ್ಲಿ ಬಂಟನಾಡುವನಂತೆ. ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲವೆಂದೆನು. 15-32. ೧೧೯೫

ಈ ಹೀಗೆಂದು ಘಟ್ಟಿವಾಳಯ್ಯಗಳು ಅಲ್ಲಿಂದ ಪೋಗಿ, ಒಂದು ಪಿರಿದಪ್ಪ ಗುಂಡ ತಂದು, ಬಸವರಾಜದೇವರ ಮಠದ ಬಾಗಿಲಲ್ಲಿ ನಿಲಿಸಿ, [2]ಹೊದಕೆ[2]ಯ ಕಣ್ಣಿಯಿಂದ ತಮ್ಮ ಕೊರಳಿಗೆ ಧರಿಸಿಕೊಂಡು, ಆ ಜಂಗಮದೇವರುಗಳ ಮರಳಿ ವಿಡಂಬಿಸುವ ಪ್ರಸ್ತಾವದ ವಚನ:

ಅಂಡಜಮುಗ್ಧೆಯ ಮಕ್ಕಳಿರಾ, ಕೆಂಡದ ಮಳೆ ಕಱೆವಲ್ಲಿ ನಿಮ್ಮ ಹೆಂಡಿರು ಹಳು ಹೊಕ್ಕು ಹೋದಿರಲ್ಲಾ! ಜಂಗಮವೆಂಬುದಕ್ಕೆ ನಾಚಿರಿ. ನಿಮ್ಮ [3]ಕಂಗಳ[3] ಹೆಂಡಿರ [=ರು ?] ತಿಂಬಳೆಂಬುದನಱಿಯಿರಿ. ಅವಳು ಒಮ್ಮೆ ತಿಂಬಳು, ಒಮ್ಮೆ ಕರುಣಿಸಿಬಿಡುವಳು. ಅವಳು ತಿಂದು ತಿಂದು ಉಗುಳುವ ಬಾಯೊಳಗಣದೆಲ್ಲಾ ಜಂಗಮವೆ? ಲೋಕವೆಲ್ಲಾ ಅವಳು. ಅವಳು ವಿರಹಿತವಾದ ಜಂಗಮವಾರ್ಯೆ ಬಸವಣ್ಣಾ! ಅವಳು ವಿರಹಿತ

[1] (ಗೂ R ಉ) ಗೀದ (ಗೂ ಉ). [2] (ಉ) ಹೊಡಕೆ (ಗೂ). [3] (ಗೂ) ಕಂಗಳು (ಉ).

ವಾದ ಭಕ್ತರಾರೈ ಬಸವಣ್ಣ? ಅವಳ ಮಕ್ಕಳು ನಿನ್ನ ಕೈಯಲ್ಲಿ ಆರಾಧಿಸಿಕೊಂಬ ಜಂಗಮ ಕಾಣಯ್ಯ ಬಸವಣ್ಣ. ಅವಳು ವಿರಹಿತವಾದ ಚಿಕ್ಕಯಪ್ರಿಯ ಸಿದ್ಧಲಿಂಗನಲ್ಲ ದಿಲ್ಲ ನಿಲ್ಲು ಮಾಣು. 15-33. ೧೧೯೬

ಹೀಗೆಂದು ಘಟ್ಟಿವಾಳಯ್ಯಗಳು ನಿರೂಪಿಸಲು ಅದಕ್ಕೆ **ಸಮಯದ ವಾಕ್ಯ:**

ಫಳವ ಸಲಿಸುವನ್ನಬರ ಬಿತ್ತು-ಸಿಪ್ಪೆ ಉಭಯವೂ ಇರಬೇಕು. ಸಾರ ಸವಿದಲ್ಲಿ ಸಮಯ ಉಳಿಯಿತ್ತು. ಹಾಗಱಿಯಬೇಕು. ಘಟ್ಟಿವಾಳಣ್ಣ. 15-34. ೧೧೯೭

ಇದಕ್ಕೆ ಘಟ್ಟಿವಾಳಯ್ಯಗಳು-ನೀವೆಲ್ಲರು ಘನಲಿಂಗದ ನಿಜವನಱಿಯಿರಿ ಎಂದು ನಿರೂಪಿಸಿದ ಪ್ರಸ್ತಾವದ ವಚನ:

ಇಷ್ಟ ಲಿಂಗವ ತೆಕ್ಕೊಂಡಲ್ಲಿ ದೃಷ್ಟವಾಯಿತ್ತೆ ನಿಮಗೆ? [1]ಬಂಧಿಕಾನ[1] ಬಂಧನವ ಮಾಡುವುದು—ಲಿಂಗದೇಹಿಗಳಿಗುಂಟೆ ಅಯ್ಯ? [2]ಜಂಗಮದಲ್ಲಿ[2] ಉಂಡುಂಡು ಕೊಂಡಾಡುವರಿಗೆ ಘನಲಿಂಗದ ಸುದ್ದಿ ಏಕೆ? ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-35 ಮತ್ತಂ: ೧೧೯೮

ಕೈಯ ಲಿಂಗ ಕೈಯಲ್ಲಿ, ಮೈಯ ಲಿಂಗ ಮೈಯಲ್ಲಿ, ತಲೆಯ ಲಿಂಗ ತಲೆಯಲ್ಲಿ, ಮತ್ತೆ ಹೊಲಬನಱಸಲೇತಕ್ಕೆ? ಹೊಲಬುದಪ್ಪಿ ಬಿದ್ದಿರಿ ಮೂಱು ಬಲೆಯಲ್ಲಿ, ಬಲುಹೇತಕ್ಕೆ? ಸಾಕು. ಚಿಕ್ಕಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-36 ಮತ್ತಂ: ೧೧೯೯

ಅರ್ತಿಗೆ ಕಟ್ಟಿದ ಲಿಂಗ ಕೈಯೊಳಗಾಯಿತ್ತು. ನಿಶ್ಚಯದ ಲಿಂಗ ಆರ ಗೊತ್ತಿಗೂ ಸಿಕ್ಕದು. ಆ ಘನಲಿಂಗವುಳ್ಳನ್ನಕ್ಕ ನಾ ಜಂಗಮ, ನೀವು ಜಂಗುಲಿಗಳು. ಎನಗಾ ಭೀತಿ ಇಲ್ಲ. ಚಿಕ್ಕಯ್ಯಪ್ರಿಯ್ಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-37 ಮತ್ತಂ: ೧೨೦೦

ಅಂಗವ ಬಂಧಿಸಿದಲ್ಲಿ ನಾ ನೊಂದುದಿಲ್ಲ. ಅದು ಮಲದೇಹ, ಮಾಯೆಯ ಸೊಮ್ಮು ಲಿಂಗವ ತೆಗೆದೆನೆಂದಡೆ ಅದು ಜಗದ ಕುಱುಹು, ನನ್ನದಲ್ಲ. ಆ ಗುಣ ನಿಮ್ಮ ಸಂದೇಹ ಕೊಳಗಾಯಿತ್ತು. ಎನಗೆ ಉಭಯದ ಹಂಗಿಲ್ಲ, ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-38. ೧೨೦೧

ಎನಗೆ ಹಳ್ಳದ ಹೊಡಕೆಯೆ ಶಿವದಾರವಾಗಿ, ಬೆಟ್ಟದ ಗುಂಡೆ ಲಿಂಗವಾಗಿ, ಕಾಡು ಸೊಪ್ಪು [3]ಹಾಕಿದ[3] ಮಡಕೆಯ ಉದಕವೆ ಮಜ್ಜನವಾಗಿ ಪೂಜಿಸುತ್ತಿದ್ದೆ. ಬಸವನ ಮನೆಗೆ ಹೋಹ ವ್ರತಗೇಡಿಗಳ ನೋಡಿ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎನುತಿರ್ದೆ. 15-39. ೧೨೦೨

ಈ ಹೀಗೆಂದು ಘಟವಾಳಯ್ಯಗಳು ನಿರೂಪಿಸಲು, ಅದಕ್ಕೆ ಸಮಯದ ವಾಕ್ಯ:

ಬಲ್ಲ ವಿರಕ್ತಂಗೆ ಗೆಲ್ಲ-ಸೋಲದ [4]ಹೋರಟೆ[4] ಉಂಟೆ? ಒಳ್ಳಿತ್ತು ಹೊಲ್ಲವೆಂಬುದು

[1] ಈ ಶಬ್ದವು "ಬಂದೀಖಾನ" ಎಂಬ ಶಬ್ದವಿರಬೇಕು. ಅಂದರೆ ಈ ವಚನ ಬಸವಸಮಕಾಲೀನವಲ್ಲವೆಂಬುದು ಸ್ಪಷ್ಟ. [2] (ಉ) ಜಗದಲ್ಲಿ (ಗೂ). [3] (ಗೂ) ಹಾಯ್ಕಿದ (ಉ). [4] (ಉ) ಹೋರಾಟ (ಗೂ).

ಭ್ರಾಂತರ ಮಾತು. ಸಮಯಕ್ಕೆ ನೀ ಹಂಗು. 15-40. ೧೨೦೩

ಇದಕ್ಕೆ ಘಟ್ಟಿವಾಳಯ್ಯಗಳ ಪ್ರತ್ಯುತ್ತರ:

ಮುನ್ನವೆ ಆಚಾರಕ್ಕೆ ಹೊಱಗು, ನಾನನಾಚಾರಿಯಾದ ಕಾರಣ, ನಿಮ್ಮಂತಹವನಲ್ಲ. ಸಮಯಕ್ಕೆ ಹೊಱಗು, ಜಗದೊಳಗು. ಎನ್ನಱಿಕೆ ಎನಗೆ [1]ಸಯ.[1] ಓಗರವಿಕ್ಕುವಾತನ ಮನೆಯ ಬಾಗಿಲು [2]ಮುಚ್ಚಿ ಹೇತು[2] ಹೋಗಿರಣ್ಣ. ಅನಾಚಾರಿಯ ಮುಖವ ಸದಾಚಾರಿಗಳು ನೋಡಿ ಕೆಡಬೇಡ. ಕೀಳ ಕೆಣಕಲಿಲ್ಲ, ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-41. ೧೨೦೪

ಇದಕ್ಕೆ ಸಮಯದ ವಾಕ್ಯ:

ಕೇಳಿದಡೆ ದೋಷ ಉಂಟೆ? ಮಾತನಾಡಿದಡೆ [3]ಪಾಪ[3] ಉಂಟೆ? ನಿನ್ನಯ ಅಱಿವು ಮಹತ್ತು ಪದಕ್ಕೆ ಇದಿರುಂಟೆ? ನಿನ್ನ ಅಱಿವಿನ ಭೇದದ ದುರಾಳಿತನವಾವುದು ಹೇಳಣ್ಣ. 15-42. ೧೨೦೫

ಇದಕ್ಕೆ ಘಟ್ಟಿವಾಳಯ್ಯಗಳ ಪ್ರತ್ಯುತ್ತರ:

ಇಱಿವ ಕೈದಿಂಗೆ ದಯಧರ್ಮದ ಮೊನೆಯುಂಟೆ? ಕಾಳೋರಗನ ದಾಡೆಯೊಳಗೆ ಅಮೃತದ ಸುಧೆಯುಂಟೆ? ಕೂಟವ ಕೂಡಿ, ಸಮಯ ನೊಂದಲ್ಲಿ ಅಜಾತನ ಬಲ್ಲರೆ? ಎನಗೆ ನಿಮ್ಮೊಳಗಿನ್ನೇತರ ಮಾತು ವೇಷಧಾರಿಗಳಲ್ಲಿ. ನಿಮ್ಮ ಕೂಟಕ್ಕೆ ಹೊಱಗು. ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-43. ೧೨೦೬

ಇದಕ್ಕೆ ಸಮಯದ ವಾಕ್ಯ:

ಅಂಬು ತಾಗಿಹೆನೆಂದಡೆ ಧನುವಿನ ಸಂಗದಿಂದಲ್ಲದೆ ತಾಗದು. ಹಣ್ಣು ಸವಿ ಎಂದಡೆ ವೃಕ್ಷದ ಶಾಖೆಯ ಸಂಗದಿಂದಲ್ಲದೆ ಬೆಳೆಯದು. ಲಿಂಗವನಱಿತೆನೆಂದು ಶರಣರ ಸಂಗವ ಬಿಟ್ಟಡೆ, ಅದು ಎಡೆಯಲ್ಲಿ ನಿಂದ ನಂಜು, ಕಾಣಾ ಭಂಗಿತನಾದವನೆ. 15-44. ೧೨೦೭

ಇದಕ್ಕೆ ಘಟ್ಟಿವಾಳಯ್ಯಗಳ ನಿರೂಪ:

ರೋಗಿಗೆ ಹಾಲು ಸಿಹಿಯಪ್ಪುದೆ? ಗೂಗೆಗೆ ರವಿ ಲೇಸಪ್ಪುದೇ? ಚೋರಂಗೆ ಬೆಳಗು ಗುಣವಪ್ಪುದೆ? ಭವಸಾಗರದ ಸಮಯದಲ್ಲಿದ್ದವಂಗೆ ನಿರ್ಭಾವನ ಭಾವವನೆತ್ತ ಬಲ್ಲರು? ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-45. ೧೨೦೮

ಇದಕ್ಕೆ ಸಮಯದ ವಾಕ್ಯ:

ಎಲೆಯಿಲ್ಲದ ವೃಕ್ಷ ಉಲಿಯಬಲ್ಲುದೆ? ಜಲವಿಲ್ಲದ ತಟಾಕ ತೆರೆಗೊಡಲುಂಟೆ? ಶಬ್ದ ಮುಗ್ಧವಾದವಂಗೆ ಸಮಯವ ಸಂಪಾದಿಸುವನ್ನಬರ, ಭ್ರಾಂತ ಮರ್ಕಟವ ವೃಶ್ಚಿಕ ಹೊಯಿದಂತೆ ಮಱಿದಾಡಬೇಡ, ಭ್ರಾಂತಯೋಗಿ. 15-46. ೧೨೦೯

ಇದಕ್ಕೆ ಘಟ್ಟಿವಾಳಯ್ಯಗಳ ಪ್ರತ್ಯುತ್ತರ:

ಉತ್ತರಕ್ಕೆ ನುಡಿವನ್ನಬರ ನಾನು ಚಿತ್ತದ ಕಲೆಯುವನಲ್ಲ. ಮಚ್ಚರಕ್ಕೆ ಹೋರುವನ್ನ-

---

[1] (ಉ) ಸಯ ನಿಮ್ಮ ಸಮಯ ನಿಮಗೆ (ಗೂ). [2] (ಉ) ಮುಚ್ಚಿಹಿತು (ಗೂ). [3] (ಉ) ಶಾಪ (ಗೂ).

ಬರ ಕರಣೇಂದ್ರಿಯದ ಹುತ್ತದ ಮೊತ್ತದವನಲ್ಲ. ಮತ್ತೆ ಸಮಯದಲ್ಲಿ ಹೊತ್ತು ಹೋರಿಹೆನೆಂದಡೆ ಸಂಸಾರದ [1]ಕತ್ತಲೆ[1]ಯವನಲ್ಲ. ಎನ್ನ ನಿಶ್ಚಯದ ಗುಂಡು ಎನ್ನ ಬಚ್ಚಬಯಲ ಬೆಳಗು ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂದೆ. 15-47. ೧೨೧೦

ಇಂತು ಘಟ್ಟಿವಾಳಯ್ಯಗಳು ಆ ಗುಂಡನೆ ತನಗೆ ಬಚ್ಚಬಯಲ ಪರಬ್ರಹ್ಮವೆನಲು, ಆದಡೆ ಆ ಲಿಂಗವು ನಿನ್ನ ಕೈಯೊಳಗೇಕೆ ಅಡಗದು? ಎಂದ ಸಮಯದ ವಾಕ್ಯ :

ಲಿಂಗವು [2]ನೀನಾ[2]ದಡೆ ಅಂಗೈಯೊಳಗೇಕೆ ಅಡಗದು ? ನೀ ಮಂಗಳಮಯನಾದಡೆ ಸಂಸಾರದ ಅಂಗದ ಉಲುಹೇತಕ್ಕೆ ? ಅದು ಲಿಂಗದ ಮೆಚ್ಚಲ್ಲ ಭ್ರಾಂತಯೋಗಿ. 15-48. ೧೨೧೧

ಈ ಹೀಗೆಂದು ಸಮಯ ನುಡಿದು ಆ ಲಿಂಗವ ಕೊಡಲು, ಅದಕ್ಕೆ ಘಟ್ಟಿವಾಳಯ್ಯಗಳು ಆ ಗುಂಡನು ತಮ್ಮ ಕರಸ್ಥಲದ ಲಿಂಗದಲ್ಲಿ ಅಡಗಿಸಿಕೊಂಬ ಪ್ರಸ್ತಾವದ ವಚನ :

ಲೀಲೆಗೆ ಹೊಱಗಾದ ಲಿಂಗವೆ, ಬಾರಯ್ಯ ಎನ್ನಂಗದೊಳಗಾಗು. ಶ್ರುತ-ದೃಷ್ಟ ಅನುಮಾನದಲ್ಲಿ ನೋಡುವವರಿಗೆಲ್ಲಕ್ಕು ಅತೀತವಾಗು. ಆಗೆಂಬುದಕ್ಕೆ ಮುನ್ನವೆ ಆ ಗುಂಡು ಕಾಯದ ಕರಸ್ಥಲದಲ್ಲಿ ನಿರ್ಭಾವವಾಗಿ, ಕಾಯವಡಗಿ ಭಾವವೆಂಬ ಭಾವ ಬಯಲಾಯಿತ್ತು. ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎಂಬುದಕ್ಕೆ ಮುನ್ನವೆ. 15-49. ೧೨೧೨

ಇಂತು ಘಟ್ಟಿವಾಳಯ್ಯಗಳು ಆ ಗುಂಡನು ಪರಬ್ರಹ್ಮವೆಂದು ತಮ್ಮ ಕಾಯದ ಕರಸ್ಥಲದಲ್ಲಿ ಅಡಗಿಸಿಕೊಳ್ಳಲು ಅದಂ ಕಂಡು ಪ್ರಭುದೇವರು ಕೊಂಡಾಡಿದ ಪ್ರಸ್ತಾವದ ವಚನ :

ಅಂಗದ ಮೇಲಣ ಲಿಂಗ ಹಿಂಗಿದಾತನ ಭವಿಯೆಂಬರು, ಅಂಗದ ಮೇಲಣ ಲಿಂಗ ವಿಪ್ಪಾತನ ಭಕ್ತನೆಂಬರು, ಅಂಗದೊಳಗೆ ಬೆರಸಿಪ್ಪಲಿಂಗದ ಹೊಲಬನಱಿಯದೆ. ಲಿಂಗವಿಲ್ಲದೆ ಒಂದು ಕ್ಷಣ, ಒಂದಂಗ ಸುಳಿದುದುಂಟೆ ಜಗದೊಳಗೆ ? ಅಂಗದೊಳಗಣ ಲಿಂಗವನು ಹಿಂಗಿದವರಿಗೆ ಭವಮಾಲೆಯುಂಟು. ಹಿಂಗದವರಿಗೆ ಭವಮಾಲೆಯಿಲ್ಲ ಗೊಹೇಶ್ವರ. 15-50. ೧೨೧೩

ಇದಕ್ಕೆ ಚೆನ್ನಬಸವರಾಜದೇವರು ಕೊಂಡಾಡಿದ ಪ್ರಸ್ತಾವದ ವಚನ :

ಅಂಗದ ಮೇಲಣ ಲಿಂಗ ಹಿಂಗಿತ್ತೆಂದಾತ್ಮಘಾತಕವ ಮಾಡಬೇಕೆಂಬ ಅಜ್ಞಾನಿಗಳು—ಅಂಗವಾವುದು, ಲಿಂಗವಾವುದೆಂದವರೆತ್ತ ಬಲ್ಲರು ? ಅಂಗವೆ ಆತ್ಮ, ಲಿಂಗವೆ ಸಂವಿತ್ತು. ಈ ಎರಡಱ ಸಂಬಂಧ-ಸಂಚ ತಿಳಿಯದೆ ಅಂಗಲಿಂಗ ಹಿಂಗಿತ್ತೆಂಬವರಿಗೆ ಪ್ರಾಣಲಿಂಗನಾಸ್ತಿ. ಪ್ರಸಾದವೆಲ್ಲಿಯದೊ ಕೂಡಲಚೆನ್ನಸಂಗಮದೇವ. 15-51. ೧೨೧೪

ಮತ್ತಂ ಸ್ತೋತ್ರ :

ಅಱಿವೆಱತು, ಕುಱುಹು ನಷ್ಟವಾದ ಬಳಿಕ, ಕುಱುಹಿನ ಬಣ್ಣ ಅಂಗದ ಮೇಲೇಕೋ

1 (ಉ) ಕತ್ತಲೆ (ಗೂ). 2 (ಉ) ನಿನ್ನದಾ (ಗೂ).

ಘಟ್ಟಿವಾಳಂಗೆ? ಅಱಿವನಾರು, ಅಱುಹಿಸಿಕೊಂಬವನಾರು? ಬಱಿಯ ಬಯಲು ಕಾಣಾ. ಕೂಡಲಚೆನ್ನಸಂಗ, ನಿಮ್ಮ ಶರಣ ಘಟ್ಟಿವಾಳನಲ್ಲದೆ ನೆಱೆ ಅಱಿದವರಾರೋ? 15-52. ೧೨೧೫

ಆ ಪ್ರಸ್ತಾವದೊಳು ಸಿದ್ಧರಾಮ ತಂದೆಗಳು ಸ್ತೋತ್ರಮಂ ಮಾಡಿದ ವಚನ:

ಆದಿಮಧ್ಯಾಂತವ ಭೇದಿಸಿದ ಮಹಿಮನು. ನಾದಕ್ಕತೀತನು. ಪರಬ್ರಹ್ಮದ ಭೇದಾದಿ ಭೇದದ ಪರತತ್ವ ಮೂಲವೆಯಾದ ಆದಿಗುರು ಘಟ್ಟಿವಾಳ ಕಪಿಲಸಿದ್ಧ ಮಲ್ಲಿನಾಥ. 15-53. ೧೨೧೬

ಇಂತು ಪ್ರಭುದೇವರು, ಚೆನ್ನಬಸವರಾಜದೇವರು, ಸಿದ್ಧರಾಮಯ್ಯದೇವರು, ಘಟ್ಟಿವಾಳಯ್ಯಗಳ ಸುತ್ತಿಸುತ್ತಂ ಇರಲು-ಆ ಘಟ್ಟಿವಾಳಯ್ಯಗಳು ಪ್ರಭುದೇವರ ಸ್ತೋತ್ರವಮಂ ಮಾಡಿದ ಪ್ರಸ್ತಾವದ ವಚನ:

ನೀರೊಳಗೆ ಕಿಚ್ಚೆದ್ದು ನೆಳಲ ಸುಟ್ಟಿತ್ತು. ನೆಳಲ ಸುಟ್ಟು ವಿಭೂತಿಯನಿಟ್ಟುಕೊಂಡರೆ ಭೂಮಿ ಸತ್ತಿತ್ತು. ಆಕಾಶ ಹೊತ್ತಿತ್ತು. ದೇವನ ದೇವತ್ವ ಕೆಟ್ಟಿತ್ತು. ದೇವಿಯ ಒಕತನ ಮುಱಿಯಿತ್ತು. ಹೇಳಬಾರದ ಠಾವಿನಲ್ಲಿ ಕಾಣಬಾರದ ಲಿಂಗ ಮೂರ್ತಿಗೊಂಡಿರೆ— ನೋಡಬಾರದ ಪೂಜೆಯಾಯಿತ್ತು. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಪ್ರಭುದೇವರ ನಿಲವ ಕಂಡು ಇಲ್ಲ ಇಲ್ಲಾ ಎನುತಿರ್ದೆನು. 15-54. ಮತ್ತಂ: ೧೨೧೭

ಯೋಗದ ಹೊಲಬ ಸಾಧಿಸಬಾರದು. ಯೋಗವೆಂಟಱ ಹೊಲಬಲ್ಲ. ಯೋಗ ಒಂಬತ್ತಱ ನಿಲವಲ್ಲ. ಯೋಗವಾಱಱ ಪರಿಯಲ್ಲ. ಧರೆಯ ಮೇಲಣ ಅಗ್ನಿ ಮುಗಿಲ ಮುಟ್ಟದೆ ಇಪ್ಪರೆ ಯೋಗ. ಜ್ಞಾನದ ಕಂಗಳ ಬೆಳಗು ಶಶಿಯ ಮುಟ್ಟದವೆಂದರೆ ಘನ ಮನವನೊಳಕೊಂಡುದು ಯೋಗ. ವನಿತೆಯರಱುವರನು ಪತಿಯೊಮ್ಮೆ ಕೂಡಿ [1]ಛಲ[1]ವಳಿದಿರಬಲ್ಲಡೆ ಅದು ಯೋಗ. ಘನಮಹಿಮ ಪ್ರಭುವಿನ ಸಮರಸ[2]ಯೋಗವ[2]ಕಂಡು, ಚಿಕ್ಕಯ್ಯ ಪ್ರಿಯಸಿದ್ಧಲಿಂಗ ಇಲ್ಲ ಇಲ್ಲಾ ಎನುತಿರ್ದೆನು. 15-55 ೧೨೧೮

ಇಂತು ಘಟ್ಟಿವಾಳಯ್ಯಗಳು ಪ್ರಭುದೇವರಂ ಸ್ತುತಿಯಿಸಿ ಆ ಪ್ರಭುದೇವರು ತಾವು ಬಸವರಾಜದೇವರು ಚೆನ್ನಬಸವರಾಜದೇವರು, ಸಿದ್ಧರಾಮಯ್ಯದೇವರು ಮಹಾನುಭಾವ ಸಂಗೋಷ್ಠಿಯೊಳಿರುತಿರ್ದು ಮತ್ತೊಂದಾನೊಂದು ದಿನದಲ್ಲಿ ಆ ಘಟ್ಟಿವಾಳಯ್ಯಗಳಿಗೆ ಲಿಂಗೈಕ್ಯ ಸಮನಿಸಿ ಆ ಕಲ್ಯಾಣಪಟ್ಟಣದ ಬೀದಿಯಲ್ಲಿ ಲಿಂಗೈಕ್ಯವಾಗಿರಲು—ಅಲ್ಲಿಗೆ ಬಸವರಾಜದೇವರು ಮುಖ್ಯವಾದ ಗಣಂಗಳು ಬಂದು ಇವರ ಭಾಷೆ ಬೀಸರವೋದುದಲಾ ಎಂದು ನೊಂದು ಸಮಾಧಿಕ್ರೀಯ ಮಾಡಬೇಕೆಂದು ಎಲ್ಲಾ ಗಣಂಗಳು ಸರ್ವಾಂಗವ ಮುಟ್ಟಿ ಎತ್ತಿಕೊಳ್ಳಲು, ಅವರ ಸರ್ವಾಂಗವು ಮುಟ್ಟದ ಮುನ್ನವೆ ಎಲ್ಲಾ ಶರಣರ ಹಸ್ತದಲ್ಲಿ ನಿರ್ವಯಲನೆಯ್ದಲು ಎಲ್ಲರು ಚೋದ್ಯಂಬಡುತ್ತಿರೆ, ಆ ಪ್ರಸ್ತಾವದಲ್ಲಿ ಬಸವರಾಜದೇವರು ಆ ಘಟ್ಟಿವಾಳಯ್ಯಗಳ ಸ್ತುತಿಸಿದ ವಚನ:

ಸತ್ತು ಹುಟ್ಟುವನಲ್ಲ, ಸಂದೇಹಿಸೂತಕಿಯಲ್ಲ. ಆಕಾರನಿರಾಕಾರನಲ್ಲ ನೋಡಯ್ಯ.

[1] (ಶಿ) ತಳು (ಗೂ). [2] (ಶಿ) ವ (ಗೂ).

ಕಾಯವಂಚಕನಲ್ಲ, ಜೀವವಂಚಕನಲ್ಲ—ನಿರಂತರಸಹಜ ನೋಡಯ್ಯ. ಶಂಕೆಯಿಲ್ಲದ ಮಹಾಮಹಿಮನು ಕೂಡಲಸಂಗನಶರಣನುಪಮಾತೀತನೋಡಯ್ಯ. 15-56. ೧೨೧೯

ಮತ್ತಂ ಪ್ರಭುದೇವರು ಆ ಘಟ್ಟಿವಾಳಯ್ಯಗಳ ಸ್ತುತಿಸಿದ ವಚನ :

ಅಶನಕ್ಕಂಜಿ ವೇಷವನೆ ಹೊತ್ತು, ದೇಶವ ತೊಳಲುವ [1]ವೇಷ[1] ಹಿರಿಯರ ಗಂಡ. ಕಾಲದ ಗಂಡ. ಕರ್ಮದ ಗಂಡ. [2]ಲಿಂಗವಿಡಿದು ಸಾವ ಹಿರಿಯರ ಗಂಡ.[2] ಗೊಹೇಶ್ವರ, ನಿಮ್ಮ ಶರಣ ಘಟ್ಟಿವಾಳ ಅಲ್ಲಮ[3]ನಂತಿಂತೆಂಬವರ ಗಂಡ[3]. 15-57. ೧೨೨೦

ಮತ್ತಂ ಆ ಪ್ರಸ್ತಾವದೊಳು ಹಾಡಿ ಹೊಗಳುವ ಪದಂಗಳು :

### ರಾಗ: ಬೌಳಿ

ದೇಹಗುಣಗಳಳಿದು ಲಿಂಗದೇಹಿಯಾದ ಶರಣನು
ಬಹಿರಂಗದ ಬಳಕೆ ಮಾಯಾಮೋಹವನ್ನು ಜಱಿದನು ‖ ಪಲ್ಲವ ‖

ಭಾವಬ್ರಹ್ಮವಾದ ಯತಿಗಿನ್ನಾವ ವೇಷವೇತಕೋ
ದೇಹಲಿಂಗವಾದ ಬಳಿಕಿನ್ನಾವ ಪದಗಳೇತಕೋ ‖ ೧ ‖

ಮಲವ ತೊಳೆಯಲಱಿಯ ಶರಣನಮಲ ಜಲದೆ ತೊಳೆವೆನೆಂಬೆಯೋ !
ಒಳಗೆ ಹೊಱಗೆ ಲಿಂಗವಿರಲು ತೊಳಲಿ ಬಳಲಲೇತಕೋ ‖ ೨ ‖

ಮುತ್ತು ರತ್ನ ಸಿತಕೆ ಘೃತಕೆ ಮತ್ತೆ ಪೂರ್ವ ಕ್ರೀಗಳುಂಟೆ
ನಿತ್ಯ ಮುಕ್ತ ಶರಣಗುಂಟೆ ಮತ್ತೆ ಪೂರ್ವ ಚರಿತವು ‖ ೩ ‖

ಬ್ರಹ್ಮ ವಿಷ್ಣು ರುದ್ರಪದದ ಪೆರ್ಮೆಗಳಿಗೆ ಎಣಿಸದಾ
ನಿರ್ಮಳದ ಲಿಂಗದಲ್ಲಿ ಸಂಬಂಧಿಸಿದ ಶರಣನು ‖ ೪ ‖

ಅಪ್ರತಿಮನಗಮ್ಯದಲ್ಲಿ ನಿಷ್ಪತಿಯನೆಯ್ದಿದ
ಅಪ್ರಮಾಣ ಗೊಹೇಶ್ವರನೊಳಿಪ್ಪಗಮ್ಯ ಶರಣನು ‖ ೫ ‖

ಪದಸಹವಚನ 62

ಆ ಪ್ರಸ್ತಾವದೊಳು ಚೆನ್ನಬಸವರಾಜದೇವರು ಆ ಘಟ್ಟಿವಾಳಯ್ಯಗಳ ಸ್ತೋತ್ರಮಂ ಮಾಡಿದ ಪದಂಗಳು :

---

[1] (ಉ) × (ಗೂ). [2] (ಗೂ) × (ಉ). [3] ಇದು ಚಿಕ್ಕದೇವರಾಜಒಡೆಯರ "ಅಂತೆಂಬರ ಗಂಡ" ಎಂಬ ಬಿರಿದನ್ನು ನೆನಪಿಗೆ ತರುವುದು.

ರಾಗ : ದೇಶಿ

ಭಾವಿಸಿ ನಡೆದಿಹೆನೆಂದಡೆ ತಾನಾಭಾವದೊಳಗೆ ತನ್ನೊಳು ಸದ್ಭಾವವು
ಭಾವ ಭೇದವಿಲ್ಲದ ಶರಣನ ಸತ್‌ಪಥವ ನಾನೇನೆಂಬೆನು || ಪಲ್ಲವ ||

ಮೂರುಗ ಕ್ರೀಗಳೊಳಗೆ ನಿಷ್ಪತಿಯಾಗಿ ದೇವಕ್ರೀವಿಡಿದ ಕಾರಣ
ಭಿನ್ನಭಾವವಳಿದು ಶಿವಾಚಾರವೆ ಜೀವವಾಗಿ ಲಿಂಗದೊಳು ಬೆರಸಬಲ್ಲಡೆ
ಯೋಗಿ || ೧ ||

ತದುಗತವಾಗಿ ನಿರಂತರಂ ನಿಜಲಿಂಗದಿ ಪರಮಾನಂದವನೆಯ್ದಿ
ಸದಮಲನಿರುಪಾಧಿಕನಾಗಿಪ್ಪ ಚರಿತದಾಚಾರವನೇನೆಂಬೆನು || ೨ ||

ಧ್ಯಾನವೆ ನಿಶ್ಚಲವಾಗಿಪ್ಪ ಶರಣನ ಕಾಮಿತಭಾವಿತ ಕ್ರೀಗಳು
ತಾಮುನ್ನವೆ ಲಿಂಗದೊಳವಿರಳವಾಗಿ ಸೀಮೆಯ ನೀಕರಿಸಿರ್ಪನು || ೩ ||

ಪ್ರಾಣನ ಹಸ್ತದೊಳಗಣ ಲಿಂಗ ಲಿಂಗಭಾವ ಹಸ್ತದೊಳಗಣ ಪ್ರಾಣ
ಪ್ರಾಣಭಾವವೆನ್ನದಿಪ್ಪ ಶರಣನ ಆಚಾರ ವಿಚಾರವನೇನೆಂಬೆನು || ೪ ||

ಒಡಲಳಿದು ಒಡಲುವಿಡಿದಾ ಕ್ರೀಗಳ ಗಡಣವಡಗಿ
ನಿರ್ದೇಹದೊಳೆಂಬ ಭಾವವೆಡೆಗೊಂಡ ನಿಷ್ಠೆಯಾಚರಣೆ ಕೂಡಲ ಚೆನ್ನ
ಸಂಗನೊಳು ಸತ್ಪಥವು || ೫ ||

ಪದಸಹವಚನ 67 ಕ್ಕಂ ಇತಿಶ್ರೀ.

# ಅನುಬಂಧ ೬

## ಅಕಾರಾದಿ


ಅಕ್ಕತಂಗಿಯರೈವರು ೬೧೬
ಅಂಗಅನಂಗ ೧೧೧
ಅಂಗಉಳ್ಳನ್ನಬರ ೧೦೩೯
ಅಂಗಕ್ರಿಯೆಯೇ ೧೦೪೫
ಅಂಗಕ್ರೀಯ ೧೧೪೪
ಅಂಗಕ್ಕೆ ಬಡತನ ೧೦೭೬
ಅಂಗಜಂಗುಳಿ ೭೧೭
ಅಂಗದ ಕಳೆ ಲಿಂಗದಲ್ಲಿ
ಅಜಿತಬಳಿಕ ೧೦೭
ಅಂಗದ ಕಳೆ ಲಿಂಗದಲ್ಲಿ
ಲೀಯವಾಗದು ೨೯೨
ಅಂಗದ ಕೈಯಲ್ಲಿ ೯೨೦
ಅಂಗದ ಕೊನೆಯ ೨೫
ಅಂಗದಂತೆ ಲಿಂಗ ೨೨೬
ಅಂಗದ ಪ್ರಕೃತಿಯ ೬೭೧
ಅಂಗದ ಮೇಲಣ ಲಿಂಗವು ೮೬೮
ಅಂಗದ ಮೇಲಣ ಲಿಂಗ ಹಿಂಗಿತ್ತೆಂದಾತ್ಮ
೧೨೧೪
ಅಂಗದ ಮೇಲಣ ಲಿಂಗ ಹಿಂಗಿದಾತನ ೧೨೧೩
ಅಂಗದ ಮೇಲೆ ಆಚಾರ ೭೯೫
ಅಂಗದ ಮೇಲೆ ಲಿಂಗ ಉಳ್ಳುದೆಲ್ಲವೂ ೪೧೦
ಅಂಗದ ಮೇಲೆ ಲಿಂಗ ಸ್ವಾಯತವಾಗಿ ೪೬೧
ಅಂಗದಲಳವಟ್ಟ ಲಿಂಗಕ್ಕೆ ೭೫೫
ಅಂಗದಲಳವಟ್ಟ ಲಿಂಗೈಕ್ಯನ ೪೬೫
ಅಂಗದಲ್ಲಿ ಅಪ್ಪಿದೆ ೧೬೯
ಅಂಗದಲ್ಲಿ ಅಳವಟ್ಟಪ್ಪ ೧೦೪೯
ಅಂಗದಲ್ಲಿ ಆಚಾರವ ೨೩೯
ಅಂಗದ ಲಿಂಗವೆ ೧೦೫೭
ಅಂಗದಲ್ಲಿ ಲಿಂಗವಜಿತು ೭೯೮
ಅಂಗದಲ್ಲಿ ಲಿಂಗವಿಲ್ಲದನ್ನಕ್ಕರ ೫೯೦
ಅಂಗದಲ್ಲಿ ಲಿಂಗಸಂಗ ೬೩೨
ಅಂಗದೊಳಗೆ ಅಂಗವಾಗೆ ೬೩೬
ಅಂಗಯ್ಯ ಒಳಗೊಂದು ೮೨
ಅಂಗಯ್ಯ ನೋಟದೊಳು ೫೯೮
ಅಂಗಯ್ಯ ಲಿಂಗ ಕಂಗಳ ೫೭೨
ಅಂಗ ಲಿಂಗಕ್ಕೆ ಗೂಡಾಯಿತ್ತು ೯೫೨
ಅಂಗ ಲಿಂಗಕ್ಕೆ ಭಾಜನವೆಂಬರು ೭೮೨
ಅಂಗಲಿಂಗ ಪ್ರಾಣಲಿಂಗ ೫೯೭
ಅಗ್ಘವಣಿಯುವಸರ ೭೪೯
ಅಂಗವನಾಚಾರಕ್ಕರ್ಪಿಸಿ ೩೯೦
ಅಂಗವ ಬಂಧಿಸಿದಲ್ಲಿ ೧೨೦೧
ಅಂಗವಜಿತ ೧೦೭೩
ಅಂಗವಿಕಾರವಳಿದ ೮೫೦
ಅಂಗವಿಡಿದು ೪೯೧
ಅಂಗವಿಲ್ಲೆಂಬಲ್ಲಿಯೇ ೫೯೨
ಅಂಗವೆಂಬ ೫೦೭
ಅಂಗವೇ ೫೪೨
ಅಂಗಸಂಗದಲ್ಲಿ ೬೩೧
ಅಂಗಸಂಸಾರ ಲಿಂಗದಲ್ಲಿ ೪೫೭
ಅಂಗಸಂಸಾರವಿರಹದೊಳು ೫೧೫
ಅಂಗಾಲ ಕಣ್ಣವ ೬೦೬
ಅಂಗಾಲ ಕೋಪವ ೧೫೦
ಅಂಗೈ ೬೮೨
ಅಘಟಿತ ೫೮೬
ಅಜ್ಞಾನ ೪೩೧
ಅತಿಮಥನ ೭೧೮
ಅರ್ಚನೆ ೧೧೧೯
ಅಚಲಸಿಂಹಾಸನ ೬೫೯
ಅಜಕಲ್ಪಕೋಟಿ ೬೪೧
ಅಂಜದಿರಿ ೨೪೨
ಅಂಜಬೇಡ ೭೨೪
ಅಂಡಜಮುಗ್ಧೆಯ ೧೧೯೬
ಅಡವಿಯೊಳಗೆ ಕಳ್ಳರು ೧೫
ಅಡವಿಯೊಳಗೆ ನೀರಡಸಿ ೬೮೬
ಅಣುವಿನೊಳಗೆ ೧೯೯
ಅಂತರಂಗದಲಡಗಿತ್ತೆಂದರೆ ೪೨೭
ಅಂತರಂಗದಲ್ಲಿ ನಿಮ್ಮ ೨೧೬
ಅಂತರಂಗದಲ್ಲಿ ಪ್ರಭು ೮೪೪

| | | | |
|---|---|---|---|
| ಅಂತರಂಗ ಬಹಿರಂಗ | ೯೩೨ | ಅಯ್ಯ ನಾನಥವೆ | ೯೯೬ |
| ಅರ್ತಿಗೆ ಕಟ್ಟಿದ | ೧೨೦೦ | ಅಯ್ಯ ನಿಮ್ಮ ಕಂಡ | ೧೭೫ |
| ಅತಿಶಯವನತಿಗಳೆದು | ೮೭೦ | ಅಯ್ಯ ನಿಮ್ಮ ಕಂಡು | ೧೫೨ |
| ಅರ್ಥಪ್ರಾಣಾಭಿಮಾನ | ೧೧೨೯ | ಅಯ್ಯ ನಿಮ್ಮ ಕರಸ್ಥಳದ ಘನ | ೨೩೮ |
| ಅಂದಂದಿನ ಮಾತ | ೪೮೭ | ಅಯ್ಯ ನಿಮ್ಮ ಕರಸ್ಥಳದ ಘನವ | ೨೩೬ |
| ಅಂದು ಹೋಗಿ | ೧೦೧೪ | ಅಯ್ಯ ನಿಮ್ಮ ದೇವರೆಂದು | ೨೨೮ |
| ಅದೃಷ್ಟ ಕರಣದ | ೭೯೩ | ಅಯ್ಯ ನಿಮ್ಮ ಮಹಾನುಭಾವಿಗಳನಗಲಿ | ೬೫೧ |
| ಅದೇತಕಯ್ಯ | ೧೧೩೭ | ಅಯ್ಯ ನಿಮ್ಮ ಮಹಾನುಭಾವಿಗಳ ಸಂಗ | ೪೨೨ |
| ಅದ್ವೈತವನಂತರಂಗದಲ್ಲಿ | ೭೨೬ | ಅಯ್ಯ ನಿಮ್ಮ ಮೂರ್ತಿಯ | ೧೩೨ |
| ಅದ್ವೈತವ ನೆಲೆಗೊಳಿಸಿ | ೧೦೨ | ಅಯ್ಯ ನಿಮ್ಮ ಮುಟ್ಟಿದ | ೪೩೮ |
| ಅದ್ವೈತವೆಂಬ | ೪೮೨ | ಅಯ್ಯ ನಿಮ್ಮ ಶರಣ ಬಸವಣ್ಣ | ೬೧೪ |
| ಅಂಧಕಂಗೆ | ೧೦೮೮ | ಅಯ್ಯ ನಿಮ್ಮ ಶರಣರ ನಿಲವ | ೩೯೯ |
| ಅಂಧಕನ | ೮೦ | ಅಯ್ಯ ನಿಮ್ಮ ಶರಣರಲ್ಲದವರ | ೨೮೧ |
| ಅನಂತದೇವರೆಲ್ಲರೂ | ೧೫೬ | ಅಯ್ಯ ನಿಮ್ಮ ಶರಣರ ಸಂಗ | ೭೨೧ |
| ಅನ್ಯರಜವ | ೫೭ | ಅಯ್ಯ ನಿಮ್ಮ ಶರಣರು ಪರಮ | ೩೯೮ |
| ಅನ್ನವನಿಕ್ಕಿ | ೧೨೧ | ಅಯ್ಯ ನಿಮ್ಮ ಶರಣರು ಬಂದೆನ್ನ | ೩೮೫ |
| ಅನಾದಿಯೆಂಬ | ೨೩೩ | ಅಯ್ಯ ನಿಮ್ಮ ಶರಣರು ಮೆಟ್ಟಿದ | ೬೧೮ |
| ಅನಾಯಾಸ | ೫೦೧ | ಅಯ್ಯ ನಿಮ್ಮ ಶರಣರೆನ್ನ | ೫೩೫ |
| ಅನಾಹತ | ೭೬೦ | ಅಯ್ಯ ನಿಮ್ಮ ಸಜ್ಜನ | ೬೨೦ |
| ಅನಿಮಿಷಂಗೆ | ೫೧೬ | ಅಯ್ಯ ನಿಮ್ಮ ಸರ | ೨೩೨ |
| ಅನಿಮಿಷನಾದ | ೮೭೮ | ಅಯ್ಯ ನೀವೆನ್ನ | ೭೩೯ |
| ಅನುಭಾವವಿಲ್ಲದ | ೯೦೪ | ಅಯ್ಯ ಮನದ | ೨೧೦ |
| ಅನುಭಾವಿಗಳ | ೫೩೪ | ಅಯ್ಯ ಮೂಱು | ೬೧೩ |
| ಅನುವನಱಿಯದೆ | ೮೯೬ | ಅಯ್ಯ ಸಾತ್ವಿಕ | ೭೧೬ |
| ಅರ್ಪಿತ-ಅನರ್ಪಿತ | ೬೩ | ಅಯ್ಯ ಹಿಂದೆ | ೯೮೬ |
| ಅರ್ಪಿತವ | ೮೫೩ | ಅಯಿದು | ೧೦೭೯ |
| ಅಪ್ರತಿಮ | ೧೨೨೫ | ಅರಗಿನ ತೇಜಿ | ೧೧೧೧ |
| ಅಪ್ಪುದ | ೧೮೫ | ಅರಗಿನ ಪುತ್ಥಳಿ | ೨೯ |
| ಅಪ್ಪುವ | ೯೨೪ | ಅರಳು | ೭೧೫ |
| ಅಂಬರದಲಾಡುವ | ೮೮ | ಅರಸು ಮುನಿದರೆ | ೭೨೩ |
| ಅಂಬು | ೧೨೦೭ | ಅರಸೂ ವಿಚಾರವೂ | ೯೭೪ |
| ಅಭ್ಯಾಸದ | ೨೦೫ | ಅರಿದರಿದು | ೭೬೩ |
| ಅಯ್ಯಅಯ್ಯ | ೧೯೦ | ಅಱಲುಗೊಂಡ | ೧೫೧ |
| ಅಯ್ಯ ಎನ್ನ | ೫೮೩ | ಅಱಸಿ | ೬೧೯ |
| ಅಯ್ಯ ಏಳೇಳು | ೭೩೭ | ಅಱಸುವಂಗೆ | ೬೯೭ |
| ಅಯ್ಯ ಕಬ್ಬುನ | ೨೩೦ | ಅಱಸುವ ಬಳ್ಳಿ ಕಾಲ ತೊಡಕಿದಂತೆ | ೯೧೨ |
| ಅಯ್ಯ ಕೊಟ್ಟ | ೯೧೬ | ಅಱಸುವ ಬಳ್ಳಿ ಕಾಲ ಸುತ್ತಿದಂತೆ | ೩೩ |
| ಅಯ್ಯ ಘನ | ೬೦೪ | ಅಱಿದಲ್ಲದೆ | ೫೫೨ |
| ಅಯ್ಯ ತತ್ವ | ೪೭೯ | ಅಱಿದ ಶರಣಂಗೆ | ೮೦೫ |

ಅಱಿದಿಹೆ ೧೧೨೭
ಅಱಿದು ೧೧೨೫
ಅಱಿದೆನೆಂಬುದು ೨೨೯
ಅಱಿಯದೆ ೮೮೧
ಅಱಿಯ ಬಾರದ ೧೪೨
ಅಱಿಯಲಿಲ್ಲದ ೯೩೧
ಅಱಿಯಲಿಲ್ಲದ ಅಱಿವು ಅವಗ್ರಹಿಸಿತ್ತಾಗಿ ೯೩೧
ಅಱಿಯಲಿಲ್ಲದ ಅಱಿವುಮಱೆಯಲಿಲ್ಲದ ೯೩೬
ಅಱಿವನೊಕ್ಕರ ೯೩೦
ಅಱಿವನಱಿದು ೨೨೧
ಅಱಿವನಱಿದೆನೆಂದು ೧೦೨೦
ಅಱಿವನಱಿದೆನೆಂಬುದೂ ೧೦೧
ಅಱಿವನಾಱಿಡಿ ೫೫೦
ಅಱಿವ ಬಲ್ಲೆ ೧೧೮೧
ಅಱಿವಱಿತು ಕುಱುಹುಗೆಟ್ಟು ೮೭
ಅಱಿವಱಿತು ಕುಱುಹು ನಷ್ಟವಾದ ೧೨೧೫
ಅಱಿವಱಿತು ಬೆಱಗು ೧೧೧೩
ಅಱಿವಿಂದಲಱಿವೆ ೯೦೬
ಅಱಿವಿಂದಲಾದ ೯೩೭
ಅಱಿವನಣಲೊಳಗಿಕ್ಕಿ ೭೮
ಅಱಿವಿನ ತೃಪ್ತಿಗೆ ೫೩೨
ಅಱಿವಿನಾಚರಣೆಯ ೪೬೮
ಅಱಿವಿನಾಶ್ರಯ ೯೩೪
ಅಱಿವಿನೊಳಗಣಕುಱುಹು ೯೪೫
ಅಱಿವಿನೊಳಗಳಮಱಿಹು ೯೦೧
ಅಱಿವಿಲ್ಲದಕಾಯ ೮೦೯
ಅಱಿವು ಉದಯವಾದಲ್ಲದೆ ೫೫೧
ಅಱಿವುಕುಱುಹನೆ (ಪದ) ೧೦೦೪
ಅಱಿವುಗೆಟ್ಟು ೧೦೯
ಅಱಿವುವಿಡಿದು ೪೩೨
ಅಱಿವೆನೆಂದಡೆ ೯೦೨
ಅಲ್ಲಾ ಎನ್ನಬಾರದು ೧೧೦೦
ಅಳವಡಿಸಿದ ೭೬೭
ಅಳಿಯ ಬಳಿಯ ಸುಳಿವನಲ್ಲ ೯೨೨
ಅಳಿವನಲ್ಲ ಉಳಿವನಲ್ಲ ಘನಕ್ಕೆ ೯೧
ಅಳಿವನಲ್ಲ ಉಳಿವನಲ್ಲ ಪ್ರಳಯ ೬೩೫
ಅವಧಿಯುಳಿಯಿತ್ತು ೯೬೬, ೧೧೦೯
ಅವನಾದ ೧೪೭
ಅವಳ ನೋಟ ೩೧
ಅವಾರಿ ೧೦೯೮
ಅಶನಕ್ಕಂಜಿ ೧೨೨೦
ಅಷ್ಟತನುವಿನ ಘಟ್ಟಯು ೫೭೧
ಅಷ್ಟತನುವಿನ ನಿಷ್ಠಾಪರವ ೯೭೧
ಅಷ್ಟತನುವಿನಲ್ಲಿ ೮೭೫
ಅಷ್ಟದಳಕಮಲದ ೬೭೦
ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ
ಅರಸಱಿಯದ ೩೩೦
ಅಷ್ಟವಿಧಾರ್ಚನೆಷೋಡಶೋಪಚಾರಂಗಳ
ನಾನು ೬೭
ಅಹುದಹುದು ಇಂತಿರಬೇಡಾ ೫೮೫
ಅಹುದಹುದು ಕಿಂಕುರ್ವಾಣ ೭೪೮
ಅಹುದಹುದು ಗೆದಲು ೧೦೭೧
ಅಹುದಹುದು ಬಸವಣ್ಣ ೮೧೦
ಅಹುದಹುದು ಭಕ್ತಿ ೧೮೮
ಅಹುದಹುದು ಮತ್ತೇನು ೬೪೨
ಅಹುದಹುದು ಲಿಂಗಕ್ಕೆ ೫೯೫
ಅಹುದಹುದು ಶಿವಶರಣರ ೧೧೪

ಆಕಾರನಿರಾಕಾರವೆನುತಿಹರೆಲ್ಲರೂ ೫೬೬
ಆಕಾರನಿರಾಕಾರವೆಂಬೆರಡೂ ೮೦೮
ಆಕಾರನಿರಾಕಾರಸಾಕಾರ ೩೭೭
ಆಕಾರವಿಲ್ಲದ ೭೦೭
ಆಕಾಶದಿಂದತ್ತ ೫೨೬
ಆಕಾಶವನಡರುವಂಗೆ ೫೯೪
ಆಕಾಶವಮೀಱುವ ೧೧೦೨
ಆಚಾರದನುವ ೮೭೭
ಆಚಾರದುಂದುಮ್ಮಿ ೪೬೭
ಆಚಾರವಂಗಲೇಪವಾಗಿ ೪೪೯
ಆಚಾರವಂಗಸಂಬಂಧ ೪೯೬
ಆಚಾರವಱಿಯದೆ ೮೦೩
ಆಚಾರವೆಂಬುದು ೪೯೩
ಆಚಾರವೆಂಬುದು ಅಗೋಚರ ನೋಡಯ್ಯ
ಆರಿಗೂ ಅಸಾಧ್ಯ ೯೯೯
ಆಚಾರವೆಂಬುದು ಅಗೋಚರ ನೋಡಯ್ಯ
ಮಾಡಿದಲ್ಲದೆ ಇಲ್ಲ ೪೯೩
ಆಚಾರವೆ ಲಿಂಗ ೧೦೬೦
ಆಡಂಬರದೊಳಗಾಡಂಬರ ೧೯
ಆಡಿ ಕಾಲು ದಣಿಯವು ೭೧೪

ಅಣವಮಲ ೪೩
ಆತ್ಮತೇಜವ ೧೧೧೮
ಆದಿಆಧಾರವಿಲ್ಲದ ೨೭೩
ಆದಿಅನಾದಿಗೆ ೪೭೬
ಆದಿಅನಾದಿಯಲ್ಲಿ ೫೬೫
ಆದಿಅನಾದಿಯಿಂದತ್ತತ್ತ ೨೪೩
ಆದಿಅನಾದಿಯೆಂಬೆರಡಱ ೪೭೪
ಆದಿಗುರುಸ್ಥಲ ೪೫೩
ಆದಿಜಂಗಮ ೪೪೩
ಆದಿಬಸವಣ್ಣನು ೨೫೪, ೪೮೮
ಆದಿಭಕ್ತ ೪೪೨
ಆದಿಮಧ್ಯಾಂತವ ೧೨೧೬
ಆದಿಯ ಕಂಡೆ ೫೭೮
ಆದಿಯ ತೋಱದೆ ೪೮೩
ಆದಿಯಸಂಗಮುಖದಲ್ಲಿ ೩೮೪
ಆದಿಯನಱಿಹಿದ ೩೭೪
ಆದಿಯ ಲಿಂಗ ನಿಂನ್ನಿಂದೆನಗಾಯಿತ್ತು ೪೪೧
ಆದಿಯ ಲಿಂಗವ ತಂದಾತ ೭೭೯
ಆದಿಯ ಲಿಂಗವ ತೋಱದ ೪೩೫
ಆದಿಯ ಲಿಂಗವ ಮೇದಿನಿಗೆ ೨೮೦
ಆದಿಯಲ್ಲಿ ಗುರುಬೀಜ ೧೯೨
ಆದಿಯಲ್ಲಿ ನಿಮ್ಮಿಂದ ೧೯೧
ಆದಿಯಲ್ಲಿ ನೀನೇ ೧೦೫೧
ಆದಿಯಲ್ಲಿ ಬಂದುದಲ್ಲ ೪೭೫
ಆದಿಯಲ್ಲಿ ಬಸವಣ್ಣ ೮೨೭
ಆದಿಯಲ್ಲಿ ಸಾಧ್ಯ ೯೦೮
ಆದಿಯಲ್ಲಿ ಹುಟ್ಟಿತಲ್ಲ ೪೦೧
ಆದಿಯಾಧಾರಮಂ ೮೨೪
ಆದಿಯಾಧಾರವಿಲ್ಲ ೩
ಆದಿಯಿಂದತ್ತತ್ತ ನೀನಯ್ಯ ೬೯೨
ಆದಿಯಿಂದತ್ತತ್ತಲೆನಗೆ ೪೧
ಆದಿಲಿಂಗ ೨೪೪
ಆದಿವಿಡಿದು ೮೩೯
ಆದಿಶಕ್ತಿ ೬೩೯
ಆನಿಕಲ್ಲ ೫೬೯
ಆನುನಿಮ್ಮಬಂಟರ ೯೭೬
ಆನುನಿಮ್ಮಲ್ಲಿ ೭೩೩
ಆನು ಮಾಡಿದ ೯೭೭
ಆನೆತ್ತ ಬಲ್ಲೆ ೩೫೨
ಆನೆಂಬುದಿಲ್ಲ ನೀನೆಂಬುದಿಲ್ಲ ೯೪೧
ಆನೆಂಬುದಿಲ್ಲಯ್ಯ ೫೦೦
ಆಯತಲಿಂಗದಲ್ಲಿ ೪೯೨
ಆಯತಲಿಂಗವಿಡಿದು ೨೩೭
ಆಯತವಿಲ್ಲದ ೪೭೭
ಆಯತಸ್ವಾಯತ ೪೯೪
ಆಯಿತ್ತು ಬಸವ ೪೩೭
ಆಯಿತ್ತೆ ಉದಯಮಾಸ ೯
ಆರತವಡಗಿತ್ತೆನ್ನ ೯೨೬
ಆರಾಧಿಸಿ ೩೬೩
ಆರಾರ ನೇಮಕ್ಕೆ ೧೧೦೪
ಆರಾರ ಭಾವ ೧೦೪೪
ಆರಿಗೆ ಮಾಡಬಹುದಯ್ಯ ೮೧೯
ಆರೆಂದು ೮೩
ಆಱುಜನ್ಮದವ ೮೭೨
ಆಱುದರುಶನ ೫೨೮
ಆಲೀಯವಾಗಿ ೫೫೯
ಆವಕಾಯಕ ೧೦೧೬
ಆವಬೀಜವು ೧೦೯೩
ಆವಾವ (ಪದ) ೪೧೩
ಆಶೆಗಾಗಿ ೧೧೯೩
ಆಶೆಯಾಮಿಷ ೮೮೫
ಆಶೆಯೆಂಬ ೮೦೨
ಆಶೆಯೆಂಬುದು ೧೦೭೫
ಆಹಾ ಮನವೇ ೪೫

ಇದ್ದಪರಿ ೬೯೬
ಇಂದ್ರವ್ಯಾಸ ೬೦೨
ಇದ್ದಹೆನೆಂಬ ೧೦೮೭
ಇದಿರ ೧೦೩೪
ಇನ್ನು ಕೇಳಿ ೧೧೨೬
ಇನ್ನೇವೆ ೩೦೧
ಇರುಳು ೫೨೭
ಇಱುವ ೧೨೦೬
ಇಱುವುದು ೧೧೮೦
ಇಲ್ಲದಲ್ಲಿ ಇಲ್ಲ ೩೦
ಇಲ್ಲದಲ್ಲಿ ನೋಟ ೧೧೫೨
ಇಲ್ಲದ ಶಂಕೆಯ ೯೫
ಇಲ್ಲದ ಸಂಸಾರ ೫೦೯

ಇಷ್ಟಬಾಹ್ಯವಾಯಿತ್ತೆಂದು ೧೧೯೦
ಇಷ್ಟಲಿಂಗ ಪ್ರಾಣಲಿಂಗ ೨೩೫
ಇಷ್ಟಲಿಂಗವ ೧೧೯೮
ಇಷ್ಟವೆಂಬುದು ೧೦೨೫
ಇಹಲೋಕ ಪರಲೋಕ ೬೬೯

ಉಟ್ಟ ಸೀರೆಯ ೧೦೦೮
ಉಂಡಲಿಗೆ ೭೭೦
ಉತ್ತರಕ್ಕೆ ೧೨೧೦
ಉತ್ಪತ್ತಿ ೧೮೩
ಉದಕಮೂರುತಿ ೬೫
ಉಪಪಾತಕ ೨೭೭
ಉದಮುದದ ೬೨೨
ಉಪಕಾರ ೯೯೦
ಉಪಮೆ ಅನುಪಮೆ ೨೦೬
ಉಪಮೆ ಉಪಮಿಸ ೯೬೪
ಉಪ್ಪರಗುಡಿ ೬೭೨
ಉಪಾಧಿಕೆ ಮನವು ೬೯
ಉಭಯದೃಷ್ಟಿ ೧೧೦೬
ಉರಿಯ ಸೀರೆ ೮೫೬
ಉರಿಯೊಳಗಣ ೯೮೭
ಉಳ್ಳವರ ಹಗೆವ ೭೪೬

ಊರ ಮಧ್ಯದ ೨೨
ಊರು ಕೆಟ್ಟು ೧೧೩೩

ಎಕ್ಕೆವಿಂಡು ೧೩೦
ಎಡದ ಕಾಲ ೮೧೨
ಎಡದ ಕೈಯಲಿ ೬೭೮
ಎಡದ ಪಾದದ ೮೧೭
ಎಣಿಕೆಗೆ ೭೬೯
ಎತ್ತಣ ಮಾಮರ ೫೧
ಎಂತಯ್ಯ ೫೪೩
ಎತ್ತಿದ ೮೨೮
ಎತ್ತೆತ್ತ ೯೧೧
ಎನ್ನ ಅಂಗದ ೧೦೬೧
ಎನ್ನ ಅಂತರಂಗ ೬೦೯
ಎನ್ನ ಅನುಭಾವದ ೯೭೦
ಎನ್ನ ಅಱಿವಿನ ೪೫೯
ಎನ್ನ ಅಱಿವು ೯೫೬
ಎನ್ನ ಅವಗುಣವ ೩೬೨
ಎನ್ನ ಅಷ್ಟವಿಧಾರ್ಚನೆ ಶುದ್ಧವಾಯಿತ್ತಯ್ಯ ೫೫೭
ಎನ್ನ ಅಷ್ಟವಿಧಾರ್ಚನೆ
ಷೋಡಶೋಪಚಾರ ೯೫೩
ಎನ್ನ ಆಚಾರ ೯೪೯
ಎನ್ನ ಆದಿಯ ೫೪೪
ಎನ್ನ ಆಯತ ೯೪೬
ಎನ್ನ ಒಳಗನೊತ್ತಿ ೧೭೪
ಎನ್ನ ಕರಸ್ಥಲದ ಲಿಂಗವನು ೯೧೪
ಎನ್ನ ಕರಸ್ಥಲದೊಳಗೊಂದು ೯೧೩
ಎನ್ನ ಕಷ್ಟಕುಲದ ೯೫೮
ಎನ್ನ ಕಾಯದ ಕತ್ತಲೆಯ ೫೬೧
ಎನ್ನ ಕಾಯದ ಕತ್ತಲೆ ಹಿಂಗಿತ್ತು ೭೭೬
ಎನ್ನ ಕಾಯದ ಕರಸ್ಥಲದಲ್ಲಿ
ಅಲ್ಲಮಪ್ರಭು ೬೧೦
ಎನ್ನ ಕಾಯದ ಕರಸ್ಥಲದಲ್ಲಿ
ಪ್ರಭುದೇವರ ೮೭೬
ಎನ್ನ ಕಾಯದ ೮೯೨
ಎನ್ನ ಕಾಯವ ಬಸವಣ್ಣ ೬೧೧
ಎನ್ನ ಕಾಯವ ಶುದ್ಧವ ೫೭೪
ಎನ್ನ ಕಾಯವೆಂಬ ೯೫೧
ಎನ್ನ ಕುಲಸೂತಕವ ೯೫೫
ಎನ್ನ ಕೋಪ ೧೬೬
ಎನ್ನ ಗಂಡ ೭೦೮
ಎನ್ನ ಗತಿಮತಿ ೩೬೪
ಎನಗಿಲ್ಲದ ೪೮೧
ಎನಗೆ ನೀ ೧೧೩೫
ಎನಗೆ ಹಳ್ಳದ ೧೨೦೨
ಎನ್ನ ಚಿತ್ತ ಅತ್ತಿಯಹಣ್ಣು ೩೫೦
ಎನ್ನ ಚಿತ್ತಕ್ಕೆ ೧೧೩೦
ಎನ್ನ ತನು ಕರಗಿ ೧೭೮
ಎನ್ನ ತನು ಚೆನ್ನ ೯೫೪
ಎನ್ನ ತನು ನಿಮ್ಮ ೯೪೮
ಎನ್ನ ತನುಮನ ೪೨೮
ಎನ್ನ ತನುವಿಂಗೆ ೩೫೪
ಎನ್ನ ತನುವಿಡಿದವರ ೩೦೮
ಎನ್ನ ತಪ್ಪು ೩೩೪
ಎನ್ನಂತರಂಗದೊಳಗೆ ೪೪೦

ಎನ್ನಂತರಂಗ ನೀವಯ್ಯ ೮೧೮
ಎನ್ನನಾಗಳೆ ೧೭೦
ಎನ್ನ ನುಡಿ ೩೬೦
ಎನ್ನ ಭಕ್ತಿ ಎಲವದ ೮೧೫
ಎನ್ನ ಭಕ್ತಿ ನಿಮ್ಮ ೬೩೮
ಎನ್ನ ಭರಭಾರ ೧೭೬
ಎನ್ನ ಭವದ ೮೮೦
ಎನ್ನ ಮನದ ೪೮
ಎನ್ನ ಮನ ಬಸವಣ್ಣ ೬೦೮
ಎನ್ನ ಮನ ಮತ್ತೊಂದಕ್ಕೆ ೨೨೨
ಎನ್ನ ಮನವು ನಿಮ್ಮ ೭೦೯
ಎನ್ನವರೆನ್ನ ೩೨೫
ಎನ್ನ ಶಿರ ೩೧೫
ಎನ್ನ ಸತ್ಕ್ರಿಯೆ ೧೦೫೬
ಎನ್ನ ಸಂಸಾರ ಸೂತಕವ ೫೧೧
ಎನ್ನ ಹೊಗಳಲಿಕೆ ೭೭೭
ಎನಿಸು ಕಾಲ ಕಲ್ಲು ೩೨೯
ಎಂಬತ್ತು ನಾಲ್ಕು ಲಕ್ಷ ೭೫೧
ಎಮ್ಮ ನಲ್ಲ ೧೮೯
ಎಮ್ಮವರಿಗೆ ೯೭೩
ಎರಡು ಕಣ್ಣುಳ್ಳಡೆ ೧೩೮
ಎಲ್ಲಾ ಭಕ್ತಿಯ ೫೪೮
ಎಲ್ಲಾ ವ್ಯಾವರ್ಣನೆಗಳೂ ೫೬೪
ಎಲೆ ಅಯ್ಯ ಗಾರುಡವ ೬೧೫
ಎಲೆ ಎಲೆ ಅಯ್ಯ ೬೪೮
ಎಲೆ ಕಲಿದೇವ ೫೭೯
ಎಲೆಯಯ್ಯ ಎನ್ನ ೧೫೩
ಎಲೆಯಯ್ಯ ನಿಮ್ಮ ನಚ್ಚಿನ ೬೧೨
ಎಲೆಯಯ್ಯ ನಿಮ್ಮ ಬೆಳಗಿನ ೧೯೩
ಎಲೆಯಯ್ಯ ನಿಮ್ಮವರ ೧೨೯
ಎಲೆಯಿಲ್ಲದ ವೃಕ್ಷ ೧೨೦೯
ಎಳ್ಳಿಲ್ಲದ ಗಾಣವ ೩೪೪
ಎಳೆಯ ಮಾಣಿಕದಂತೆ ೫೨೫

ಏಕಂ ನೀನಾಗಿ (ಹಾಡು) ೯೮೮
ಏಕಮೇವ ೪೧೭
ಏನೆಂಬೆನೇನೆಂಬೆ ಒಂದೆರಡಾಗದುದ ೯೨೭
ಏನೆಂಬೆನೇನೆಂಬೆ ೯೩೮
ಏಳುತಾಳದ ಮೇಲೆ ೬೬೫

ಇದಿಂದ್ರಿಯವ ೧೦೪೧

ಒಡಲಳಿದು ೧೨೩೦
ಒಡಲಿಲ್ಲದ ೬೪೫
ಒಡೆದ ಮಡಕೆಗೆ ೧೧೮೭
ಒತ್ತಿ ಹೊಸೆದ ೮೪೬
ಒಂದ ಮಾಡಹೋದರೆ ೫೮೨
ಒಂದ ಮಾಡಹೋದಲ್ಲಿ ೫೧೪
ಒಂದಱೊಂದಱ ೪೫೬
ಒಂದಾದುದು ೭೨೭
ಒಂದು ಕೈಯ ೫೮೭
ಒಂದು ಬಿಟ್ಟು ಒಂದಕಂಡಹೆ ೧೦೬೭
ಒಂದು ಬಿಟ್ಟು ಒಂದ ಹಿಡಿವಲ್ಲಿ ೧೦೪೬
ಒಂದೂ ಒಂದೂ ೪೮೪
ಒಂದೆಂಬೆನೆ ೩೮
ಒಬ್ಬುಳು ೫೪೭
ಒಮ್ಮನವ ೧೦೮೩
ಒಮ್ಮೆಯೂ ೨೫೬
ಒಲೆ ೩೬೧
ಒಳಗ ತೊಳೆದು ೧೨೪

ಓ ಎಂದಲ್ಲಿ ೧೧೩೨
ಓಂ ಭೂಃ ೪೦೪
ಓಹೋ ೨೪೧

ಕಲ್ಲ ಮನೆಯ ೧೧೯
ಕಲ್ಯಾಣವೆಂಬ ಪಟ್ಟಣ ೮೭೩
ಕಲ್ಯಾಣವೆಂಬ ಪ್ರಣತೆ ೨೭೧
ಕಲ್ಯಾಣವೆಂಬುದನಾರಿಗೆ ೬೧೭
ಕಲ್ಪಿತವಕಲ್ಪಿತ ೮೫೯
ಕಲ್ಪಿತವ ಕಳೆದು ೫೮೦
ಕಲ್ಲೊಳಗಣ ಕಿಚ್ಚು ೨
ಕಲ್ಲೊಳಗಣ ಪಾವಕನಂತೆ ೧
ಕಳವಳದ ೧೪೪
ಕಕ್ಷೆಕರಸ್ಥಲ ೪೫೨
ಕಂಗಳ ನೋಟ ಕರಸ್ಥಳದ ಪ್ರಾಣ ೬೮೯
ಕಂಗಳ ನೋಟ ಕರಸ್ಥಳದಲ್ಲಿ ೬೪೬
ಕಂಗಳ ಬೆಳಗ ೬೬
ಕಂಗಳ ಮುಂದಣ ೧೦೬೬

ಕಂಗಳಲ್ಲಿ ಕರಸ್ಥಲದ ೪೬೪
ಕಂಗಳಾಲಿಯ ೬೭
ಕಂಗಳಾಶ್ರಯದ ೭೮೪
ಕಂಗಳೊಳಗೆ ೩೯೦
ಕಂಗೆ ಕಾಬಡೆ ೧೬೧
ಕಟ್ಟ ಹೊಯ್ಯುತಲೊಮ್ಮೆ ೭೦೧
ಕಂಡ ಕನಸು ದಿಟವಾಗಿ ೧೯೫
ಕಂಡ ಕನಸು ನಿಧಾನವ ೭೧೨
ಕಂಡಡೆ ಕಡುಸುಖ ೩೧೨
ಕಂಡಂತೆ ೧೦೦೬
ಕಂಡರೆ ಮನೋಹರ ೬೫೩
ಕಂಡಹನೆಂದು ೩೧೮
ಕಡುಜಲಕ್ಕೆ ೮೨೯
ಕಂಡುದ ೩೪
ಕಂಡುದೆಲ್ಲವೂ ೭೭
ಕಡೆನಾಡ ಲಿಂಗವ ೨೦೦
ಕಂಡೆನೆಂಬುದು ೮೯
ಕಣ್ಣು ಕಂಡಲ್ಲದೆ ೧೦೫೫
ಕಣ್ಣೆ ಕಟ್ಟುಗೆಯಾಗಿ ೭೬
ಕರ್ತನಟ್ಟಿದರೆ ೯೭೫
ಕಂದಿಸಿ ಕಂದಿಸಿ ೧೦೨೭
ಕಪಿತ್ಥದ ಕಾಯ ೧೦೨೧
ಕರ್ಪುರದ ೨೨೭
ಕರ್ಮಕಾಯನು ಅಲ್ಲ (ಹಾಡು) ೩೯೨
ಕರ್ಮದ ಗಡಣ ೧೨
ಕರ್ಮವಿಲ್ಲದ ೨೭೬
ಕಯ್ಯಲ್ಲಿ ಮುಟ್ಟಿದ ೭೭೧
ಕರಸ್ಥಲದ ೫೨೩
ಕರಗಿಸಿ ೩೩೮
ಕರಿ ಘನ ೪೨೪
ಕಷ್ಟ ಕುಲದಲ್ಲಿ ೮೮೪
ಕಸ್ತೂರಿಯ ಮೃಗ ೪೭
ಕಾಡುಗಿಚ್ಚಿದ್ದರೆ ೧೩೩
ಕಾಣದುದ ಕಂಡೆ ೮೪
ಕಾಣದುದನಜಿಸುವ ೪೬
ಕಾಣಬಹುದೇ ೬೬೫
ಕಾಣಬಾರದ ಗುರು ೩೯
ಕಾಣ ಬಾರದ ಘನ ೭೯೧
ಕಾಣಬಾರದ ಲಿಂಗ ೫೨
ಕಾಣ ಬಾರದ ವಸ್ತು ೭೧೩
ಕಾಣಿಗೆ ಹೋರಿ ೧೧೪೧
ಕಾಮದ ಕರಸ್ಥಲ ೫೫೬
ಕಾಮನ ಕಣ್ಣು ೩೯೧
ಕಾಮಾರಿಯ ೬೩೩
ಕಾಯ ಉಳ್ಳನ್ನಕ್ಕ ೧೧೫೬
ಕಾಯ ಒಂದು ೫೧೩
ಕಾಯಕದಲ್ಲಿ ನಿಂದ ೧೦೨೮
ಕಾಯಕದಲ್ಲಿ ನಿರತ ೧೦೬೨
ಕಾಯಕವಿದ್ದಂತೆ ೧೧೪೭
ಕಾಯಕ ನಿಂದಿತ್ತು ೧೦೭೨
ಕಾಯಗುಣಂಗಳ ೮೫೭
ಕಾಯಗುಣವಳಿದು ೧೩೪
ಕಾಯಗೊಂಡ ೧೬೦
ಕಾಯಗೊಂಡು ೪೨೩
ಕಾಯಜೀವವ ೧೧೭೨
ಕಾಯದ ಕಪಟವು ೩೮೬
ಕಾಯದ ಕಳವಳ ೨೦೯
ಕಾಯದ ಕೈಯಲ್ಲಿ ೨೮೯
ಕಾಯದ ಮದ ೮೯೧
ಕಾಯದ ಮೊದಲಿಂಗೆ ೭
ಕಾಯದ ಲಜ್ಜೆಯ ೬೨೦
ಕಾಯದಲಾದ ಅರ್ಪಿತ ೭೫೭
ಕಾಯದಲಾದ ಮೂರ್ತಿ ೩೫
ಕಾಯದಲ್ಲಿ ಕಾಯ ೭೩೦
ಕಾಯದಿಂದ ಲಿಂಗ ೪೯೦
ಕಾಯದೊಳಗೆ ಅಕಾಯ ೬೨೯
ಕಾಯದೊಳಗೆ ಕರಣ ೧೮೦
ಕಾಯದೊಳಗೆ ಕಾಯ ೮೯
ಕಾಯಭ್ರಮೆಯಿಂದ ೧೧೫೯
ಕಾಯಲಿಂಗವೋ ೫೯೬
ಕಾಯವಳಿದ ತಾವಿನಲ್ಲಿ ೧೦೮೧
ಕಾಯವಳಿದರೇನು ೪೦೦
ಕಾಯವಿಡಿದು ಲಿಂಗವಿದೆ ೪೩೩
ಕಾಯವಿಡಿದು ಹುಟ್ಟಿದಾತ ೪೮೯
ಕಾಯವೆ ಪೀಠಿಕೆ ೨೩೪
ಕಾಯವೆಂಬ ಕಣ್ಣಡ ೫೯೯
ಕಾಯವೆಂಬ ಕಂತೆಯ ೯೬೭
ಕಾಯವೆಂಬ ಕಲ್ಪಿತ ೭೩೪

ಕಾಯವೆಂಬ ಘಟಕ್ಕೆ ೨೮೩
ಕಾಯವೆಂಬ ಮಹಾಕದಳಿ ೯೬೮
ಕಾಯವೆರಸಿ ಕೈಲಾಸಕ್ಕೆ ೧೧೫೨
ಕಾಯಶುದ್ಧ ೬೭೮
ಕಾಯಶೂನ್ಯ ೮೫೮
ಕಾಯಸಮಾಧಿ ೧೧೩೪
ಕಾಲದಿಂಪ ೮೧೧
ಕಾಲ-ಮುಟ್ಟದ ೨೮೧
ಕಾಲವೇಕೆ ೧೪೩
ಕಾಲಾಗ್ನಿಯೆಂಬ ೧೪೦
ಕಾಲಿಲ್ಲದ ೨೫
ಕಾಲಿಲ್ಲದೆ ೩೨೩
ಕಾಲಿಲ್ಲವೆಂಬರಯ್ಯ ೬೯೪
ಕಾಳುದೇಹ ೧೧೬೪
ಕಾಷ್ಮವ ೧೧೩೮
ಕಿಂಚಿತ್ತಾದರೂ ೧೦೭೭
ಕಿಱಿಯರಾದಡೇನು ೫೧೨
ಕುಂಡಲಿಯೆಂಬ ೧೧೧೭
ಕುಱುಹುಳ್ಳನ್ನಕ್ಕ ೧೧೮೯
ಕುಲದೊಳಗೆ ಹುಟ್ಟಿ ೩೨೦
ಕುಲವ ನೋಡದೆ ೮೦೨
ಕುಲವಳಿದು ೨೫೩
ಕೂಟಕ್ಕೆ ೧೧೫೧
ಕೂಟವ ೧೧೮೮
ಕೂಡಲಿಲ್ಲದ ೬೩೦
ಕೂರ್ಮನ ಶಿಶುವಿನ ಸ್ನೇಹದಂತಿಪ್ಪದೇವ ೮೮೯
ಕೂರ್ಮನ ಶಿಶುವಿನ ಸ್ನೇಹದಂತಿರಬೇಡಾ ೩೫೩
ಕೃತಯುಗ ತ್ರೇತಾಯುಗ ದ್ವಾಪರ
  ಕಲಿಯುಗಂಗಳು ೫೩೯
ಕೃತಯುಗ ತ್ರೇತಾಯುಗ
  ದ್ವಾಪರಯುಗವಿಲ್ಲ ೭೪೨
ಕೃತಯುಗತ್ರೇತಾಯುಗ ದ್ವಾಪರ
  ಕಲಿಯುಗಂಗಳಲ್ಲಿ ೫೨೦
ಕೃತಯುಗದಲ್ಲಿ ದೇವರು ೪೮೫
ಕೃತಯುಗದಲ್ಲಿ ದೇವಾಂಗ ೬೯೫
ಕೃತಯುಗದಲ್ಲಿ ನಾನು ೬
ಕೃತಯುಗದಲ್ಲಿ ನೀನು ೪೫೧
ಕೆಂಡದ ಗಿರಿಯ ೭೩
ಕೆವಱಿದ ತಲೆಯ ೬೯೧
ಕೆಱೆಯ ಕಟ್ಟಿಸುವ ೧೭೩
ಕೆಳಗೇಳು ಲೋಕಂಗಳಿಲ್ಲದ ೨೩೮
ಕೇಳಿದಡೆ ದೋಷ ೧೭೦೫
ಕೇಳು ಕೇಳಾ ೩೬೫
ಕೈಗಳ ಬಿಚ್ಚಿ ೧೫೮
ಕೈದ ಹಿಡಿದಾಡುವರೆಲ್ಲರೂ ೧೦೩೧
ಕೈದುವ ಕೊಡುವರಲ್ಲದೆ ೧೦೮೯
ಕೈಯದು ಕುಱುಹು ೧೦೮
ಕೈಯ ಲಿಂಗ ೧೧೯
ಕೈಯಲ್ಲಿ ಜ್ಯೋತಿಯ ೧೧೪೦
ಕೈಯಲ್ಲಿ ಡಾಣೆ ೩೫೧
ಕೈಯಲ್ಲಿ ಮುಟ್ಟದ ೨೨೧
ಕೈಹಾರ ೨೫೮
ಕೊಟ್ಟ ಕುದುರೆಯ ೫೮
ಕೊಂಡಡಗಿದನೊಬ್ಬನು ೯೧೦
ಕೋಣನಕೊಂಬಿನ ೭೦
ಕೋಪತಾಪ ೧೬೨

ಖೇಚರಪವನ ೬೬೮

ಗಗನದ ಮೇಲೊಂದು ೧೨
ಗಗನ ಪವನದ ಮೇಲೆ ೬೦೦
ಗಂಗೆವಾಳುಕ ೧೦೮೪
ಗಣಸಮೂಹವೆಂದು ೧೦೯೬
ಗತಿಗೆಟ್ಟು ೧೨೧
ಗರ್ವದಿಂದ ೧೦೮೭
ಗಿರಿಗಳ ಗುಹೆಗಳ ೬೫೮
ಗುರು ಇಷ್ಟವ ೧೦೩೫
ಗುರು ಒಂದೆ ೪೩೯
ಗುರುಚರಣ ೩೨೪
ಗುರುತತ್ವದಲ್ಲಿ ೬೪೯
ಗುರುಪೂಜಕರು ೧೦೪೦
ಗುರುಪೂಜೆಯನಱಿದೆ ೧೦೩೦
ಗುರುಪೂಜೆಯ ಮಾಡುವಲ್ಲಿ ೧೦೯೪
ಗುರು ಮುನಿದರೆ ೨೭೭
ಗುರುಲಿಂಗಜಂಗಮಕ್ಕೆ ೧೧೧೨
ಗುರುಲಿಂಗ ಜಂಗಮದಲ್ಲಿ ೧೦೬೫
ಗುರುವಚನದಿಂದಲ್ಲದೆ ೯೮
ಗುರುವ ತಾನಱಿದು ೧೦೪೩

ಗುರುವನಱಿದು ೧೧೫೪
ಗುರುವಾಗಿ ೫೨೩
ಗುರುವಾದರೂ ಕಾಯಕ ೧೦೪೭
ಗುರುವಾದರೂ ಲಿಂಗವ ೧೦೧೮
ಗುರುವಿಂಗೂ ಶಿಷ್ಯಂಗೂ ೯೯
ಗುರುವಿಂಗೆ ತನು ೧೦೩೩
ಗುರುವಿಂಗೆ ನೀನೆ ೭೪೫
ಗುರುವಿದು ೫೪೫
ಗುರುವಿನ ೫೭೧
ಗುರುವಿಲ್ಲದ ೫೭೦
ಗುರುವೆ ತೆತ್ತಿಗ ೬೭೩
ಗುರುವೆಂದಱಿಯರು ೧೭೫
ಗುರುವೆ ಬೋನ ೨೮೬
ಗುರುಶಿಷ್ಯರಿಬ್ಬರ ೨೯೭
ಗುರುಶಿಷ್ಯ ಸಂಬಂಧ ೪೯
ಗುರುಸ್ಥಲ ಲಿಂಗಸ್ಥಲ ಜಂಗಮಸ್ಥಲ
ಪ್ರಸಾದ ಸ್ಥಲವಡಗಿತ್ತಲ್ಲಾ ೯೭೩
ಗುರುಸ್ಥಲ ಲಿಂಗಸ್ಥಲ
ಜಂಗಮಸ್ಥಲ ಪ್ರಸಾದಿಸ್ಥಲವಡಗಿದ ೩೬೯
ಗುರುಸ್ವಾಯತವಾಯಿತ್ತು ಎಂಟು ಭಾವ ೫೪೬
ಗುರುಸ್ವಾಯತವಾಯಿತ್ತು
ಲಿಂಗಸ್ವಾಯತ ೫೫೩
ಗುರುಸೇವೆಯ ೧೦೩೮
ಗೋಕುಲರೆಲ್ಲರೂ ೧೧೨೪
ಗೋಡೆಯ ತೊಳೆದು ೧೦೭೩

ಘನಗಂಭೀರ ಮಹಾಘನದೊಳಗೆ ೪೩೪, ೯೭೮
ಘನಗಂಭೀರವಾರಿಧಿಯೊಳಗೆ ೮೦೬
ಘನಮಹಿಮ ೧೧೬
ಘನವ ಕಂಡು ೯೬೭
ಘನವನಱಿದು ೮೫೧
ಘನವಪ್ಪ ಪರಿಯಾಣ ೨೫೬

ಜ್ಞಾನದ ಬಲ ೪೫೦

ಚಂದ್ರಕಾಂತಶಿಲೆ ೧೧೦೨
ಚಂದ್ರಧರನೂ (ಪದ) ೩೯೨
ಚಂದ್ರಮ ೨೯೯
ಚರಣವಿಡಿದಂಗೆ ೭೫೧
ಚಿತ್ರದ ಬೊಂಬೆಯ ೧೧೪೮
ಚಿನ್ನವ ಕೊಂಬಲ್ಲಿ ೧೧೮೩
ಚೌಪಂತ ಮದಕರಿ ೬೦೧

ಜಗತ್ ಸ್ವಯಂಭು ೯೭೧
ಜಗದಗಲದ ೬೬೪
ಜಗದ ಜನವ ೧೭೮
ಜಂಗಮಕ್ಕೆ ೧೧೬೯
ಜಂಗಮ ಘನ ೮೦೦
ಜಂಗಮದಿಂಗಿತಾಕಾರವ ೩೩೬
ಜಂಗಮನಮಸ್ಕಾರವೆ ೧೦೫೪
ಜಂಗಮದ ಸೇವೆಗೆ ೧೦೭೪
ಜಂಗಮವಾಗಿ ಜಂಗಮವ ೧೧೨೯
ಜಂಗಮವಾಗಿ ಹುಟ್ಟಿದ ೧೧೬೫
ಜಂಗಮವೆ ಜ್ಞಾನ ೪೪೪
ಜಂಗಮವೆ ಪರ ೧೦೫೯
ಜಂಗಮವೆ ಲಿಂಗವೆಂದು ನಂಬಿದ ಬಳಿಕ ೩೪೮
ಜಂಗಮವೆ ಲಿಂಗವೆಂದು ನಂಬಿದ ಭಕ್ತನ ೭೮೩
ಜಂಗಮವೆ ಲಿಂಗವೆಂಬ ೭೨೦
ಜಂಗಮಸೇವೆ ಗುರುಪೂಜೆ ೧೦೫೦
ಜಂಗಮಸೇವೆಯ ಚಿತ್ತಶುದ್ಧನಾಗಿ ೧೦೫೩
ಜಂಗಮಹೊಱಗಿರಲು ೩೭೨
ಜಂಗವ ಸುತ್ತಿಪ್ಪುದು ೪೭೬
ಜಗವೆಲ್ಲವನೂರು ೨೫೦
ಜಜ್ಜ ನೆಜಱಿದೆನು ೬೫೭
ಜನನವಿಲ್ಲದ ೪೪೮
ಜಂಬೂದ್ವೀಪದ ೧೬
ಜಯ ಜಯ ಶ್ರೀ (ಹಾಡು) ೪೦೩
ಜಲದಲುದ್ಭವಿಸೆ ೭೨೫
ಜಲದೊಳಗೆ ಹುಟ್ಟಿದ ೬೬೭
ಜಾಗ್ರಸ್ವಪ್ನಸುಷುಪ್ತಿ (ಪದ) ೩೯೫
ಜಾತನಲ್ಲ ೩೨೫
ಜೀವದೇಹ ೩೨೮
ಜ್ಯೋತಿಯೊಳಗಿಪ್ಪ ೪೭

ಡಂಬು ಡುಳುಹು ೩೭೧

ತದುಗತವಾಗಿ ೧೭೭೨
ತಂದೆತಾಯಿ ೯೨೯

ತನ್ನ ಕಣ್ಣಿಂದ ೧೧೪೨
ತನಗುಳ್ಳ ೭೨೯
ತನ್ನ ತಾನಱಿದಡೆ ೧೦೫
ತನ್ನ ತಾನಱಿದವಂಗೆ ೧೯೦
ತನ್ನನಱಿಸಿ ೧೪೬
ತನ್ನನಱಿಯೆ ೧೯೪
ತನ್ನ ಮನವು (ಪದ) ೪೧೪
ತನ್ನಹಂಕಾರಾದಿ (ಪದ) ೪೧೧
ತನು ಉಂಟೆಂದರೆ ೯೩
ತನು ಉಂಟೆಂಬ ೫೯೧
ತನುಗುಣನಾಸ್ತಿ ೫೫೮
ತನುಗುಣವಳಿದು ೮೬೨
ತನು ಗುರುವಿನಲ್ಲಿ ೭೯೬
ತನು ತರತರಂಬೋಗಿ ೫೩
ತನುದಾಸೋಹ ೪೪೫
ತನುನಷ್ಟ ೯೪೪
ತನು ಬತ್ತಲೆ ೮೦೧
ತನು ಬಯಲು ೯೪೨
ತನುಭಾವವ ೧೦೪೮
ತನು ಮುಖಕ್ಕೆ ೭೬೧
ತನುವ ಕೊಟ್ಟೆನೆಂದು ೩೪೫
ತನುವ ಗುರುಲಿಂಗರ್ಪಿಸಿ ೫೪೦
ತನುವ ಗುರುವಿನಲ್ಲಿ ೬೦೫
ತನುವ ಗೆಲಲಱಿಯದೆ ೩೭೧
ತನುವ ತಾಗದ ೬೪
ತನುವರ್ಪಿತ ೩೪೩
ತನುವ ಬೇಡಿದಡೀವೆ ೩೪೧
ತನುವ ಮಱೆಯ ೧೧೭೦
ತನುವಳಿಯಿತ್ತು ೯೪೭
ತನುವಿಡಿದೆನಾಗಿ ೯೨
ತನುವಿದ್ದೂ ೫೯೩
ತನುವಿನ ಗುಣವ [೬೨೬ A]
ತನುವಿನಲ್ಲಿ ತನು ೩೩೯
ತನುವಿನಲ್ಲಿಪ್ಪ ೫೫೫
ತನುವಿನಲ್ಲಿ ಹೊರೆಯಿಲ್ಲ ೫೫೪
ತನುವಿನೊಳಗೆ ೯೬
ತನುವೆಂಬ ಏರಿಗೆ ೧೨೨
ತನು ಸೆಜ್ಜೆ ೩೩೫
ತನು ಶುದ್ಧವಾಯಿತ್ತು ೬೨೭
ತನು ಶುದ್ಧವಾಯಿತ್ತು ಬಸವ ೭೮೯
ತನುಶುದ್ಧವಾಯಿತ್ತು ಭಕ್ತ ೬೨೭
ತಮ್ಮ ತಾವಱಿಯರು ೮೦೪
ತಮ್ಮ ಮಲವ ೧೧೭೧
ತಲೆ ಇಲ್ಲದೆ ೧೧೪೯
ತಲೆಯ ಮೇಲೊಂದು ೭೦
ತಾ ಜಗ ೯೨೫
ತಾನಾಗೇನುವ (ಪದ) ೪೧೨
ತಾನಿಟ್ಟ ಬೇತಾಳ ೭೩೬
ತಾನೆಂದೆನಲೊಲ್ಲದೆ ೫೦೮
ತಾಪತ್ರಯದಲ್ಲಿ ೧೩೫
ತಾ ಬಾಳಲಾಱದೆ ೩೫೫
ತಾಯಿಗಾದ ೧೨೭
ತಾಯಿಲ್ಲದ ೮೬೬
ತ್ರಿವಿಧ ತ್ರಿವಿಧದಲ್ಲಿ ೩೨೦
ತ್ರಿವಿಧದ ನಿತ್ಯ ೬೨
ತಿಂಬ ಗಂಡೆಯ ಮೇಲೆ ಉಗುರು ಬಂದು ಬಿದ್ದಂತಾಯಿತ್ತು ೨೬೨
ತಿಂಬ ಗಂಡೆಯ ಮೇಲೆ ಉಗುರು ಬಿದ್ದಂತಾಯಿತ್ತು ೫೧೨
ತೆಱಹಿಲ್ಲದ ಘನವ ೨೩೧
ತೆಱಹಿಲ್ಲದ ಘನವು ಕುಱುಹಿಂಗೆ ಬಂದ ೧೭೨
ತೆಱಹಿಲ್ಲದ ಘನವು ಕುಱುಹಿಂಗೆ ಬಾರದ ೯೭
ತೆಱಹಿಲ್ಲದ ಘನವು ಮನದೊಳಗೆ ೫೩೬
ತೆಱಹು ಮಱಹೆಂಬವು ೩೦೫
ತೊಟ್ಟು ೧೦೬೯
ತೊತ್ತಿನ ೮೧೩
ತೊಱೆಯುದಕವ ೮೨೨
ತೋಱಬಾರದ ೨೦೩
ತೋಱಲಿಲ್ಲದ ೭೭೪
ತೊಱುವನಯ್ಯ ೩೧೭

ದಗ್ಧವಾದ ೧೧೮೫
ದಾಸೋಹವು ೫೬೭
ದಾಸೋಹವೆಂಬನ್ನಕ್ಕರ ೧೦೧೫
ದೀರ್ಘದಂಡನಮಸ್ಕಾರಂ ೪೦೭
ದೃಷ್ಟನಷ್ಟವಾದುದಕ್ಕೆ ೯೩೯
ದೆಸೆದಿಕ್ಕು ೯೨೯
ದೇವ ದೇವ ಮಹಾ ಪ್ರಸಾದ ಕಂಗಳಲ್ಲಿ ೨೮೮

ದೇವ ದೇವ ಮಹಾಪ್ರಸಾದ ತನ್ನ ರೂಪ ೨೪೬
ದೇವ ದೇವ ಮಹಾಪ್ರಸಾದ
ಅವಧರಿಸಯ್ಯ ೭೮೦
ದೇವ ದೇವ ಮಹಾಪ್ರಸಾದ ಅವಧರಿಸು ೮೯೮
ದೇವದೇವ ಮಹಾಪ್ರಸಾದ
ನಿಮ್ಮಡಿಗಳಿಗೆ ೬೯೯
ದೇವ ದೇವ ಮಹಾಪ್ರಸಾದ ನಿಮ್ಮಡಿಗಳೆಂ
ದಂತಲ್ಲದೆ ೭೨೮
ದೇವ ದೇವ ಮಹಾಪ್ರಸಾದ ನಿಮ್ಮ
ಶರಣರ ೨೯೮
ದೇವ ದೇವ ಮಹಾಪ್ರಸಾದ
ನೀವೆಂದಂತೆ ೩೮೨
ದೇವ ದೇವ ಶರಣಾರ್ತಿ ೮೬
ದೇಹಗುಣ (ಹಾಡು) ೧೨೨೦
ದೇಹದೊಳಗೆ ೧೨೦
ದೇಹಭಾವ ೨೦೭
ದೇಹಿಯಲ್ಲ ೫೦೩

ಧನವಲ್ಲಿ ಶುಚಿ ೧೧೨೦
ಧನಮದದಿಂದ ೭೭೩
ಧನಸವೆದರೆ ೭೭೮
ಧರೆಗೆ ನಿದ್ರೆಯು ೫೨೯
ಧರೆಯ ಮೇಲೆ ೭೧೯
ಧರೆಯ ಮೇಲೊಂದು ೧೧೭
ಧರೆಯಾಕಾಶದ ೯೯೫
ಧರೆಯಾಕಾಶವಿಲ್ಲದಂದು ೫೩೮
ಧ್ಯಾನಮೋನ ೩೫೭
ಧ್ಯಾನವೆ ೧೨೨೮

ನಚ್ಚು ಬಿಚ್ಚದೆ ೪೭೩
ನಚ್ಚುಮಚ್ಚಿನಲಿಂಗವ ೫೩೩
ನಚ್ಚು ಮಚ್ಚಿನ ಶರಣರೆನ್ನ ೬೮೮
ನಚ್ಚು ಮಚ್ಚಿನ ಸುಖದ ೬೪೭
ನಟ್ಟಡವಿಯೊಳಗೆ ೧೪೫
ನಡುದೊಣೆಯೊಳಗೆ ೩೮೭
ನಡೆದಡೆ ನಡೆಗೆಟ್ಟ ೬೫೭
ನಡೆದಡೆ ನಿರ್ಗಮನಿ ೬೫೬
ನಡೆದು ನಡೆದು ೧೦೪
ನಡೆಸುಡಿ ಇಲ್ಲದ ೩೭
ನಡೆಯ ಕಲಿವಲ್ಲಿ (ಪದ) ೩೯೪
ನಂಬಿದೆನಯ್ಯ ೩೦೪
ನಮಶ್ಶಿವಾಯ ೨೫೭
ನರಲೋಕದ ೫೧೦
ನರಸುರಾದಿಗಳೆಲ್ಲರೂ ೫೮೮
ನವಖಂಡಪೃಥ್ವಿ ೨೮೭
ನಾದ ಬಿಂದು ಕಳಾತೀತ (ಪದ) ೧೦೦೩
ನಾದಬಿಂದುಗಳಿಲ್ಲದಂದು ೪
ನಾದಬಿಂದುವೆಂಬಲ್ಲಿ ೨೨೦
ನಾನಾಭವದುಃಖ ೯೮೫
ನಾನಾಸ್ಥಾನದಲ್ಲಿ ೨೬೦
ನಾ ನಿನ್ನ ಕೇಳಿಹೆ ೧೧೧೪
ನಾ ನಿನ್ನ ರೂಪ ೨೧೮
ನಾನು ಭಕ್ತನಲ್ಲಯ್ಯ ೩೪೬
ನಾನೇನ ೨೦೨
ನಾನೆಂಬುದು ೯೬೫
ನಾನೊಂದ ೫೮೪
ನಾರುಬೇರಿನ ೧೧೧೧
ನಿಜತತ್ವದ ೯೭೨
ನಿಜವನರಿಯದ ೭೩
ನಿರ್ಣಯವನರಿಯದ ೪೪
ನಿತ್ಯನಿಜತತ್ವವು ೪೧೮
ನಿತ್ಯನೆಂಬ ಭಕ್ತನ ೪೦೯
ನಿತ್ಯ ಸತ್ಯದೊಳಡಗಿ ೯೪೩
ನಿಂದೆಯೆಂಬುದು ೯೧೯
ನಿನ್ನನರಿವುದಕ್ಕೆ ೧೧೩೬
ನಿನ್ನಳವಲ್ಲ ೨೯೯
ನಿರ್ಭಾವ ನಿರ್ನಾಮ ೮೬೦
ನಿಮ್ಮ ಕಂಡು ೪೪೬
ನಿಮ್ಮ ತನು ೨೯೪
ನಿಮ್ಮ ತೇಜವ ೧೩೯
ನಿಮ್ಮ ನಿಜದಂತುವ ೧೫೫
ನಿಮ್ಮ ನೋಟ ೭೧೧
ನಿಮ್ಮ ನೋಡ ನೊಡು ೬೫೦
ನಿಮ್ಮ ನೋಡುವ ೫೪
ನಿಮ್ಮಲ್ಲಿ ಭಕ್ತಿ ೨೯೭
ನಿಮ್ಮ ಲೀಲೆ ೭೪೪
ನಿಮ್ಮಲ್ಲಿ ಸನಿಹಿತ ೧೭೯
ನಿಮ್ಮ ಶಕ್ತಿ ಆತನಲ್ಲಿಪುದು ೩೧೦

ನಿಮ್ಮಶಕ್ತಿ ಜಗದೊಳಗಿಪ್ಪುದು ೧೩೬
ನಿಮ್ಮ ಶರಣರ ಕಂಡು ೩೧೩
ನಿಮ್ಮ ಶರಣರ ಸಂಗವ ೪೨೧
ನಿಮಿತ್ತಶುಭಸೂಚನೆ ೬೮೩
ನಿರವಯವಾದಡೆ ೫೪೧
ನಿರಾಕಾರದ ೮೭೯
ನಿರಾಕಾರವಾಯಿತ್ತಲ್ಲಾ ೧೦೦೯
ನಿರಾಲಂಬದಲ್ಲಿ ೪೮೦
ನಿರುಪಾಧಿಕಲಿಂಗದಲ್ಲಿ ೪೧೫
ನಿರ್ಲೇಪವಾದ ೮೫೨
ನಿರ್ವಾಹವಾಯಿತಯ್ಯ ೧೦೧೧
ನಿರ್ವಿಕಲ್ಪವೆಂಬ ೭೨, ೯೬೧
ನಿಶ್ಚಲಶರಣರ ೨೭೮
ನಿಷ್ಠೆಯಿಂದ ೧೧೧೫
ನೀ ಕೂಪನಾಗಿದ್ದಲ್ಲಿ ೧೯೭
ನೀನಳವಡಿಸಿಕೊಟ್ಟ ೭೮೫
ನೀ ನಾನೆಂಬುಭಯ ೬೪೪
ನೀನೆನಗೆ ೪೦
ನೀರ ಒರಳ ೮೩೬
ನೀರ ಕ್ಷೀರದಂತೆ ಕೂಡಿದ ೩೮೧
ನೀರ ಕ್ಷೀರದಂತೆ ನೀನಿಪ್ಪೆ ೬೪೦
ನೀರಕ್ಷೀರದ ಸಂದುಗಳ ೨೦೮
ನೀರಬೊಂಬೆಗೆ ೯೦
ನೀರ ಬೊಂಬೆಯ ೧೧
ನೀರೊಳಗೆ ಕಿಚ್ಚೆದ್ದು ೮೯೪, ೧೨೧೭
ನೀಲದ ಮಣಿ ೮೩೫
ನುಡಿದ ಮಾತಿಂಗೆ ೧೦೨೯
ನುಡಿಯ ಗಡಣದ (ಹಾಡು) ೫೨೪
ನುಡಿಯ ಹಂಗಿನ್ನೂ ೧೦೬
ನುಡಿಯಿಂದ ೧೧೩
ನುಡಿಯೆನೆಂಬಲ್ಲಿ ೧೧೦
ನುಡಿದಹೆನೆಂದರೆ ೪೨೫
ನೆನಸುವೆ ೧೫೯
ನೆನಹಿನ ನಿಧಿಯ ೮೮೭
ನೆನೆಯಲಜಿಯೆ ೯೫೯
ನೆಲದತ್ತ ಮುಂದಣ ೯೦೫
ನೆಲದ ಬೊಂಬೆಯ ೧೩
ನೆಲನ ಹೊದ್ದದು ೭೦೬
ನೆಳಲು ೬೮
ನೇಮವ ೧೦೬೪
ನೋಡು ನೋಡು ೩೦೯
ನೋಡುವರುಳ್ಳಡೆ ೩೩೧
ನೋಡುವುದೊಂದು ೫೨೨
ಪ್ರಕೃತಿಗುಣ ೮೩೮
ಪ್ರಣಿತೆಯೂ ಇದೆ ೫೫
ಪಂಚಬ್ರಹ್ಮದ ೬೬೬
ಪಂಚಾಶತ್ ಕೋಟಿ ವಿಸ್ತೀರ್ಣ ಭೂಮಂಡಲವನೊಂದು ೭೭೫
ಪಂಚಾಶತ್ ಕೋಟಿ ವಿಸ್ತೀರ್ಣ ಭೂಮಂಡಲ ಮೊದಲಾದ ೨೧
ಪ್ರತಿಷ್ಠೆಗೆ ಮಾಟ ೧೦೯೨
ಪ್ರಥಮ ಕಾಲದಲ್ಲಿ ದೇವಗಣ ೫೯೩
ಪ್ರಥಮಕಾಲದಲ್ಲಿ ನಿರಾಲಂಬಿ ೨೬೧
ಪ್ರಥಮಕಾಲದಲ್ಲಿ ಗುರುಕಾಣಿಕೆ ೨೫೦
ಪ್ರಭುದೇವರು ೧೧೦೮
ಪರಮತತ್ವ ೭೪
ಪರಮಮೂರುತಿ (ಹಾಡು) ೮೫೬
ಪರಿಮಿತಕೆ ೪೦೩
ಪರುಷದ ಗಿರಿಯ ೪೭೦
ಪರುಷವಾದರೂ ೧೦೩೭
ಫಳವ ೧೧೯೭
ಪ್ರಸಾದಲಿಂಗ ೯೦೭
ಪ್ರಸಾದಿಯ ೬೦೩
ಪ್ರಾಣದಲ್ಲಿ ೨೪೮
ಪ್ರಾಣನ ೧೨೨೯
ಪ್ರಾಣಲಿಂಗದ ೮೨೩
ಪ್ರಾಣಲಿಂಗ ಪ್ರವೇಶಿತನಾಗಿ ೮೪೮
ಪ್ರಾಣಸ್ಥಲದಲ್ಲಿ ೮೯೩
ಪಾತಕ ೧೧೧೬
ಪುಣ್ಯಉಳ್ಳ ೩೨
ಪುಣ್ಯಂಗಳಹ ೭೦೦
ಪುಣ್ಯಪಾಪಂಗಳ ೧೫೪
ಪೂಜೆಯಲ್ಲಿ ೧೧೫೫
ಪೂಜೆಯುಳ್ಳನ್ನಕ್ಕ ೧೦೯೧
ಪೌರ್ಣಮಿ ೭೪೨
ಬಟ್ಟಬಯಲಲ್ಲಿ ೭೦೫

| | |
|---|---|
| ಬಡಗವಾಗಿಲ | ೬೯೮ |
| ಬಡವರ | ೮೮೬ |
| ಬಂಮೂ ಬಾರದು | ೬೬೨ |
| ಬಂದೇನೆಂಬ | ೧೦೧೩ |
| ಬನ್ನಿ ಕರಣಿಕರು | ೨೬೮ |
| ಬಯಕೆಯೆಂಬುದು | ೧೯೬ |
| ಬಯಲ ಬೆಳಗಿನ | ೯೬೩ |
| ಬಯಲ ಮೂರ್ತಿಗೊಳಿಸಿ | ೩೨೭ |
| ಬಯಲುಬತ್ತಲೆ | ೧೧೭೮ |
| ಬಯಲ:ಮೂರ್ತಿಯಾಗಿ | ೪೨೮ |
| ಬಯಸುವ ಬಯಕೆ ಕೈಸಾರು | ೬೮೨ |
| ಬಯಸುವ ಬಯಕೆ ನೀನಾದ | ೧೯೮ |
| ಬಱಸಲ್ಲಿ | ೮೮೭ |
| ಬಲಕ್ಕೆ | ೨೦೪ |
| ಬಲ್ಲ ವಿರಕ್ತಂಗೆ | ೧೭೦೩ |
| ಬಲ್ಲೆನೆಂದರೆ | ೨೩೧ |
| ಬಸವಣ್ಣ ಎಂಬಲ್ಲಿ | ೪೬೦ |
| ಬಸವಣ್ಣ ಓಂಕಾರ | ೭೫೮ |
| ಬಸವಣ್ಣ ಚೆನ್ನಬಸವೇಶ್ವರ | ೧೦೯೫ |
| ಬಸವಣ್ಣನ | ೫೬೮ |
| ಬಸವಣ್ಣ ನಿನ್ನ ಕಂಡು | ೪೪೨ |
| ಬಸವ ನಿನಗೇಳು | ೨೯೦ |
| ಬಸವಣ್ಣ ನಿನ್ನ ಹೊಗಳತೆ | ೮೩೨ |
| ಬಸವಣ್ಣ ನೀವು | ೯೯೮ |
| ಬಸವಣ್ಣ ಮೊದಲಾದ | ೧೧೭೩ |
| ಬಸವ ಮಾಡಿಹ | ೧೧೨೩ |
| ಬಸುಱಬಾಯಾಗಿ | ೮೩೩ |
| ಬ್ರಹ್ಮನಾದಡಾಗಲಿ | ೧೩೧ |
| ಬ್ರಹ್ಮ ವಿಷ್ಣುಗಳ | ೫ |
| ಬ್ರಹ್ಮ ವಿಷ್ಣು ರುದ್ರ (ಪದ) | ೧೭೭೪ |
| ಬಾಯಕ್ಕಿಯ | ೧೧೨೨ |
| ಬಾಯೆಂಬಲ್ಲಿ | ೯೫೨ |
| ಬಾಲನಹಸೊಮ್ಮೆ | ೨೦೭ |
| ಬಾಹಾಗ | ೧೦೮೦ |
| ಬಿಡುವುದಕ್ಕೆ | ೧೧೬೧ |
| ಬಿತ್ತದೆ | ೭೫೯ |
| ಬಿಂದು ಕಳೆಯಾದ (ಪದ) | ೩೯೬ |
| ಬಿಂದುವ ಹಱದು | ೫೨೨ |
| ಬಿಂದುವ ಹಱದೆಯಲ್ಲಾ | ೧೦೧೦ |
| ಬಿಂದುವೇ | ೭೧೯ |
| ಬೀದಿಯಲ್ಲಿ | ೩೮೩ |
| ಬೆದಕದಿರು | ೩೪೯ |
| ಬೆದಱಸುವ | ೨೬೪ |
| ಬೆರಸಿ ಬೆಚ್ಚಾತನ | ೭೦೪ |
| ಬೆಳಗು ಬೆಳಗು | ೫೮೯ |
| ಬೆಳಗುವ ಜ್ಯೋತಿಯು | ೪೬೩ |
| ಭಕ್ತಂಗೆ ಬಡತನ | ೧೦೨೮ |
| ಭಕ್ತಜಂಗಮದ ಸಕೀಲ | ೭೯೫ |
| ಭಕ್ತ ಜಂಗಮದ ಸಂಬಂಧ | ೪೫೮ |
| ಭಕ್ತನ ಕಾಯುವ | ೭೯೩ |
| ಭಕ್ತನಾಧೀನವಾಗಿ | ೨೩೭ |
| ಭಕ್ತನಿರ್ದ | ೧೨೩ |
| ಭಕ್ತನೆಂಬರು | ೫೯ |
| ಭಕ್ತಮಾಹೇಶ (ಪದ) | ೧೦೭ |
| ಭಕ್ತಮಾಹೇಶ್ವರ | ೮೫೪ |
| ಭಕ್ತರ ಹೆಚ್ಚು | ೩೬೨ |
| ಭಕ್ತರು ಕಾಯಕ | ೧೦೨೨ |
| ಭಕ್ತಿಯ ತವನಿಧಿಯೆ | ೯೯೨ |
| ಭಕ್ತಿಯುಕ್ತಿಯನಱಯೆ | ೬೦೨ |
| ಭಕ್ತಿಯುಕ್ತಿಯನಾರು | ೧೬೫ |
| ಭಕ್ತಿಯುಕ್ತಿಯ ಹೊಲಬು | ೮೭೦ |
| ಭಕ್ತಿಯುಳ್ಳನ್ನಕ್ಕ | ೧೧೪೬ |
| ಭಕ್ತಿ ವಿಶೇಷವ | ೧೧೭೧ |
| ಭಕುತಿಯುಕುತಿಯನಱಯ | ೨೫೭ |
| ಭರಿತಬೋನ | ೨೮೮ |
| ಭವರೋಗವೈದ್ಯನೆಂದು ನಂಬಿದೆ | ೩೧೧ |
| ಭವರೋಗವೈದ್ಯ (ಪದ) | ೪೦೮ |
| ಭವವಿಲ್ಲದಡೇನು | ೭೬೮ |
| ಭಾವಕರಿಗೆ | ೪೫೪ |
| ಭಾವಕ್ಕೆ | ೨೧ |
| ಭಾವಬ್ರಹ್ಮ | ೧೭೭೧ |
| ಭಾವ ಭಾವವನೆ (ಪದ) | ೧೦೦೫ |
| ಭಾವಶುದ್ಧವಾಗಿ | ೧೦೧೯ |
| ಭಾವಿಸಿ ದೃಷ್ಟಿ | ೯೦೯ |
| ಭಾವಿಸಿ ನಡೆದಿಹೆ (ಹಾಡು) | ೧೭೭೫ |
| ಭಾವಿಸಿ ನೋಡಿದರಂಗವಾಯಿತ್ತು | ೬೩೪ |
| ಭೂತ ಭೂತವ ಕೂಡಿ | ೭೪ |

ಭೂಮಿಯ ಕಠಿಣ ೨೭
ಭೂಮಿಯ ಸಾರಾಯ ೪೬೨
ಭೂವಳಯ ೮೨೫
ಭೃಂಗಕುಸುಮ ೩೭೯

ಮಂಗಳಮಂಗಳ (ಹಾಡು) ೭೪೯
ಮಂಗಳವ ಪಾಡುವೆ (ಹಾಡು) ೪೧೦
ಮಡಿವಾಳ ೫೭೬
ಮರ್ತ್ಯಲೋಕದ ೨೭೯
ಮರ್ತ್ಯಲೋಕದೊಳಗೆ ನಾನು ೯೯೩
ಮರ್ತ್ಯಲೋಕದೊಳಗೆ ಬಂದು ೯೯೨
ಮರ್ತ್ಯಲೋಕ ಶಿವಲೋಕ ೨೬೭
ಮತಿಗೆಟ್ಟು ೩೦೨
ಮತಿಯೊಳಗೆ ೭೨೫
ಮಥನದ ೯೦೩
ಮದಹಸ್ತಿ ೧೪೮
ಮದುವೆಯೆಂದು ೯೮೦
ಮಧ್ಯಸ್ಥಾನದ ೭೫೪
ಮನ ಉಂಟೇ ೨೨೩
ಮನಕ್ಕೆ ಮನವೇಕಾರ್ಥವಾಗಿ ಕಾಯಕ್ಕೆ ಕಾಯ ಸಮರಸವಾಗಿ ೨೯೦
ಮನಕ್ಕೆ ಮನವೇಕಾರ್ಥವಾಗಿ ಕಾಯಕ್ಕೆ ಕಾಯ ಸಮರಸವಾಗಿ ೩೫೮
ಮನಕ್ಕೆ ಮನವೇಕಾರ್ಥವಾಗಿ ಪ್ರಾಣಕ್ಕೆ ಪ್ರಾಣವೇಕಾರ್ಥವಾಗಿ ೬೫೪
ಮನಕ್ಕೆ ಮನೋಹರ ೪೧೯
ಮನದ ಕೊನೆಯಿಂದ ೯೬೦
ಮನದಂತೆ ಮಂಗಳ ೬೭೯
ಮನದ ಸಂಚದೋವರಿ ೮೮೩
ಮನದೊಡೆಯನೆನ್ನ ೪೦೨
ಮನದೊಡೆಯ ಮನೆಗೆ ೬೮೪
ಮನಮುಗ್ನವೆಂತಿಪ್ಪುದಂತೆ ೨೨೫
ಮನಮುಗ್ನವೆಂದಡೇನು ೨೨೪
ಮನಮನ ಒಂದಾಗಿ ಅಱಿವು ೩೮೦
ಮನಮನ ಒಂದಾಗಿ ತನುತನು ೨೯೧
ಮನಮನ ಬೆರಸಿದನುಭಾವ ೫೩೧
ಮನಮನ ಬೆರಸಿದವರಿಂತಿಪ್ಪ ೧೮೪
ಮನಮನ ಬೆರಸಿ ಸಮರತಿಯ ೫೬೦
ಮನಮುಕ್ತಿ ವಿವೇಕ ೭೮೭
ಮನ ಮುಟ್ಟದ ಭಕ್ತಿಗೆ ೩೧೪
ಮನವ ತೊಳೆದು ೨೧೧
ಮನವು ಮಹದೊಳಗೆ ೨೮೪
ಮನವೆಂಬ ಸಂಕಲ್ಪವ ೨೧೨
ಮನಶುದ್ಧ ೧೦೯೭
ಮನೆ ನೋಡಾ ೧೧೦೫
ಮನೆಯ ನೋಡಾ ೧೧೨೨
ಮನೆಯಲ್ಲಿ ೧೧೪೫
ಮನೆಯೊಳಗಣ ೭೯೭
ಮರಕ್ಕೆ ಬಿತ್ತು ೪೯೭
ಮರದೊಳಗೆ ೨೬೬
ಮರುಳುತಲೆ ೪೩೦
ಮರುಗದ ಗಿಡು ೪೩೬
ಮರುಳುಗೊಂಡೆಯಲ್ಲಾ ೭೭೨
ಮರುಳ ಹಿಡಿದಹೆ ೨೮೫
ಮಱಹಿಂದಲಾದ ೭೩೫
ಮಱಹು ಬಂದಹುದೆಂದು ೯೧೫
ಮಲವ ತೊಳೆಯ ೧೨೨೨
ಮಲೆತು ೭೦೩
ಮಸಿಯ ೩೨೨
ಮಾಚಿ ತಂದೆಯ ೭೬೫
ಮಾಡಿದ ಭಕ್ತಿಗೆ ೧೧೫೮
ಮಾಡಿ ನೀಡಿ ೧೦೮೬
ಮಾಡಿಹೆ ೧೦೬೮
ಮಾಡುವ ಭಕ್ತಂಗೆ ೬೮೦
ಮಾಡುವ ಮಾಟದಿಂದವೆ ೧೦೭೦
ಮಾಡುವ ಮಾಟವುಳ್ಳನ್ನಕ್ಕರ ೧೦೮೫
ಮಾಡುವ ಮಾಡಿಸಿಕೊಂಬ ೭೪೫
ಮಾಣಿಕವ ಹಿಡಿದವನ ೪೭೧
ಮಾತು ಮಾಣಿಕವ ೮೫೫
ಮಾತುಳ್ಳನ್ನಕ್ಕರ ೧೮೭
ಮಾತೆಪಿತರುಗಳುದರ (ಪದ) ೩೯೩
ಮಾತೆಂಬುದು ೧೦೩
ಮಾನದ ತೋರಿಹ ೧೪
ಮಾರಾರಿಯ ೮೭೧
ಮಾರುಗ ಕ್ರೀ ೧೨೨೬
ಮಾಱಂಕ ೩೦೬
ಮಾಂಸಪಿಂಡ ೨೫೩
ಮೀನಜ ೨೪೦

